12th Century's
Enlightenment Technic
and Evolution

ಪರಮಪೂಜ್ಯ ಸದ್ಗುರು
ಶ್ರೀ ವಿದ್ಯಾನಂದ ಶರಣರು ಡಬ್ಬೇರುಮಡುವು
ಅವರ ವಿರಚಿತ

# ಅರಿತ ಕಿರಣ
# ಕಲ್ಪವೃಕ್ಷ
# ಕಲ್ಪಿತ ಕೃಪೆ

(ಮೂರು ಪುಸ್ತಕಗಳ ಸಂಗಮ)

ಸಂಪಾದಕ
ಬಸವರಾಜ ಸ್ವಾಮಿ

12th Century's
Enlightment Technic
and Evolution

ಪರಮಪೂಜ್ಯ ಸದ್ಗುರು
ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು
ಅವರು ವಿರಚಿತ

# ಅರಿತ ಕಿರಣ
# ಕಲ್ಪ ವೃಕ್ಷ
# ಕಲ್ಪಿತ ಕೃಪೆ

( ಮೂರು ಪುಸ್ತಕಗಳ ಸಂಗಮ )

ಸಂಪಾದಕರು
**ಬಸವರಾಜ ಸ್ವಾಮಿ**
ರಾಯಚೂರು

ಪ್ರಕಾಶಕರು
**ಶ್ರೀ ಬಸವ ಸೇವಾ ಪ್ರತಿಷ್ಠಾನ**
ಗಂಜ್ ಏರಿಯಾ, ರಾಯಚೂರು

**Aritha Kirana**
**Kalpavriksha**
**Kalpitha Krupe**
( A Collection of three books )

Author :
**Paramapoojya Sri Vidyananda Sharanaru**
**Dabberumaduvu**

Edited by :
**Basavaraj Swamy, Raichur**
**M.9980553750**
basavarajswamy219@gmail.com





ಮುಖ ಪುಟ: ಮುರಳೀಧರ ರಾಠೋಡ

ಪುಟಗಳು : 266 + viii
ಪ್ರಥಮ ಮುದ್ರಣ : 2022
ಪ್ರತಿಗಳು : 500

ಬಳಸಿದ ಕಾಗದ: 70 gsm NS maplitho demy 1/8 size

ಮುದ್ರಣ : ಅಮರಾವತಿ ಪ್ರಿಂಟರ್ಸ್, ಹೈದರಾಬಾದ

ಬೆಲೆ : ರೂ.200/–

ಪ್ರಕಾಶಕರು:
**ಶ್ರೀ ಬಸವ ಸೇವಾ ಪ್ರತಿಷ್ಠಾನ**
ಗಂಜ್ ಏರಿಯಾ, ರಾಯಚೂರು.

ಗ್ರಂಥ ಕರ್ತರು



ಪರಮಪೂಜ್ಯ ಸದ್ಗುರು

**ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು**

ತಾ.ಲಿಂಗಸುಗೂರು ಜಿ.ರಾಯಚೂರು

ಮುದ್ರಣ ಸೇವೆ

## ಸ್ವತಂತ್ರ ಶರಣರು (ಶೆಟ್ರಪ್ಪಾಜಿ)

---

ಪರಮಪೂಜ್ಯ ಸದ್ಗುರು

## ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು

ಇವರ ಶಿಷ್ಯರಾದ



## ಲಿಂ.ಶರಣೆ ಅಮರಮ್ಮ ಶೆಟ್ಟರ ಹೊನ್ನಳ್ಳಿ

ಸಾ. ಜಿ.ಗಣೇಕಲ್ ತಾ. ದೇವದುರ್ಗ ಜಿ. ರಾಯಚೂರು

## ಇವರ ಸ್ಮರಣಾರ್ಥ

# ಓದುವ ಮುನ್ನ .....

ಸದ್ಗುರು ವಿದ್ಯಾನಂದ ಶರಣರು ಸಕಲ ತನುಗಳನ್ನು ಗುರುವಾಗಿ ಕಂಡವರು. ತನುವಿನಲ್ಲಿ ಸ್ವಲ್ಪ ಅರಿವಿನ ಸುಳುಹು ಸಿಕ್ಕರೆ ಸಾಕು ಗುರುದೇವನೇ ತನಗೆ ಲಭ್ಯವಾದನೆಂದು ಹಿರಿಹಿರಿ ಹಿಗ್ಗುತ್ತಿದ್ದರು. ಗುರುದೇವನಿಗೆ ಉಪಚಾರ ಮಾಡಿದಂತೆ ಆ ತನುವಿಗೆ ಉಪಚಾರ ಮಾಡುತ್ತಾ, ಆ ತನುವಿನಲ್ಲಿಯೇ ತನ್ಮಯವಾದ ಗುರುದೇವನನ್ನು ಅದೇ ತನುವಿಗೆ ತೋರಿ; ಆ ಗುರುದೇವನೊಂದಿಗೆ ಗುರುದೇವನೇ ಮಾತನಾಡುವಂತೆ ಮಾತನಾಡುತ್ತಿದ್ದರು.

ಗುರುದೇವನಾರೊ ಶಿಷ್ಯನಾರೋ; ಗುರುಮುಟ್ಟಿ ಗುರುವಾದ. ಬೆಳಗುವ ಬತ್ತಿ; ಬತ್ತಿಗೆ ಚುಂಬಿಸಿ ಬೆಳಗುವಂತೆ ಮಾಡುತ್ತದೆ. ಬೆಳಗುತ್ತಾ ಚುಂಬಿಸಿದ ಬತ್ತಿ ಚುಂಬನಕ್ಕೆ ಒಳಗಾಗಿ ಬೆಳಗುವ ಬತ್ತಿಗಳ ಬೆಳಕಿನಲ್ಲಿ ಹೇಗೆ ತಾರತಮ್ಯವಿಲ್ಲವೋ ಹಾಗೆಯೇ ಗುರು ಶಿಷ್ಯರ ಇರುವಿಕೆಯಾಗಬೇಕು ಎಂದು ತಮ್ಮ ಸಮೀಪ ಬಂದವರಿಗೆಲ್ಲ ಹೇಳುತ್ತಿದ್ದರು. ಬೆಳಕಿನ ಚುಂಬನದ ಸವಿ ಸಕಲ ಬತ್ತಿಗಳಿಗೂ ಸಿಕ್ಕಬೇಕೆಂದು ಶಿಷ್ಯರುಗಳಿದ್ದಲ್ಲಿಯೇ ಹೋಗುತ್ತಿದ್ದರು.

ಪ್ರಣತಿಯಿದೆ, ಎಣ್ಣೆಯಿದೆ, ಬತ್ತಿಯೂ ಇದೆ. ಬೆಳಗುವ ಬತ್ತಿಯ ಚುಂಬನದ ಕೊರತೆಯೊಂದೇ ಇದೆ ಎಂದು ಕಂಡುಕೊಂಡು ಈ ನಾಡಿನುದ್ದಕ್ಕೂ ಬೆಳಕು ಹೊತ್ತುಕೊಂಡು ಓಡಾಡಿದ ಸದ್ಗುರು ವಿದ್ಯಾನಂದ ಶರಣರು ಏಕಾಂಗಿ ವೀರರು!

ಹಗಲು ಶಿಷ್ಯರೊಂದಿಗೆ ಕಳೆಯುತ್ತಾ ತನುವಿನಲ್ಲಿಯೇ ತನ್ಮಯವಾದ ಅರಿವಿನ ಪರಿಚಯ ಮಾಡಿಸುತ್ತಿದ್ದರು. ರಾತ್ರಿ ಅರಿವಿನ ಸೂತ್ರ ಪ್ರಧಾನವಾದ ಶರಣರ ವಚನಗಳನ್ನು ತೆಗೆದುಕೊಂಡು ಅವುಗಳಿಗೆ ತಾತ್ಪರ್ಯ ಬರೆಯುತ್ತಿದ್ದರು. ಸದ್ಗುರುಗಳು ಬರೆದ ಒಂದು ವಚನ ತಾತ್ಪರ್ಯ ಓದಿದರೆ ಸಾಕು; ಬೆಳಗುವ ಬಯಕೆಯುಳ್ಳ ಕಾಯವೆಂಬ ಬತ್ತಿಗೆ ಬೆಳಗುವ ಚುಂಬನ ಸಿಕ್ಕೇಸಿಗುತ್ತದೆ. ಶರಣರ ವಚನಗಳಲ್ಲಿ ಇಂತಹ ಅದ್ಭುತವಾದ ಶಕ್ತಿ ಇದೆಯೇ ಎಂಬ ಮಾಹಿತಿ ಅವರನ್ನು ಪ್ರೀತಿಸುವ ಕುಲಕ್ಕೆ ಸಿಗುತ್ತದೆ.

ಸದ್ಗುರು ವಿದ್ಯಾನಂದ ಶರಣರು ಪ್ರಸ್ತುತ, ಅರಿತ ಕಿರಣ, ಕಲ್ಪವೃಕ್ಷ, ಕಲ್ಪಿತ ಕೃಪೆ ಎಂಬ ಮೂರು ಪುಸ್ತಕಗಳನ್ನು ಒಂದೇ ಪುಸ್ತಕದಲ್ಲಿ ಬಂಧಿಸಿ ತ್ರಿಕೂಟ ಸಂಗಮವನ್ನಾಗಿಸಿದ್ದಾರೆ.

ಅರಿತ ಕಿರಣ ಎಂಬ ಪುಸ್ತಕದಲ್ಲಿ ಮೂವತ್ತೇಳು ಶರಣರ ವಚನಗಳು ಮತ್ತು ತಾತ್ಪರ್ಯವಿದೆ.

ಕಲ್ಪವೃಕ್ಷ ಎಂಬ ಪುಸ್ತಕದಲ್ಲಿ ನಲವತ್ತೊಂದು ಶಿವಶರಣರ ವಚನಗಳು ಮತ್ತು ತಾತ್ಪರ್ಯವಿದೆ.

ಕಲ್ಪಿತ ಕೃಪೆ ಎಂಬ ಪುಸ್ತಕದಲ್ಲಿ ನಲವತ್ತೊಂಬತ್ತು ಶಿವಶರಣರ ವಚನಗಳು ಮತ್ತು ಅವುಗಳಿಗೆ ತಾತ್ಪರ್ಯ ಬರೆದಿದ್ದಾರೆ. ಈ ಮೂರೂ ಪುಸ್ತಕಗಳನ್ನು ಒಂದೇ ಪುಸ್ತಕದಲ್ಲಿ ಸಂಗಮಗೊಳಿಸಿದ್ದಾರೆ. ಹೀಗಾಗಿ ಇದು ತ್ರಿಕೂಟ ಸಂಗಮ.

ತನು–ಮನ–ಅರಿವು ಕೂಡಾ ತ್ರಿಕೂಟ ಸಂಗಮ. ಕಾಯದೊಂದಿಗೆ ಮನ ಸಂಗ ಮಾಡಿದ್ದಕ್ಕಾಗಿ ಕಾಯದಲ್ಲಿಯೇ ಇದ್ದ ಅರಿವು ಎನ್ನುವ ಗುರುದೇವನನ್ನು ದೂರ ಇಟ್ಟಿದೆ. ಹೀಗಾಗಿ ಕಾಯ ಕಾಯವೆಂದು ಕರೆಯಿಸಿಕೊಂಡಿದೆ. ಕಾಯವನ್ನು ಆವರಿಸಿದ ಮನ ಕಾಯದ ಸಂಗ ಬಿಡಿಸಿಕೊಂಡು, ಕಾಯದಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ಸಂಗ ಮಾಡಿದರೆ ಸಾಕು ಕಾಯ ಕೈಲಾಸವೆಂದು ಕರೆಯಿಸಿಕೊಳ್ಳುತ್ತದೆ. ಬ್ರಹ್ಮ, ವಿಷ್ಣು, ಮಹೇಶ್ವರರು ವಾಸ ಮಾಡಿದ ಕಾಯ ತ್ರಿಕೂಟ ಸಂಗಮವಾಗುತ್ತದೆ.

ದಿನಾಂಕ : 06–04–2022 **– ಬಸವರಾಜ ಸ್ವಾಮಿ**
ಸ್ಥಳ : ರಾಯಚೂರು ಸಂಪಾದಕರು

# ಓಂ ತತ್ ಸತ್

## ಗ್ರಂಥಕರ್ತರ ಮಾತು

ಅರಿತ ಕಿರಣ. ಇದು ಏನನ್ನು ಅರಿತ ಕಿರಣ? ಲಿಂಗ, ಜಂಗಮ, ಪ್ರಸಾದವರಿತ ಕಿರಣ. ಈ ಕಿರಣದ ಘನವನೇನೆಂಬೇನೆಂಬೆ? ತ್ರಿವಿಧ ವರಿತು ನಿಃ ಕಳಂಕ ನಿಜೈಕ್ಯವ ಬಲ್ಲ ಕಿರಣ. ಇದು ಶರಣನ ಕಿರಣ. ರವಿ ಕಿರಣ ನೋಡಿದ ಕಂಙು. ಇದು ನುಡಿದು ಹೇಳಿದುದೆಂದು ಮೌನ ಮುದ್ರಿತವಾಗಿಹ ಕಂಙು. ಅದನಾರು ವಿವರಿಸುವದು. ವಿವರಿಸಿಹೆನೆಂದರೆ ಅದಕ್ಕದೆ ಕೊರತೆ. ಹಾಗೆ ತ್ರಿವಿಧವರಿತುದು, ತೋರಬಾರದ ಘನವ ಹೇಳಲೆಂದೇನೂ? ಹೇಳಬಾರದ ಘನವ ತೋರಲೆಂದೇನೊ? ಸರಸಂದಾನದ ಪರಿಯಲ್ಲ ಗುಹೇಶ್ವರ ಲಿಂಗ ಕಲ್ಪಿತವಲ್ಲ ನೋಡಾ. ಕಲ್ಪಿತವಾಗದ್ದನ್ನು ಕಲ್ಪಿಸುವದೆಂತು? ಬಾರದಿದ್ದಲ್ಲಿ ನೆನಹು ನಿರ್ಣಯ ಮಾಡುವದೆಂತು? ಭಾವಿಸುವದದೆಂತು? ಅರಿವುಡೆ ತಾನೆ ಇದು ತನ್ನಿಂದ ಅರಿತ ಕಿರಣ, ತನ್ನದಾದ ಕಿರಣ ಉಪಮಿಸದ ಕಿರಣ.

**– ವಿದ್ಯಾನಂದ ಶರಣರು ಡಬ್ಬೇರಮಡುವು**

**ವಚನ 1**

**ಹೊಲೆಯುಂಟೆ?**
**ಲಿಂಗ ವಿದ್ದೆಡೆಯಲ್ಲಿ ಕುಲವುಂಟೆ?**
**ಜಂಗಮ ವಿದ್ದೆಡೆಯಲ್ಲಿ ಎಂಜಲುಂಟೆ?**
**ಪ್ರಸಾದ ವಿದ್ದೆಡೆಯಲ್ಲಿ, ಅಪವಿತ್ರದ ನುಡಿಯ ನುಡಿವ ಸೂತಕವೆ**
**ಪಾತಕ ನಿಃಕಳಂಕ ನಿಜೈಕ್ಯ. ತ್ರಿವಿಧ**
**ನಿರ್ಣಯ ಕೂಡಲ ಸಂಗಾ ನಿಮ್ಮ ಶರಣ. ॥ 769 ॥**

**ತಾತ್ಪರ್ಯ:** ಹೊಲೆಯುಂಟೆ ಲಿಂಗವಿದ್ದೆಡೆಯಲ್ಲಿ? ಕುಲವುಂಟೆ ಜಂಗಮವಿದ್ದೆಡೆಯಲ್ಲಿ, ಎಂಜಲುಂಟೆ ಪ್ರಸಾದ ವಿದ್ದೆಡೆಯಲ್ಲಿ:

ಓಹೋ ಲಿಂಗ, ಜಂಗಮ, ಪ್ರಸಾದವಿದ್ದ ಪ್ರದೇಶ ಶುದ್ಧ, ಸಿದ್ಧ, ಪ್ರಸಿದ್ಧ ವಿದ್ದ ಪ್ರಸಾದವಿದ್ದ ಸ್ವಪ್ರದೇಶ. ಇದು ಅಜಾತ ಪ್ರದೇಶ, ಮೀಸಲ ಘನದ ಪ್ರದೇಶ, ಇದು ಎಂಜಲ ಮಾತಿನವರಿಗೆ ನಿಲುಕದ ಪ್ರದೇಶ. ಇಂಥ ಮಹದರುವುಳ್ಳ ಸ್ಥಾನದಲ್ಲಿ ದೋಷ ಕಾಣುವುದೆಂದರೆ ದುರ್ದೈವ, ದುರ್ದೆಶೆ, ಅದುವೆ ಮಹಾನ್ ಪಾಪವಾದುದರಿಂದ ಅಪವಿತ್ರದ ನುಡಿಯ ನುಡಿವ ಸೂತಕವೆ ಪಾತಕವೆಂದಿಹರು.

ಲಿಂಗ, ಜಂಗಮ, ಪ್ರಸಾದದ ನಿರ್ಣಯವಂತ ನಿಃಕಳಂಕ ನಿಜೈಕ್ಯ ನಿಮ್ಮ ಶರಣ ಎಂದು ಬಸವರಾಜದೇವರೆ ತಮ್ಮ ಪ್ರಸಾದ ವಾಣಿಯಿಂದ ಬಿತ್ತರಿಸಿದುದು ನೋಡಿದಡೆ ಸಾಮಾನ್ಯರುಗಳೂ ಈ ಮೂರೊಂದಾದ ಘನವ ತಿಳಿಯುವದದೆಂತು? ತಾನೆ ಲಿಂಗ, ತಾನೆ ಜಂಗಮ, ತಾನೆ ಪ್ರಸಾದಿಯಾಗಿಹ ಮಹಾಂತನೆ ನಿಃಕಳಂಕನು ನಿಜೈಕ್ಯನು. ಆ ಘನವಂತನೆ ಗಗನದಂತೆ ಅಖಂಡಿತ ಘನವಾಗಿದ್ದ ಪೂರ್ಣ ಜ್ಞಾನಾಮೃತನು ತ್ರಿವಿಧದ ನಿರ್ಣಯಗಾರನು, ಈ ನಿರ್ಣಯಗಾರನ ಮಹದರುವುಳ್ಳ ಮಹಾನುಭವವನ್ನು ಎಲ್ಲಿಯವರೆಗೆ ಅರಿದರಿದು ನೋಡುವುದಿಲ್ಲ ಅಲ್ಲಿಯವರೆಗೆ ಲಿಂಗ, ಜಂಗಮ, ಪ್ರಸಾದದ ಅರಿವು ಆಗದು.

ಲಿಂಗ, ಜಂಗಮ, ಪ್ರಸಾದವೆಂಬುದು ನುಡಿಗೆಡೆಗೊಡದ ಘನವು ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಅರಿವು ಇದನೆಂತು ಸತ್, ಚಿತ್, ಆನಂದವೆಂದು ವಿವರಿಸುವದಾದರೂ ಅದೆಂತು, ಇದು ಮಾತಿಗೆ ನಿಲುಕದು . ಮನ ಬುದ್ಧ್ಯಾದಿಗಳಿಗೆ ವಿಷಯವಲ್ಲ. ಇಂಥ ಪರತತ್ವ ಹೇಗೆ ವಿವರಿಸುವುದು? ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನವಾಗಿಹ ಜ್ಞಾನಾಮೃತ. ಇದು ತನಗಿಂತ ಭಿನ್ನವಾದುದು ಅಲ್ಲ, ಅಭಿನ್ನವೂ ಅಲ್ಲ, ಒಳಹೊರಗೆನ್ನದೆ ಪೂರ್ಣವಾಗಿಹ ಘನವು ತನ್ನಿಂದರಿವುಡೆ ತಾನೆ ಸತ್ ಎಂಬುದು ನುಡಿಗೆಡೆ ಗೊಡದ ಘನ, ಇದುವೆ ಲಿಂಗವಾಗಿ ಕರಕಮಲದಲ್ಲಿ ಬೆಳಗುವ ಬೆಳಗುಳ್ಳ ಘನ, ಇದು ಅದೆಲ್ಲೊ ಹಿಂದೆ ಹುಟ್ಟಿ ಈಗ ನಾಶವಾದುದಲ್ಲ. ಎಂದೆಂದೂ ಇದ್ದಂತಿರುವ ನಿಷ್ಕಳಂಕ, ಅಬಾಧಿತ ಘನವು, ಅಲ್ಲಿ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನದಲ್ಲಿ ರೂಪ, ಅರೂಪ ಹೇಗೆ ಇರಬಲ್ಲವು? ಸ್ಥೂಲ, ಸೂಕ್ಷ್ಮ, ಪವಿತ್ರ, ಅಪವಿತ್ರ, ಹೇಗೆ ಇರಬಲ್ಲವು? ಅದನ್ನು

ವ್ಯಾಪ್ಯ ವ್ಯಾಪಕವೆಂದು ಹೇಗೆ ವಿಭಾಗಿಸಿ ವಿವರಿಸುವುದು? ಇದು ಕಾರಣ ಲಿಂಗವೆಂಬುದು ನಿಷ್ಕಳಂಕ ತತ್ವ, ಅದು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನವು ಇದರ ಜ್ಞಾನವಿಲ್ಲದ್ದರಿಂದ ಇಷ್ಟ ಲಿಂಗಧರಿಸಿದರೂ ಅಲ್ಲಿ ಕಳಂಕದೃಷ್ಟಿ ನಷ್ಟವಾಗಲಿಲ್ಲ, ಆ ಹೃದಯದಲ್ಲಿ ಲಿಂಗ ಪ್ರಜ್ವಲಿಸುತ್ತದೆ. ಅಲ್ಲಿ ದೇಹಭಾವ ರೂಪ ಹೊಲೆತನ ಇರದು. ಈ ಹೊಲೆತನವಿದ್ದಲ್ಲಿ ಲಿಂಗಜ್ಞಾನವಿಲ್ಲ, ಲಿಂಗಭಾವವಿಲ್ಲ ಎಂದು ತಿಳಿವುದು.

ಚಿತ್ ಎಂಬುದು ಜಂಗಮ ಘನ, ಇದು ನಿರ್ಗಮನಿ ಜಂಗಮ ಅಖಂಡಿತ ಘನವಾಗಿಹ ಪೂರ್ಣ ಪರಮಾನಂದ ಸ್ವರೂಪ. ಇದು ನಿರಾವರಣ ನಿರಾಲಂಬ ನಿರುಪಾಧಿ ಅನಾಮಯವಾಗಿರುವ ಏಕರಸ, ಸುಖದ ಸುಖ. ನಿರಂತರ, ಉದಯಾಸ್ತವಿಲ್ಲದೆ ಬೆಳಗುವ ಸ್ವಯಂ ಪ್ರಕಾಶ. ಅದಕ್ಕೆ ಬೇರೆ ಬೆಳಕಿಲ್ಲ. ಅರಿವುಡೆ ತಾನೆ, ತಾನು ಅರುವಿನ ಅರುವು. ಅರಿದರುಹಿಸಿಕೊಂಬುದಕ್ಕೂ ಮೀರಿದ ಘನವು. ಇಲ್ಲಿ ಸ್ವಗತ ಭೇದಕ್ಕಿಂಬಿಲ್ಲ. ಸಜಾತಿ ಭೇದಕ್ಕಿಂಬಿಲ್ಲ ವಿಜಾತಿ ಭೇದಕ್ಕಿಂಬಿಲ್ಲ ರೂಪಾರೂಪವೆಂಬುದಕ್ಕೂ ಮೀರಿದ ಘನ. ಇದು ದೃಶ್ಯವಾದುದೆಂತು? ದೃಕ್ ಆದುದೆಂತು? ದೃಶ್ಯದೃಕ್ ಎಂಬುದಕ್ಕೂ ಮೀರಿನಿಂದ ನಿಲುವು, ಇದು ಅದ್ವಿತೀಯವು ಅಪಾರವು ಪರಾತ್ಪರವು ಪರಮಜ್ಞಾನ ಸ್ವರೂಪ ಇಲ್ಲಿ ಕುಲವ ನರಸುವರೆ? ಸೂರ್ಯನಲ್ಲಿ ಕತ್ತಲೆಯ ನರುಸವರೆ? ಚಿತ್ ಸ್ವರೂಪಿ ಜಂಗಮವಿದ್ದಲ್ಲಿ ಜಡ ಚೇತನವೆಂದು ಕಲ್ಪಿಸುಪರೆ? ನಿಸ್ಸೀಮವು ಸೀಮಿತವಾಗುವುದೇ? ಅರುವಿನಲ್ಲಿ ಮರವು ಅರಸುವರೇ? ಅರಿಯದರುವು ಅಲ್ಲಿ ಮರವರುವಿನ ಗಜಿಬಿಜಿಗೆ ಇಂಬೆಲ್ಲಿಯದು? ಜಂಗಮದೇವ, ಎಡೆಯಿಲ್ಲದ ಪರಿಪೂರ್ಣವಾದುದರಿಂದ ಶರಣ ನಿಷ್ಕಳಂಕ, ನಿಜೈಕ್ಯನೆಂದು ಹೇಳಿಹರು, ಶರಣರೂಪಿ ಜಂಗಮ, ಚಿತ್ ಸ್ವರೂಪ ತಾನಾದ ಜಂಗಮ, ಅರುವರಿತ ನಿಃಶಬ್ದವೇದಿ ಜಂಗಮ, ಈ ಪರಮಜ್ಞಾನ ಇದ್ದಲ್ಲಿ ಭ್ರಾಂತಿ ರೂಪ ಕುಲಗಳು ಇರವು, ಜಾತೀಯತೆ ಇರದು, ಅಜಾತಂಗೆ ಜಾತಿಗಳೂ ಕಾಣವು. ಪ್ರಸಾದವದು ತುದಿ ಮೊದಲಿಲ್ಲದ ಜ್ಞಾನಘನವು ಜ್ಞಾನಾನಂದ ಈ ಜ್ಞಾನಾನಂದಕ್ಕೆ ಆರಂಭವಿಲ್ಲ ಮುಕ್ತಾಯವಿಲ್ಲ ಇಲ್ಲಿ ಇತಿಯು ಬಾರದು, ನೇತಿಯು ಬಾರದು. ಏನೊಂದಾಗದ ಘನವು ಮಿಗೆಮಿಗೆ ಮೀಸಲಾಗಿಹ ಪರಮಜ್ಞಾನಾಮೃತವು ಎಂಜಲವಾಗದು. ಇದು ನುಡಿಗೂ ನಡೆಗೂ ಮೀರಿದ ಜ್ಞಾನಾನಂದವು. ಇದು ತೆರಹಿಲ್ಲದ ಪೂರ್ಣಾನಂದ ಅರಿವುಡೆ ಸ್ವಯಾನಂದ ತಾನೆ. ಇದು ಕಾರಣ ಬಸವರಾಜದೇವರು ಹೊಲೆಯುಂಟೆ ಲಿಂಗವಿದ್ದೆಡೆಯಲ್ಲಿ ಕುಲವುಂಟೆ ಜಂಗಮವಿದ್ದೆಡೆಯಲ್ಲಿ ಎಂಜಲುಂಟೆ ಪ್ರಸಾದವಿದ್ದಲ್ಲಿ ಎಂಬ ಮಹದರುವಿನ ಮಹಾನುಭವದ ಬೆಳಗುಳ್ಳ ಬೆಳಕಿನಲ್ಲಿ ನಿಂತು ನೋಡುವುಡೆ ಈಗಿನ ಸಮಯದಲ್ಲಿ ಲಿಂಗ, ಜಂಗಮ, ಪ್ರಸಾದವೆಂಬುದು ಇವು ಮಹದರುವಿನ ಅರುವೆಂಬುದು ಮರೆತುಹೋಗಿದೆಯಲ್ಲ. ಪರತತ್ವವು ಒಂದು ಸೀಮಿತವಾಗಿದೆಯಲ್ಲ. ಇದೆಂಥ ಕಲಿಕಾಲ, ಇಡೀ ವಿಶ್ವಕ್ಕೆ ಪ್ರಿಯವಾದ ತತ್ವ, ನರರಿಗೂ, ಸುರರಿಗೂ, ರುದ್ರಗಣ ದೇವಗಣಕ್ಕೂ ಪ್ರಿಯವಾದ ತತ್ವ. ಈ ತತ್ವವೆ ಅಖಂಡಿತ ಘನ ಪರಿಪೂರ್ಣವಪ್ಪ

ತನ್ನಿರವು ಆದುದು. ಮರವು ಅರುವೆಂಬ ಗಜಿಬಿಜಿಯಲ್ಲಿ ಸಿಕ್ಕು, ಪರಮ ಪುರುಷಾರ್ಥ ಅಪೂರ್ಣವಾಯಿತೆ? ಇದೆಂಥ ಯುಗದ ಪರಿಣಾಮ, ಕಲಿಯ ಕಾಲ, ಅರು ಹೃದಯ ಹೋಗಿ ಮರವಿನಿಂದುಕ್ತವಾಯಿತೇ, ನಿಷ್ಕಳಂಕ ಲಿಂಗ ವಿದ್ದೆಡೆಯಲ್ಲಿ, ಕಳಂಕ ಕಂಡಿತೆ ಅಂಗ ಬುದ್ಧಿಗೆ ಇಂಬಾಯಿತೇ, ಲಿಂಗ ದೃಷ್ಟಿ ಕಳಕೊಂಡು ಅಂಗ ದೃಷ್ಟಿಯೇ ದೃಢವಾಯಿತೆ ಲಿಂಗಭಾವ ಲಿಂಗಜ್ಞಾನ, ಲಿಂಗಾನುಭಾವ ದೂರಾಯಿತೇ? ಲಿಂಗಾನುಭವ ದೂರಾದಲ್ಲಿ ಲಿಂಗ ಸುಖ ಇನ್ನೆಲ್ಲಿ?

ವಿಶ್ವಾತೀತ ಲಿಂಗ, ಖಂಡಾಖಂಡ ಸಂಯೋಗವಿಲ್ಲದ ಅಖಂಡಿತಘನ, ಪೂರ್ಣವಪ್ಪ ಪರಮಜ್ಞಾನರೂಪ ಲಿಂಗ ವಿಶ್ವವೆ ತಾನಾಗಿ ಬೆಳಗುವ ಲಿಂಗ. ಇಂದು ಅಂಗದ ಮೇಲೆ ಲಿಂಗಧರಿಸಿದ ಇಷ್ಟಲಿಂಗಾರ್ಚಕರಷ್ಟೆ. ಲಿಂಗ ಘನವಾದರೆ? ಇನ್ನುಳಿದವರು ಅಂಗಭಾವರೂಪಿ ಭ್ರಮಿತರಾದರೆ, ಘನ ಲಿಂಗವು ತನ್ನ ನಿಸ್ಸೀಮತ್ವದಿರುವಿನಿಂದ ದೂರಾಗಿ ಸೀಮಿತ ವಾಯಿತೆ? ಜ್ಯೋತಿಯ ಹಿಡಿದು ಕತ್ತಲೆಯನರಸುವರೆ? ಪರುಷವಿಡಿದು ಕೂಲಿಯನರಸುವರೆ? ಲಿಂಗವಿಡಿದವರು ಅಂಗಬುದ್ಧಿಯ ವರಾದರೆ? ಜಂಗಮಯ್ಯನು ಕುಲವ ಕಂಡನೇ? ಅಜಾತನು ಜಾತಿಯ ವಾಚಕಕ್ಕೊಳಪಟ್ಟನೆ?

ಜಂಗಮಯ್ಯ ನಿದ್ಧ ಪ್ರದೇಶ ಜಾತ್ಯಾತೀತ ಪ್ರದೇಶ ಅಲ್ಲಿ ಸರ್ವಂಖಲ್ವಿದಂ ಬ್ರಹ್ಮವೆಂಬ ಬ್ರಹ್ಮಜ್ಞಾನದ ಪ್ರದೇಶ ಭರಿತ ಭಾವದವರ ಪ್ರದೇಶ, ಸತ್ಯಜ್ಞಾನಾನಂದ ನೆಲೆಗೊಂಡ ಪ್ರದೇಶ. ಅಲ್ಲಿ ನಾಮ ರೂಪಂಗಳಿಗೆಡೆಯಿಲ್ಲ. ಗುಣಾತೀತ ನಿಲಯದಲ್ಲಿ ಗುಣಕ್ರಿಯೆಗಳಿಗೆಡೆಯುಂಟೆ? ನಿರ್ಭಾವದಲ್ಲಿ ಭಾವರೂಪ ಭ್ರಮೆ ಏತರದು? ಭ್ರಮ ನಷ್ಟವಾದಲ್ಲಿ ಕುಲಗಳಿಲ್ಲ ಅಕುಲವು ಕುಲವಾದುದು ಹೇಗೆ?

ಎಂಜಲುಂಟೆ ಪ್ರಸಾದವಿದ್ದೆಡೆಯಲ್ಲಿ ಪ್ರಸಾದವೆಂಬ ಪರಮಜ್ಞಾನ ಪರಮಾಮೃತವು ಅದು ವಾಙ್ಮನೋತೀತವು. ಅದು ಎಂಜಲವಾಗುವುದೇ? ಸತ್ಯಜ್ಞಾನಾನಂದವು ಅದು ನಿರ್ದೋಷವು ಅಲ್ಲಿ ಕೊಟ್ಟುಕೊಂಬುದೆ ವರ್ಜಿತ. ಕೊಟ್ಟುದು ಸೂತಕ ಮುಟ್ಟಿದುದು ಸೂತಕ ಲಿಂಗ ನಾನೆಂಬುದು ಸೂತಕವಾಗಿರುವಾಗ ಅಲ್ಲಿ ಶಬ್ಧವೆ ಮೀಸಲಾಗಿರುವದರಿಂದ ನುಡಿಗೆಡೆಗೊಡದ ಘನವು ಪ್ರಸಾದವು ಇದು ಎಂಜಲಾಗುವದೆಂತು.

ಅಪವಿತ್ರವಾದ ನುಡಿಯ ನುಡಿವ ಸೂತಕವೆ ಪಾತಕ. ಲಿಂಗ, ಜಂಗಮ, ಪ್ರಸಾದವಿದ್ದಲ್ಲಿ ಅಪವಿತ್ರದ ನುಡಿಯು ನುಡಿಯುವುದು ಮಹಾಪಾಪ. ಏಕೆಂದರೆ ನಿಷ್ಕಳಂಕದಲ್ಲಿ ಕಳಂಕವ ಕಾಣುವುದು, ಕಳಂಕ ನುಡಿಯ ನುಡಿವುದು, ಸರಿಯೇ? ಮಂತ್ರಪಿಂಡವ ಮಾಂಸ ಪಿಂಡವಾಗಿ ಕಾಣಬಹುದೇ? ಲಿಂಗವನ್ನು ಅಂಗನೆನ್ನಬಹುದೆ? ದೇವ ದೇವ ನನ್ನು ನರನಾಗಿ ಕಾಣಬಹುದೇ? ತಾ ದೇವನಾಗಿ ನರನೆಂದು ನುಡಿವ ನುಡಿಯು ಮಹಾಪಾಪವಲ್ಲವೇ? ತಾ ನಿಷ್ಕಳಂಕನಾಗಿ ಕಳಂಕವುಳ್ಳ ಮಾಂಸಮಯ ಶರೀರ ತಾನೆನ್ನುವದು ಮಹಾಪಾಪವಲ್ಲವೆ? ತಾನು ಸಹಿತ ಅಖಿಲ ಜಗತ್ತು ಲಿಂಗ ಘನವಿರುವಲ್ಲಿ ಅದನ್ನು ಮರೆತು, ಪಿಂಡಾಂಡ, ಬ್ರಹ್ಮಾಂಡವಾಗಿ ವ್ಯಷ್ಟಿ

ಸಮಷ್ಠಿ ಶರೀರವೆಂದು ನುಡಿದ ನುಡಿಯು ಮಹಾನ್ ಪಾಪ ವಲ್ಲವೆ?

ಅಜಾತ ತತ್ವ ಮರೆತು ಜಾತಿ ವಾಚಕಕ್ಕೊಳಪಟ್ಟು ನುಡಿಯ ನುಡಿವುದು ಮಹಾಪಾಪವಲ್ಲವೇ? ಚಿತ್ ಸ್ವರೂಪವ ಮರೆತು, ಜಡಚೇತನ ಭಾವಿಯಾಗಿ ಭ್ರಮಿತ ಭಾವದಿಂದುಕ್ತವಾಗಿ ನುಡಿಯ ನುಡಿಯು ಮಹಾಪಾಪವಲ್ಲವೆ? ತಾ ಅಯ್ಯನಾಗಿ ಸಾಮಾನ್ಯ ನರನ ಭಾವಿಯಾಗಿ ನುಡಿಯ ನುಡಿವುದು ಮಹಾಪಾಪವಲ್ಲವೆ?

ಮಹದರುವುಳ್ಳ ಮಹಾಪ್ರಸಾದಕ್ಕೆ ಎಂಜಲ ಕಲ್ಪಿಸುವುದು, ಪ್ರಸಾದವನ್ನು ಕೊಡಕೊಳ್ಳುವ ರೂಪದಲ್ಲಿ ವ್ಯವಹರಿಸಿ ನುಡಿಯ ನುಡಿವುದು ಮಹಾ ಪಾಪವಲ್ಲವೇ? ಇದು ಕಾರಣ ಆವಲ್ಲಿ ಅಪವಿತ್ರದ ನುಡಿಯ ನುಡಿಯುವದಿದೆ. ಅಲ್ಲಿ ನಿಃಕಳಂಕ ನಿಜೈಕ್ಯ ಜ್ಞಾನವಿಲ್ಲ. ಆವಲ್ಲಿ ನಿಃಕಳಂಕ ನಿಜೈಕ್ಯರಾದ ಶರಣರಿರುವರು ಅಲ್ಲಿ ಅಪವಿತ್ರ ನುಡಿಯಿಲ್ಲ ಅಲ್ಲಿ ತನು ನಷ್ಟ ಮನ ನಷ್ಟ ನೆನೆಹು ನಷ್ಟ ಭಾವ ನಷ್ಟ ಜ್ಞಾನ ನಷ್ಟವಾದುದುರಿಂದ ಅಭೇದ್ಯ ಶರಣರು ಎಂದು ಹೇಳಿದೆ.

**ವಚನ 2**

**ಲಿಂಗ ಮುಖವನರಿದವಂಗೆ ಅಂಗವೆಂಬುದಿಲ್ಲ**
**ಜಂಗಮ ಮುಖವನರಿದವಂಗೆ ಸಂಸಾರವೆಂಬುದಿಲ್ಲ**
**ಪ್ರಸಾದ ಮುಖವನರಿದವಂಗೆ ಇಹ ಪರವೆಂಬುದಿಲ್ಲ.**
**ಈ ತ್ರಿವಿಧ ಒಂದೆಂದರಿದವಂಗೆ ಮುಂದೆ ಏನೂ ಇಲ್ಲ.**
**ಈ ತ್ರಿವಥದ ನೆಲೆಯು ಶೃತಿ ಸ್ಮೃತಿಗಳರಿಯವು**
**ಕೂಡಲ ಚೆನ್ನಸಂಗಾ ನಿಮ್ಮ ಶರಣ ಬಲ್ಲ. ॥ 317 ॥**

**ತಾತ್ಪರ್ಯ:** ಲಿಂಗ ಕಂಡು ಲಿಂಗ ಲಿಂಗವೆಂದು ಅಷ್ಟವಿದಾರ್ಚನೆ ಷೋಡಶೋಪಚಾರ ಮಾಡಿದವರುಂಟೆ? ಲಿಂಗ ಮುಖವರಿತವರು ಶಿಕ್ಕುವುದು ವಿರಳ. ಲಿಂಗಕ್ಕೆ ಕೆಲವರು ಗೋಲಾಕಾರ ಎಂದು ಅಣೋರಣಿಯಾನ್, ಮಹತೋ ಮಹಿಮಾನ್ ಎಂದು ಶೃತ ಪಡಿಸುವರು ಉಂಟು. ಲಿಂಗ ಮುಖ ಅರಿತವರುಂಟೆ? ಆರು ಲಿಂಗ ಮುಖವರಿತಿಹರು. ಅವರಿಗೆ ಸ್ಥೂಲಾಂಗ ಸೂಕ್ಷ್ಮಾಂಗ ಕಾರಣಾಂಗ ಮಹಾಕಾರಣಾಂಗಗಳೆಂಬ ಅಂಗಗಳು ಕಾಣಲಿಲ್ಲವಾದ್ದರಿಂದ ಲಿಂಗಮುಖ ಅರಿತವರು ಇದು ಕಾರಣ ಅವರಿಗೆ ಅಂಗವೆಂಬುದಿಲ್ಲ.

ಲಿಂಗಮುಖ ಅದಾವ ಮುಖ? ಅದು ರೂಪಾರೂಪವಾಗದ ಮುಖ. ನಿರೂಪಮುಖ ಗಗನಕ್ಕೆ ಮುಖ ಉಂಟೆ? ಕೆಲವರು ನೀಲಿ ವರ್ಣವೆಂದು ಹೇಳುವರು ಕೆಲವರು ಅದಾವ ವರ್ಣವು ಆಗುವುದಿಲ್ಲ ಅದು ಬಯಲು ಬಯಲೆ, ಬಯಲಿಗೆ ಅದಾವ ರೂಪವೆಂದು ಹೇಳುವದು, ವರ್ಣವೆಂದು ಹೇಳುವುದು ಹಾಗೆ ಲಿಂಗವೆಂಬುದು ಅಖಂಡಿತ ಘನವಾಗಿಹ ಸದ್ರೂಪವಪ್ಪ ಪೂರ್ಣಲಿಂಗವಾದುದರಿಂದ ಇದನ್ನು ರೂಪಾರೂಪವೆಂದು ಹೇಗೆ ಹೇಳುವುದು.

ಲಿಂಗ ಪೂರ್ಣಮದಃ ಪೂರ್ಣಮಿದಂ ಎಂದೆನ್ನುವಲಿಂಗ ಪೂರ್ಣವಾದ ಲಿಂಗವಾದುದರಿಂದ ಲಿಂಗಕ್ಕೆ ಮುಖ ನಿರೂಪ ಮುಖ, ಭಕ್ತರಾದವರು ತಮ್ಮ

ಕರಕಮಲದಲ್ಲಿ ಲಿಂಗ ಮುಖ ಕಂಡರೂ ಅದನು ಅರಿಯ ಹೋಗಲಿಲ್ಲ. ಅರಿಯ ಹೋದವರಿಗೆ ಲಿಂಗಕ್ಕೆ ಮೈತುಂಬ ಮುಖವಾಗಿದ್ದು ಕಂಡು ತಾನೆಂಬುದು ಲಿಂಗ ಮುಖ, ತನ್ನ ಮುಖ ಲಿಂಗವಾಗಿ ಅಂಗವ ಕಾಣದಾದರು. ಜ್ಯೋತಿಗೆ ಮೈಯೆಲ್ಲಾ ಮುಖ ಹೇಗೋ ಹಾಗೆ ಚಿಜ್ಯೋತಿ ಲಿಂಗ ರೂಪಿ ಪೂರ್ಣಮುಖವ ಏನೆಂಬೇನೆಂಬೆ, ಸುಗಂಧದ ಘ್ರಾಣಾದ ಘ್ರಾಣೇಂದ್ರಿ ಅದು ಹೀಗೆಯೆ ಇದೆಯೆಂದು ಎಂದಾದರೂ ವರ್ಣಿಸಿರುವುದೆ? ಅರು ಹೃದಯವು ಲಿಂಗ ಮುಖವ ಕಂಡು ಲಿಂಗವಾಗಿಹ ಘನ ಅದನೆಂತು ಉಸರುವುದು, ಉಪಚಾರಕ್ಕೆ ಮಾತ್ರ, ಲಿಂಗವೆಂಬುದು ಅಖಂಡಿತ ಘನವಾದುದರಿಂದ ವ್ಯಾಪ್ಯ ತಾನೆ ವ್ಯಾಪಕ ತಾನೆ, ಸಾವಯವ ತಾನೆ ನಿರವಯ ತಾನೆ, ಒಳ ಹೊರಗೆನ್ನದೆ ಭರಿತವಾದುದು. ಘಟ್ಟಿದುಪ್ಪ ತಾನೆ ತಿಳಿದುಪ್ಪ ತಾನೆ ಹಾಗೆ ಅಂಗ ತಾನೆ ಲಿಂಗ ತಾನೆ ಸಕಳ ತಾನೆ ನಿಃಕಳ ತಾನೆ ಆದ ಘನಲಿಂಗವು ಪೂರ್ಣವಾದುದರಿಂದ ಲಿಂಗದ ಹೊರ್ತು ಅನ್ಯ ಆವುದು ಇಲ್ಲ. ಇಲ್ಲವೆಂಬುದು ಇಲ್ಲವಾಗಿರುವುದರಿಂದ ಲಿಂಗವು ಮೌನ ಮುದ್ರಿತವುಳ್ಳದ್ದಾಗಿ ಸ್ವಮಹಿಮ್ನವು. ಅರಿವುಡೆ ತಾನು ಎಂದೆಂದೂ ಮೌನ ಮುದ್ರಿತನು ಸ್ವಮಹಿಮ್ನನು ಎಂದು ಹೇಳಿದುದು.

ಜಂಗಮ ಮುಖವನರಿದವಂಗೆ ಸಂಸಾರವೆಂಬುದಿಲ್ಲ. ಜಂಗಮ ಮುಖ ಆವುದು ಗೊತ್ತೆ, ಚಿತ್ ಸ್ವರೂಪಿ ಜಂಗಮ, ಜ್ಞಾನಸ್ವರೂಪಿ ಜಂಗಮ ಜ್ಞಾನ ಸ್ವರೂಪವೆ ಈ ಘನವಂತನ ಮುಖ. ಸೂರ್ಯನಿಗೆ ಮೈಯೆಲ್ಲಾ ಪ್ರಕಾಶ, ಮುಖವು ಪ್ರಕಾಶ, ಅಂಗಾಂಗಗಳೂ ಪ್ರಕಾಶ, ಹೊಟ್ಟೆಯು ಪ್ರಕಾಶ, ಬೆನ್ನು ಪ್ರಕಾಶ, ಪ್ರಕಾಶವೆ ಪ್ರಕಾಶ ಹೇಗೋ ಹಾಗೆ. ಚಿದ್ರೂಪವರಿತು, ಚಿದ್ಘನವೆ ತಾನಾಗಿಹ ಜಂಗಮ ಮುಖ ಅದನಾರಯ್ಯ ಹೀಗೆಯೆಂದು ವಿವರಿಸುವದು.

ಜಂಗಮವೆಂಬುದು ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗ, ಉಪಮೆಗೆ ತಂದು ನುಡಿಯಬಹುದೇ? ಎರಡು ಒಂದಾಗಿರ್ದ ಘನ, ಅಲ್ಲಿ ಇದು ಜಂಗಮ ಇದು ಲಿಂಗವೆಂದು ವಿಭಾಗಿಸಿ ನುಡಿಸಲು ಬಾರದು ನೋಡಾ ಲಿಂಗವು ಸರ್ವತ್ರ ನೆಲಿಸಿ ಲಿಂಗವೆನಿಸಿತ್ತಯ್ಯಾ ಲಿಂಗವು, ಲಿಂಗವು ಚರಿಸಿ ಜಂಗಮವೆನಿಸಿತ್ತಯ್ಯಾ ಲಿಂಗವು, ಲಿಂಗವು ಇದರ ಇರವು ಹೇಳಿ ಗುರುವೆನಿಸಿತ್ತಯ್ಯ ಲಿಂಗವು ಇದು ಕಾರಣ ನಿರೂಪ ಜಂಗಮ, ನಿರುಪಾಧಿ ಜಂಗಮ, ನಿಸ್ಸಂಗ ಜಂಗಮ, ನಿರಾಲಂಬ ಜಂಗಮ, ನಿರ್ಲಿಖಿತ ಜಂಗಮ, ನಿರ್ನಾಮ ಜಂಗಮ, ಈ ಘನವಂತನೆ ಲಿಂಗ ಒಂದಾಗಿರ್ದ ಜಂಗಮ. ಈ ಮಹಾಂತನಿಗೆ ಅದಾವ ಸಂಸಾರ, ನಿರೂಪನಿಗೆ ರೂಪವೆಲ್ಲಿ? ನಿರವಯನಿಗೆ ಅವಯವಂಗಳೆಲ್ಲಿ? ನಿರುಪಾಧಿಗೆ ಉಪಾಧಿ ಏತರದು, ಉಪಾಧಿ ಇಲ್ಲದವಂಗೆ ಒಡಲೆಲ್ಲಿ? ಒಡಲಿಲ್ಲದವಂಗೆ ಕರಣಂಗಳೆಲ್ಲಿ ತನು ನಷ್ಟ, ಮನ ನಷ್ಟ, ನೆನಹು ನಷ್ಟ, ಜ್ಞಾನ ನಷ್ಟವಾಗಿ ಭಾವವೆ ನಿರ್ಭಾವವಾದಲ್ಲಿ ಲೀಯವಾದ ನಿಸ್ಸಂಗಿಗೆ ಸಂಗವೇತರದು ಸಂಬಂಧವೇತರದು! ನಿರ್ದೇಹಿಗೆ ದೇಹ ಉಂಟೆ? ಜಂಗಮ ಘನ ಅಳಿದುದಲ್ಲ ಉಳಿದುದಲ್ಲ ಘನಕ್ಕೆ ಗಮನವಾದುದಲ್ಲ ಏನೊಂದಾಗದ ಘನವು ಪ್ರಕೃತಿಯನ್ನಲ್ಲ ಪುರವಲ್ಲ ಪುರುಷನೂ ಅಲ್ಲ, ಕ್ಷರನಲ್ಲ ಅಕ್ಷರನಲ್ಲ. ಅಕ್ಷರೋತ್ತಮನ

ಘನವ ಅದೆಂತುಸುರುವದು ಈ ಮಹಾಂತ ಅನುಪಮನಾದುದರಿಂದ ಆನೆಂಬುದಿಲ್ಲ ನೀನೆಂಬುದಿಲ್ಲ. ತಾನಿಲ್ಲ ತಾನರಿದ ಬಳಿಕ ಏನೂ ಇಲ್ಲ. ಇಲ್ಲಾದುಂದಿಲ್ಲಾದುದೆಂತಿಪ್ಪುದು, ಇಲ್ಲಾದುದಿಲ್ಲಾದುದೆಂದಿಪ್ಪುದು, ಅನುವರಿತು ತನುವ ಮರೆದ ನಿರ್ದೇಹಿ ಮಹಾಂತನಿಗೆ ಅದಾವ ಸಂಸಾರ? ನಿರಾಲಂಬನಿಗೆ ಆವುದರ ಆಲಂಬನ? ಆವುದರ ತ್ಯಾಗ? ಬಯಲಿಗೆ ಆವುದರ ಗ್ರಹಣ ಆವುದರ ತ್ಯಾಗವು ಏಕಮೇವಾದ್ವಿತೀಯ ಘನವು ಅಲ್ಲಿ ಒಂದೆಂಬುದಿಲ್ಲ ಎರಡೆಂಬುದಿಲ್ಲ ಚಿತ್ ಸ್ವರೂಪಿ ಜಂಗಮ, ಅರುವರಿತು ಅರುವಿನರುವು ಆದ ಘನವದೆಂತು ವರ್ಣಿಸುವುದು, ಸರ್ವಾಂಗಗಳು ಲಿಂಗಸ್ವರೂಪ, ಅರು ಸ್ವರೂಪ, ಅರುವೆ ಅರುವು ಅರುವಿನ ವಿನಃ ಅನ್ಯವ ಕಾಣದ ಜಂಗಮ. ಅಲ್ಲಿ ಸುಮ್ಮನೆ ಹೇಳಲೆಂದೆನಿಸಿದರೂ ನಾಮ ರೂಪಂಗಳಿಲ್ಲ. ಇದು ಕಾರಣ ಈ ಮಹಾಂತನ ಇರವು ನಿರ್ಲಿಖಿತವಾಗಿದೆ, ಈ ಜಂಗಮಯ್ಯನ ನಿಂತ ನಿಲುವು ಸಕಲಕ್ಕೂ ಮಿಕ್ಕಿ ಮೀರಿದುದು ಏನೆಂಬೇನೆಂಬೆ. ಇದು ಕಥನಕ್ಕೆ ಮೀರಿದುದುರಿಂದ ನಿರ್ನಾಮ ಜಂಗಮನಾಗಿಹನು. ಈತನ ದಿವ್ಯದೃಷ್ಟಿಯು ಎರಡೊಂದಾದುದು, ಮರವರುವಿಗೆ ಮೀರಿದ ಘನವು, ಸಮತೆ ಸಯವಾದ ಮಹಂತನ ಮುಖ. ಅರುವಿನ ಅರುವಾದ ಘನವಂತನಿಗೆ ಅದಾವ ಸಂಸಾರ. ಇದು ಕಾರಣ ಸಂಸಾರವೆಂಬುದಿಲ್ಲವೆಂದು ಹೇಳಿಹರು.

ಪ್ರಸಾದ ಮುಖವನರಿದವಂಗೆ ಇಹ ಪರವೆಂಬುದಿಲ್ಲ: ಪ್ರಸಾದವೆಂಬುದು ಪರಮ ಜ್ಞಾನ, ಪರಮಾನಂದ ಪರಮಾಮೃತ ರೂಪಿ ಮುಖ ಅರಿತವಂಗೆ ಈ ಲೋಕವೆಂಬುದಿಲ್ಲ ಪರಲೋಕವೆಂಬುದಿಲ್ಲ. ಏಕೆಂದರೆ ಪರಮಾಮೃತ ರೂಪಿ, ಜ್ಞಾನಾಮೃತಕ್ಕೆ ತುದಿಯೂ ಇಲ್ಲ ಆರಂಭವೂ ಇಲ್ಲ. ಮನ ಮೇರೆದಪ್ಪಿದ ಘನ. ಆವನು ಸಂಕಲ್ಪ ವಿಕಲ್ಪದ ಸುಳುಹಿನ ಸೂತಕಿಯಾಗಿದ್ದಾನೆ. ಅದು ಪ್ರಸಾದ ಮುಖವರಿತ ಚಿನ್ಹವಲ್ಲ. ಎಲ್ಲಿಯವರೆಗೆ ತನ್ನನ್ನು ಕಲ್ಪಿತ ಪುರುಷನೆಂದು ತಿಳಿದಿಹನು, ಅಲ್ಲಿಯವರೆಗೆ ಮನದ ಗುಲಾಮನು ಮನದ ಕೈಯಾಳು ಅಲ್ಲಿ ಜ್ಞಾನಾನಂದವಿಲ್ಲ. ಜ್ಞಾನಾಮೃತ ರೂಪಿ ಪ್ರಸಾದ ತೆರಹಿಲ್ಲದ ನಿಜದ ನಿಲುವು ನಿಜಾನಂದ ಅಕ್ಷಯ ಸುಖ, ಸುಖವೆ ಸುಖ ಇರುವುದರಿಂದ ಇದು ಗಣನೆಗೆ ಮೀರಿದುದು. ಗಣನೆಗೆ ಮೀರಿದ ಚಿನ್ಹ, ಪ್ರಸಾದ ಮುಖವರಿತ ಚಿನ್ಹ ಅದಕ್ಕಾಗಿ ಅಲ್ಲಿ ಸೀಮಿತವಿಲ್ಲ ಪರಮಾನಂದವು ನಿಸ್ಸೀಮವಾದುದು. ಅಲ್ಲಿ ಇಹ ಪರವೆಂಬುದಕ್ಕಿಂಬಿಲ್ಲ. ಪ್ರಸಾದ ಮುಖವರಿತ ಪ್ರಸಾದಿ ಇಹಪರವೆಂಬ ಸಂದಳಿದ ಸಂವೇದಿ. ಈ ಮಹಾದರುವುಳ್ಳ ಮಹಾದಾನಂದ ರೂಪಿ ಮಹಾಂತ ತ್ರಿವಿಧ ಒಂದೇ ಎಂದು ಅರಿತ ಪ್ರಸಿದ್ಧ ಪ್ರಸಾದಿ. ಶುದ್ಧ ಪ್ರಸಾದ, ಸಿದ್ಧ ಪ್ರಸಾದ, ಪ್ರಸಿದ್ಧ ಪ್ರಸಾದ ಮೂರೊಂದಾಗಿ ಕಂಡುದರಿಂದ ಪ್ರಸಿದ್ಧ ಪ್ರಸಾದಿಯಾದುದರಿಂದ ಈ ಮಹಾಂತನು ಲಿಂಗ ಮುಖ, ಜಂಗಮ ಮುಖ, ಪ್ರಸಾದ ಮುಖವರಿತ ಮಹಾನುಭವಿ. ಅಖಂಡಿತ ಘನನಾಗಿಹ ಶಬ್ದಮುಗ್ಧ ನಿರ್ವಾಣನಾದುದರಿಂದ ಮುಂದೆ ಏನೂ ಇಲ್ಲವೆಂದು ಹೇಳಿಹರು.

ಈ ತ್ರಿವಿಧದ ನೆಲೆಯು ಶ್ರುತಿ, ಸ್ಮೃತಿಗಳರಿಯವು ಕೂಡಲ ಚೆನ್ನಸಂಗಾ ನಿಮ್ಮ

ಶರಣಬಲ್ಲ: ಲಿಂಗ ಮುಖದ ಘನವ, ಜಂಗಮ ಮುಖದ ಘನವ, ಪ್ರಸಾದ ಮುಖದ ಘನವು, ಶೃತಿ ಸ್ಮೃತಿಗಳರಿಯವು.

ಶೃತಿ, ಸ್ಮೃತಿಗಳೆಂಬವು ಶಬ್ದವೇದಗಳು, ಇದು ವಾಙ್ಮನದ ಕಾರ್ಯವು. ಇವು ಪರಪ್ರಕಾಶವು ನುಡಿ ನೆನಹಿನಿಂದುಕ್ತವಾದವುಗಳು ಲಿಂಗ, ಜಂಗಮ, ಪ್ರಸಾದವೆಂಬವು ನುಡಿಗೆಡೆಗೊಡದ ಘನದಿರುವಿನ ಸಂಜ್ಞೆ. ಇವು ಉದಯಾಸ್ತಗಳಿಲ್ಲದ ಬೆಳೆಗುಳ್ಳ ಘನ, ಶೃತಿ ಸ್ಮೃತಿಗಳೆಂಬವು ಹೆತ್ತರಿವು ಇವು ಅರಿಯದರುವಿನ ಘನವೇನು ಬಲ್ಲವು ಶರಣನು ಶೃತಿಗಗೋಚರನಾದುದರಿಂದ ಅರಿಯದರುವು, ಇದು ಕಾರಣ ಶರಣ ಬಲ್ಲನೆಂದು ಹೇಳಿಹರು.

**ವಚನ 3**

**ಕೊಟ್ಟುದು ಸೂತಕ,**
**ಮುಟ್ಟಿದುದು ಸೂತಕ,**
**ಕೊಟ್ಟುಕೊಂಬುದು ಸೂತಕ ಲಿಂಗ ನಿಜೈಕ್ಯಂಗೆ.**
**ಎಲೆ ಕೂಡಲ ಚೆನ್ನ ಸಂಗಯ್ಯ ಲಿಂಗ ನಾನೆಂಬುದೆ ಸೂತಕ.** ॥ 641 ॥

**ತಾತ್ಪರ್ಯ:** ಕೊಟ್ಟುದು ಸೂತಕ ಮುಟ್ಟಿದುದು ಸೂತಕ ಕೊಟ್ಟು ಕೊಂಬುದು ಸೂತಕ: ಇದಾರಿಗೆ ಸೂತಕವಾಯಿತ್ತು, ಲಿಂಗ ನಿಜೈಕ್ಯಂಗೆ ಪ್ರಸಾದ ಘನವರಿತವರೆಂದರೆ ಲಿಂಗ ನಿಜೈಕ್ಯ. ಈ ನಿಜೈಕ್ಯ ಸೂತಕ ವಿರಹಿತ, ಗುರು ಲಿಂಗ ಪ್ರಸಾದ ಕೊಟ್ಟು ಕಾಣಲಿಲ್ಲ. ತಾ ಮುಟ್ಟಿ ಕೊಂಬುವ ನಾಗಲಿಲ್ಲ. ಈ ಘನವಂತನಿಗೆ ಕೊಡ ಕೊಳ್ಳದ ವ್ಯವಹಾರ ಸೂತಕವಾಯಿತ್ತು.

ಪ್ರಸಾದವೆಂಬುದು ಗುರು, ಪ್ರಸಾದವೆಂಬುದು ಲಿಂಗ, ಜಂಗಮ ಪ್ರಸಾದವೆ ಪರಾತ್ಪರ, ಪ್ರಸಾದವೆ ಪರಮಾಮೃತ, ಪ್ರಸಾದವೆ ವಾಙ್ಮನೋತೀತವಿರುವಲ್ಲಿ, ಈ ಮಹದರುವುಳ್ಳ ಪ್ರಸಾದ ಕೆಲಬರು ಕೊಡಕೊಳ್ಳುವ ದೃಷ್ಟಿಯಲ್ಲಿ ಬಳಸುವುದು ಕಂಡು ಜರಿದಿದ್ದಾರೆ.

ಪ್ರಸಾದವೆಂಬ ವಾಙ್ಮನೋತೀತವಾದ ಪರಮಜ್ಞಾನ ಪರಮಾಮೃತ, ಜ್ಞಾನಾಮೃತ, ಅರಿದಿಹೆನೆಂದರೆ ಅರುವಿಂಗಸಾಧ್ಯ. ನೆನದಿಹೆನೆಂದಡೆ ನೆನಹಿಂಗಸಾಧ್ಯ. ಭಾವಿಸಿಹೆನೆಂದಡೆ ಭಾವಕ್ಕೆ ಅಸಾಧ್ಯ. ವಾಙ್ಮನಕ್ಕಗೋಚರವನರಿವ ಪರಿ ಎಂತಯ್ಯ ಗುರುತೋರದನ್ನಕ್ಕರ, ಗುರು ಶಿಷ್ಯರ ಮಧ್ಯದಲ್ಲಿ ಸ್ವಯಂ ಜ್ಯೋತಿ ಉದಯವಪ್ಪುದೆಂಬ ಶೃತಿ ಹುಸಿಯೇ? ಕೂಡಲ ಸಂಗಮದೇವಾ ನಿಮ್ಮ ಮಹಾನುಭಾವರ ಮಥನದಿಂದ ನಿಜವ ನೆಲೆಗೊಳಿಸಾ ಪ್ರಭುವೆ. ಪ್ರಸಾದ ರೂಪಿ ಪರಮಜ್ಞಾನ, ಅದು ಒಂದು ವಿಷಯವಲ್ಲ. ವಿಷಯವಾಗಿದ್ದರೆ ಅಲ್ಲಿ ಕೊಡಕೊಂಬುವ ವ್ಯವಹಾರ ಸಹಜವಾಗಿದೆ. ಅದು ನಿಃಶಬ್ದವೇದವು ನಿರ್ವಿಷಯ ನಿರಾಳವಾಗಿದ್ದುದನ್ನು ಗುರುವಾಗಿ ಕೊಡುವುದು ಹೇಗೆ? ಶಿಷ್ಯನಾಗಿ ಕೊಂಬುದು ಹೇಗೆ, ಭಕ್ತರಾಗಿಕೊಂಬುದು ಹೇಗೆ? ಜಂಗಮವಾಗಿ ಕೊಡುವುದು ಹೇಗೆ. ಗುರುಘನನು ಸಮಪ್ರಕಾಶ ತಿಳಿದ ಸಮರ್ಥನಾಗಿರುವುದು ಶಿಷ್ಯ ಸಮತತ್ವ ತಿಳಿಯುವ ಅರು ಹೃದಯವಾಗಬೇಕು. ಮೂಕನ ಬೋಧ ಮೂಕನಾಗಿ

ತಿಳಿಯುವುದು. ಇಲ್ಲಿ ಮೌನಮುದ್ರಿತವಾಗಿಹ ಗುಟ್ಟು ಮೌನ ಮುದ್ರಿತನಾಗಿ ತಿಳಿಯುವುದು. ಇಲ್ಲಿ ಕೊಡ ಕೊಳ್ಳುವ ವ್ಯವಹಾರ ಕೆಡಿಸಿ ಮಹದರುವುಳ್ಳ ಮಹಾನುಭವದಲ್ಲಿ ನಿಜವ ನೆಲೆಗೊಳಿಸುವದೆ ಲಿಂಗ ನಿಜೈಕ್ಯನ ಗುಟ್ಟು.

ಈ ಲಿಂಗ ನಿಜೈಕ್ಯರ ಗುಟ್ಟು ನಿಃಶಬ್ದವೇದಿಗಳು ತಾವಾದ ಗುಟ್ಟು ಸ್ವಯಂ ಜ್ಯೋತಿ ತಾವಾದ ಗುಟ್ಟು ಇದು ಕಾರಣ ನಿಜವರಿತವಂಗೆ ಕೊಟ್ಟುದು ಸೂತಕ ಮುಟ್ಟಿದುದು ಸೂತಕವಾದುದಲ್ಲದೆ ಲಿಂಗ ನಾನೆಂಬುದು ಸೂತಕವಾಗಿ ಪರಿಣಮಿಸಿರುವಾಗ ಪ್ರಸಾದವೆಂಬ ಪರಮ ಜ್ಞಾನವನ್ನು ಗುರು ಘನನು ಕರುಣಿಸಿದನೇ? ಕರುಣಿಸಿದುದು ನಿಜವಾದಲ್ಲಿ, ಗುರುಘನನನ್ನು ಮಾಯಿಕನೆಂದು ಬೋಧಾಮೂರ್ತಿಯೆಂದು ಭಿನ್ನವಿಟ್ಟು ಅರಸಬೇಕೆ? ಅರಸಬಾರದು ಅರಿಯಬೇಕು! ಅರಿತಲ್ಲಿ ಗುರುಘನನನ್ನು ಸಾವಯವ, ನಿರವಯನೆಂದು ತಿಳಿಯಬೇಕೆ? ಅನುಪಮ ಜ್ಞಾನವನ್ನು ಕರುಣಿಸಿದ ದೇವ ದೇವ ಈ ಪರಾತ್ಪರ ಪರವಸ್ತುವಿಗೆ ನಿಃಶಬ್ದವೇದಿಗೆ ಶಬ್ದಸಂಭ್ರಮವ ಬಳಸಬಾರದು ನೋಡಾ.

ಕಾಷ್ಟವ ಅಗ್ನಿಗೆ ಸೋಂಕಿ ಅಗ್ನಿಯಾದಂತೆ, ಶ್ರೀ ಗುರುವಿನ ಚಿದಗ್ನಿಗೆ, ಶಿಷ್ಯನ ಅಂಗಾಂಗ ಸೋಂಕಿದಲ್ಲಿ ಗುರುಘನನು ನೋಡಾ ಚಿತ್ ಸ್ವರೂಪ ನೋಡಾ. ತಾನೆ ಚಿತ್ ಸ್ವರೂಪನೆಂದು, ತನ್ನ ತಾನರಿದು ಚಿದ್ಘನನಾದಲ್ಲಿ ಅಲ್ಲಿ ಗುರು, ಲಿಂಗ, ಜಂಗಮ, ಸ್ವರೂಪವನ್ನು ಭಿನ್ನ ಮಾಡಿ ಅರಸಬಹುದೆ? ಅರಸಲರಿಯನು. ಅರಸುವವರೆಲ್ಲ ಭಿನ್ನ ಜ್ಞಾನಿಗಳು ಅರಸದವರೆಲ್ಲ ಯತಾರ್ಥವರಿತವರು. ಎಲ್ಲಿಯವರೆಗೆ ಭಿನ್ನ ಜ್ಞಾನಿಯಾಗಿದ್ದಾನೆ ಅವನು ಗುರುಘನವನರಿಯ ತಾನಾರೆಂಬದು ಅರಿಯನು ಅರಿಯದ್ದರಿಂದ ಗುರು ಘನನನ್ನು ಮಾಯಿಕನನ್ನಾಗಿ ಮಾಡಿದ, ತಾನು ಅವಿದ್ಯೆ ದೆಶೆಯುಳ್ಳವನಾದ. ಹೀಗಾಗಿ ಅವನು ಕೊಟ್ಟದು ನಿಶ್ಚಯವಾಯಿತು. ತಾನು ಅದನ್ನು ಶ್ರವಣಮಾಡಿ ಮುಟ್ಟಿದುದು ನಿಶ್ಚಯುವಾಯಿತು. ಇದು ಕಾರಣ ತಾನು ಶ್ರವವಣಮಾಡಿದುದು ದಿಟವಾದುದರಿಂದ ಇವರೆಲ್ಲ ಸೂತಕಿಗಳಾದರು. ಏಕೆಂದರೆ ವಾಙ್ಮನೋತೀತವಾದ ಪರಮಜ್ಞಾನ ಪರಮಾಮೃತ ಶಬ್ದಕ್ಕೊಳಪಟ್ಟು, ಅದು ಶ್ರವಣೇಂದ್ರಿಯದಿಂದ ಮುಟ್ಟದುದು ಎಂಬ ಅನುಭವವುಳ್ಳ ಗುರುವಾನುಗ್ರಹ ಸಂಪ್ರದಾಯ ವೃದ್ಧಿಯಾಗಿ ಪ್ರಸಾದವೆಂಬ ಪರಮಜ್ಞಾನ ಸೂತಕವಾಯಿತಲ್ಲದೆ ಸೂತಕ ವಿರಹಿತವಾಗಲಿಲ್ಲ.

ಸೂತಕ ವಿರಹಿತರ ಮಾಡಲು ಚೆನ್ನ ಬಸವರಾಜದೇವರು ನುಡಿದು ನಿಶಬ್ದ ಘನನಾದ ಗುರುಘನನನ್ನು ಮಾಯಿಕ ತನುವಾಗಿ ಕಾಣಬಾರದು. ಮಾಯಿಕ ತನುವಾಗಿ ಕಂಡವರಿಗೆ ಲಿಂಗ ನಿಜೈಕ್ಯದ ಘನತ್ವ ಉದಯವಾಗಲಿಲ್ಲ. ಇವರು ಪ್ರಸಾದವರಿಯಲಿಲ್ಲ. ಪ್ರಸಾದವರಿತವರು ಕೊಟ್ಟುದು ಸೂತಕ ಮುಟ್ಟಿದುದು ಸೂತಕ ಕೊಟ್ಟು ಕೊಂಬುದೆ ಸೂತಕ ಕೊನೆಗೆ ಲಿಂಗ ನಾನೆಂಬುದು ಸೂತಕವೆಂದು ಹೇಳಿದರು.

ಶ್ರೀಗುರು ನೀನು ಅರುವಿನರುವು ನಿನ್ನನ್ನು ನಿನ್ನಿಂದ ನೀನು ಅರಿದು ನೋಡು ಎಂಬ ಪರಮಜ್ಞಾನವುಳ್ಳ ಪರಮಾಮೃತವ ಕರುಣಿಸಿದರೂ ಗುರುಘನನ ಸಂಜ್ಞೆ

ಅರಿಯದ ಪ್ರಮಾದವೆ ಗುರು ಕೊಟ್ಟವನಾದ. ಶಿಷ್ಯ ಕೊಂಡವನಾದ, ಹೀಗಾಗಿ ಪ್ರಸಾದದ ಘನವರಿಯಲಿಲ್ಲವಾದ್ದರಿಂದ ಸೂತಕ ಜ್ಞಾನವಾಗಿ ಗುರುಘನದ ಹಿರಿಮೆ ಕಾಣದೆ, ಆತನನ್ನು ಶಬ್ದವೇದಿಯಾಗಿ ಕಂಡ, ಆರು ಪ್ರಸಾದದ ಘನವರಿಯ ಹೋದರು ಅವರಿಗೆ ದಿವ್ಯ ದೃಷ್ಠಿ ಉದಯವಾಗಿ ಸಮಪ್ರಕಾಶ ತತ್ವ ತಿಳಿದು ಗುರುಘನವೆಂಬುದು ವಾಙ್ಮನೋತೀತವಾಯಿತ್ತು. ತಾನೆಂಬುದು ವಾಙ್ಮನೋತೀತವಾಯಿತ್ತು.

ಅಲ್ಲಿ ಗುರುಘನವಂತನ ಕರುಣೆ ಯತಾರ್ಥವಾಗಿ ತನ್ನಿರವು ಪ್ರಜ್ವಲಿಸಿ ಓಹೋ ಗುರು ಘನ ನಿಃಶಬ್ದಘನವೆಂದು ವೇದ್ಯವಾದುದರಿಂದ ಆತನ ಕಂಡ ಭಕ್ತವೃಂದವೆಲ್ಲ ನಿನ್ನಂತೆ ಎನ್ನವನು ಮಾಡಿದ ಪರಮಗುರುವೆ, ಕರುಣಾಕರನೆ, ಸ್ನೇಹ ನೀನೆ, ಪರನೀನೆ, ಎಲ್ಲೆಲ್ಲೂ ಗುರು ಘನವ ಕಂಡು ಗುರುವಾದ ಬಳಿಕ, ಮಾಯಿಕ ದೃಷ್ಠಿಯುಳ್ಳವರಾಗಿ ಪೂಜ್ಯ ಪೂಜಕರೆಂಬ ಭಾವ ಭ್ರಮಿತರಾಗಿ ಪೂಜಿಸಿದುದು ಹೇಗೆ? ಪ್ರಸಾದವೆಂಬುದು ಪರಾತ್ಪರ ಅರುವಿನರುವು ಅದನು ಅರಿಯ ಹೋದವರು ಅರಿಯದರುವು ತಾನೆ, ಅಲ್ಲಿ ತನ್ನೊಳ ತನ್ನಿಂದ ತನ್ನ ಕಂಡ ಇರವು, ಸ್ವಮಹಿಮೆ. ಇದುವೆ ಅರುವರಿತ ಘನತ್ವ, ಇದುವೆ ನಿಜೈಕ್ಯದ ನಿಲುವು, ಶಬ್ದಮುಗ್ಧ, ಪ್ರಸಾದವರಿತ ಮಹಾಪ್ರಸಾದಿ, ಲಿಂಗ ನಾನೆಂಬುವವರು ಶಬ್ದವೇದಿಗಳು ಶಬ್ದಸಂಭ್ರಮದವರು ಇವರುಗಳು ಸೂತಕಿಗಳು ಆಗಿಹರು.

**ವಚನ 4**

**ಶಬ್ದವೆಂಬೆನೆ? ಶ್ರೋತ್ರದೆಂಜಲು**
**ಸ್ಪರ್ಶವೆಂಬೆನೆ? ತ್ವಕ್ಕಿನೆಂಜಲು**
**ರೂಪವೆಂಬೆನೆ? ನೇತ್ರದೆಂಜಲು,**
**ರುಚಿಯೆಂಬೆನೆ? ಜಿಹ್ವೆದೆಂಜಲು,**
**ಗಂಧವೆಂಬೆನೆ? ಘ್ರಾಣದೆಂಜಲು,**
**ನಾನೆಂಬೆನೆ? ಅರುಹಿನೆಂಜಲು**
**ಎಂಜಲೆಂಬ ಭಿನ್ನಸೂತಕವಳಿದುಳಿದು**
**ಬೆಳಗಿನ ಬೆಳಗು ಗುಹೇಶ್ವರ ನಿಮ್ಮ ಶರಣ. ॥ 563 ॥**

**ತಾತ್ಪರ್ಯ:** ಶಬ್ದವೆಂಬೆನೆ ಶ್ರೋತೃದೆಂಜಲು: ಗುರುಕರುಣೆಯಿಂದ ಲಭ್ಯವಾದ ಪರಮಜ್ಞಾನ ರೂಪಿ ಪರಮಾಮೃತ ಜ್ಞಾನಾಮೃತವಾಗಿಹ ಪ್ರಸಾದವ ಶಬ್ದವೆನ್ನಬೇಕೆ? ನುಡಿಗೆಡೆಗೊಡದ ಘನ, ನಾ ನೀನೆಂಬುದಕ್ಕೂ ತೆರಹಿಲ್ಲದ ಜ್ಞಾನ. ಅದು ಶಬ್ದವಾದುದರಿಂದ ಶ್ರೋತೃ ಅನುಭವಿಸಿದ ಪದಾರ್ಥವಾಯಿತಲ್ಲ?

ಗುರು ಕಂಡವರುಂಟೆ? ಗುರು, ಘನವಾಗಿ ಕಂಡವರು ಶಿಕ್ಕುವದು ವಿರಳ. ಆರು ಗುರುವ ಕಂಡಿಹರು ಅವರು ಶಬ್ದವೇದಿಗಳು. ಆರು ಗುರುವನ್ನು ಘನವಾಗಿ ಕಂಡಿಹರು ಅವರು ನಿಃಶಬ್ದವೇದಿಗಳು. ಅಣ್ಣ ಬಸವಣ್ಣ, ಚೆನ್ನ ಬಸವರಾಜದೇವರು, ಪ್ರಭುದೇವ, ಹಡಪದ ಅಪ್ಪಣ್ಣ, ನೀಲಾಂಬಿಕೆ, ಅಕ್ಕಮಹಾದೇವಿ, ಮಹಾದೇವಿಯಕ್ಕ, ಇನ್ನು ಶರಣರು ಶರಣಿಯರು ಇವರುಗಳು ಗುರುವನ್ನು, ಶ್ರೀಗುರುವಾಗಿ ಗುರುವನ್ನೆ

ಘನವಾಗಿ ಅಕಲ್ಪಿತನನ್ನಾಗಿ ಪರಶಿವನಿಗಿಂತ ವಿಶೇಷವೆಂದು ಅಬಾಧಿತನೆಂದು, ಅಭೇದ್ಯ ಘನನೆಂದು ತಿಳಿದರಲ್ಲದೆ, ಶಬ್ದವೇದಿಯೆಂದು ತಿಳಿಯಲಿಲ್ಲ. ಇದು ಕಾರಣ ಗುರು, ಘನವಾಗಿ ಕಂಡರು. ನುಡಿಗೆಡೆಗೊಡದ ಘನವನ್ನಾಗಿ ಕಂಡುದರಿಂದ ನಿಃಶಬ್ದವೇದಿಗಳಾದರು.

ಶ್ರೀಗುರು, ದೇವ ದೇವ. ಬೆಳಗುಳ್ಳ ಜ್ಯೋತಿ ಸ್ವಯಂ ಜ್ಯೋತಿ ಚೈತನ್ಯರು. ಚೈತನ್ಯದೇವನಿಂದ ಲಭ್ಯವಾದ ಪರಮಜ್ಞಾನ. ಅದು ಎಡೆಯಿಲ್ಲದ ಪರಿಪೂರ್ಣ, ಅದು ಸೀಮಿತ ಜ್ಞಾನವಾಯಿತೆ? ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಜ್ಞಾನ. ಅದು ಕಲ್ಪಿತ ಜ್ಞಾನವಾಯಿತೆ? ಪರಪ್ರಕಾಶನಾಗಿಹ ಸೂರ್ಯ ಪ್ರಕಾಶ, ಅಲ್ಲಿ ಸೂರ್ಯನು ಬೆಳಗುವ ಜ್ಯೋತಿಯಾಗಿ ಅವನ ಕಿರಣಂಗಳು ಬೆಳಗಿಸಿಕೊಳ್ಳುವ ಜಡವಾದವೆ? ಇದ್ದುದೊಂದೆ ಪ್ರಕಾಶದಲ್ಲಿ ಒಂದು ಬೆಳಗಿಸಿಕೊಳ್ಳುವದು ಒಂದು ಬೆಳಗುವದು ಎಂದಲ್ಲಿ ಹಾಸ್ಯಾಸ್ಪದವಲ್ಲವೆ? ಗುರು ಘನವು ಅರುವಿನರುವು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನನಿರುವಲ್ಲಿ. ಅದು ಸೀಮಿತವಾಗುವುದೇ? ನಿಸ್ಸೀಮವು ಸೀಮಿತವ ಕಾಣದು.

ಗುರು ಪ್ರಸಾದಕೊಳ್ಳಲು ಬಂದವರು, ಗುರುವಾಗಿ ಗುರುಪ್ರಸಾದವ ಕೊಂಬನೆನ್ನವುದು ಗುರು ಬೇರೆ ಶಿಷ್ಯ ಬೇರೆಂಬ ಭಿನ್ ಜ್ಞಾನಿಗೆ ಅರುವಿನ ಪ್ರಸಾದ ಸಲ್ಲದು. ಪ್ರಸಾದವೆಂಬುದು ಅರು ಹೃದಯ ಮಾಡುವ ಪರಮಜ್ಞಾನ, ಅದು ಅರುವೆಂಬುದರರುವು. ಅರುವೆಂಬುದಕ್ಕೂ ಮೀರಿದ ಘನವಾದ್ದರಿಂದ ಇದು ಶಬ್ದವೇದಿಯಾಗದು. ನಿಃಶಬ್ದ ಘನದ ನಿಲುವುಳ್ಳ ವರಪ್ರಸಾದವನ್ನು ಶಬ್ದರೂಪದಿಂದ ನೋಡುವುದೆ ಶ್ರೋತ್ರದೆಂಜಲು ಆಗಿಹುದು ಎಂದು ಹೇಳಿಹರು.

ಸ್ಪರ್ಶನವೆಂಬೆನೆ ತ್ವಕ್ಕಿನೆಂಜಲು: ಕೆಲಬರು ಶ್ರೀಗುರುವಿನ ಹಸ್ತ ಮಸ್ತಕ ಸಂಯೋಗಕ್ಕೆ ಸ್ಪರ್ಶನವೆಂದರೆ ಅದು ತ್ವಕ್ಕಿನೆಂಜಲು ಎಂದು ಹೇಳಿಹರು. ಇವರು ಗುರು ಎಂದರೆ ಕಾಣಬಾರದ ಘನ ಎಂದರಿಯಲಿಲ್ಲ, ಕಾರಣಬಾರದ ಗುರು ಕಣ್ಗೆ ಗೋಚರವಾದರೆ ಹೇಳಲಿಲ್ಲದ ಭಿನ್ನಪ, ಮಟ್ಟಲಿಲ್ಲದ ಹಸ್ತ ಮಸ್ತಕ ಸಂಯೋಗ ಹೂಸಲಿಲ್ಲದ ವಿಭೂತಿ ಪಟ್ಟ, ಕೇಳಲಿಲ್ಲದ ಕರ್ಣ ಮಂತ್ರ, ಪೂಜೆಗೆ ಬಾರದ ಲಿಂಗ ಆಗಮವಿಲ್ಲದ ದೀಕ್ಷೆ, ಸಂಬಂಧವಿಲ್ಲದ ಸಯವಪ್ಪ ಆನು ಗೊಂಬಂತೆ ಮಾಡಾ ಗುಹೇಶ್ವರ.

ದೋಷ ರಹಿತ ಮಹಾಪ್ರಸಾದವೆಂದರೆ ಕಾಣಬಾರದ ಗುರು ಕಣ್ಗೆ ಗೋಚರವಾದಾಗ ಎಂಜಲೆಂಬ ಭಿನ್ನ ಸೂತಕ ವಳಿದುಳಿದು ಬೆಳಗಿನ ಬೆಳಗು ತನ್ನದು ಎಂಬುದು ತನ್ನಿಂದ ತನಗೆ ವೇದ್ಯವು. ಕಾಣುವ ಗುರು, ಕಾಣುವ ಉಪದೇಶ, ಕಾಣುವ ಕರುಣೆ, ಕಾಣುವ ಪ್ರಸಾದ, ಕಾಣುವ ಸುಗಂಧ, ಕಾಣುವ ಶಬ್ದಸಂಭ್ರಮ, ಈ ಗುರು ಉಪಚಾರದ ಶಿಷ್ಯರು ಬಹು ಜನ ಶಿಕ್ಕುವರು. ಕಾಣಬಾರದ ಗುರು, ಈ ಕಾಣಬಾರದ ಗುರುವನ್ನು ಕಾಣುವ ಶಿಷ್ಯ ಇವರೀರ್ವರ ದರ್ಶನ ಅಪರೂಪ. ಇವರದು ಅನಿಯಮದ ಬೆಡಗು. ಗುರುವಾಗಿ ದರ್ಶನವಾಗಲಿಲ್ಲ, ಶಿಷ್ಯನಾಗಿ ದರ್ಶನ ಪಡೆಯಲಿಲ್ಲ, ಅರು

ಹೃದಯದ ಘನವ ಅದಾರು ಬಲ್ಲರೆ?. ಇಲ್ಲಿಯ ಹೃದಯಸಂಬಂಧ ಸಯಸಂಬಂಧ ಮೂಕನಾಗಿ ನಿರ್ವಾಣದ ಘನವ ಕರುಣಿಸಿದ, ಕಿವುಡನಾಗಿ ಆಗಮವಿಲ್ಲದ ದೀಕ್ಷೆಯನುವ ಕಂಡುದು ಅದಾರಯ್ಯ ಹೀಗೆ ಎಂದು ವರ್ಣಿಸುವದು, ಈ ಮುಟ್ಟಲಿಲ್ಲದ ಹಸ್ತ ಮಸ್ತಕದ ಸಂಯೋಗ, ಅದನೆಂತು ವರ್ಣಿಸುವದು.

ರೂಪವೆಂಬೆನೆ ನೇತ್ರದೆಂಜಲು: ಕಾಣುವ ಗುರುವಾಗಿದ್ದರೆ, ಕಾಣುವ ಪ್ರಸಾದವಾಗಿದ್ದರೆ, ಅದು ರೂಪವಾಗುತ್ತಿತ್ತು. ಅದನ್ನು ಕಂಡ ನೇತ್ರ ಎಂಜಲಾಗುತ್ತಿತ್ತು. ಕಾಣಬಾರದ ಗುರು ಘನನನ್ನು ಕಂಡುದು ಹೇಗೆ? ಗುರುಘನವು ಕಾಯಲಾದ ಮೂರ್ತಿಯಲ್ಲ ಜೀವದಲಾದ ಮೂರ್ತಿಯಲ್ಲ, ಪ್ರಾಣದಲಾದ ಮೂರ್ತಿಯಲ್ಲ, ಪುಣ್ಯದಲ್ಲಾದ ಮೂರ್ತಿಯಲ್ಲ, ಮುಕ್ತಿಯಲಾದ ಮೂರ್ತಿಯಲ್ಲ, ಯುಗದಲಾದ ಮೂರ್ತಿಯಲ್ಲ, ಜಗದಲಾದ ಮೂರ್ತಿಯಲ್ಲ, ಶಿವನಲಾದ ಮೂರ್ತಿಯಲ್ಲ, ಶಕ್ತಿಯಲಾದ ಮೂರ್ತಿಯಲ್ಲ. ಇದೆಂತಹ ಮೂರ್ತಿಯೆಂದು ಉಪಮಿಸುವೆ, ಕಾಣಬಾರದ ಕಾಯ, ನೋಡಲಾರದ ತೇಜ, ಉಪಮಿಸಬಾರದ ನಿಲವು ಕಾರಣವಿಡಿದು ಕಣ್ಣೆಗೆ ಗೋಚರವಾದ ಸುಖವನೇನೆಂದು ಹೇಳುವೆ ಗುಹೇಶ್ವರ.

ಶ್ರೀಗುರುವಿನ ರೂಪ, ಕಾಣಬಾರದ ರೂಪ, ಏಕೆಂದರೆ ಕಾಣಬಾರದ ಕಾಯವನ್ನು ಕಾಣುವುದು ಹೇಗೆ? ನೋಡಬಾರದ ಪ್ರಕಾಶ ಕಾಣುವದದೆಂತು, ಇದು ಕಾರಣ ಶ್ರೀಗುರುವಿನ ರೂಪ ನಿರೂಪ. ಆತನ ಕಾಯ ಘನಕಾಯ, ಆತನ ತೇಜ ಅವರ್ಣೀಯ ತೇಜ, ಸ್ವಯಂತೇಜ, ಶಬ್ದ ಸಂಭ್ರಮದ ಸಂದಳಿದ ತೇಜ. ಇದು ಕಣ್ಣಿನ ಕಣ್ಣಾದವರಿಗೆ ವೇದ್ಯವು, ಆತನದು ಉಪಮಿಸದ ನಿಲುವು, ಶ್ರೀಗುರುವಿನ ಪ್ರಸಾದವು ಉಪಮಿಸದ ನಿಲುವುಳ್ಳ ವರಪ್ರಸಾದವು ರೂಪವಾಗುವುದದೆಂತು? ಶ್ರೀಗುರು ಜ್ಞಾನಸ್ವರೂಪ, ಅದು ಜ್ಞಾನ ಕಾಯ, ಜ್ಞಾನ ಸ್ವರೂಪದಂತಿದ್ದಿತ್ತು. ಆ ಮಹಾಂತನ ಕೃಪೆಯಿಂದ ದೊರೆತ ಕಾರುಣ್ಯವು, ಜ್ಞಾನವು, ಜ್ಞಾನಸ್ವರೂಪದಂತಿದ್ದಿತ್ತು. ಜ್ಞೇಯ, ಜ್ಞಾನ ಒಂದಾದ ಘನ, ಅಲ್ಲಿ ವಿಭಾಗಿಸಿ ನುಡಿಯಲು, ನುಡಿಗೆಡೆಯಿಲ್ಲ ನೋಡಾ, ಜ್ಞೇಯದಿರವು ಜ್ಞಾನದಿರುವು ಒಂದೇ ಆಗಿರುವಲ್ಲಿ ಅದನೆಂತು ಉಪಮಿಸುವುದು. ಇದು ಕಾರಣ ಪ್ರಸಾದವು ರೂಪವಾಗದು. ರೂಪವಾಗಿದ್ದರಿಂದ ನೇತ್ರಕ್ಕೊಳಪಡದು, ಇನ್ನು ಕೆಲವರು ಪ್ರಸಾದವನ್ನು ವಿವಿಧರೂಪದಲ್ಲಿ ತಿಳಿದು ಅರುವಿನ ಘನತ್ವದಿಂದ ವಂಚಕರಾದರು.

ರುಚಿಯೆಂಬೆನೆ ಜಿಹ್ವೆದೆಂಜಲು: ಪ್ರಸಾದವು ಪರಮಾಮೃತ ನಿಜ, ಆದರೆ ಅದು ಪರಮಜ್ಞಾನರೂಪಿ ಜ್ಞಾನಾಮೃತ. ಇದು ಚಿತ್ ಸ್ವರೂಪವರಿತವರ ಚಿದ್ರಸ, ಇದು ತೋರಿ ಇಲ್ಲವಾಗುವ ಸಿಹಿಪದಾರ್ಥವಲ್ಲ. ಇದಲ್ಲದೆ, ಮೊದಲು ಬಿಸಿಯಾಗಿ, ಹಿಂದಿನಿಂದ ತಂಗಳವಾಗಿ ಹಳಸಿ ನಾರುವ ತಿನಸು ಅಲ್ಲ. ಲಿಂಗಯ್ಯನಿಗೆ ನೈವೇದ್ಯ ಮಾಡುವ ಪದಾರ್ಥವಲ್ಲ. ದೇವಲೋಕದಲ್ಲಿ ಸುರರು ಸೇವಿಸುವ ಅಮೃತವೂ ಅಲ್ಲ. ಅಮೃತವಾಗಿದ್ದಲ್ಲಿ ರುಚಿಯು ಉಂಟು. ಅದನ್ನು ಸೇವಿಸುವುದರಿಂದ ಅದು ಜಿಹ್ವೆ ಎಂಜಲು ಆಗುವುದು ಸಹಜ. ಪ್ರಸಾದವದು ಜ್ಞಾನಾಮೃತವಾದುದರಿಂದ

ಪಂಚಪಕ್ವಾನ್ನದಿಂದಾದ ಮಧುರಾಮೃತದಲ್ಲಿ ಆವುದು ಮಧುರಾಮೃತವಾಗಿದೆ. ಅದು ರುಚಿಯಿಂದುಕ್ತವಾದುದು ಅದು ಜಿಹ್ವೆಯ ಎಂಜಲಾಗಿಹುದು.

ಗಂಧವೆಂಬೆನೆ ಘ್ರಾಣದೆಂಜಲು: ಪ್ರಸಾದವು ಸುಗಂಧಮಯವಾಗಿರುವಲ್ಲಿ, ಅದು ಘ್ರಾಣದೆಂಜಲೆಂಬುದು ಸಹಜವು. ಪ್ರಸಾದವೆಂಬುದು ಸದ್ ಜ್ಞಾನ ಭರಿತವಾದ ಸದ್ವಾಸನೆ ಸುಖ, ಸಯ ಸುಖದ ವಾಸನ, ಸುಖರೂಪ ಸುಖವು ಇಲ್ಲಿ ಸುಖ, ಸುಖಿ, ಸುಖಾನುಭವ ವಾಸನೆಯೆ ಸದ್ವಾಸನೆ. ಇದು ಕಾರಣ ಪ್ರಸಾದವು ಗಂಧವಾಗದು.

ಪ್ರಸಾದವೆಂಬುದು ಪರಾತ್ಪರ ಪರವಸ್ತು. ಶ್ರೋತ್ರುವಿನ ಶ್ರೋತ್ರ, ತ್ವಕ್ಕಿನ ತ್ವಕ್ಕು, ಜಿಹ್ವೆಯಜಿಹ್ವೆ, ಘ್ರಾಣದ ಘ್ರಾಣ, ನೇತ್ರದ ನೇತ್ರ, ಹೃದಯದ ಹೃದಯವಾಗಿರುವಲ್ಲಿ ಅದು ಇಂದ್ರಿಯಂಗಳು ಅನುಭವಿಸುವ ಪದಾರ್ಥ ಹೇಗಾಗುವುದು, ನಾನೆಂಬೆನೆ ಅರುಹಿನ ಎಂಜಲು, ನಾನೆಂಬ ಸೋಹಂ ಆಗಲಿ ನಾನೆಂಬ ಚಿದಹಮ್ಮು ಆಗಲಿ, ಇದುವೆ ಪ್ರಸಾದವಾಗಿದ್ದರೆ ನಾನೆನ್ನಲು ಬರುತ್ತಿತ್ತು.

ನಾನೀನೆಂಬ ಸಂದಳಿದುದು ಅರು ಸ್ವರೂಪ, ಈ ಅರು ಸ್ವರೂಪವರಿತಲ್ಲಿ, ಅಲ್ಲಿ ನಾನೆಂಬುದಿಲ್ಲ, ನೀನೆಂಬುದಿಲ್ಲ, ಇಲ್ಲಿ ಇಲ್ಲವೆಂಬುದು ಇಲ್ಲವಾದ ತೆರಹಿಲ್ಲದ ಪ್ರಸಾದ ನಾ ನೀನೆನ್ನಲು ಹೇಗೆ ಬರುವುದು. ನಾನೆನ್ನುವವರೆಲ್ಲ ಅರುಹಿನೆಂಜಲುಳ್ಳವರು ಪ್ರಸಾದದ ಘನವರಿತವರಲ್ಲ ಇವರು ಎಂಜಲವೆಂಬ ಭಿನ್ನಸೂತಕರಲ್ಲಿ ಸಿಕ್ಕವರು.

ಪ್ರಸಾದದ ಪರಿಣಾಮಿಗಳಾದಲ್ಲಿ ಎಂಜಲೆಂಬ ಭಿನ್ನಸೂತಕವಳಿದುಳಿದವರು ಆಗಬೇಕು. ಎಂಜಲೆಂಬ ಭಿನ್ನಸೂತಕಗಳಾಗಬಾರದು. ಭಿನ್ನ ಸೂತಕಗಳೆಂಬುದು ಭೇದ ಜ್ಞಾನ, ಅಂಗ, ಲಿಂಗವನ್ನು ಬೇರಾಗಿ ತಿಳಿವುದು. ಲಿಂಗಾಂಗ ಸಾಮರಸ್ಯ ಜ್ಞಾನವಿಲ್ಲದವರು, ಇವರು ಕರ್ಮಿಗಳು ನಿಃಕರ್ಮಿಗಳಲ್ಲ, ಇವರು ಪೂಜಕರು, ಪೂಜ್ಯರಲ್ಲ, ಇವರು ಪೂರ್ವಿಕರು ಅಪೂರ್ವಿಕರಲ್ಲ.

ಪೂರ್ವಿಕರಾದುದರಿಂದ ಪೂಜಕರಾಗಿ ಭಿನ್‌ಜ್ಞಾನಿಗಳಾಗಿ ಎಂಜಲೆಂಬ ಸೂತಕಿಗಳಾಗಿ ಮಿಗೆ ಮಿಗೆ ಪ್ರಸಾದವನರಿಯಲಿಲ್ಲ. ಪ್ರಸಾದ ವರಿತವರಿಗನ್ನ ಪ್ರಸಾದವದು ಪರಮಜ್ಞಾನವಾಗಿ ಪರಮಾಮೃತ, ಜ್ಞಾನಾಮೃತವಾದುದರಿಂದ ವಾಙ್ಮನೋತೀತ ಷಡ್ವಿಧರೂಪಿ ಎಂಜಲೆಂಬ ಭಿನ್ನ ಸೂತಕವಳಿದುಳಿದ ಬೆಳಗಿನ ಬೆಳಗು, ಅರುವಿನ ಅರುವು ಅರಿಯದರುವು ಗುಹೇಶ್ವರ ನಿಮ್ಮ ಶರಣ ಎಂದರು.

**ವಚನ 5**

**ಅರ್ಪಿತ ರೌರವ ನರಕವೆಂದಿತ್ತು ಗುರುವಚನ,**
**ಅನರ್ಪಿತ ರೌರವನರಕವೆಂದಿತ್ತು ಗುರು ವಚನ**
**ಭುಂಜನೆ ಮಾಡಿದ ರುಚಿಯು ಲಿಂಗಕ್ಕೆಂಬ**
**ಕರ್ಮಿಯ ತಾಗಿದ ಸೋಂಕಿದ ಸುಖವ ಲಿಂಗಕ್ಕೆಂಬ**
**ಗುರುದ್ರೋಹಿಯ ಲಿಂಗ**
**ಭಾಜನದಲ್ಲಿ ಶರಣ ಸಹ ಭೋಜನ ಮಾಡಿದರೆ**
**ಇಹ ಪರವಿಲ್ಲೆಂದುದು ಕೂಡಲ ಚೆನ್ನ ಸಂಗಮದೇವಾ. ॥ 465 ॥**

**ತಾತ್ಪರ್ಯ:** ವಚನ ಶಿಕ್ಕುತ್ತವೆ, ಗುರು ವಚನ ಶಿಕ್ಕುವುದು ವಿರಳ. ಅರ್ಪಿತ, ಅನರ್ಪಿತದ ರಹಸ್ಯವರಿಯದ ವಚನಗಳು ಶಿಕ್ಕುತ್ತವೆ. ಇವುಗಳಿಂದ ರೌರವನರಕ ಕೆಡದು ಗುರುವಚನ ಲಭ್ಯವಾದ ಮೇಲೆ ಅರ್ಪಿತ ಅನರ್ಪಿತದ ರಹಸ್ಯ ತಿಳಿಯಬೇಕು. ತಿಳಿದ ನಂತರ ಅರ್ಪಿತ ಮಾಡಬಾರದು. ಅರ್ಪಿತ ಮಾಡದಿರಬಾರದು. ಅಂದರೆ ಅನರ್ಪಿತ ಹೊದ್ದಬಾರದು. ಇದು ಕಾರಣ ಅರ್ಪಿತ ರೌರವ ನರಕವೆಂದಿತ್ತು ಗುರುವಚನ. ಅನರ್ಪಿತ ರೌರವ ನರಕವೆಂದಿದೆ, ಅರ್ಪಿತ ಮಾಡುವ ಸಂಪ್ರದಾಯ ಆಸ್ತೀಕರದು, ಇದನ್ನು ಅಲ್ಲಗಳೆದಿದೆ. ಅರ್ಪಿತ ಮಾಡದಿರುವದು ಅಲ್ಲಗಳೆದಿದೆ.

ಗುರುವಚನ: ಇದೆಂಥ ಗುಟ್ಟಾದ ಗುರುವಚನ! ಅರ್ಪಿತ ಮಾಡುವುದನ್ನು ರೌರವನರಕ, ಅರ್ಪಿತ ಮಾಡದಿರುವದಕ್ಕೂ ರೌರವ ನರಕವೆಂದಿತೆ? ತನುವನ್ನಾಗಲಿ ಮನವನ್ನೆ ಆಗಲಿ, ಧನವೆ ಆಗಲಿ, ಆವುದೆ ಆಗಲಿ, ಗುರು, ಲಿಂಗ, ಜಂಗಮಕ್ಕೆ ಒಪ್ಪಿಸುವದು, ಒಪ್ಪಿಸದೆ ಇರುವದು ಇವೆರಡನ್ನು ಅಲ್ಲಗಳೆದಿದೆ. ಎಂದಲ್ಲಿ ಈ ಅರ್ಪಿತ ಅನರ್ಪಿತದ ರಹಸ್ಯ ಅತಿ ಗಹನವಾದುದಾಗಿರುವದು.

ಅರ್ಪಿತ ಮಾಡುವ ಆಸ್ತೀಕರಾಗಲಿ, ಅರ್ಪಿತ ಮಾಡದಿರುವವರಾಗಲಿ, ಇವರುಗಳು ಗುರು, ಲಿಂಗ, ಜಂಗಮಕ್ಕೆ ತಮ್ಮ ತನು, ಮನ, ಧನವನ್ನೆ ಅರ್ಪಿಸಿರುವರೆಂದಲ್ಲಿ ಇವರು ಗುರು, ಲಿಂಗ, ಜಂಗಮ ಘನವ ತಿಳಿದಿರುವರಾ? ಇದಲ್ಲದೆ ತಾವು ಅರ್ಪಿಸುವ ತನು, ಮನ, ಧನಗಳ ತಿಳಿದಿರುವರಾ? ಬಹು ಭಾವಿಕರು ಸಾಂಪ್ರದಾಯದ ಮೇರೆಗೆ ಮೂಢ ಭಾವದಿಂದ ಅರ್ಪಿಸುವ ರೂಢಿಯಾಗಿದೆ.

ಗುರು, ಲಿಂಗ, ಜಂಗಮವೆಂಬುದು ಅಖಂಡಿತ ಘನವು, ತೋರಬಾರದ ಘನವು ಸಚ್ಚಿದಾನಂದವು ಹೇಳಬಾರದ ಘನವು ಈ ಸತ್, ಚಿತ್, ಆನಂದ ಸ್ವರೂಪಕ್ಕೆ ತನು, ಮನ, ಧನವಾದರೂ ಒಪ್ಪಿಸುವದದೆಂತು. ನಿತ್ಯಕ್ಕೆ ಅನಿತ್ಯವ ಒಪ್ಪಿಸುವದದೆಂತು, ಕೈಯಲ್ಲಿ ಜ್ಯೋತಿ ಹಿಡಿದು ಕತ್ತಲೆಯ ಕಾಣುವದದೆಂತು. ಸಚ್ಚಿದ್ಘನವ ಹಿಡಿದು ತನು ಮನವೆಂಬ ಭ್ರಾಂತಿಯ ಕಾಣುವದದೆಂತು, ಪರಬ್ರಹ್ಮವ ಹಿಡಿದು ಭ್ರಾಂತಿಯ ಕಾಣುವುದೆ? ಪ್ರಸಾದವೆಂಬ ಪರಾತ್ಪರ ಪರತತ್ವವು ಇದ್ದುದು ಅಂದು ಇಂದು ಎಂದೆಂದೂ ಇದ್ದುದು. ಗುರು, ಲಿಂಗ, ಜಂಗಮ, ಇದ್ದುದು. ನಿರಂತರ ಇದ್ದುದು, ಇದ್ದ ಘನ ತತ್ವದಲ್ಲಿ ಇಲ್ಲದ ತನು, ಮನ, ಧನ, ನೋಡ ಹೋದಲ್ಲಿ ಅದು ಇದ್ದುದು ಆಗಬಹುದೇ? ಇಲ್ಲದುದು ಇದ್ದುದೆಂದು? ಬಂಜೆಮಗ ಇಲ್ಲದುದು, ಇವರು ಇದ್ದುದೆಂದು ಇಲ್ಲವೆ ಇಲ್ಲವಾದಲ್ಲಿ ಇದ್ದುದೆಂತು? ನಿರಂತರವಾಗಿಹ ಸಚ್ಚಿದಾನಂದ ರೂಪಿ ಗುರು, ಲಿಂಗ, ಜಂಗಮದಲ್ಲಿ ಇಲ್ಲದ ತನು, ಮನ, ಧನ ಇದ್ದುದೆಂದು? ಮಂಗಲಮಯದಲ್ಲಿ ಅಮಂಗಲವು ಇದ್ದುದೆಂತು? ತೋರಬಾರದ ಘನದಲ್ಲಿ ತೋರುವ ತನು, ಮನ, ಇದ್ದುದೆಂತು? ಇಲ್ಲದುದು ಇಲ್ಲವೆ ಇಲ್ಲ. ಇದ್ದ ಸಚ್ಚಿದಾನಂದ ಘನ ನಿರಂತರ ಇದ್ದುದು. ಇದ್ದು ತೋರಬಾರದ ಘನರೂಪಿ ಮಂಗಲಮಯದಲ್ಲಿ ತೋರುವ ಅಮಂಗಲರೂಪಿ, ತನು, ಮನ, ಧನ, ಇಲ್ಲವೆ ಇಲ್ಲ. ಇಲ್ಲಾಗಿಹ ತನು, ಮನ, ಧನವ ನಿರಂತರ ನಿತ್ಯಮಂಗಲಮಯ ಘನಕ್ಕೆ ಅರ್ಪಿಸುವೆನೆಂಬ, ಅರ್ಪಿಸಿರುವೆನೆಂಬ ಅಭಿಮಾನ

ಒಂದು ಭಯಾನಕ ನರಕವೆಂದಿದೆ. ಗುರುವಚನ ಅರ್ಪಿಸದೆ ಇರುವದು, ಈ ಇರುವು ಆದರೂ ಅಭಿಮಾನದಿಂದುಕ್ತವಾದ ಕಾರಣ ಇದು ಕೂಡ ರೌರವ ನರಕವೆಂದಿದೆ ಗುರುವಚನ.

ಅಬಾಧಿತವಾಗಿಹ ಗುರು ಘನವರಿಯಲು ತನುವ ಅರ್ಪಿಸುವದು, ಅಂದರೆ ತನುವಿನ ತನು ಆಗುವದು. ಅಕಲ್ಪಿತವಾಗಿಹ ಘನಲಿಂಗವರಿಯಲು ಮನವ ಸದುಪಯೋಗ ಮಾಡುವದರಿಂದ, ಮನದ ಮನವಾಗುವದು. ಭಾವಕ್ಕಗಮ್ಯವಾಗಿಹ ಮಹಾಲಿಂಗವರಿಯಲು ಧನವ ದಾಸೋಹಂ ಭಾವಕ್ಕೆ ಸಲ್ಲಿಸುವದು. ಇದರಿಂದ ತನು ನಿರ್ವಾಣದ ತನುವಾಗುವುದು. ಮನವು ಅಚಿಂತ್ಯ ಘನವುಳ್ಳದ್ದಾಗುವುದು. ಧನವು, ನಿರ್ವಾಣರೂಪಿ ಅಕ್ಷಯ ನಿಧಿಯಾಗುವದು, ಅದಕ್ಕಾಗಿ ಅರುವರಿಯಲು ತನು, ಮನ, ಧನವ ಒಪ್ಪಿಸುವದು, ಒಪ್ಪಿಸದಿದ್ದಲ್ಲಿ ತನು, ಭಾವ, ಮನವು ಸಂಕಲ್ಪ ವಿಕಲ್ಪಕಕ್ಕೆ ಸಿಕ್ಕು ಧನದ ಭಾವ ಬೆಳೆದು ಭ್ರಮಿತನಾಗಿ ನರಕಯಾತನೆಯ ಅನುಭವಿಸಬೇಕಾಗುವದು. ಅರ್ಪಿಸುವವರೆ ಇರಲಿ ಅರ್ಪಿಸದೆ ಇರುವವರೆ ಇರಲಿ ಈರ್ವರಗುಂಪನ್ನು ಶರಣರು ಎಚ್ಚರ ಮಾಡಿಹರು.

ಭುಂಜನೆಯ ಮಾಡಿದ ರುಚಿಯ ಲಿಂಗಕ್ಕೆಂಬ ಕರ್ಮಿಯ ತಾಗಿದ ಸೋಂಕಿದ ಸುಖವ ಲಿಂಗಕ್ಕೆಂಬ ಗುರುದ್ರೋಹಿಯ ಲಿಂಗಭಾಜನದಲ್ಲಿ ಶರಣ ಸಹಭೋಜನ ಮಾಡಿದರೆ ಇಹಪರವಿಲ್ಲೆಂದುದು ಕೂಡಲಚೆನ್ನಸಂಗಯ್ಯ:

ಅರ್ಪಿಸುವ ಕೆಲವು ಕರ್ಮಿಗಳು ತಾವು ಚುಂಬಿಸುವ ರುಚಿಯನ್ನು ಲಿಂಗಕ್ಕೆಂದು ಹೇಳುವ ಕರ್ಮಿಗಳು ಉಂಟು. ಭಾವಕ್ಕಗಮ್ಯವಾಗಿಹ ಚೈತನ್ಯವ ತಿಳಿಯದ ಮುಗ್ಧ ಭಾವಿಕರಿಗೆ ಲಿಂಗ ಭಾಜನದಲ್ಲಿ ಶರಣ ಸಹಭೋಜನ ಮಾಡುವ ಸುಜ್ಞಾನ ದೀಕ್ಷೆಯನ್ನೀವಶರಣ ಅತ್ಯಂತ ಕರುಣಾಮಯನಾಗಿಹನು. ಹಾಗೂ ಇಂದ್ರಿಯಂಗಳಿಗೆ ವಿಷಯ ತಾಗಿದ ಸೋಂಕಿದ ಸುಖವನ್ನೆ ಲಿಂಗಕ್ಕೆಂಬ ಗುರುದ್ರೋಹಿಗೂ ಲಿಂಗ ಭಾಜನದಲ್ಲಿ ಶರಣ ಸಹಭೋಜನವ ಮಾಡಿಸುವ ಮಹಾಪ್ರಸಾದಿಯಾಗಿಹನು.

ಎಷ್ಟೋ ಲಿಂಗಾರ್ಚಕರಿರುವರು, ಜಂಗಮಾರ್ಚಕರಾಗಿ, ಅವರ ತೃಪ್ತಿ ನಿಯಮದವರು ಉಂಟು. ಲಿಂಗಭಾಜನದಲ್ಲಿ ಶರಣ ಸಹಬೋಜನ ಮಾಡುವವರು, ಮಾಡಿಸುವವರು ಶಿಕ್ಕುವದು ವಿರಳ. ಸಹ ಭೋಜನ ಮಾಡುವದರಿಂದ ಭೇದ ಜ್ಞಾನ ಸಹಜ ನಷ್ಟವಾಗುವುದು. ಸಕಲರು, ಲಿಂಗ. ಭಾಜನದಲ್ಲಿ ಶರಣನ ಸಹಭೋಜನ ಮಾಡಿದರೆ ಅಜಾತ ತತ್ವಸಿದ್ಧವಾಗುವದು. ಎಲ್ಲಿಯವರೆಗೆ ಲಿಂಗ ಬೇರೆ, ತಾನು ಬೇರೆಂಬ ಭಿನ್ನ ಜ್ಞಾನಿಯಾಗಿಹನು. ಆತನ ಲಿಂಗ ಭಾಜನ ಮರವಿನ ಭಾಜನ. ಮರವಿನಿಂದುಕ್ತನಾದವನಿಗೆ ಲಿಂಗಭಾಜನ ದೊರೆಯದು. ದೊರೆಯದ್ದರಿಂದ ಶರಣನ ಸಹಭೋಜನವು ಅಸಾಧ್ಯವು. ಅದಕ್ಕಾಗಿ ಲಿಂಗಾರ್ಚಕರಿಗೆ ಅಂಗದುದಯ ಲಿಂಗ ಸುಖ, ಲಿಂಗದುದಯ ಅಂಗಸುಖ, ಎಂಬ ಮಹದುರವಿನಂತೆ ಲಿಂಗ ಪೂಜಕರಿಗೆ ಚಿದಂಗದುದಯವಾದಲ್ಲಿ ಶರಣನ ಸಹಭೋಜನ, ಲಿಂಗ ಭಾಜನವೆಂಬುದು ಲಿಂಗವ ಯತಾರ್ಥತಿಳಿಯದು.

ಲಿಂಗದ ಇರವು ತನ್ನಯ ಇರವು ಒಂದಾಗಿ ತಲ್ಲೀಯವಾದುದೆ ಸಹಭೋಜನ. ಅಖಂಡಿತ ಜ್ಞಾನ ಅದುವೆ ಲಿಂಗಭಾಜನ ಅಖಂಡ ಜ್ಞಾನವಪ್ಪ ಪರಿಪೂರ್ಣವೆ ತನ್ನರುವೆಂದರಿದು ಅರಿಯದರಿವು ಅದು ಶರಣನ ಸಹ ಭೋಜನ. ಈ ಸಹ ಬೋಜನ ಸಕಲರಿಗೂ ಅವಶ್ಯವಾದುದು. ಇದು ಉಣ್ಣದ ಊಟ ಜ್ಞಾನಾಮೃತದ ಊಟ, ತನ್ನ ಊಟ, ಚಿದಂಗದುದಯವಾದ ಚಿದ್ರಸ. ಈ ಎರಡೊಂದಾದ ಘನವ ಅದನೆಂತು ವಿವರಿಸುವುದು. ಅಂಗದುದಯ ಲಿಂಗ ಸುಖ, ಲಿಂಗದುದಯ ಅಂಗಸುಖ, ಈ ಅನುಪಮ ಸುಖವ ಏನೆಂಬೇನೆಂಬೆ ಎರಡಿಲ್ಲದ ಘನವ ಇಲ್ಲಿಯೆ ಶರಣನ ಸಹಬೋಜನ ತನ್ನದು ಚಿದಂಗವಾದುದು. ಅದು ಲಿಂಗಬಾಜನ ಲಿಂಗಸುಖದ ಸುಖಿಯಾದುದು ಶರಣನ ಸಹಬೋಜನವಾದುದರಿಂದ ಇಹಪರವಿಲ್ಲ. ಈ ಮಹಾಂತನಿಗೆ ಈ ಲೋಕವೂ ಇಲ್ಲ. ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ನಿಜವಾದ ಇರುವು ಎಂದರಿದ ಘನವಂತ ಸಹಭೋಜನದ ಸುಖದ ಸುಖವಂತ. ಇದು ಕಾರಣ ಶರಣ ನಿಸ್ಸೀಮನಾದುದರಿಂದ ಆತನದು ದಿವ್ಯ ದೃಷ್ಠಿ, ಘನದೃಷ್ಠಿಯಾಗಿರುವಲ್ಲಿ ಇಹವೂ ಇಲ್ಲ, ಪರವೂ ಇಲ್ಲವೆಂದು ಬಿತ್ತರಿಸಿಹರು.

**ವಚನ 6**

**ಅರ್ಪಿತ ಅನರ್ಪಿತವನಾರು ಬಲ್ಲರಯ್ಯ**
**ಅರ್ಪಿಸಿ ಕೊಂಬುದು ಅನರ್ಪಿತ, ಅರ್ಪಿಸದೆ ಕೊಂಬುದು**
**ಅನರ್ಪಿತ ಅರ್ಪಿಸಿಕೊಳಬಲ್ಲ ಗುಹೇಶ್ವರ ನಿಮ್ಮ ಪ್ರಸಾದಿ.**

**ತಾತ್ಪರ್ಯ:** ಅರ್ಪಿತ ಅನರ್ಪಿತವನಾರು ಬಲ್ಲರಯ್ಯ: ಅರ್ಪಿತವೆಂಬುದು ತನುವರ್ಪಿತವೆ? ಒಪ್ಪಿಸುವದು ಒಪ್ಪಿಸದಿರುವದು ಇದನಾರು ತಿಳಿದವರು? ಏನ ಒಪ್ಪಿಸುವದು ಆರಾಗಿ ಒಪ್ಪಿಸುವದು, ಆರಾಗಿ ಒಪ್ಪಿಸದಿರುವದು, ಅಹಂರೂಪಿ ತನುವ ಒಪ್ಪಿಸವದು, ಸಂಕಲ್ಪ ವಿಕಲ್ಪರೂಪಿ ಮನವ ಒಪ್ಪಿಸುವದು, ಪ್ರಾಣರೂಪಿ ಧನವ ಒಪ್ಪಿಸುವದು. ಆರಿಗೆ ಒಪ್ಪಿಸುವದು? ಶ್ರೀಗುರವಿಂಗೆ ಅಹಂರೂಪಿ ತನುವ ಒಪ್ಪಿಸುವದು, ಅಕಲ್ಪಿತ, ಅಖಂಡಿತ ಘನವಾಗಿಹ ಲಿಂಗಕ್ಕೆ ಸಂಕಲ್ಪ ವಿಕಲ್ಪವ ಅರ್ಪಿಸುವದು. ಭಾವಕ್ಕಗಮ್ಯವಾಗಿಹ ಘನ ಜಂಗಮಕ್ಕೆ ಪ್ರಾಣರೂಪಿ ಧನವರ್ಪಿಸುವದು, ಇವುಗಳನ್ನು ಅದಾವ ಕಾರಣದಿಂದ ಅರ್ಪಿಸುವದು, ಏತಕ್ಕಾಗಿ ಒಪ್ಪಿಸುವದು?

ಅರ್ಪಿಸಿ, ಅರ್ಪಿಸದೆ ಇದ್ದ ಘನವ ತಿಳಿಯಲು ಒಪ್ಪಿಸುವದು. ಷಟ್ ಸ್ಥಲದ ಘನವ ತಿಳಿಯಲು ಅರ್ಪಿಸುವದು. ಇದರಿಂದ ಪ್ರಸಾದದ ಹಿರಿಮೆ ತನ್ನೊಳು ಪ್ರಜ್ವಲಿಸುವದು. ಅರ್ಪಿಸಿಕೊಂಬುದು ಅನರ್ಪಿತ? ಅರ್ಪಿಸದೆ ಕೊಂಬುದು ಅನರ್ಪಿತ? ಅರ್ಪಿಸಿಕೊಂಬುವವರು ಇವರಾರು? ಅರ್ಪಿಸದೆ ಕೊಂಬುವವರು ಇವರಾರು? ಮರವಿನ ಅರುವುಳ್ಳವರು. ಇವರು ಆಸ್ತಿಕರು, ನಾಸ್ತಿಕರು, ಗುರು, ಲಿಂಗ, ಜಂಗಮವೆಂಬುದ ತಿಳಿಯದವರು. ಅರ್ಪಿಸುವವ ತಾನಾರೆಂದು ತಿಳಿಯದವರು. ಒಬ್ಬನು ಮುಗ್ಧ ಭಕ್ತ ನಿರಹಂಭಾವಿ. ಇನ್ನೊಬ್ಬನು, ಅಹಂಕಾರದಿಂದುಕ್ತನಾದ ನಾಸ್ತಿಕ ಮುಗ್ಧ ಭಕ್ತ ಅರ್ಪಿಸುತ್ತಾನೆ; ಅರ್ಪಿಸುವ ರಹಸ್ಯ ತಿಳಿದಿರುವದಿಲ್ಲ. ನಾಸ್ತಿಕನು

ದೇಹೋಹಂ ಭಾವಿಯಾಗಿ ಅಹಂ ಮಮವುಳ್ಳವನಾಗಿ ತನ್ನ ಇಂದ್ರಿಯಂಗಳನ್ನು ವಿಷಯೋಪ ಭೋಗವ ಭೋಗಿಸುವದರಲ್ಲಿ ಮನ ಮಗ್ನವಾಗಿರುವ ನಾಸ್ತಿಕನು. ಗುರು, ಲಿಂಗ, ಜಂಗಮಕ್ಕೆ ಅರ್ಪಿಸದೆ ಕೊಳ್ಳುವುದರಿಂದ ಅನರ್ಪಿತವೆಂದು ಹೇಳ್ಪಿರು.

ಅರ್ಪಿತ, ಅನರ್ಪಿತದ ಘನವ ತಿಳಿಯ ಬೇಕಾದಲ್ಲಿ ಪ್ರಸಾದಿಯಾಗುವುದು. ಪ್ರಸಾದಿಯಾಗಿಹ ಪರಮಜ್ಞಾನಿಯೆ, ಅರ್ಪಿಸಿ, ಅರ್ಪಿಸದೆ ಕೊಳಬಲ್ಲ ಮಹಾಜ್ಞಾನಿ. ಜ್ಞಾನಕ್ರಿಯೆಯ ಮಹಾನುಭಾವಿ. ಅರುವ ಅರಿಯಹೋದ ಮಹದರುವು.

ಅರ್ಪಿಸಿಕೊಂಬುದು ಅನರ್ಪಿತ: ಪ್ರಥಮದಲ್ಲಿ ಈ ರಹಸ್ಯವ ತಿಳಿಯುವದು. ಮೊದಲು ಭಕ್ತನಾಗಲು ಗುರುವಿಂಗೆ ಅಹಂರೂಪಿ ತನುವ ಅರ್ಪಿಸುವದು, ಲಿಂಗಕ್ಕೆ ಮನವರ್ಪಿಸುವದು, ಜಂಗಮಕ್ಕೆ ಧನವರ್ಪಿಸುವದು. ಅರ್ಪಿಸಿದ ನಂತರ ಪುನಃ ಪೂರ್ವಾಶ್ರಮ ನಷ್ಟವಾದುದು ತೋರದಿರುವದು. ಪಾರ್ವಾಶ್ರಮ ತೋರಿದಲ್ಲಿ ಅರ್ಪಿಸಿಕೊಂಬುದು ಅನರ್ಪಿತ. ಗುರು, ಲಿಂಗ, ಜಂಗಮಕ್ಕೆ ಅರ್ಪಿತವಾದ ನಂತರ, ನನ್ನದೆಂಬ ಭಾವ ತೋರಬಾರದು. ಇದು ಇಲ್ಲವಾಗಬೇಕು. ಈ ಇಲ್ಲವೆಂಬುದು ಇಲ್ಲವಾಗಬೇಕು. ಆಗ ಅದು ಗುರುವಿನ ತನು ಲಿಂಗದ ಮನ, ಜಂಗಮದ ಧನವಾದಲ್ಲಿ ಅರ್ಪಿತ ಮಾಡಿದ ಸಂಕೇತ. ಅರ್ಪಿತದ ರಹಸ್ಯ ತಿಳಿಯದ್ದರಿಂದ ಎಷ್ಟೋ ಭಕ್ತರು ತನು, ಮನ, ಧನವರ್ಪಿಸಿದರೂ ಪೂರ್ವದ ಭಾವನೆಯಂತೆ, ತನು, ಮನ, ಧನಗಳ, ತಾದಾತ್ಮವುಳ್ಳವರಾಗಿಹುದೆ ಅನರ್ಪಿತ.

ಅರ್ಪಿಸದೆ ಕೊಂಬುದು ಅನರ್ಪಿತ. ನಾಸ್ತಿಕನಾಗಿ, ದೇಹ ಬುದ್ಧಿಯುಳ್ಳವನಾಗಿ ಗುರು, ಲಿಂಗ, ಜಂಗಮಕ್ಕೆ ತನು, ಮನ, ಧನಗಳನ್ನು ಅರ್ಪಿಸದಿರುವದು ಅನರ್ಪಿತ. ಈ ನಾಸ್ತಿಕನು ಗುರು, ಲಿಂಗ, ಜಂಗಮವ ಸೇರದವನು. ತ್ರಿವಿಧ ದೋಷವುಳ್ಳವನು ಸತ್ಕರ್ಮಂಗಳ ಸೇರದವನು. ದುರ್ವ್ಯಸನಿ, ದುರಂಹಕಾರಿ, ದೇವನನ್ನು ದೇವನ ನಾಮವನ್ನು ಸಹ ಘನವಾಗಿ ಕಾಣದವನು. ಕಣ್ಣಿದ್ದು ಕುರುಡನಾಗಿಹನು. ಚೈತನ್ಯವೆ ತಾನಿದ್ದರೂ ಅದನ್ನು ಮರೆತು ಜಡ ದೇಹದ ಭಾವನೆಯುಳ್ಳವನು. ಪಂಚ ಕ್ಲೇಶಂಗಳುಳ್ಳವನು, ಇವನು ಅರ್ಪಿಸದೆ ಕೊಳಬಲ್ಲವನಾದ್ದರಿಂದ ಅನರ್ಪಿತ. ಗುರು, ಲಿಂಗ, ಜಂಗಮವನ್ನು ಜಡವೆಂದು ಮಾಯಿಕವೆಂದು ತಿಳಿದ ಅಜ್ಞಪುರುಷನಾದ್ದರಿಂದ ತನ್ನ ತನು, ಮನ, ಧನವನ್ನು ಗುರು, ಲಿಂಗ, ಜಂಗಮಕ್ಕೆ ಅರ್ಪಿಸದೆ ಕೊಂಬುದರಿಂದ ಅನರ್ಪಿತವೆಂದು ಹೇಳಿಹರು.

ರಹಸ್ಯ ತಿಳಿಯದವರು, ಇವರು ಅಂಧಶ್ರದ್ಧೆಯುಳ್ಳವರು ಭಾವಿಕರು, ಇನ್ನು ಕೆಲಬರು ಆಸ್ತೀಕರು ಅರ್ಪಿಸಿ ಕೊಂಬುವವರಾಗಿಹರು ಇವರು ಅರ್ಪಿಸುವ ವಿಹೀನರು, ಲಿಂಗಾಂಗ ಸಾಮರಸ್ಯ ಜ್ಞಾನವಿಲ್ಲದ ಕುರುಡರು, ಅಖಂಡ ಜ್ಞಾನ ಕಾಣದವರು. ಒಮ್ಮೆ ಅಹಂಕಾರಿಗಳು, ಒಮ್ಮೆ ನಿರಹಂಕಾರಿಗಳು ಒಮ್ಮೆ ಸೋಹಂಭಾವಿಗಳು, ಒಮ್ಮೆ ದಾಸೋಹಂ ಭಾವಿಗಳು ಆದುದರಿಂದ ಭಾವಕ್ಕಗಮ್ಯವಾಗಿಹ ಘನ ತತ್ವ ತಿಳಿಯದವರು. ಇವರು ಭಾವ ಭ್ರಮಿತರಾದುದರಿಂದ ಅರ್ಪಿಸಿಕೊಂಬುವವರಾದ್ದರಿಂದ ಅರ್ಪಿಸಿಕೊಂಬುದು ಅನರ್ಪಿತವೆಂದಿಹರು.

ಅರ್ಪಿತದ ರಹಸ್ಯವರಿತವರು ಶರಣರು, ಶರಣೆಯರು. ಇದು ದಿವ್ಯದೃಷ್ಟಿ ಬಂದವರದು. ದಿವ್ಯ ದೃಷ್ಟಿಯೆಂಬುದು, ಕಲ್ಪಿತಕ್ಕೆಡೆಗೊಡದ ದೃಷ್ಟಿ. ನಾನೆಂಬದಕ್ಕೂ ಎಡೆಗೊಡದ ದೃಷ್ಟಿ, ಸೋಹಂಭಾವಿಗಳಿಗೂ ನಿಲುಕದ ದೃಷ್ಟಿ, ಚಿದಹಂ ಮದವುಳ್ಳವರಿಗೂ ನಿಲುಕದ ದೃಷ್ಟಿ. ಈ ಪರಮ ದೃಷ್ಟಿಯುಳ್ಳ ಘನವಂತ ಅರ್ಪಿತ ಅನರ್ಪಿತ ತಿಳಿದ ಮಹಾನುಭಾವಿ. ಈ ಮಹಾನುಭವಿಯ ದೃಷ್ಟಿ ಯತಾರ್ಥ ದೃಷ್ಟಿ ನಿಷ್ಕಳಂಕ ದೃಷ್ಟಿ.

ಈ ನಿಷ್ಕಳಂಕ ದೃಷ್ಟಿಗೆ ತನುವೆಂಬುದು ಗುರುವಿನ ಒಡವೆ. ಮನವೆಂಬುದು ಲಿಂಗದ ಒಡವೆ. ಧನವೆಂಬುದು ಜಂಗಮದ ಒಡವೆ. ಈ ಒಡವೆ ತ್ರಿವಿಧದೊಡವೆ ಅವರೊಡವೆ ಅವರಿಗೇನು ಒಪ್ಪಿಸುವುದು!

ತನು ಕೊಡುವುಡೆ ಗುರುವಿನದದು, ಮನವ ಕೊಡುವುಡೆ ಲಿಂಗದದು, ಧನವ ಕೊಡುವುಡೆ ಜಂಗಮದದು, ಅವರವರ ಪದಾರ್ಥ ಅವರಿಗೆ ಕೊಟ್ಟು ಭಕ್ತನಾದೆನೆಂಬುದು ಹಿರಿಯತನದ ಕೇಡು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ.

ಇದು ಅರ್ಪಿಸಹೋಗಿ ಅರಿತ ಮಹಾನುಭವ ಅರುಹೃದಯ. ತನು, ಮನ, ಧನವೆಂಬುದು, ಅರುವಿನ ಘನತ್ವ ತಿಳಿಯಲು ಉಪಯೋಗಿಸುವ ಅರುವಿನ ಒಡವೆ. ಜಡಭಾವ ದೃಷ್ಟಿಯುಳ್ಳವರಿಗೆ ತನು, ಮನ, ಧನಂಗಳ ಘನತ್ವ ಕಾಣದು. ಇದು ಕಾರಣ ದಾಸೋಹಂ ಭಾವಿಗಳಾಗುವದು. ಈ ದಾಸೋಹ ಭಾವದಿಂದ ಹೃದಯ ಪರಿಶುದ್ಧವಾದ ನಂತರ ಆಗ ಗುರು, ಲಿಂಗ, ಜಂಗಮದ ಘನತ್ವ ತಿಳಿಯುವ ಅರುಹೃದಯವಾಗುವುದು.

ಆವುದು ಅರು ಹೃದಯವಾಗಿದೆ ಅದು ಅರುವಿನ ಒಡವೆ, ತನುವು ಅದರ ಒಡವೆ, ಮನ ಅದರ ಒಡವೆ, ಧನವು ಅದರ ಒಡವೆ. ತ್ರಿವಿಧವು ಗುರು, ಲಿಂಗ, ಜಂಗಮದ ಒಡವೆಯಾಗಲು ಅರ್ಪಿತದ ರಹಸ್ಯವ ತಿಳಿಯುವದು. ಈ ರಹಸ್ಯವರಿತ ಗುಟ್ಟು ಅಂದರೆ ಅರ್ಪಿಸಿ, ಅರ್ಪಿಸದೆ ಕೊಳಬಲ್ಲವನಾಗುವುದು. ಇದು ಪ್ರಸಾದವಂತ ತಿರುಳು.

ಅರ್ಪಿಸಿ, ಅರ್ಪಿಸದೆ ಕೊಳಬಲ್ಲ ಗುಹೇಶ್ವರ ನಿಮ್ಮ ಪ್ರಸಾದಿ. ನಿಮ್ಮ ಪ್ರಸಾದಿಯಾದ ಪರಮಜ್ಞಾನಿ, ತನು, ಮನ, ಧನವ ಅರ್ಪಿಸಿದವನೆಂದರೆ ಅರ್ಪಿಸಿದವನಲ್ಲ. ಅರ್ಪಿಸಿದವನಲ್ಲವೆಂದರೆ ಅರ್ಪಿಸಿದವನು. ಈತನು ಜಾಣರ ಜಾಣನು. ಅಹಂ ಅರ್ಪಿಸಿದವನು, ನಿರಹಂ ಅರ್ಪಿಸಿದವನು, ನಾ ನೀನೆಂಬುದಕ್ಕೂ ಎಡೆಗೊಡದ ಪರಾತ್ಪರ ಜ್ಞಾನಿಯಾದುದರಿಂದ ಅರ್ಪಿಸಿ ಅರ್ಪಿಸದೆ ಕೊಳಬಲ್ಲ ಮಹದರುವು ಆಗಿಹನು.

ಈ ಮಹದರುವಿನ ಘನವ ನೋಡಿರೆ? ತನು, ಮನ, ಧನವದಾರು ಲಿಂಗ, ಜಂಗಮಕ್ಕರ್ಪಿಸಿ ಅರ್ಪಿಸದ ಇರುವು ನೋಡಿರೆ! ತನುವ ಗುರುವಿಂಗರ್ಪಿಸ ಹೋಗಿ ಗುರು ಹೃದಯವಾಯಿತೆ ಗುರುವಿನ ತನುವಾಯಿತೆ, ಅಹಮಿಲ್ಲದ ತನುವಾಯಿತೆ! ಸತ್ ಸ್ವರೂಪವರಿಯ ಹೋಗಿ ತಾನು ಪರಮ ಸತ್ ಸ್ವರೂಪವಾಯಿತೆ? ಇದು

ಪಂಚ ಕ್ಲೇಶಗಳಿಂದ ಕೂಡದ ತನುವಾಯಿತೆ! ಉರಿಯುಂಡ ಕರ್ಪುರದಂತಾಯಿತೆ! ಮನವ ಲಿಂಗಕ್ಕರ್ಪಿಸಿ ಕಲ್ಪಿತಕ್ಕೆಡೆಗೊಡದ ಘನವಾಯಿತೆ! ತನ್ನ ಪೂರ್ವಾಶ್ರಯವಾಗಿಹ ಸಂಕಲ್ಪ ವಿಕಲ್ಪವ ಮರೆಯಿತೆ? ಇದೆಂಥ ಲಿಂಗಕ್ಕರ್ಪಿತ. ಲಿಂಗವರಿಯ ಹೋಗಿ ತಾನು ಲಿಂಗವಾಯಿತೆ! ಮನವೆಂಬ ಸಂಕಲ್ಪ ವಿಕಲ್ಪವೆ ನಷ್ಟವಾಗಿ ಲಿಂಗವಾಗಿ ಪ್ರಜ್ವಲಿಸಿತೆ? ಆಗ ಎಲ್ಲಿದೆ ತನು, ಎಲ್ಲಿದೆ ಮನ! ಇದ್ದ ಗುರು ಘನ ಲಿಂಗಘನ ಪ್ರಜ್ವಲಿಸುವುದೆ ಇಲ್ಲದ ತನು ಇಲ್ಲದ ಮನ ಇಲ್ಲವಾಗಿ ಈ ಇಲ್ಲೆಂಬುದು ಇಲ್ಲವಾಗಿ ಇದ್ದ ಘನ ತತ್ವ ತೋರಲೆಂದೇನೋ? ತೋರಬಾರದ ಘನ ಹೇಳಲೆಂದೇನೋ? ಸರ ಸಂದಾನದ ಪರಿಯಲ್ಲ ಗುಹೇಶ್ವರ ಲಿಂಗವದು ಕಲ್ಪಿತವಲ್ಲ ನೋಡಾ.

ಧನವ ಜಂಗಮಕ್ಕರ್ಪಿಸಿದ ಬಗೆಯ ನೋಡಿರೇ? ನಾನು ನನ್ನದೆಂಬ ಪ್ರಾಣರೂಪಿ ಧನವ ಜಂಗಮಕ್ಕರ್ಪಿಸಿ ಪ್ರಾಣಲಿಂಗವಾಯಿತ್ತು. ಪ್ರಾಣಲಿಂಗವೆಂಬುದು ಅಖಂಡಿತ ಘನ ಪರಿಪೂರ್ಣವಪ್ಪ ತನ್ನಿರುವೆ ಅರುವೆಂದರಿದುದು. ಘನಕ್ಕೆ ಘನವಾದುದು ತಾನೆ ಆದುದರಿಂದ ಅರ್ಪಿಸಿ, ಅರ್ಪಿಸದೆ ಕೊಳಬಲ್ಲ ಗುಹೇಶ್ವರಾ ನಿಮ್ಮ ಪ್ರಸಾದಿ ಎಂದು ಬಿತ್ತರಿಸಿಹರು.

**ವಚನ 7**

**ಪದವು ಪದಾರ್ಥವೆಂಬರಿ, ಪದವಾವುದು**
**ಪದಾರ್ಥವಾವುದೆಂದರಿಯಿರಿ,**
**ಪದವೆ ಲಿಂಗ, ಪದಾರ್ಥವೆ ಭಕ್ತ,**
**ಇದರರರ್ಥವ ತಂದು ಲಿಂಗಾರ್ಪಿತವ ಮಾಡಬಲ್ಲರೆ**
**ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವಾ.**

**ತಾತ್ಪರ್ಯ:** ಪದವು ಪದಾರ್ಥವೆಂಬರಿ, ಪದವಾವುದು ಪದಾರ್ಥವಾವುದು? ಪದವೆ ಲಿಂಗ, ಪದಾರ್ಥವೆ ಭಕ್ತ: ಪದ, ಇದು ಸಕಲರ ಪದವು ಇದು ಶುದ್ಧ ಪದ, ಸಿದ್ಧ ಪದ, ಪ್ರಸಿದ್ಧ ಪದ.

ಪದಾರ್ಥವೆಂಬುದು ಪದದರಿವು, ಲಿಂಗ ಅಂಗ ಒಂದಾದ ಅರಿವು, ಲಿಂಗಾಂಗ ಸಮರಸ ಜ್ಞಾನದರಿವು. ಇದನರಿತವರು ವಿರಳ. ಅರಿಯದೆ ಭಾವಿಸುವ ಭಾವುಕರು ಇರುವರು. ಭರಿತ ಭಾವದವರು ಸಿಕ್ಕುವದು ವಿರಳ. ಇದನರಿಯದೆ ವಿಧ ವಿಧ ರೀತಿಯಲ್ಲಿ ಪದವ ತಿಳಿಯುವರು.

ಪದವೆಂಬುದು ಅಧಿಕಾರಕ್ಕೆ ಪದವೆಂದು ತಿಳಿದವರು ಬಹಳ ಇರುವರು.

ಕರಿಯನಿತ್ತಡೊಲ್ಲೆ ಹಿರಿದಿಪ್ಪ ರಾಜ್ಯವ ನಿತ್ತಡೊಲ್ಲೆ, ಬ್ರಹ್ಮಪದವಿ, ವಿಷ್ಣು ಪದವಿ, ರುದ್ರ ಪದವಿ ನಾನಾ ಪದವಿಯನೊಲ್ಲೆ ಶರಣರ ಸೂಳ್ನುಡಿ ಇತ್ತಡೆ ನಿಮ್ಮ ನಿತ್ತಂತೆ ಕಾಣಾ ರಾಮನಾಥ.

ಶರಣರು ಪದದರ್ಥ ಚೆನ್ನಾಗಿ ಅರಿತಿರುವರಾದುದರಿಂದ ಮಾಯಿಕ ಪದಗಳಿಗೆ ಪದವೆನಲಿಲ್ಲ. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯಜ್ಯಕ್ಕೂ ಪದವೆನಲಿಲ್ಲ. ಇವುಗಳನ್ನು ಗೌಣವಾಗಿ ತಿಳಿದರು. ಇವುಗಳನ್ನೆಲ್ಲಾ ಅನಿತ್ಯವೆಂದೆ ತಿಳಿದರು. ಶರಣರು,

ಪದವೆಂಬದು ಸ್ವಯಪದ, ತನ್ನಪದ, ತನ್ನರವುಳ್ಳ ಅರುವು, ಲಿಂಗಾಂಗ ಸಮರಸ ಜ್ಞಾನ, ಅಖಂಡ ಜ್ಞಾನ ಅವಶ್ಯವಾಗಿಬೇಕು. ಇದು ಕಾರಣ ಷಟ್ ಸ್ಥಲ ಚಕ್ರವರ್ತಿ ಚನ್ನಬಸವರಾಜದೇವರು, ಪದವೆ ಲಿಂಗ, ಪದಾರ್ಥವೆ ಭಕ್ತನೆಂದು ಬಿತ್ತರಿಸಿಹರು.

ಲಿಂಗವೆಂಬ ಪದ, ಸಯ ಪದ, ನಿಃಕಳಂಕ ಪದ, ನಿಜ ಪದ, ಅಚಿಂತ್ಯ ಪದ, ಅನಾಮಯವಾಗಿರುವ ಏಕರಸ. ಪದಾರ್ಥವೆಂದರೆ, ತನ್ನ ಯತಾರ್ಥದರಿವು. ಭಕ್ತ, ನಿಷ್ಕಳಂಕದ ಯತಾರ್ಥದರಿವು. ಭಕ್ತ, ಲಿಂಗಾಂಗ ಸಮರಸ ಜ್ಞಾನಿಯೆ ಭಕ್ತ. ಅಚಿಂತ್ಯ ಜ್ಞಾನಿಯೆ ಭಕ್ತ. ನಿಜದರುವು ಭಕ್ತ, ನಿಜೈಕ್ಯನೆ ಭಕ್ತ.

ಇದರರ್ಥವ ತಂದು ಲಿಂಗಾರ್ಪಿತವ ಮಾಡಬಲ್ಲವರೆ ಕೂಡಿಕೊಂಡಿಪ್ಪ ನಮ್ಮ ಕೂಡಲ ಚೆನ್ನಸಂಗಮದೇವ.

ಇದರರ್ಥವ ತಂದು ಲಿಂಗಾರ್ಪಿತ ಮಾಡಬಲ್ಲವರು ಯಾರು? ಪದ ಪದಾರ್ಥದ ರಹಸ್ಯವ ತಿಳಿದವರು. ಪದವು ತಾನೆ ಪದಾರ್ಥವು ತಾನೆ. ಲಿಂಗ, ಲಿಂಗಭಕ್ತ ಒಂದಾದುದು. ಎರಡೊಂದಾದಲ್ಲಿ ಅರ್ಚನೆಯಿಲ್ಲ ಅರ್ಪಿತವಿಲ್ಲ ಅವಧಾನವಿಲ್ಲ ಶಬ್ದಕ್ಕೆ ತೆರಹಿಲ್ಲ ಗುಹೇಶ್ವರ. ಆರು ಪದ ಪದಾರ್ಥ ರಹಸ್ಯವರಿತಿರುವರು ಅದು ಅನುಪಮ ನಿಲಯ. ಲಿಂಗವು ಅನುಪಮ, ಭಕ್ತರು ಅನುಪಮ, ಪದವೆಂಬ ಲಿಂಗಕ್ಕೆ ಪದಾರ್ಥವಾಗಿಹ ಭಕ್ತ. ತನ್ನನ್ನೆ ಲಿಂಗಾರ್ಪಿತ ಮಾಡಬಲ್ಲವರಾದುದರಿಂದ ಇನ್ನೇನಿನ್ನೇನು.

ಲಿಂಗವು ಶಬ್ದಮುಗ್ಧ, ತಾನು ಶಬ್ದಮುಗ್ಧ, ಲಿಂಗವು ಮೌನ, ತಾನು ಮೌನದ ಮೌನ. ಲಿಂಗವು ನಿಃಶಬ್ದಘನ. ತಾನು ನಿಃಶಬ್ದಘನ, ಲಿಂಗವು ಅದುವೆ ತಾನು ಅದುವೆ, ಆಗಿಹರು. ಲಿಂಗಕ್ಕೆ ಇದರರ್ಥವ ಲಿಂಗಾರ್ಪಿತ ಮಾಡಬಲ್ಲವರು ಪದ ಪದಾರ್ಥ ಒಂದಾದವರು.

ಪದವೆಂಬ ಲಿಂಗವ ತಿಳಿದವರು, ಪದಾರ್ಥವೆಂಬ ಭಕ್ತ ಇದರ ರಹಸ್ಯವ ತಿಳಿದವರು ಲಿಂಗವೆಂಬ ಸಂಜ್ಞೆ, ಇದು ಮುನ್ನ ಮುನ್ನಲಾದ ಸಂಜ್ಞೆತನ್ನಿಂದ ತಾನಾದ ಸಂಜ್ಞೆ, ಇದು ನಿರೂಪ ಸಂಜ್ಞೆ, ನಿರಾಳ ಸಂಜ್ಞೆ, ನಿರಾಲಂಬ ಸಂಜ್ಞೆ, ಇದುವೆ ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವೆಂಬ ಶ್ರೀಗುರುವಿನ ಸಂಜ್ಞೆ, ಈ ಸಂಜ್ಞೆಯ ಯತಾರ್ಥ ಅರಿಯ ಹೋದ ಅರಿವು ಅದುವೆ ಆದ ಅರಿವು. ಅದು ಪದಾರ್ಥವಾಗಿಹ ಭಕ್ತ. ಭಕ್ತಂಗೆ ಉತ್ಪತ್ತಿ, ಸ್ಥಿತಿ ಇಲ್ಲ. ಸ್ಥಿತಿ ಇಲ್ಲಾಗಿ ಲಯವಿಲ್ಲ, ಮುನ್ನೆಲ್ಲಿಂದ ಬಂದ ಅಲ್ಲಿಗೆ ಹೋಗಿ ನಿತ್ಯನಾಗಿರ್ಪನಯ್ಯ ಗುಹೇಶ್ವರ ನಿಮ್ಮ ಶರಣ.

ಪದವೆ ಲಿಂಗ ಪದಾರ್ಥವೆ ಭಕ್ತ. ಇದರರ್ಥವ ತಂದು ಲಿಂಗಾರ್ಪಿತವ ಮಾಡಬಲ್ಲರೆ ಕೂಡಿಕೊಂಡಿಪ್ಪ ನಮ್ಮ ಕೂಡಲಚೆನ್ನಸಂಗಮದೇವಾ.

ಕೂಡಲ ಚೆನ್ನಸಂಗಮದೇವನ ಕೂಡಿಕೊಂಡಿಪ್ಪವರೆ ಪದ ಪದಾರ್ಥದ ಅರ್ಥವ ತಂದು ಲಿಂಗಾರ್ಪಿತ ಮಾಡಬಲ್ಲರು. ಇವರು ಮುನ್ನ ಮುನ್ನಲಾದ ಲಿಂಗದ ಘನವರಿತವರಾಗಿ, ಲಿಂಗಾಂಗ ಸಮರಸ ಜ್ಞಾನವನ್ನು ಲಿಂಗಾರ್ಪಿತ ಮಾಡಬಲ್ಲವರು. ಈ ಜ್ಞಾನವಿರುವ ತನಕ ಮುನ್ನ ಮುನ್ನಲಾದ ಘನದಿರುವು ಗೊತ್ತಾಗದು. ಅರಿವುಡೆ

ಲಿಂಗ, ಅಂಗ ಎಂಬುದು ನಷ್ಟವಾದಾಗ ನಿಃಶಬ್ದ ಘನದಿರುವು ತನ್ನಿಂದ ತನಗೆ ಪ್ರಜ್ವಲಿಸುವುದು. ಆಗ ಪದಾರ್ಥವೆ ಭಕ್ತನೆಂಬ ಸಂಜ್ಞೆಉಳಿಯದು, ಪದವೆಂಬ ಸಂಜ್ಞೆಯು ಉಳಿಯದು ಆಗ ಭಕ್ತನೆ ಭವಿಯಾದ, ಲಿಂಗವೆ ಆದ. ತಾನು ತಾನೆ ಆದ. ಆಗ ಲಿಂಗದುದಯ ಅಂಗ ಸುಖ, ಅಂಗದುದಯ ಲಿಂಗ ಸುಖ ಎರಡಿಲ್ಲದ ಘನವನೇನೆಂಬೆ ಏನೆಂಬೆ ಮಿಕ್ಕಿ ಮೀರಿ ನಿಂದ ನಿಲವ ನೇನೆಂಬೆ ಏನೆಂಬೆ.

ಭಕ್ತನಾದವನು ತನ್ನ ಲಿಂಗಾಂಗ ಸಮರಸದ ಅರಿವನ್ನೆ ಲಿಂಗಾರ್ಪಿತ ಮಾಡಿದವನಾದ್ದರಿಂದ, ಆಗ ತಾನಾರೆಂಬ ತನ್ನ ಉದಯ ಸ್ವರೂಪದುದಯ, ಚಿದಂಗದುದಯ, ಈ ಅಂಗದುದಯವೆ ಲಿಂಗದುದಯ. ಎರಡಿಲ್ಲದ ಘನವ ಏನೆಂಬೇನೆಂಬೆ? ಲಿಂಗವು, ಲಿಂಗವೆಂದು ನುಡಿಯಲಿಲ್ಲ. ನುಡಿಗೆಡೆಗೊಡದ ನಿಲುವುಳ್ಳ ಘನ. ಅದು ನುಡಿದುದೆಂದು. ಲಿಂಗವು ನಡೆಗೂ ಮೀರಿರುವಲ್ಲಿ, ಅದು ಧಾರಣಕ್ಕೂ ಮೀರಿದುದು. ಧ್ಯಾನಕ್ಕೂ ಮೀರಿದುದು, ಸಮಾಧಿಯಿಂದುಕ್ತವಾದುದು, ಎಂದು ಹೇಗೆ ಹೇಳುವುದು. ನಡೆ, ನುಡಿಯಿಂದುಕ್ತವಾದ ಅರಿವು ಹೆತ್ತರಿವು, ತಾನು ಮಾತ್ರ ಅರಿಯದರುವು ಎಂಬುದು ತನ್ನಿಂದ ತನಗದು ಸಿದ್ಧವಾದಲ್ಲಿ, ಅದು ತನ್ನ ಶುದ್ಧಿ ಪದ, ಸಿದ್ಧಪದ ಪ್ರಸಿದ್ಧ ಪದವಾದಲ್ಲಿ ಆಗ ಲಿಂಗಾಂಗ ಸಮರಸ ಜ್ಞಾನಕ್ಕೂ ಮಿಕ್ಕಿ ಮೀರಿ ನಿಂತ ನಿಲುವು ಎರಡಿಲ್ಲದ ನಿಲುವು ಏನೆಂಬೇನೆಂಬೆ.

ಭಕ್ತನು, ತನ್ನ ಪದಾರ್ಥವಾಗಿಹ ತನ್ನನ್ನು ತನ್ನ ಜ್ಞಾನವನ್ನು ಲಿಂಗಾರ್ಪಿತ ಮಾಡಿಹನು. ಲಿಂಗವರಿತು, ಲಿಂಗ, ಲಿಂಗ ಎಂಬುದು ಇಲ್ಲವಾಗಿದೆ. ಲಿಂಗ, ಸಚ್ಚಿದಾನಂದ, ನಿತ್ಯ ಪೂರ್ಣ, ಅಖಂಡವೆಂಬುದು ಇಲ್ಲವಾಗಿದೆ.

ಭಕ್ತನು ತಾನಾರೆಂದು ತನ್ನಿಂದ ತನ್ನ ಅರಿತು, ತಾನು ಭಕ್ತನೆಂಬುದು, ಅಂಗನೆಂಬುದು ಇಲ್ಲವಾಗಿದೆ. ನಾನು ಸಚ್ಚಿದಾನಂದ, ಲಿಂಗವು ಸಚ್ಚಿದಾನಂದ ಜಗವು ಸಚ್ಚಿದಾನಂದವೆಂಬುದು, ಇಲ್ಲವಾಗಿದೆ. ನುಡಿಗೆಡೆಗೊಡದ ಘನದಿರುವೆ ತನ್ನಿರವು ಲಿಂಗದಿರುವು ಒಂದಾದುದರಿಂದ ಶಬ್ದಕ್ಕೆ ತೆರಹಿಲ್ಲವಾಗಿರುವಲ್ಲಿ ಕೂಡಲಚನ್ನಸಂಗಮ ದೇವ ತಾನಾಗಿಹ ಸಂಜ್ಞೆ ಎಂದು ಬಿತ್ತರಿಸಿಹರು.

**ವಚನ 8**

**ಕರುಣ ಜಲ, ವಿನಯ ಜಲ, ಸಮತಾ ಜಲ,**
**ಕರುಣಾಜಲವೆ ಗುರು ಪಾದೋದಕ**
**ವಿನಯ ಜಲವೆ ಲಿಂಗ ಪಾದೋದಕ.**
**ಸಮತೆ ಜಲವೆ ಜಂಗಮ ಪಾದೋದಕ ಗುರು ಪಾದೋದಕ**
**ಸಂಚಿತ ಕರ್ಮನಾಸ್ತಿ, ಲಿಂಗ ಪಾದೋದಕ**
**ಪ್ರಾರಾಬ್ಧಕರ್ಮನಾಸ್ತಿ ಜಂಗಮ ಪಾದೋದಕ**
**ಆಗಾಮಿ ಕರ್ಮನಾಸ್ತಿ, ಇಂತೀ ತ್ರಿವಿಧೋದಕದಲ್ಲಿ ತ್ರಿವಿಧ ಕರ್ಮನಾಸ್ತಿ.**
**ಇದು ಕಾರಣ ಕೂಡಲ ಚೆನ್ನಸಂಗಯ್ಯ, ಈ ತ್ರಿವಿದೋದಕವ ನಿಮ್ಮ ಶರಣ ಬಲ್ಲ.**

**ತಾತ್ಪರ್ಯ:** ಕರುಣಜಲ, ವಿನಯಜಲ, ಸಮತಾಜಲ: ಈ ಜಲಂಗಳು ಹೊರೆಗೆ

ಪ್ರವಿಹಿಸುವ ಗಂಗಾಜಲವಲ್ಲ. ಇದು ಗಂಗಾ, ಯಮುನಾ, ಸರಸ್ವತಿ ರೂಪಿ ಗಂಗಾ ಜಲವೂ ಅಲ್ಲ. ಇದಲ್ಲದೆ ತ್ರಿವೇಣಿ ಸಂಗಮವೆನಿಸಿಹ ಗಂಗಾಜಲವೂ ಅಲ್ಲ. ದೊಡ್ಡ ದೊಡ್ಡ ಕ್ಷೇತ್ರಂಗಳಲ್ಲಿಹ ತೀರ್ಥ ರೂಪ ಜಲವೂ ಅಲ್ಲ. ಬಾರಾ ಜ್ಯೋತಿರ್ಲಿಂಗಗಳಲ್ಲಿ ದೊರೆಯುವ ಗಂಗಾಜಲವೂ ಅಲ್ಲ. ಇತ್ತ ಗುರು, ಲಿಂಗ, ಜಂಗಮರ ಕ್ರಿಯಾಪಾದೋದಕ ರೂಪಿ ಜಲವೂ ಅಲ್ಲ.

ಅರು ಹೃದಯವೆಂಬ ಪಿಂಡದಲ್ಲಿ ಹೊರಹೊಮ್ಮಿ ಬರುವ ಕರುಣಾಮೃತ. ಕರುಣಾಮೃತವೆಂಬುದು ಮಾನವರಲ್ಲಿರುವ ತ್ರಿವಿಧ ದೋಷವನ್ನು ನಿವೃತ್ತಿ ಮಾಡುವ ಮಹಾನ್ ಸಮರ್ಥವುಳ್ಳ ಪರಮ ಪುರುಷಾರ್ಥಮಾದ ಜ್ಞಾನಾಮೃತರೂಪಿ ಗಂಗಾಜಲವಾವುದೋ ಅದುವೆ ಕರುಣಾ ಜಲ. ಇದು ಭವಿಗಳ ಭವ ತಾಪ ಕಳೆದು ಅಭವನ ಮಾಡುವ ಕರುಣಾ ಜಲ. ಇದು ಗುರು ಹೃದಯದಿಂದ ಹೊರಹೊಮ್ಮಿ ಬರುವ ಕರುಣಾ ಜಲವು.

ವಿನಯ ಜಲ: ನಿರಹಂಭಾವ ಹೃದಯದಲ್ಲಿ ಉದಯವಾಗಿಹ ಜ್ಞಾನಗಂಗಾ, ಇದು ಬೆಳಗುಳ್ಳ ಬೆಳಗು, ನಿರಂತರ ಬೆಳಗುಳ್ಳ ಬೆಳಗು, ಉದಯಾಸ್ತವ ಕಾಣದ ಬೆಳಗುಳ್ಳ ಬೆಳಗು ಇದಕ್ಕೆ ಕ್ಷರವೆನಲು ಬರದು, ಅಕ್ಷರವೆನ್ನಲು ಬರದು. ಇದು ಬೆಳಗಿಸಿಕೊಳ್ಳುವ ಅನಾತ್ಮವಾಗದು. ಬೆಳಗುವ ಚೇತನವು ಆಗದು. ಇದು ಅತ್ಯಂತ ಸೂಕ್ಷ್ಮವಾದುದು. ಗಹನತಿ ಗಹನವು ಇದು, ಜ್ಞಾನ ಭರಿತವು ಜ್ಞಾನಾನಂದವು ಪ್ರಶಾಂತವು. ಭಾವಕ್ಕಗಮ್ಯವಾಗಿಹ ಘನದತ್ತ ಕರೆದೊಯ್ಯುವ ನಿರ್ದೇಶವು. ಸಕಲರ ಹೃದಯದಲ್ಲಿ ನ್ಯಸ್ತವಾಗಿಹ ನಿಧಿಯು. ಇದು ಮುನ್ನ ಮುನ್ನಲಾದುದು, ತನ್ನಿಂದ ತಾನಾದುದು, ನೆನೆಯುವವರತ್ತತ್ತ ನಿರ್ಣಯಿಸುವವರತ್ತತ್ತ ಶೃತಿಗಗೋಚರವಾಗಿಹ ಮೌನ ಮುದ್ರಿತ ಘನವು ಇದುವೆ ವಿನಯ ಜಲವು.

ಸಮತೆ ಜಲ: ವೆಂಬುದು ಸಮನಿಲಯ, ಪ್ರಕೃತಿ, ಪುರುಷರ ಕಾಣದ ನಿಲಯ. ಪುರುಷೋತ್ತಮ ದರಿವು ಇರವು ಸಮತಾ ತತ್ವ, ಸಮತೆ ಸಯವಾದ ಶರಣಂಗೆ ಅರುವು ಮರವುಗಳುಂಟೆ? ಅರವು ಮರವು ನಷ್ಟವಾದುದೆ ಪುರುಷೋತ್ತಮ ಜ್ಞಾನವು. ಅಜ್ಞಾನ, ಜ್ಞಾನ ಎರಡನ್ನು ಕಾಣದ ಘನವು.

ಕರುಣಾ ಜಲವೆ ಗುರು ಪಾದೋದಕ. ಈ ಪಾದೋದಕದ ಘನವ ನೋಡಿರೆ? ಪಾಕಾರಂ ಪಾವನಂ ಜ್ಞಾನಂ, ದ ಕಾರ, ದಯಾಕರಂ, ದೋ ಕಾರ ದೋಷ ನಾಶನಂ, ಕಕಾರಂ ಕರ್ಮ ನಾಶನಂ, ಎಂದಿತ್ತು. ಗುರು ಪಾದೋದಕವೆಂಬುದು ಆತ್ಮ ಪರಮಾತ್ಮನ ಏಕತ್ವದ ನಿಲುವು ನೋಡಾ. ಅದು ಸಚ್ಚಿದ್ರೂಪದ ಯತಾರ್ಥದರಿವು ನೋಡಾ. ಇದು ದಯಾಮೂರ್ತಿಯ ದಯವು ಗುರು ಘನನ ಕರುಣೆಯಿಂದ ಲಭ್ಯವಾದ ಜಾನಾಮೃತವು, ಇದರಿಂದ ಪಾಪವು ನಾಶವು ಚಂಚಲತೆಯು ನಷ್ಟ. ಮರವೆಂಬ ಅಜ್ಞಾನವು ನಷ್ಟವಾದುದಲ್ಲದೆ ಸಂಚಿತ ಕರ್ಮವು ನಾಶ.

ಗುರು ಕರುಣಿಸೆ ಬಿಟ್ಟಿತ್ತು ಮರವೆ, ಗುರು ಕರುಣಿಸಿ ಬಿಟ್ಟಿತ್ತು ಮಾಯೆ, ಗುರು ಕರುಣಿಸೆ ಬಿಟ್ಟಿತ್ತು ಪ್ರಪಂಚ, ಕೂಡಲ ಚೆನ್ನ ಸಂಗಮದೇವಾ, ಗುರು ಕರುಣಿಸೆ ಬಿಟ್ಟಿತ್ತು

ಕರ್ಮಪಾಶ, ಗುರು ಹೃದಯವು ಆತ್ಮ ಪರಮಾತ್ಮರ ಏಕತ್ವಮಾದ ಸಚ್ಚಿದ್ರೂಪದ ಪರಮಜ್ಞಾನ ಕರುಣಿಸಿಹುದು. ಅಂದೆ ತಾನು ಜೀವನೆಂದು ಭಾವಿಸಿದ ಭ್ರಮೆಯು ಪುಶಿ. ಜನ್ಮ ಜನ್ಮಾಂತರಗಳಿಂದ ಸಂಪಾದಿಸಿದ ಕರ್ಮಪಾಶ ಪ್ರಪಂಚದ ತೋರಿಕೆಯ ಸತ್ಯತ್ವ ಬುದ್ಧಿ, ಇದರ ಅಹಂ ಮಮ, ಕರ್ತೃತ್ವ, ಭೋಕ್ತೃತ್ವ ಬುದ್ಧಿ ನಷ್ಟವಾದುದಲ್ಲದೆ, ತಾನು ಜೀವನೆಂಬುದು, ಪುಶಿಯಾದ್ದರಿಂದ ಭವಮಾಲೆಗೊಳಗಾದೆನೆಂಬುದು ಪುಶಿಯಾಯಿತ್ತು.

ತ್ವಂ ಪದ ನೀನಲ್ಲ ತ್ವಂ ಪದಕ್ಕೆ ಸಾಕ್ಷಿಯಾಗಿಹ ಸಚ್ಚಿದ್ರೂಪನಾದ ನೀನೆ ತತ್ವ ಮಾಗಿಹ ಸರ್ವಜ್ಞತ್ವರೂಪಿ ಈಶ್ವರನಿಗೆ ಸಾಕ್ಷಿಯಾಗಿಹ ಸಚ್ಚಿದ್ರೂಪ ನಿರುವಿ. ನಿನ್ನ ಸ್ವರೂಪವೆ ಪರಮಾತ್ಮನ ಸ್ವರೂಪ, ನೀನು ಪರಾತ್ಪರ ಪರವಸ್ತು. ಪರಮಾತ್ಮನು ಪರಾತ್ಪರ ಪರವಸ್ತು ಏಕಏವ ಅದ್ವಿತೀಯ ಘನವು ಎಂದು ಸಚ್ಚಿದ್ರೂಪತ್ವವ ಕರುಣಿಸುವುದೆ ಕರುಣಾಮೃತ. ಇದು ಗುರು ಹೃದಯದಿಂದ ಹೊರ ಹೊಮ್ಮಿ ಬಂದಿರುವ ಜ್ಞಾನಾಮೃತ, ಇದು ಚತುರ್ದಶ ಭುವನವನ್ನೆ ಪಾವನ ಮಾಡುವ ಜ್ಞಾನಗಂಗಾ, ಗಗನ ಸದೃಶವಾಗಿಹ ನಿಸ್ಸೀಮ ಜ್ಞಾನ ಈ ಪರಮಜ್ಞಾನದಿಂದ ತನ್ನ ಸಂಚಿತ ಕರ್ಮನಾಸ್ತಿ ಎಂದು ಹೇಳಿಹರು.

ವಿನಯ ಜಲವೆ ಲಿಂಗ ಪಾದೋದಕವೆಂಬುದು ಜ್ಞಾನಾರ್ಜನೆ. ಇದು ಅಂಗ ಲಿಂಗದ ಸಮರಸದ ಜ್ಞಾನಾರ್ಜನೆ, ಅಸಿ ಪದದರ್ಚನೆ, ತಾನು ಪರಮಾತ್ಮ ಒಂದಾದ ಅರ್ಚನೆ, ಇದು ಅರುವಿನ ಅರ್ಚನೆ, ಈ ಅರ್ಚನೆಯ ಭಾವ ಬಲಿತುದೆ ಲಿಂಗ ಪಾದೋದಕ, ಲಿಂಗ ಪಾದೋದಕದಿಂದ ಅಖಂಡ ದೃಷ್ಟಿ, ಅಖಂಡ ಭಾವ, ಅಖಂಡ ಜ್ಞಾನಾನುಭವದಲ್ಲಿ ಮನವು ತಲ್ಲೀನವಾಗಿಹುದೆ ಲಿಂಗ ಪಾದೋದಕ.

ಈ ಜ್ಞಾನೋದಕದಿಂದ ಅಂಗದೃಷ್ಟಿ, ಅಂಗಭಾವ, ಅಂಗಜ್ಞಾನ, ಅತ್ಯಂತ ಅಭಾವವಾಗುವುದರಿಂದ ತನಗೆ ಪ್ರಾರಾಬ್ಧವಿಲ್ಲವೆಂದು ಹೇಳಿಹುದು. ತನ್ನಿಂದ ತನಗೆ ಗೋಚರವಾಗುವದು.

ಸಮತೆ ಜಲವೆ ಜಂಗಮ ಪಾದೋದಕ: ಜಂಗಮ ಪಾದೋದಕವೆಂಬ ಸಮತೆ ಜಲ, ಇದು ಸರ್ವ ಸಮವಾದ ತತ್ವ, ಇದು ನಿಸ್ಸೀಮವಾದುದು. ಈ ತತ್ವಕ್ಕೆ ಕೆಳಗಿಲ್ಲ ಮೇಲಿಲ್ಲ, ಅಧಃ ಲೋಕವಿಲ್ಲ, ಊರ್ಧ್ವ ಲೋಕವಿಲ್ಲ, ಒಳಗೂ ಇಲ್ಲ ಹೊರಗೂ ಇಲ್ಲ, ಇಲ್ಲಿ ಪ್ರಕೃತಿ ಇಲ್ಲ, ಪುರುಷನೆಂಬುದು ಇಲ್ಲ. ಪಿಂಡವೆಂಬುದಿಲ್ಲ ಬ್ರಹ್ಮಾಂಡವೆಂಬುದಿಲ್ಲ ಒಳಗೆಂಬುದಿಲ್ಲ ಹೊರಗೆಂಬುದಿಲ್ಲ. ಸರ್ವಸಮವಾದ ತತ್ವಕ್ಕೆ ಎರಡೆಂಬುದಿಲ್ಲ ಒಂದೆಂಬುದಿಲ್ಲ, ಕಲ್ಪಿತ ಕಲ್ಪನೆಗಿಂಬಿಲ್ಲ ಕಾರ್ಯವಿಲ್ಲ ಕಾರಣವಿಲ್ಲ. ಪದ ಸಂಧಿಗೂ ಮೀರಿದ ಘನ. ಇದು ಬೋಧ ಅಬೋಧಗಳ ಕಾಣದು. ದೇಶ ವಿದೇಶಗಳ ಕಾಣದು. ಕಾಲಾಕಾಲಗಳನ್ನು ಕಾಣದು. ಆವಾವುದನ್ನು ಕಾಣದ ಸಮನಾದ ನಿರ್ವಿಕಾರ ಘನ, ನಿರಾಳಘನ, ನಿರಾಲಂಬ ಘನ ನಿಜೈಕ್ಯವಾದ ಜಂಗಮದ ಪಾದಾದೋದಕದ ಅರುವಿನಿಂದ ಆಗಾಮಿ ಕರ್ಮ ನಾಸ್ತಿಯಾದುದು.

ಇಂತೀ ತ್ರಿವಿಧೋದಕದಲ್ಲಿ ತ್ರಿವಿಧ ಕರ್ಮನಾಸ್ತಿ, ಇದು ಕಾರಣ ಕೂಡಲಚೆನ್ನಸಂಗಮದೇವಾ, ತ್ರಿವಿಧೋದಕವ ನಿಮ್ಮ ಶರಣಬಲ್ಲ: ಈ ತ್ರಿವಿಧ ಉದಕ

ಜ್ಞಾನೋದಕ, ಅರುವಿನನುಭವ, ಅರು ಸ್ವರೂಪನಾದ ಗುರುದೇವನ ಕರುಣೆಯಿಂದ ಲಭ್ಯವಾದ ಉದಕ. ಇದು ಗುರು ಹೃದಯದಿಂದ ಹೊರ ಹೊಮ್ಮಿ ಬಂದಿರುವ ಜ್ಞಾನಾಮೃತವೇ ಜ್ಞಾನೋದಕ ಇದು ಕರುಣಾಜಲ. ಇದುವೆ ಗುರು ಪಾದೋದಕ.

ತಾನು ಅರು ಸ್ವರೂಪನಾಗಿ ಅರುವಿನ ಭಾವ, ಅರುವಿನ ಅನುಭಾವದಲ್ಲಿ ತತ್ಪರವಾದ ಅರುಹೃದಯವೆ ಲಿಂಗ ಪಾದೋದಕ.

ಗುರು ಪಾದೋದಕ, ಲಿಂಗ ಪಾದೋದಕಕ್ಕು ಸಮ ಸ್ವರೂಪವಾದ ತನ್ನ ನಿಜಾನುಭವವೆ ಜಂಗಮ ಪಾದೋದಕ. ಈ ಜ್ಞಾನೋದಕ ಗುರು ಪಾದೋದಕದಿಂದ ಸಂಚಿತ ಕರ್ಮನಾಸ್ತಿ ಈ ಜ್ಞಾನೋದಕ ಲಿಂಗ ಪಾದೋದಕದಿಂದ ಪ್ರಾರಾಬ್ಧಕರ್ಮನಾಸ್ತಿ, ಜಂಗಮ ಪಾದೋದಕದಿಂದ ಆಗಾಮಿ ಕರ್ಮನಾಸ್ತಿ ಎಂಬುದು ಕೂಡಲಚೆನ್ನ ಸಂಗಮದೇವಾ ತ್ರಿವಿಧ ಜ್ಞಾನಾಮೃತದ ಘನವ ನಿಮ್ಮ ಶರಣ ಬಲ್ಲ.

ಶರಣ, ಆರು ಗೊತ್ತೆ? ಅನುವರಿತ ಶರಣ, ತನುವ ಮರೆದವ ಶರಣ, ನಿರ್ಭಾವ ಶರಣ, ಮನಮೇರೆದಪ್ಪಿದ ಶರಣ, ಅನುಪಮ ಶರಣ, ಅಚ್ಚಸುಖ ಶರಣ, ಸ್ವಸುಖಿ ಶರಣ, ಅಚಿಂತ್ಯ ಪದ ನೈದಿಹ ಶರಣ, ನಿಶ್ಚಿಂತ ಶರಣ, ಸುಖ ಸ್ವರೂಪ ಶರಣ, ಜ್ಞಾನಾಮೃತವನುಂಡ, ಸತ್ಯಜ್ಞಾನಾನಂದ, ಜ್ಞಾನಸ್ವರೂಪ, ಸರೂಜ, ಅಜ, ಜ್ಞಾನಾಮೃತ ತಾನಾದುದರಿಂದ ಅಜ ಮರವರುವುಗಳಿಗೆ ಸಮಸ್ವರೂಪವಾಗಿಹ ಜ್ಞಾನದೇವ, ಜ್ಞಾನ ಸ್ವರೂಪವರಿತವನಾದುದರಿಂದ ಮರವು ಪರಿಹಾರ, ಮರವು ಪರಿಹಾರವಾದ್ದರಿಂದ ಬಹುಜನ್ಮಗಳಿಗೀಡು ಮಾಡಿದ ಸಂಚಿತ ಕರ್ಮನಾಸ್ತಿಯಾಯಿತ್ತು.

ಅರುವ ಅರಿಯುಹೋಗಿ, ಅರುವರಿತು, ತನಗೆ ದೇಹಾದಿಗಳಿಲ್ಲ ಇಂದ್ರಿಯಾದಿಗಳಿಲ್ಲ, ಪ್ರಾಣಾದಿಗಳೂ ಇಲ್ಲ ಕರುಣಾದಿಗಳೂ ಇಲ್ಲ. ನಾನು ಕಲ್ಪಿತ ಪುರುಷನಲ್ಲ, ತಾನು ಅಕಲ್ಪಿತ ಘನ, ಅಖಂಡ ಘನ, ನಿರಾಲಂಬನು, ನಿಸ್ಸಂಗನು, ನಾನು ನಿರುಪಾಧಿಯು ನಿರ್ವಿಕಾರಿಯು, ನನಗಾವ ಉಪಾಧಿಯು ಇಲ್ಲ ಉಪಾಧಿ ಸಂಬಂಧವೂ ಇಲ್ಲ, ನಾನು ಅಜಾತನು ಅಯೋನಿಜನು, ನನಗಾವ ಯೋನಿಯು ಇಲ್ಲ, ನಾನು ಅಶರೀರಿಯಾದ್ದರಿಂದ ನನಗೆಲ್ಲಿ ಪ್ರಾರಾಬ್ಧ. ಪ್ರಾರಾಬ್ಧವೆಂಬುದು, ಅರೆಮರುಳರ ಕನಸು, ಇದೊಂದು ಅರಿಯದ ಮಂದ ಮನುಜರ ಭಾವ. ಇದು ಮರವಿನ ಭಾವ ಭ್ರಮದಿಂದುಕ್ತವಾಗಿಹ ಭಾವ. ಭಾವಕ್ಕಗಮ್ಯನಾಗಿಹ ನನಗೆ ಪ್ರಾರಬ್ಧವೆಂಬುದು ಇಲ್ಲ. ಅಜನಾದ ನನಗೆ ಪ್ರಾರಬ್ದವಿರಬಹುದೇ, ತಾನು ದಿಟ, ದಿಟ ಪುರುಷನಿಗೆ ಸಟೆಯ ಕಾರ್ಯ ಕಾರಣಗಳಿರಬಹುದೇ? ತಾನು ದಿಟನಾದ್ದರಿಂದ ತನಗೆ ಪ್ರಾರಬ್ಧವಿಲ್ಲ. ತನಗೆ ಕಾರ್ಯವೂ ಇಲ್ಲ, ಕಾರಣವೂ ಇಲ್ಲ, ತಾನು ಕಾರ್ಯ ಕಾರಣ ಕಾಣದ ಮಹಾಂತನಾದುದರಿಂದ ಆಗಾಮಿ ಕರ್ಮ ನಾಸ್ತಿ ಎಂಬುದು ನಮ್ಮ ಶರಣಬಲ್ಲ ಎಂದು ಹೇಳಿಹರು.

**ವಚನ 9**

**ಆತ್ಮ ಲಿಂಗ ಪರಮಾತ್ಮ ಜಂಗಮ,**
**ತನು ಮಧ್ಯ ಪ್ರಸಾದವಾಯಿತ್ತು,**

**ನಿಶ್ಚಿಂತ ನಿವಾಸವಾಯಿತ್ತು,**
**ಕೂಡಲ ಚೆನ್ನ ಸಂಗನ ಶರಣ ಸಂಗದಿಂದ**
**ನಿಶ್ಚಿಂತ ನಿವಾಸವಾಯಿತ್ತು.**

**ತಾತ್ಪರ್ಯ:** ಕೂಡಲ ಚೆನ್ನ ಸಂಗನ ಶರಣರ ಸಂಗದಿಂದ ನಿಶ್ಚಿಂತದ ನಿವಾಸವಾಯಿತ್ತು. ಶರಣರು ಯಾರು? ಕೂಡಲ ಚೆನ್ನಸಂಗನ ಸಂಗ ಮಾಡಿದವರೆ ಶರಣರು, ಮರವರುವು ಎಂಬುದಕ್ಕೂ ಮೀರಿದ ಘನವೇ ಕೂಡಲಚೆನ್ನಸಂಗ. ಕಥನಕ್ಕೊಳಪಡದ ಘನವೆ ಕೂಡಲಚೆನ್ನಸಂಗ. ಈ ಸಂಗನ ಸಂಗ ಮಾಡಿದವರೆ ಶರಣರು. ಅರುವರಿತ ಮಹಾಂತರೆ ಶರಣರು. ಆಧುನಿಕ ಸಮಾಜದಲ್ಲಿ ಶರಣರೆಂಬ ಪದವನ್ನು ಬಹುಜನ ಬಹು ರೀತಿಯಲ್ಲಿ ಬಹು ಭಾವದಲ್ಲಿ ಶರಣರ ಪದವನ್ನು ಗಣನೆ ಮಾಡುವರು. ಹೀಗೆ ಗಣನೆ ಮಾಡುವುದು ಶರಣ ಸಾಹಿತ್ಯ ದೃಷ್ಟಿಯಿಂದ ನೋಡಲು ಸರಿಯಾದುದಲ್ಲ. ಶರಣ ಸಾಹಿತ್ಯದಲ್ಲಿ ತಾನಾರೆಂದರಿತ ಅರುವಿನ ಹಿರಿಮೆಗೆ ಶರಣತ್ವವ ಬಳಕೆ ಮಾಡಿದ್ದಾರೆ.

ಮರವಿನಿಂದ ಕೂಡಿದವರು ಅಣಿಮಾದಿ ಸಿದ್ಧಿಪಡೆದ ಮಹಾತಪಸ್ವಿ ಇರಲಿ ತ್ಯಾಗಿ ಇರಲಿ ಹಠಯೋಗಿ ಇರಲಿ, ಕೇವಲ ಕುಂಭಕವ ಸಿದ್ಧಿಸಿಕೊಂಡು ಸಹಸ್ರಾರು ವರ್ಷಬಾಳಿದರೂ ಅವರಿಗೂ ಮಹತ್ವ ಕೊಡದೆ ಅನುವರಿತು ಘನವ ಬೆರೆತು ತನ್ನಲ್ಲಿ ತಾನು, ಸನ್ನಿಹಿತವಾದವರಿಗೆ ಶರಣರು, ಹಿರಿಯರು ಮಹಾಂತರೆಂದು ವರ್ಣಿಸಿದರು.

ಲೋಕದ ಭವಿಷ್ಯ ಹೇಳುವವರಿಗೆ ಮಳೆ ಹೇಳುವವರಿಗೆ ಕಾಲಗತಿ ಹೇಳುವ ಮತಿಗೆ ಶರಣರೆಂದು ಹೇಳಿಹರಲ್ಲ.

ಶರಣರೆಂದರೆ ನಿಶ್ಚಿಂತ ನಿವಾಸಿಗಳೆ ಶರಣರು– ಆತ್ಮ, ಲಿಂಗವಾದವರೆ ಶರಣರು. ಪರಮಾತ್ಮ ಜಂಗಮವಾದವರೆ ಶರಣರು, ತನು ಮಧ್ಯ ಪ್ರಸಾದವಾದವರೆ ಶರಣರು. ಇವರ ಸಂಗದಿಂದ ತಮ್ಮ ತನು ಮಧ್ಯದೊಳಗೆ ಆತ್ಮ ಪರಮಾತ್ಮರ ಅರುವಾಗಬೇಕು, ಜ್ಞಾನವಾಗಬೇಕು. ಇಲ್ಲದ ನಾಮ ರೂಪ ಇಲ್ಲಾಗಬೇಕು. ಇಲ್ಲದ ಪಿಂಡಾಂಡ ಬ್ರಹ್ಮಾಂಡದರಿವು ಇಲ್ಲವಾಗಬೇಕು. ಇಲ್ಲದ ತೋರಿಕೆ ಜಗವು ಇಲ್ಲಾಗಬೇಕು. ಜಗತ್ಕರ್ತರೆಂಬ ಭ್ರಮಿತ ಭಾವ ಇಲ್ಲಾಗಬೇಕು. ಇದ್ದ ನಿರಂತರವಾಗಿಹ ಆತ್ಮ ಲಿಂಗದರಿವು ತನ್ನದಾಗಬೇಕು.

ಲಿಂಗ ಇದ್ದುದು. ಅಂದು ಇಂದು ಎಂದೆಂದೂ ಇದ್ದುದು. ಇದು ತೋರದಡಗದ ಘನ. ಸತ್, ಅಸತ್ ಎಂಬುದಕ್ಕೂ ಮೀರಿದ ಘನ, ಪರಮ ಸತ್ ಸ್ವರೂಪವಾಗಿಹ ಘನ ಇದ್ದಂತಿರುವದರಿಂದ ನಿರಂತರ ಸ್ವರೂಪ ಸಾಕ್ಷಾತ್ಕಾರ ನಿರಂತರವಾಗಿರುವದು. ಅಲ್ಲಿ ಬೋಧವೂ ಇಲ್ಲ. ಅಬೋಧವೂ ಇಲ್ಲ, ಬೋಧಾ ಬೋಧ ಮಿಶ್ರಿತವೂ ಇಲ್ಲ. ಇದನ್ನು ಅರಿತ ಅರುವೆ ಜಂಗಮ, ಅರುವರಿತವರೆ ಜಂಗಮ, ಪರಮಾತ್ಮನೆ ಜಂಗಮ, ಜಂಗಮನೆ ಪರಮಾತ್ಮ.

ಪರಮಾತ್ಮ ಆರು? ನುಡಿಗೆಡೆಗೊಡದವನು ಪರಮಾತ್ಮ, ಅದ್ವಿತೀಯ ಘನವು. ಮರವು ಅರುವು ಎಂಬುದು ಆಗದವನೆ ಪರಮಾತ್ಮ. ಆತ್ಮ ಅನಾತ್ಮ ಎಂಬುದು

ಆಗದವನೆ ಪರಮಾತ್ಮ, ಸತ್ ಅಸತ್ ಎಂಬುದು ಆಗದವನೆ ಪರಮಾತ್ಮ, ಜೀವ ಬ್ರಹ್ಮನೆಂಬುದು ಆಗದವನೆ ಜಂಗಮ ಭಾವಕ್ಕೊಳಪಡದವನೆ ಜಂಗಮ. ಅಂಗ, ಲಿಂಗ ಎಂಬುದ ಕಾಣದವನೆ ಜಂಗಮ. ಲಿಂಗ ಲಿಂಗ ಎನ್ನದವನೆ ಲಿಂಗ ಜಂಗಮ, ಜಂಗಮವೆನ್ನದವನೆ ಜಂಗಮ, ನಾಮ ನಿರ್ನಾಮವಾದವನೆ ಜಂಗಮ. ನಿರ್ಲಿಖಿತ ಜಂಗಮ, ನಿರಾಲಂಬ ಜಂಗಮ, ನಿಸ್ಸಂಗ ಜಂಗಮ ನಿರವಧಿ ಜಂಗಮ ನಡೆಗೂ ನುಡಿಗೂ ನಿಲುಕದ ಮಹಾಂತನ ವರ್ಣಿಸುವದದೆಂತು? ಕಲ್ಪಿತ ಪುರುಷನಾಗದ ಮಹಾಂತನ ಅದೆಂತು ವರ್ಣಿಸುವದು? ಕಲ್ಪನೆಯ ಮಾಪಿಗೆ ಮಿಕ್ಕಿ ಮೀರಿ ನಿಂತ ನಿಲುವುಳ್ಳ ನಿಜಾನುಭವಿಯ ಘನವನೇನೆಂಬೇನೆಂಬೆ? ಎರಡಿಲ್ಲದ ಘನವಂತನ ಘನವ ಏನೆಂಬೇನೆಂಬೆ? ಉಪಮೆಗೆ ಒಳಪಡದ ಮಹಾಂತನೆ ಜಂಗಮ.

ನಿರವಧಿ ಜಂಗಮ, ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗ, ಘಟ್ಟಿದುಪ್ಪ ತಿಳಿದುಪ್ಪಕ್ಕೆ ಭೇದ ಉಂಟೆ ಅಯ್ಯ, ಎನ್ನಂಗವನು ಶ್ರೀಗುರು ಮಂತ್ರ ಮಾಡಿ ತೋರಿದನಾಗಿ ಸಾವಯವ, ನಿರವಯಕ್ಕೆ ಭೇದವಿಲ್ಲವಯ್ಯ, ಚೆನ್ನಮಲ್ಲಿಕಾರ್ಜುನ, ಸಾವಯವ ನಿರವಯ ಒಂದಾಗಿ ಕಂಡ ಜಂಗಮ. ಶುದ್ಧ ಶಿವೈಕ್ಯ ಜಂಗಮ. ಈ ಶಿವೈಕ್ಯ ಜಂಗಮ ದೇವನ ಘನವ ಅದೆಂತು ವರ್ಣಿಸುವದು.

ತನು ಮಧ್ಯ ಪ್ರಸಾದವಾಯಿತ್ತು. ಜಂಗಮಯ್ಯನ ಪ್ರಸಾದ ತನು ಮಧ್ಯದಲ್ಲಿ ಆತ್ಮ ಪರಮಾತ್ಮರ ಅರಿವು ತನ್ನ ತನು ಮಧ್ಯದಲ್ಲಿ ಓಹೋ! ಇದೆಂಥ ಅಪ್ರತಿಮ ಸಾಹಸ, ಅಪ್ರತಿಮ ಜ್ಞಾನ.

ತನು ಮಧ್ಯದಲ್ಲಿಯೇ ಲಿಂಗದರ್ಶನ ಆತ್ಮದರ್ಶನ. ತನು ಮಧ್ಯದಲ್ಲಿಯೇ ಪರಮಾತ್ಮ ದರ್ಶನ, ಜಂಗಮ ದರ್ಶನ, ಇದು ಶರಣರ ಸಂಗದ ಸುಸಂಗ ಈ ಸುಸಂಗವೆ ತನು ಮಧ್ಯದಲ್ಲಿ ಕಂಡ ಪ್ರಸಾದ. ತೆರಹಿಲ್ಲದ ಪ್ರಸಾದ. ಮನ ಮೇರೆದಪ್ಪಿದ ಪ್ರಸಾದ. ಈ ಮಹದರಿವೆ ನಿಶ್ಚಿಂತದ ನಿವಾಸವಾಯಿತ್ತು.

ಶರಣರ ಸಂಗವೆಂಬುದು ಆತ್ಮ ಸಂಗ, ಪರಮಾತ್ಮಸಂಗ ಅವರು ತನು ಮಧ್ಯೆದಲ್ಲಿಯೇ ಪ್ರಕಟಮಾಡುವುದರಿಂದ ಕಾಯದಿಂದ ಗುರು ದರ್ಶನ ಕಾಯದಿಂದ ಲಿಂಗದರ್ಶನ, ಕಾಯದಿಂದ ಜಂಗಮದರ್ಶನ, ಕಾಯದಿಂದ ಪ್ರಸಾದ ದರ್ಶನ ಕಾಯದಿಂದ ನಿಮ್ಮವ ಕಂಡೆನ್ನ ಮರೆದೆ ಕೂಡಲ ಚೆನ್ನ ಸಂಗಮದೇವಾ ಎಂದು ಚೆನ್ನ ಬಸವಣ್ಣನವರು ಬಿತ್ತರಿಸಿದಂತೆ, ತನು ಮಧ್ಯದಲ್ಲಿಯೆ ಶರಣರ ಸಂಗದಿಂದ ಕಾಯದಲ್ಲಿ ಗುರುದರ್ಶನ, ಲಿಂಗದರ್ಶನ, ಜಂಗಮ ದರ್ಶನ, ಪ್ರಸಾದ ದರ್ಶನವಾಗಿ ನಿಶ್ಚಿಂತ ನಿವಾಸವದು, ತನ್ನಿಂದ ತನಗದು, ವೇದ್ಯವಾಯಿತ್ತು.

**ವಚನ 10**

**ಲಿಂಗದಲ್ಲಿ ಕೊಡಲುಂಟು, ಕೊಳಲುಂಟಾಗಿ ಅರ್ಪಿತ,**
**ಜಂಗಮ ಕೊಟ್ಟು ಕೊಳಲಿಲ್ಲಾಗಿ ಅನರ್ಪಿತ,**
**ಪ್ರಸಾದದಲ್ಲಿ ಕೊಳಲು ಕೊಡಲು ಇಲ್ಲವಾಗಿ ಉಭಯನಾಸ್ತಿ,**
**ಇಂತೀ ತ್ರಿವಿಧದ ಸಂಚದನು ಸನುಮತವ**

**ಕೂಡಲ ಚೆನ್ನಸಂಗಾ ನಿಮ್ಮ ಶರಣಬಲ್ಲ. ॥ 636 ॥**

ತಾತ್ಪರ್ಯ: ಲಿಂಗದಲ್ಲಿ ಕೊಡಲುಂಟು, ಕೊಳಲುಂಟಾಗಿ ಅರ್ಪಿತ: ಲಿಂಗದಲ್ಲಿ ಕೊಡಲುಂಟು. ಏನನ್ನು ಕೊಳಲುಂಟು ಏನನ್ನು ಭಕ್ತರಿಗೆ ಕೊಡುವುದಾಗಿದೆ, ಗುರುಘನನಿಂದ ಕೊಳುವುದಾಗಿದೆ. ಜ್ಞಾನ ಕೊಡುವುದಾಗಿದೆ. ಜ್ಞಾನ ಕೊಳುವುದಾಗಿದೆ. ಅದಾವ ಜ್ಞಾನ ಕೊಡುವುದಾಗಿದೆ. ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಜ್ಞಾನ ಜಿಜ್ಞಾಸುಗಳಿಗೆ ಕೊಡುವುದಾಗಿದೆ. ಸದ್ಗುರುವಿನಿಂದ ಕೊಳುವುದಾಗಿದೆ. ವೇದವೇದಾಂತಗಳಿಗೆ ಅಸಾಧ್ಯವಾದ ಅನುಪಮ ಲಿಂಗವ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ, ನಾದ ಬಿಂದು ಕಳೆಗಳಿಗೆ ಅಭೇದ್ಯವಾದ ಅಚಲಿತ ಲಿಂಗವ ತಂದು ಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ, ವಾಙ್ಮನಕ್ಕಗೋಚರವಾದ ಅಖಂಡಿತ ಲಿಂಗವ ತಂದು ಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ ಇನ್ನು ನಾನು ಬದುಕಿದೆನು ನಾ ಬಯಸುವ ಬಯಕೆ ಕೈಸಾರಿತಿಂದು, ಕೂಡಲಸಂಗಮದೇವಾ.

ಲಿಂಗವು ಸದ್ಗುರುವಿನಿಂದ ಭಕ್ತನ ಕರಸ್ಥಲಕ್ಕೆ ಕೊಡುವ ಹಾಗಿದೆ. ಭಕ್ತನು ಸದ್ಗುರುವಿನಿಂದ ಲಿಂಗವ ಕೊಳುವದಾಗಿದೆ. ಕೊಡಲುಂಟು, ಕೊಳಲುಂಟಾಗಿ ಅರ್ಪಿತ, ಲಿಂಗವ ಅರಿಯುಹೋದವರಿಗೆ ಸದ್ಗುರು ಕೊಟ್ಟಿಹನೆಂಬುದು, ಭಕ್ತ ಕೊಂಡಿಹನೆಂಬುದು, ಇಲ್ಲವಾದುದು, ಲಿಂಗ ಕುರುಹಾಗಿದ್ದರೆ ಕೊಟ್ಟುದು ನಿಜ, ತೆಗೆದುಕೊಂಡದು ನಿಜ, ಲಿಂಗವೆಂಬುದು ಅನುಪಮ, ಅಖಂಡ, ಅಚಲಿತ ಅರುವು. ಇದು ಕುರುಹಾಗಬಹುದೆ? ಅರುವ ಅರಿಯ ಹೇಳಿದ ಶ್ರೀಗುರು, ಆತನ ದಿವ್ಯ ದೃಷ್ಟಿಗೆ ಅರುವು ವಿಷಯಕ್ಕೊಳಪಟ್ಟುದೆ? ನಿರ್ವಿಷಯವದು, ನಿತ್ಯ ವಸ್ತುವಾದ್ದರಿಂದ ಲಿಂಗದಲ್ಲಿ ಕೊಡುವುದು, ಕೊಳ್ಳುವುದು ಇಲ್ಲ. ಈ ಇಲ್ಲವೆಂಬುದು ಇಲ್ಲವಾದ್ದರಿಂದ ಅರ್ಪಿತವೆಂದು ಹೇಳಿಹರು.

ಪೂರ್ವಿಕ ಪೂಜಕ ಅಪೂರ್ವಿಕ ಭಕ್ತ, ಕರ್ಮಿ ಪೂಜಕ ನಿಃಕರ್ಮಿ ಭಕ್ತ ಲಿಂಗ ಪೂಜಕ ಜಂಗಮ ಭಕ್ತ ತನು ಗುಣಪೂರ್ವ ಸೂತಕ ವಿರಹಿತ ನಮ್ಮ ಕೂಡಲಚೆನ್ನ ಸಂಗಯ್ಯನಲ್ಲಿ ಆತನೆ ಅಚ್ಚ ಶರಣ.

ಪೂಜಕರ ದೃಷ್ಟಿಯಲ್ಲಿ ಲಿಂಗದಲ್ಲಿ ಕೊಡಲು ಉಂಟು, ಕೊಳಲುಂಟು, ಲಿಂಗವರಿಯ ಹೋದ ಅಪೂರ್ವಕ ದಿವ್ಯದೃಷ್ಟಿಯಲ್ಲಿ ಲಿಂಗವೆಂಬುದು, ಉಪಮೆಗೆ ನಿಲುಕದ ಘನವಾದ್ದರಿಂದ ಅನುಪಮ. ಅದು ಒಳಹೊರಗೆನ್ನದೆ ಭರಿತವಾದುದರಿಂದ ಅಖಂಡಿತ, ಪೂರ್ಣಮದಃ ಪೂರ್ಣಮಿದಂ ಆದುದರಿಂದ ಅಚಲಿತ ಎಂಬ ಸಂಜ್ಞೆಯ ಅರಿಯಹೋದ ಭಕ್ತರ ದೃಷ್ಟಿಗೆ ಅರ್ಪಿತವೆಂದು ಬಿತ್ತರಿಸಿಹರು. ಲಿಂಗವನ್ನು ರೂಪವಾಗಿ ಕಂಡವರಿಗೆ ಕೊಡಲುಂಟು, ಕೊಳಲು ಉಂಟಾಗಿದೆ. ನಿರೂಪವಾಗಿ ಕಂಡವರಿಗೆ ಕೊಟ್ಟುದು ಕೊಂಡುದು ಇಲ್ಲವಾಗಿದೆ. ಇಲ್ಲವೆಂಬುದು ಇಲ್ಲವಾಗಿರುವದೆ ಅರ್ಪಿತವೆಂದು ಹೇಳಿಹರು.

ಜಂಗಮ ಕೊಟ್ಟು ಕೊಳಲಿಲ್ಲಾಗಿ ಅನರ್ಪಿತ, ಜ್ಞಾನ ಜ್ಞೇಯ ಒಂದಾಗಿರ್ದ ಜಂಗಮ, ನಿರ್ದೇಹಿ ಜಂಗಮ, ನಿಜೈಕ್ಯ ಜಂಗಮ, ನಿಸ್ಸಂಗ ಜಂಗಮ, ಈ ಘನ

ಮಹಿಮ ಏನು ಕೊಟ್ಟುದು? ಅರಿವು ಕೊಟ್ಟುದು, ತತ್ವ ಕೊಟ್ಟುದು, ಅಚಿಂತ್ಯತ್ವ ಕೊಟ್ಟುದು, ಸಚ್ಚಿದ್ಘನವೆಂಬ ಜ್ಞಾನವ ಕೊಟ್ಟುದು ಕೊಳಲಿಲ್ಲಾಗಿ ಅನರ್ಪಿತ.

ಚಿತ್ ಸ್ವರೂಪಿ ಜಂಗಮ ಗಗನ ಸದೃಶವಾಗಿಹ ಜ್ಞಾನಾಮೃತವೆ ತಾನಾಗಿಹ ಮಹಾಂತ, ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಲಿಂಗವೆಂದರಿಂದ ಜಂಗಮ, ಈ ಘನವಂತ ಲಿಂಗವೊಂದಾಗಿರ್ದ ಜಂಗಮ ಆರಿಂದಲೂ ಏನೊಂದೂ ಕೊಳಲಿಲ್ಲ. ಏಕೆಂದರೆ, ಎರಡಿಲ್ಲದ ಘನವಂತ, ಭಿನ್ನ ಜ್ಞಾನಿಯಲ್ಲ ಅಭಿನ್ನ ಜ್ಞಾನಿಯಲ್ಲ, ತಾನಾರೆಂದರಿತ ಘನವಂತ ಈತನ ದೃಷ್ಟಿಯಲ್ಲಿ ಇಲ್ಲಾದುದಿಲ್ಲಾದುದೆಲ್ಲಿಪ್ಪುದೋ? ಇಲ್ಲಾದುದಿಲ್ಲಾದುದು ಎಂದಿಪ್ಪುದು? ಈ ಮಹಾಂತ ನಿಜವಂತ ನಿಜೈಕ್ಯ ಅದಕ್ಕಾಗಿ ತನ್ನ ಹೊರ್ತು ಅನ್ಯವ ಕಾಣದ ಅಖಂಡೈಕರಸನಾದುದರಿಂದ ಕೊಳಲಿಲ್ಲ. ಇದು ಕಾರಣ ಜಂಗಮ, ಕೊಟ್ಟು ಕೊಳಲಿಲ್ಲಾಗಿ ಅನರ್ಪಿತವೆಂದಿಹರು.

ಪ್ರಸಾದದಲ್ಲಿ ಕೊಡಲೂ ಇಲ್ಲ, ಕೊಳಲೂ ಇಲ್ಲವಾಗಿ ಉಭಯ ನಾಸ್ತಿ, ಪ್ರಸಾದವೆಂಬುದು ಅಖಂಡಿತ ಪ್ರಸನ್ನ, ಪ್ರಸಾದದ ಹಿರಿಮೆ ಘನಕ್ಕೆ ಘನವಾದುದು. ಇದು ಕಾರಣ ಪ್ರಸಾದವೆ ಗುರು, ಪ್ರಸಾದವೆ ಲಿಂಗ, ಪ್ರಸಾದವೆ ಜಂಗಮ, ಪ್ರಸಾದವೆ ಪರಾತ್ಪರ, ಪ್ರಸಾದವೆ ಪರಮಾಮೃತ ಪ್ರಸಾದವೆ ಪರಮಜ್ಞಾನ, ಪ್ರಸಾದವೇ ಸೀಮಿತವಾಗುವುಡೆ ಅರಿಯದರುವು. ಜಂಗಮ ವಾಙ್ಮನೋತೀತ ಪ್ರಸಾದವೆ ನಿತ್ಯ ಪರಿಪೂರ್ಣ, ಇಂತಪ್ಪ ಪ್ರಸಾದವ ಕಂಡು ಬದುಕಿದೆನಯ್ಯ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರ.

ಪ್ರಸಾದವೆಂಬ ಪರಮಜ್ಞಾನರೂಪಿ ಪರಮಾಮೃತ ಅದು ವಾಙ್ಮನೋತೀತವಾಗಿರುವಲ್ಲಿ ಕೊಡುವುದೆಂತು ಕೊಳುವುದೆಂತು? ನಿಸ್ಸೀಮವು ಮರವು ಅರುವುಳ್ಳದ್ದಾಗುವುದೇ? ತೆರಹಿಲ್ಲದ ಘನವು ಕೊಡುವ ಕೊಳ್ಳದ್ದಾಗಬಹುದೆ? ನಾನೀನೆಂಬುದಕ್ಕೆ ತೆರಹಿಲ್ಲದ ಘನ, ಚಿದಹಂ ದಾಸೋಹಂ, ಭಾವಕ್ಕೊಳಪಡಬಹುದೇ? ಅಕ್ರಿಯೆಯು ಕ್ರಿಯೆಯುಳ್ಳದ್ದಾಗಬಹುದೆ? ಆನಂದವು ಕೊಡಲು ಕೊಳ್ಳಲು ಬರುವುದೆ? ಆನಂದವು ಆನಂದವೆ. ಎಲ್ಲಿ ಆನಂದವಿಲ್ಲ ಅಲ್ಲಿ ಆನಂದಗೋಸ್ಕರ ಸಕಲ ವ್ಯವಹಾರ ನಡೆಯುವುದು, ಪರಮಾನಂದವು ಪರಮಜ್ಞಾನರೂಪಿ ಪರಮಾಮೃತವು ಅದು ಕೊಡುವುದೆಂತು ಕೊಳುವುದೆಂತು, ಪರಮಾಮೃತವೆಂಬುದು, ಸತ್ಯಜ್ಞಾನಾನಂದ ಚಿತ್ ಸ್ವರೂಪವರಿತ ಚಿದ್ರಸವದು, ವಾಙ್ಮನೋತೀತ, ನುಡಿಗೆಡೆಗೊಡದ ಘನವಾದ್ದರಿಂದ ಸ್ವಯಾನಂದ ಅಲ್ಲಿ ಕೊಡಲು ಇಲ್ಲ ಕೊಳಲೂ ಇಲ್ಲ. ಉಭಯನಾಸ್ತಿ ಎಂದು ಹೇಳಿಹರು.

ಇಂತೀ ತ್ರಿವಿಧದ ಸಂಚದ ಸನುಮತವ ಕೂಡಲ ಚೆನ್ನಸಂಗಾ ನಿಮ್ಮ ಶರಣ ಬಲ್ಲ. ನಿಮ್ಮ ಶರಣರೆಂದರೆ ತ್ರಿವಿಧದ ಸಂಚದ ಸನುಮತವ ಬಲ್ಲವರು. ತ್ರಿವಿಧಗಳೆಂದರೆ ಲಿಂಗ, ಜಂಗಮ, ಪ್ರಸಾದಂಗಳು. ಇವುಗಳ ರಹಸ್ಯವಾಗಿಹ ಒಪ್ಪಿಗೆಯುಳ್ಳವರು, ಲಿಂಗದಲ್ಲಿ ಕೊಡುವ ಕೊಳ್ಳುವ ರಹಸ್ಯ, ಜಂಗಮದಲ್ಲಿ ಕೊಟ್ಟು ಕೊಳಲಿಲ್ಲದ ರಹಸ್ಯ, ಪ್ರಸಾದದಲ್ಲಿ ಕೊಡುವುದಿಲ್ಲ, ಕೊಳುವದಿಲ್ಲದ ರಹಸ್ಯ. ಲಿಂಗ ಜಂಗಮ ಪ್ರಸಾದ ಈ ಮೂರೊಂದಾದ ರಹಸ್ಯ, ಇವುಗಳಿಗೂ ತನಗೂ ಇರುವ ಸಂಬಂಧ, ಈ ಸಂಬಂಧ

ಸತ್, ಚಿತ್, ಆನಂದ ಸಂಬಂಧ. ಲಿಂಗದ ಇರವು ತನ್ನಿರವು ಒಂದಾದ ಸಂಬಂಧ ಚಿತ್ ಎಂಬ ಜಂಗಮದಿರವು ತನ್ನಿರವು ಒಂದಾದ ಸಂಬಂಧ, ಆನಂದವೆಂಬ ಪ್ರಸಾದ ದಿರವು, ತನ್ನಿರವು ಒಂದಾದ ಸಂಬಂಧ ತಾನೆ ಆದ ಸಂಬಂಧ, ತಾನೆ ಆದ ರಹಸ್ಯ, ಈ ರಹಸ್ಯವ ಕೂಡಲ ಚೆನ್ನ ಸಂಗಾ ನಿಮ್ಮ ಶರಣ ಬಲ್ಲ ಎಂದು ಹೇಳಿಹರು. ಸತ್ ರೂಪಿ ಲಿಂಗ, ಚಿತ್ ಸ್ವರೂಪಿ ಜಂಗಮ, ಆನಂದ ಸ್ವರೂಪಿ ಪ್ರಸಾದ ಈ ತ್ರಿವಿಧಂಗಳು ವಾಙ್ಮನೋತೀತವು ತಾನಾರೆಂದರಿತವರ ಇರವು ಅರಿವು ಆದುದರಿಂದ ಕೂಡಲ ಚೆನ್ನಸಂಗಾ ನಿಮ್ಮ ಶರಣ ಬಲ್ಲ ಎಂದು ಹೇಳಿಹರು.

**ವಚನ 11**

**ತ್ರಿವಿಧ ಪ್ರಸಾದವೆಂದೆಂಬರು ಅದೆಂತಿಹುದೊ?**
**ಶುದ್ಧ ಪ್ರಸಾದ ಗುರುವಿನದದು,**
**ಸಿದ್ಧ ಪ್ರಸಾದ ಲಿಂಗದದು,**
**ಪ್ರಸಿದ್ಧ ಪ್ರಸಾದ ಜಂಗಮದದು**
**ಇಂತೀ ತ್ರಿವಿಧ ಒಂದಾದುದರ ತೋರಿ**
**ಬದುಕಿಸಾ ಕೂಡಲ ಚೆನ್ನಸಂಗಮದೇವಾ.**

**ತಾತ್ಪರ್ಯ :** ತ್ರಿವಿಧ ಪ್ರಸಾದವೆಂದೆಂಬರು, ಅದೆಂತಹುದೊ? ಶುದ್ಧಪ್ರಸಾದ ಗುರುವಿನದದು: ಪ್ರಸಾದದ ಬಗ್ಗೆ ಬಹು ಜನರು, ಭಾವಿಕರು, ಬಹುರೀತಿಯಾಗಿ ತಿಳಿದಿಹರು. ಪ್ರಸಾದವೆಂಬುದು ಗುರುವಿನಿಂದ ಆವುದೆ ಲಭ್ಯವಾಗಲಿ ಅದು ಪ್ರಸಾದವೆಂದು ತಿಳಿದು, ಶುದ್ಧ ಪ್ರಸಾದದ ಹಿರಿಮೆ ತಿಳಿಯದಂತಾಗಿದೆ.

ಪ್ರಸಾದ: ಪಂಚಪಕ್ವಾನ್ನಗಳಿಂದ ತಯ್ಯಾರಾದ ಮೃಷ್ಟಾನ್ನವು ಪ್ರಸಾದವೆ? ಈ ಮೃಷ್ಟಾನ್ನ ಗುರುಘನ ಸೇವಿಸಿ, ಉಳಿದುದು ಶುದ್ಧ ಪ್ರಸಾದವಾಗಬಹುದೆ? ಇದಲ್ಲದೆ ಕಲ್ಲುಸಕ್ಕರಿ, ದ್ರಾಕ್ಷಾ, ಉತ್ತುತ್ತಿ, ಇವುಗಳಾದರೂ ಗುರುವಿನಿಂದ ದೊರೆತಲ್ಲಿ ಇದು ಶುದ್ಧ ಪ್ರಸಾದವಾಗುವುದೆ? ನಿಜ ಗುರು ಇವುಗಳನ್ನು ಶುದ್ಧ ಪ್ರಸಾದವೆಂದು ಹೇಳಿಯಾದರೂ ಹೇಳಬಹುದೆ?

ಗುರುವಿನಿಂದ ಲಭ್ಯವಾಗಿಹ ಶುದ್ಧ ಪ್ರಸಾದ ಕಣ್ಣಿಗೆ ಕಾಣುವ ಪ್ರಸಾದವೆ? ಅಲ್ಲ, ಕಿವಿಗಳಿಗೆ ಕೇಳಿಸುವ ಶಬ್ದಪ್ರಸಾದವೆ? ಅಲ್ಲ, ನಾಸಿಕೆ ಮುಟ್ಟಿದ ಗಂಧ ಪದಾರ್ಥವದು ಶುದ್ಧ ಪ್ರಸಾದವೆ? ಅಲ್ಲ, ಜಿಹ್ವೆಗೆ ಸೋಂಕಿದ ರಸರೂಪಿ ಪದಾರ್ಥವದು ಶುದ್ಧ ಪ್ರಸಾದೆ? ಅಲ್ಲ, ತ್ವಚೆಗೆ ಸೋಂಕಿದುದು ಪ್ರಸಾದವಾಗಬಹುದೆ? ಆಗದು. ನಾನೆಂಬ ಅಹಂಕಾರದಿಂದ ಕೊಟ್ಟ ಅರುವಾದರೂ ಶುದ್ಧ ಪ್ರಸಾದವಾಗಬಹುದೆ? ಆಗದು. ಗುರುವಿನ ಶುದ್ಧ ಪ್ರಸಾದವದು, ಶುದ್ಧ ಜ್ಞಾನ, ಇದು ಅರುವನ್ನು ತಿಳಿಸುವ ರಹಸ್ಯ, ತಿಳಿಯುವ ರಹಸ್ಯ, ಅರುವು, ಅರುವು, ಎಂದವರಿಗೆ ಇದರ ಜ್ಞಾನವಿಲ್ಲ. ಅನ್ನದವರು ಇದರ ರಹಸ್ಯವ ಬಲ್ಲವರು, ಇದು ನಿಶಬ್ದ ವೇದಿಗಳ ಗುಟ್ಟು. ಶಬ್ದ ಸಂಭ್ರಮದವರಿಗೆ ಲಭ್ಯವಾಗದ ಪರಮಜ್ಞಾನವು ಚಿತ್ ಸ್ವರೂಪ ಅರಿಯ ಹೋದವರ ಗುಟ್ಟು. ಇದರ ರಹಸ್ಯ ವಾಙ್ಮನೋತೀತವಾದ ರಹಸ್ಯವಾದ್ದರಿಂದ, ಶುದ್ಧ ಪ್ರಸಾದರೂಪಿ

ಜ್ಞಾನವದು ಪರಮಜ್ಞಾನ; ತರ್ಕವಲ್ಲ, ಸಮಾಧಿ ಯೋಗವೂ ಅಲ್ಲ, ಗುರೂಪದೇಶವೂ ಅಲ್ಲ, ಇದು ದೇಶ ಕಾಲಗಳಲ್ಲಿಯ ಒಂದು ಘಟನೆಯಂಥಹದು ಅಲ್ಲ, ಅದು ಜ್ಞಾನದ ಸಹಜಸ್ಥಿತಿ.

ಸಿದ್ಧ ಪ್ರಸಾದ ಲಿಂಗದದು, ಲಿಂಗ ಪ್ರಸಾದದ ಘನವು ತಿಳಿಯದೆ ಇದನ್ನು ವಿಪರೀತವಾಗಿ ತಿಳಿದು ಬಹು ಭಕ್ತರು ಇಷ್ಟಲಿಂಗಕ್ಕೆ ಮಾಡಿದ (ಎಡಿಯೆ) ಲಿಂಗ ಪ್ರಸಾದವಾಗಿದೆ. ಇದನ್ನು ಕೂಡ ಮೃಷ್ಟಾನ್ನದಲ್ಲಿ ಗಣನೆ ಮಾಡಿಹರು. ಲಿಂಗಕ್ಕೆ ಮಾಡಿದ ನೈವೇದ್ಯವೆ ಲಿಂಗ ಪ್ರಸಾದವು ಅದು ಸಿದ್ಧಿ ಪ್ರಸಾದವಾಗಬಹುದೆ? ಆಗದು. ಸಿದ್ಧ ಪ್ರಸಾದವದು, ಸ್ವತಃ ಸಿದ್ಧ ಜ್ಞಾನ ಘನವು. ಕ್ಷರವು, ಅಕ್ಷರವು, ಆವುದರಿಂದ ಸಿದ್ಧವಾಗುವದು. ಅದು ಸ್ವತಃ ಸಿದ್ಧವಾಗಿದೆ. ಆವುದರಿಂದ ಉದಯ ಅಸ್ತವು, ಮರವು ಅರುವು, ಬಂಧ ಮೋಕ್ಷವು ಸಕಲಭಾವಂಗಳು ನೆನಹು ನಿರ್ಣಯಂಗಳು, ಕಲ್ಪಿತನ ಅವಸ್ಥೆಗಳು ಸಿದ್ಧವಾಗುವದು; ಅದುವೆ ಉದಯಾಸ್ತಂಗಳಿಲ್ಲದ ಸ್ವತಃ ಸಿದ್ಧವಸ್ತು. ಅದರ ಯತಾರ್ಥ ಅರಿವೆ ಸಿದ್ಧಪ್ರಸಾದ, ಸಿದ್ಧ ಪ್ರಸಾದವದು ಸಿದ್ಧಪ್ರಸಾದವೆನಲಿಲ್ಲ. ಇದು ಮೌನ ಮುದ್ರಿತವು. ಅರಿಯಹೋದವರು ತಾನು ಅದುವೆ ಆಗಿಹ ಘನವು, ಇದು ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಜ್ಞಾನವು ಅಹದು. ಅಚಲಿತವು ಅಹುದು. ಅಖಂಡಿತ ಘನವು ಅಹುದು. ಇದು ಗುರು ಕರುಣೆಯಿಂದ ಲಭ್ಯವಾಗಿಹ ಸಂಜ್ಞೆಯು. ಇದನ್ನು ಅರಿಯಹೋದವರ ಇರವು, ಅರಿವು ತಾನೆ ತನ್ನದು ಶಬ್ದ ಮುಗ್ಧವಾಗಿಹ ನಿಲುವು. ಮನ ಮೇರೆದಪ್ಪಿದ ನಿಲುವು, ಸೀಮಾತೀತ ನಿಲವು, ಇದು ನಿಜ ನಿಲವುಳ್ಳದ್ದಾದುದರಿಂದ ಸಿದ್ಧ ಪ್ರಸಾದವಾಗಿಹುದು. ಬಹು ಲಿಂಗವಂತರಿಗೆ ಸಿದ್ಧ ಪ್ರಸಾದದ ಜ್ಞಾನವಿಲ್ಲದ್ದರಿಂದ ಲಿಂಗವು ಕುರುಹುಳ್ಳದ್ದಾಗಿ, ಪೂಜ್ಯವಾಗಿ ತಿಳಿಯದ ಮುಗ್ಧರು ತಾವು ಪೂಜಕರಾಗಿ ತಮ್ಮ ಅಪೂರ್ವಿಕದ ಘನವ ತಿಳಿಯದಂತಾಗಿದೆ.

ಆರು ಸಿದ್ಧ ಪ್ರಸಾದವ ಅರಿತಿಹರು, ಅವರೆ ಅಪೂರ್ವಿಕರಾಗಿಹರು. ಲಿಂಗ ಒಂದಾಗಿರ್ದ ಘನತ್ವ ಸಿದ್ಧವಾದ್ದರಿಂದ ಸ್ವತಃ ಸಿದ್ಧ ವಸ್ತುವೆ ತಾವಾಗಿಹರು.

ಪ್ರಸಿದ್ಧ ಪ್ರಸಾದ ಜಂಗಮದದು: ಜಂಗಮ ಅರಿವು, ಪ್ರಸಿದ್ಧ ಅರಿವು ಅರಿಯ ಹೋದವರಿಗೆ ಭಾವಕ್ಕಿಂಬುಗೊಡದ ಮಹದರಿವು. ಶಬ್ದವೆ ಮೀಸಲವಾಗಿಹ ಅರಿವು, ನುಡಿಗೆ ಇಂಬುಗೊಡದ ಇರುವಿನ ಅರುವು. ಆದಿ ಅಂತ್ಯವ ಕಾಣದ ಘನವು ತನ್ನ ಬಿಟ್ಟು ಅನ್ಯವ ಕಾಣದ ಪ್ರಸಿದ್ಧವು ಎಲ್ಲೆಲ್ಲೂ ತಾನೆ. ಪೂರ್ಣಮದಃ ತಾನೆ ಪೂರ್ಣಮಿದಂ ತಾನೆ, ಪೂರ್ಣಾತ್ ಪೂರ್ಣತಾನೆ, ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನತಾನೆ ಆದುದರಿಂದ ಪ್ರಸಿದ್ಧಿ ಪ್ರಸಾದ ಜಂಗಮದದು.

ಜಂಗಮವೆಂಬುದು ಅಜಾತ ತತ್ವ, ಈ ತತ್ವ ಅರಿತವರು, ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗ ನಿಲವು, ಅನುಪಮ ನಿರಾಭಾರಿ ಜಂಗಮ, ನಿರ್ದೇಹಿ ಜಂಗಮ, ನಿರುಪಾಧಿ ಜಂಗಮ, ನಿಸ್ಸಂಗ ಜಂಗಮ, ನಿರಾಲಂಬ ಜಂಗಮ, ಶುದ್ಧ ಶಿವೈಕ್ಯ ಜಂಗಮನಾದುದರಿಂದ, ನಿರ್ಲಿಖಿತ ಜಂಗಮನನ್ನು ಜಾತಿ, ಗುಣ, ಕ್ರಿಯೆಗಳಿಂದ ಕಾಣಬಹುದೆ? ಕಾಣಬಾರದು. ಕಂಡವರಿಗೆ ಪ್ರಸಿದ್ಧ ಪ್ರಸಾದ ಜ್ಞಾನದಿಂದ

ದೂರಾತಿ ದೂರನು ಆಗಿಹನು. ಆರು ನಿರ್ಲಿಖಿತ ಜಂಗಮರು, ಅವರು ಪ್ರಸಿದ್ಧಿ ಪ್ರಸಾದಿಗಳು. ಇವರು ತನ್ನ ಕಂಡ ಪರಮ ಜ್ಞಾನಿಗಳು, ಪರಮಾಮೃತರು, ವಾಙ್ಮನೋತೀತವಾದ ಘನವು. ಇಂತೀ ತ್ರಿವಿಧ ಒಂದಾದವರ ತೋರಿ ಬದುಕಿಸಾ ಕೂಡಲ ಚೆನ್ನಸಂಗಮದೇವಾ.

ಗುರು ಪ್ರಸಾದ, ಲಿಂಗ ಪ್ರಸಾದ, ಜಂಗಮ ಪ್ರಸಾದ, ಇದು ಒಂದೇ ಅರಿವು. ಇದರ ಘನವ ಅದಾರು ಬಲ್ಲರು, ಒಂದೇ ತ್ರಿವಿಧವಾದ ಘನವ ಅದಾರು ಬಲ್ಲರು. ಅರುವು ಇದುವೆ ಮೂರಾದದು, ಮೂರಾದುದೆ ಒಂದಾದುದು.

ಶುದ್ಧ ಪ್ರಸಾದ ಗುರುವಿನದದು, ಅರುವರಿಯಲು ಒಂದನುವ ಮಾಡಿ ತಿಳಿಸಿದ ಗುರು ಕಾರುಣ್ಯವೆ ಶುದ್ಧ ಪ್ರಸಾದ. ಆ ಅರಿವು ತನ್ನಿಂದ ತನಗದು ವೇದ್ಯವಾದುದು ಸಿದ್ಧ ಪ್ರಸಾದ, ಅದುವೆ ಎಲ್ಲೆಲ್ಲೂ ಕಂಡುದೆ ಪ್ರಸಿದ್ಧ ಪ್ರಸಾದ.

ಅರಿದರುಹಿಸಿಕೊಂಬುದಕ್ಕೆ ಮೀರಿದ ಘನವನ್ನು ಒಂದನುವ ಮಾಡಿ ತಿಳಿಸಿದುದೆ ಶುದ್ಧಪ್ರಸಾದ ಗುರುವಿನದುದು. ನೆನಹು ನಿರ್ಣಯಕ್ಕೆ ಮೀರಿ ಅಚಿಂತ್ಯ ಪದವೆ ತನ್ನಿರವು ಆಗಿ, ನಿಶ್ಚಿಂತನಾದುದೆ ಸಿದ್ಧ ಪ್ರಸಾದ. ಇದು ಲಿಂಗದದು. ಭಾವ ನಿಷ್ಪತಿಯಾಗಿ ನಿರ್ಭಾವ ನೆಲೆಗೊಂಡಿಹುದೆ ಪ್ರಸಿದ್ಧ ಪ್ರಸಾದ, ಇದು ಜಂಗಮದದು. ಈ ತ್ರಿವಿಧ ಒಂದಾದ ಘನವ ಅದನೆಂತು ವಿವರಿಸುವುದು.

ಅರಿದರುಹಿಸಿ ಕೊಂಬುದಕ್ಕೆ ಮೀರಿದ ಘನ ಪ್ರಸಾದ, ಗುರು ಪ್ರಸಾದ. ಅದು ನಾನೀನೆಂಬುದಕ್ಕೂ ತೆರಹಿಲ್ಲದ ಘನ ಪ್ರಸಾದ. ನೆನಹು ನಿರ್ಣಯಕ್ಕೂ ಮೀರಿದ ಘನ ಪ್ರಸಾದ, ಲಿಂಗ ಪ್ರಸಾದ, ಮನ ಮೇರೆದಪ್ಪಿದ ಪ್ರಸಾದವದು ತೆರಹಿಲ್ಲದ ಘನ. ಭಾವ ನಿಷ್ಪತಿಯಾಗಿ ನಿರ್ಭಾವವದು, ಜಂಗಮ ಪ್ರಸಾದ ಆವಾವುದಕ್ಕೂ ಇಂಬು ಕೊಡದ್ದರಿಂದ ಪ್ರಸಿದ್ಧ ಪ್ರಸಾದವದು ತೆರಹಿಲ್ಲದ ಘನವು. ಈ ತ್ರಿವಿಧವು ತೆರಹಿಲ್ಲದ ಘನವಾದುದರಿಂದ ತ್ರಿವಿಧವೆಂದೆಂಬುದು ಒಂದು, ಒಂದೆಂಬುದು ತ್ರಿವಿಧವು. ಇದು ಕಾರಣ ಇವರು ಮೂರೊಂದಾದವರು. ಇವರ ಘನಾನುಭವ ತೋರಿ ಬದುಕಿಸು ಕೂಡಲಚೆನ್ನಸಂಗಮದೇವಾ.

ಬದುಕಿದವರು ಆರು, ಗುರುಪ್ರಸಾದ, ಲಿಂಗಪ್ರಸಾದ, ಜಂಗಮ ಪ್ರಸಾದ, ಒಂದಾಗಿ ಕಂಡವರು ಅಮರರು, ಅಮರತ್ವ ವರಿತವರು, ಸಾವ ಕಾಣದವರು, ಮುನ್ನ ಮುನ್ನಲಾದ ಘನವರಿತವರು, ತಮ್ಮಿಂದ ತಾವಾದವರು ಲಿಂಗದಲ್ಲಿ ಉದಯವಾದ ಲಿಂಗೈಕ್ಯರು ನಿಸ್ಸೀಮರು.

ಗುರುವೆಂಬುದು ಬೋಧೆ ಬೋಧಕತ್ವ ವ್ಯವಹಾರಕ್ಕೆ ಮೀರಿ ಬೆಳಗುವ ಜ್ಯೋತಿಯಾಗಿ ಬೆಳಗಿನ ಬೆಳಗಾಯಿತ್ತು. ಲಿಂಗವೆಂಬುದು ಪೂಜ್ಯ ಪೂಜಕತ್ವವೆಂಬ ಸೀಮಿತವ ಮೀರಿ ನೆನಹು ನಿಷ್ಪತ್ತಿಯಾಗಿ ಲಿಂಗದುದಯ ಪ್ರಜ್ವಲಿಸುತ್ತಿತ್ತು. ಗುಹೇಶ್ವರ ಲಿಂಗ ತಾನಾಗಿ, ಜಂಗಮವೆಂಬುದು ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವಾಗಿ ಸುಖದ ಸುಖವಾಗಿ ತಾನೆ ತಾನಾಯಿತ್ತು. ಇದು ಮೂರೊಂದಾದುದು ತನ್ನೊಳ ತೋರಿ ಬುದಕಿದ ಘನಕ್ಕೆ ಘನವು ಎಂದುದು.

**ವಚನ 12**

**ಕಂಗಳು ನೋಡಿದ ಪದಾರ್ಥ ಲಿಂಗಾರ್ಪಿತವಲ್ಲ,**
**ಕಿವಿಗಳು ಕೇಳಿದ ಪದಾರ್ಥ ಲಿಂಗಾರ್ಪಿತವಲ್ಲ,**
**ನಾಸಿಕ ಮುಟ್ಟಿದ ಪದಾರ್ಥ ಲಿಂಗಾರ್ಪಿತವಲ್ಲ,**
**ಜಿಂಹ್ವೆ ಸೋಂಕಿದ ಪದಾರ್ಥ ಲಿಂಗಾರ್ಪಿತವಲ್ಲ,**
**ತ್ವಚೆ ಸೋಂಕಿದ ಪದಾರ್ಥ ಲಿಂಗಾರ್ಪಿತವಲ್ಲ,**
**ಸಂಕಲ್ಪ ವಿಕಲ್ಪ ರಹಿತನಾಗಿ ರೂಪು, ರುಚಿ, ಗಂಧ, ಸ್ಪರ್ಶನ ಶಬ್ದವನು**
**ಕೂಡಲಚೆನ್ನಸಂಗಯ್ಯ, ನೀನರಿಯಲು ಪ್ರಸಾದವೆನಗೆ. ॥ 301 ॥**

ತಾತ್ಪರ್ಯ: ಕಂಗಳು ನೋಡಿದ ಪದಾರ್ಥ ಲಿಂಗಾರ್ಪಿತವಲ್ಲ, ಕಿವಿಗಳು ಕೇಳಿದ ಪದಾರ್ಥ ಲಿಂಗಾರ್ಪಿತವಲ್ಲ: ಲಿಂಗಕ್ಕೆ, ಲಿಂಗದ ಒಡವೆ, ಲಿಂಗಾರ್ಪಿತವಾಗುವುದು ಸಹಜ ಅಂಗದ ಒಡವೆ ಅಂಗಕ್ಕೆ ಅರ್ಪಿತವಲ್ಲದೆ ಲಿಂಗಾರ್ಪಿತವಾಗವು.

ಕಂಗಳು ನೋಡಿದ ಪದಾರ್ಥ ಕಂಗಳಿಗೆ ಅರ್ಪಿತವಲ್ಲದೆ, ಲಿಂಗಾರ್ಪಿತ ಹೇಗಾಗುವವು! ಜಡವು, ಜಡಕ್ಕೆ ಅರ್ಪಿತವಲ್ಲದೆ, ಚೈತನ್ಯಕ್ಕೆ ಅರ್ಪಿತವಾಗವು. ಲಿಂಗವೆಂದರೆ ಇದ್ದುದು ಅದು ಎಲ್ಲೆಲ್ಲೂ ಇದ್ದುದು. ಅದು ಅಂದು ಇಂದು ಎಂದೆಂದೂ ಇದ್ದುದು, ಅದು ಅಬಾಧಿತ ಘನವು, ನಿರಂತರವು ತೋರದಡಗದ ಘನ ನಿಷ್ಕಳಂಕವು. ಅದು ರೂಪವೂ ಆಗದು. ಅರೂಪವೂ ಆಗದು. ಏನೊಂದಾಗದ ಘನ ನಿರೂಪ. ಇದ್ದಂತಿರುವ ನಿರ್ವಿಕಾರ, ನಿರಾಳ, ನಿರಾಲಂಬವದು ಅಚಿಂತ್ಯವು.

ಕಂಗಳು ನೋಡಿದ ಪದಾರ್ಥ ರೂಪುಳ್ಳುದು. ನಿರೂಪಕ್ಕೆ ರೂಪವ ಹೇಗೆ ಅರ್ಪಿಸುವದು? ನಿರವಯಕ್ಕೆ ಅವಯವ ಅರ್ಪಿಸುವದು ಹೇಗೆ? ರೂಪ, ಅದು ತೋರಿ ಇಲ್ಲವಾಗುವದು. ಲಿಂಗವದು, ತೋರದಡಗದ ಘನ, ಈ ಘನಕ್ಕೆ ತೋರಿ ಇಲ್ಲವಾಗುವ ಪದಾರ್ಥವರ್ಪಿಸಲು ಬರುವುದೇ? ಲಿಂಗಕ್ಕೆ ಲಿಂಗದೊಡವೆ ಅರ್ಪಿತವಲ್ಲದೆ, ಮಾಯಿಕ ಪದಾರ್ಥ ಅರ್ಪಿತವಾಗವು. ಬೆಳಕಿಗೆ ಕತ್ತಲು ಅರ್ಪಿಸಬಹುದೆ? ಬ್ರಹ್ಮಕ್ಕೆ ಭ್ರಮವು ಅರ್ಪಿತವಾಗಬಹುದೆ? ಇದ್ದುದಕ್ಕೆ ಇಲ್ಲದುದು ಅರ್ಪಿತವಾಗಬಹುದೆ? ಕಂಗಳು ನೋಡಿದ ಪದಾರ್ಥ ಲಿಂಗಾರ್ಪಿತವಾಗಬಹುದೆ? ಕಣ್ಣಿನ ಕಣ್ಣಾಗಿರುವ ಲಿಂಗಕ್ಕೆ ಕಣ್ಣಿನಿಂದ ನೋಡಿದ ಪದಾರ್ಥ ಅದೆಂತು ಲಿಂಗಾರ್ಪಿತವಾಗುವದು, ಇದು ಕಾರಣ, ಕಂಗಳು ನೋಡಿದ ಪದಾರ್ಥ ಲಿಂಗಾರ್ಪಿತವಲ್ಲವೆಂದು ಹೇಳಿಹರು, ಲಿಂಗವದು ಅಖಂಡಿತ ಜ್ಞಾನ ಘನವು, ಅಲ್ಲಿ ಖಂಡಿತ ಜ್ಞಾನ, ಖಂಡಿತದೃಷ್ಟಿ, ಖಂಡಿತ ವಿಷಯಕ್ಕಿಂಬಲ್ಲ.

ಕಿವಿಗಳು ಕೇಳಿದ ಪದಾರ್ಥ ಲಿಂಗಾರ್ಪಿತವಲ್ಲ: ಕಿವಿಗಳು ಕೇಳಿದುದು ಶಬ್ದ. ಈ ಶಬ್ದವು ಲಿಂಗಾರ್ಪಿತ ಹೇಗಾಗುವುದು. ಲಿಂಗವದು ನಿಃಶಬ್ದಘನ, ನಿಃಶಬ್ದಘನ ರೂಪಿ ಲಿಂಗಕ್ಕೆ ಶಬ್ದವ ಹೇಗೆ ಅರ್ಪಿಸುವದು, ನಿಃಶಬ್ದ ಘನದಲ್ಲಿ ಶಬ್ದಕ್ಕಿಂಬುಂಟೆ? ಶಬ್ದವೆ ಮೀಸಲವಾಗಿರುವಲ್ಲಿ ಅಲ್ಲಿ ಶಬ್ದವಾದರೂ ಹೇಗೆ ಅರ್ಪಿಸುವರು.

ಶಬ್ದವದು ಇಲ್ಲದುದು, ನಿಃಶಬ್ದಘನವದು ಇದ್ದುದು. ಇದ್ದ ಸದ್ವಸ್ತುವಿಗೆ ಇಲ್ಲದ ಮಿಥ್ಯಾಶಬ್ದವ ಹೇಗೆ ಅರ್ಪಿಸುವದು. ಇದ್ದ ಸತ್ ಸ್ವರೂಪ ಲಿಂಗ ನಿರಂತರ, ಇಲ್ಲದ ಮಿಥ್ಯಾರೂಪ ಶಬ್ದ ಇಲ್ಲವೆ ಇಲ್ಲವೆಂದಲ್ಲಿ ಕಿವಿಗಳು ಕೇಳಿದ ಶಬ್ದರೂಪ ಪದಾರ್ಥ ಲಿಂಗಾರ್ಪಿತವಲ್ಲವೆಂದು ಹೇಳಿಹರು.

ನಾಸಿಕ ಮುಟ್ಟಿದ ಪದಾರ್ಥ ಲಿಂಗಾರ್ಪಿತವಲ್ಲ: ನಾಸಿಕ ಮುಟ್ಟಿದ ಪದಾರ್ಥವದು ಗಂಧ. ಈ ಗಂಧ ಲಿಂಗಾರ್ಪಿತ ಹೇಗಾಗುವದು, ಸದ್ ಜ್ಞಾನ ಭರಿತವಾದ ಲಿಂಗದಲ್ಲಿ ಗಂಧವೆಂಬುದಕ್ಕಿಂಬಿಲ್ಲ.

ಸದ್ ಜ್ಞಾನವಾಗಿಹ ಲಿಂಗ, ಅಖಂಡಿತ ಘನವಪ್ಪ ಪೂರ್ಣಲಿಂಗ, ಈ ಘನ ಲಿಂಗಕ್ಕೆ ಗಂಧವ ಹೇಗೆ ಅರ್ಪಿಸುವದು. ಅಖಂಡಿತ ಜ್ಞಾನ ಘನವು ಇದ್ದುದು ನಿರಂತರ ಇದ್ದುದು. ಇದ್ದ ಅಬಾಧಿತ ಘನದಲ್ಲಿ ಇಲ್ಲದ ಗಂಧ ಇದ್ದುದು ಹೇಗೆ? ಇಲ್ಲದುದು ಇಲ್ಲವೆ ಇಲ್ಲದಿರುವಲ್ಲಿ ಇದ್ದ ಸದ್ಘನಕ್ಕೆ ಇಲ್ಲದ ಗಂಧ ಹೇಗೆ ಅರ್ಪಿಸುವದು, ದಿಟ ವಸ್ತುವಿಗೆ ಸಟೆಯ ಪದಾರ್ಥವ ಹೇಗೆ ಅರ್ಪಿಸುವದು? ಇದ್ದುದಕ್ಕೆ ಇಲ್ಲದುದು ಅರ್ಪಿಸುವದದೆಂತು? ಇದು ಕಾರಣ ನಾಸಿಕ ಮುಟ್ಟಿದ ಪದಾರ್ಥ ಲಿಂಗಾರ್ಪಿತವಲ್ಲವೆಂದು ಹೇಳಿಹರು.

ಜಿಂಹ್ವೆ ಸೋಂಕಿದ ಪದಾರ್ಥ ಲಿಂಗಾರ್ಪಿತವಲ್ಲ, ಜಿಂಹ್ವೆ ಸೋಂಕಿದ ಪದಾರ್ಥ ರುಚಿ, ಈ ರುಚಿ ಷಡ್ವಿಧವಾಗಿಹದು, ಇದು ಲಿಂಗಾರ್ಪಿತ ಹೇಗಾಗುವದು. ಲಿಂಗವೆಂಬುದು ಜಿಹ್ವೇಂದ್ರಿಯೆ? ಅಲ್ಲ ಗಗನದಂತೆ ಸಮರಸವಾಗಿಹ ಜ್ಞಾನ ಘನ, ಜ್ಞಾನಾಮೃತ, ಜ್ಞಾನಾನಂದ ರೂಪಿ ಲಿಂಗಕ್ಕೆ ಷಡ್ ರುಚಿಯ ಹೇಗೆ ಅರ್ಪಿಸುವದು. ರುಚಿಯೆಂಬ ಪದಾರ್ಥ ವಿಕಾರವುಳ್ಳದ್ದು. ಬದಲಾವಣೆಯುಳ್ಳದ್ದು. ಇದು ಬಿಸಿಯಾಗಿ, ತಂಗಳವಾಗಿ ಕೊನೆಗೆ ಹಳಿಸಿ ದುರ್ಗಂಧಮಯವಾಗಿ ತೋರುವುದು. ಈ ರೀತಿ ವಿಕಾರಮಯ ಪದಾರ್ಥವು ಜ್ಞಾನಾಮೃತರೂಪಿ ಲಿಂಗಕ್ಕೆ ಹೇಗೆ ಅರ್ಪಿತವಾಗುವುದು.

ಲಿಂಗವದು ನಿರೂಪವು, ನಿರ್ವಿಕಾರವು ನಿರಾಲಂಬವು, ಸತ್ಯಜ್ಞಾನಾನಂದವು ನಿಷ್ಕಳಂಕವು ರುಚಿಯೆಂಬುದು ರೂಪವು ವಿಕಾರವು ಆಲಂಬನವುಳ್ಳದ್ದು. ನಿರೂಪಕ್ಕೆ ರೂಪವರ್ಪಿಸುವದದೆಂತು. ನಿರ್ವಿಕಾರಕ್ಕೆ ವಿಕಾರವರ್ಪಿಸುವದದೆಂತು, ಚಿದ್ರಸರೂಪಿ ಲಿಂಗಕ್ಕೆ ರಸವರ್ಪಿಸುವದು ಹೇಗೆ? ಸತ್ಯ ಜ್ಞಾನಾನಂದಕ್ಕೆ ಪಂಚ ಪಕ್ವಾನ್ನದಿಂದ ಮಾಡಿಹ ಷಡ್ ರುಚಿಯುಳ್ಳ ಪದಾರ್ಥವ ಅರ್ಪಿಸುವದದೆಂತು? ನಾಶ ಅವಿನಾಶ ಎಂಬುದು ಬಾರದ ಘನಲಿಂಗಕ್ಕೆ ನಾಶವುಳ್ಳ ಪದಾರ್ಥ ಅರ್ಪಿಸುವುದು ಹೇಗೆ?

ಅಕ್ಷಯಾಮೃತ? ಇದಕ್ಕೆ ಏನನ್ನರ್ಪಿಸುವರು? ಲಿಂಗ ಅಕ್ಷಯ ಜ್ಞಾನನಿಧಿ ಇದಕ್ಕೆ ಅರ್ಪಿಸುವ ಬದುಕು ಇದೆಯೇ? ರುಚಿ ಇದು ಕ್ಷಣದೋಳ ಒಂದು ವಿಧ ಮರುಕ್ಷಣದೋಳ್ ಮತ್ತೊಂದು ವಿಧವಾಗುವ ಪದಾರ್ಥ, ಅರ್ಪಿಸಲು ಬರುವದೆ? ಬಾರದ್ದರಿಂದ ಜಿಹ್ವೆ ಸೋಂಕಿದ ಪದಾರ್ಥ ಲಿಂಗಾರ್ಪಿತವಲ್ಲವೆಂದು ಹೇಳಿಹರು.

ತ್ವಚೆ ಸೋಂಕಿದ ಪದಾರ್ಥ ಲಿಂಗಾರ್ಪಿತವಲ್ಲ: ತ್ವಚೆ ಸೋಂಕಿದ ಪದಾರ್ಥ, ಸ್ಪರ್ಶ, ಇದು ಮೃದುವಾಗಿರಬಹುದು. ಕಠಿಣವಾಗಿರಬಹುದು. ಶೀತ ಉಷ್ಣಾದಿಗಳಿಂದ

ಕೂಡಿ ಸ್ಪರ್ಶರೂಪವಾಗಿ ಕಾಣುವುದು. ಮೃದುರೂಪ, ಕಠಿಣ ರೂಪವಾಗಬಹುದು. ಲಿಂಗವೆಂಬುದು ನಿರಾಲಂಬ, ನಿಸ್ಸಂಗ, ನಿರುಪಾಧಿವಿರುವಲ್ಲಿ ಅದನ್ನು ಸ್ಪರ್ಶ ಧರ್ಮವು ಹೇಗೆ ಮುಟ್ಟುವುದು. ಗಗನಕ್ಕೆ ಅದಾವ ಗಾಳಿಯು ಮುಟ್ಟುವುದು. ಅದಾವ ಜಲ, ಅದಾವ ಭೂಮಿ, ಅದಾವ ಅಗ್ನಿಯು ಮುಟ್ಟುವದು.

ಲಿಂಗವದು, ಜಗಭರಿತವಾಗಿದ್ದರೂ, ಜಗವ ಹೊದ್ದದ ಘನವು, ಲಿಂಗವು ಜಗವಾಗದು, ಜಗದ ಕಾರಣವು ಆಗದು, ಅದು ಕಾರ್ಯ ಕಾರಣಗಳಿಂದತೀತವು, ಅತೀತವದು ಏನೊಂದಾಗದ ಘನಲಿಂಗವು, ಅದಕ್ಕೆ ಜಗವು ಜಗದ ಕಾರಣವು ಕೂಡ ಅರ್ಪಿತವಾಗದು. ಇದು ಕಾರಣ ತ್ವಚೆಗೆ ಸೋಂಕಿದ ಪದಾರ್ಥ ಲಿಂಗವಲ್ಲವೆಂದು ಹೇಳಿಹರು, ಏಕೆಂದರೆ ತ್ವಚೆಯು ಲಿಂಗವಲ್ಲ, ಲಿಂಗವಾಗದ್ದರಿಂದ ತ್ವಚೆಗೆ ಸೋಂಕಿದುದು ಲಿಂಗ ಪದಾರ್ಥವಲ್ಲ.

ಲಿಂಗದ್ದು ಅಸ್ಪೃಶ್ಯ ಘನ, ಆವುದರಿಂದಲೂ ಮುಟ್ಟಿಸಿಕೊಳ್ಳದ ಘನ, ಅದನ್ನು ಸ್ಪರ್ಶವು ಮುಟ್ಟುವದದೆಂತು, ಅಸ್ಪೃಶ್ಯದಲ್ಲಿ ಸ್ಪರ್ಶವದು ಇಲ್ಲದುದು, ಅಸ್ಪೃಶ್ಯವದು ನಿರಂತರವು ಇದ್ದುದ್ದು. ಇದ್ದ ಘನವಸ್ತುವಿಗೆ ಸ್ಪರ್ಶ ಇಲ್ಲದುದು, ಇಲ್ಲದುದು ಅರ್ಪಿತವಾಗುವದದೆಂತು?

ಸಂಕಲ್ಪ ವಿಕಲ್ಪ ರಹಿತನಾಗಿ ರೂಪು, ರುಚಿ, ಗಂಧ, ಸ್ಪರ್ಶ ಶಬ್ದವನು ಕೂಡಲ ಚೆನ್ನಸಂಗಯ್ಯ ನೀ ನರಿಯಲು ಪ್ರಸಾದವೆನಗೆ: ಸಂಕಲ್ಪ ವಿಕಲ್ಪದಿಂದುಕ್ತ ನಾದವನಿಗೆ ಪ್ರಸಾದವಿಲ್ಲ. ಆವ ಕಲ್ಪಿತ ಪುರುಷನು ಗುರು ಕರುಣೆಯಿಂದ ಸಂಕಲ್ಪ ವಿಕಲ್ಪ ವಿರಹಿತನಾಗಿಹನು. ಆತಂಗೆ ಪ್ರಸಾದದ ಘನವು ವೇದ್ಯವಾಗುವುದು. ಎಲ್ಲಿಯವರೆಗೆ ಇಲ್ಲದುದು ಕಲ್ಪಿಸುವನು ಇದ್ದುದ ಅರಿಯನು ಅದುವೆ ಸಂಕಲ್ಪ ವಿಕಲ್ಪವಾಗಿ ತೋರುವುದು. ಯಾವಾಗ ಇದ್ದ ಸದ್ವಸ್ತುವನು ಅರಿವನು ಆಗ ಇಲ್ಲದುದು ಇಲ್ಲವಾಗುವುದು. ಆಗ ಸಂಕಲ್ಪ ಎಲ್ಲಿ? ವಿಕಲ್ಪ ಎಲ್ಲಿ? ಅದರ ಸುಳುಹೆ ಇಲ್ಲದಿರುವಾಗ ಅಲ್ಲಿ ಪಂಚ ಜ್ಞಾನೇಂದ್ರಿಯಂಗಳು ಇಲ್ಲ ಅದರ ವಿಷಯಂಗಳು ಇಲ್ಲ ಇವು ಇಲ್ಲದವು. ಇಲ್ಲದಿರುವಾಗ ಇದ್ದ ಘನವಸ್ತುವಿಗೆ ಇಲ್ಲದವು ಅರ್ಪಿಸುವದದೆಂತು.

ಇದ್ದ ಸದ್ವಸ್ತು ಇದ್ದಂತಿದೆ ಅಂದು, ಇಂದು, ಎಂದೆಂದೂ ಇದ್ದಂತಿದೆ. ಇಲ್ಲದ್ದು, ಇಲ್ಲವೆ ಇಲ್ಲ, ಇಲ್ಲಾದುದು ಇಲ್ಲಾದುದು ಎಲ್ಲಿಪ್ಪುದು? ಇಲ್ಲಾದುದು ಇಲ್ಲಾದುದು ಎಂದಿಪ್ಪುದು? ಇದ್ದ ಸದ್ವಸ್ತುವಿನ ಹೊರ್ತಾಗಿ ಅನ್ಯವಾವುದು ಇಲ್ಲದ್ದರಿಂದ ರೂಪ ನೀನೆ, ರುಚಿನೀನೆ, ಗಂಧ ನೀನೆ, ಶಬ್ದ ನೀನೆ, ಸ್ಪರ್ಶನೀನೆ, ಸಕಲವು ಲಿಂಗ ಸ್ವರೂಪವಾದ್ದರಿಂದ ಆಚಾರವನಾಚಾರವಾಯಿತ್ತು. ಸೀಮೆ, ನಿಸ್ಸೀಮೆಯಾಯಿತ್ತು. ಪ್ರಾಣ ಸಂಚಯ ತಪ್ಪಿ, ಲಿಂಗ ಸಂಚಯವಾಯಿತ್ತು. ಎಲ್ಲಿ ರೂಪ ಅಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ರಸವಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ಗಂಧವಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ಶಬ್ದವಲ್ಲಿಯೆ ಲಿಂಗಸ್ವಾಯತವಾಯಿತ್ತು. ಎಲ್ಲಿ ಸೋಂಕಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಕೂಡಲ ಸಂಗಮದೇವಾ ಕರುಣ ರಸಾಬ್ಧಿ ಕಡಕೋಡಿವಡಿಯಿತ್ತಯ್ಯ ಎನ್ನ ಮೇಲೆ ಇದು ಸಂಕಲ್ಪ ವಿಕಲ್ಪರಹಿತನಾಗಿ ನೋಡುವುಡೆ

ಅರಿವುಡೆ ರೂಪು, ರುಚಿ, ಗಂಧ, ಸ್ಪರ್ಶ, ಶಬ್ದ ಲಿಂಗವಲ್ಲದೆ ಅನ್ಯವಿಲ್ಲವೆಂಬುದು ತನ್ನಿಂದ ತನಗದು ವೇದ್ಯವಾಯಿತ್ತು. ಇದು ಕೂಡಲ ಚೆನ್ನಸಂಗಯ್ಯನಾಗಿ ಅರಿಯಲು ಪ್ರಸಾದದ ಪರಿಣಾಮ ಎನ್ನೊಳ ಸಿದ್ಧವಾಯಿತ್ತು ಎಂದು ಹೇಳಿಹರು.

**ವಚನ 13**

**ಪಂಚೇಂದ್ರಿಯ ಮುಖದಲ್ಲಿ ಅಲ್ಲಲ್ಲಿ**
**ತಾಗಿದ ಸುಖವ ಸುಖಿಸಿ ಲಿಂಗಾರ್ಪಿತವೆಂಬುದು**
**ಅದು ಲಿಂಗಾರ್ಪಿತವೆ? ಅಲ್ಲಲ್ಲಿ**
**ಅರ್ಪಿತವ ಮಾಡದೆ, ಅನರ್ಪಿತವ ಹೊದ್ದದೆ ಅರ್ಪಿಸಬೇಕು,**
**ಅರ್ಪಿಸುವ ಭೇದವುಳ್ಳನ್ನಕ್ಕರ ಶರಣನೆನಿಸಬಾರದು**
**ಕೂಡಲಚೆನ್ನಸಂಗಮದೇವಾ.**

ತಾತ್ಪರ್ಯ : ಪಂಚೇಂದ್ರಿಯ ಮುಖದಲ್ಲಿ ಅಲ್ಲಲ್ಲಿ ತಾಗಿದ ಸುಖವ ಸುಖಿಸಿ ಲಿಂಗಾರ್ಪಿತವೆಂಬುದು ಅದು ಲಿಂಗಾರ್ಪಿತವೆ: ಬಹು ಭಾವಿಕರು ಲಿಂಗಾರ್ಪಿತ ಭೇದವ ತಿಳಿಯದೆ ಪಂಚೇಂದ್ರಿಯಂಗಳಾದ ನೇತ್ರೇಂದ್ರಿಯ (ಕಣ್ಣು) ಜಿಂಹ್ವೇಂದ್ರಿ(ನಾಲಿಗೆ) ಕರ್ಣೇಂದ್ರಿಯ (ಕಿವಿ) ಘ್ರಾಣೇಂದ್ರಿ (ಮೂಗು) ತ್ವಕ್ಕೇಂದ್ರಿ (ಚರ್ಮ)ಗಳಿಗೆ ತಾಗಿದ ರೂಪು, ರುಚಿ, ಶಬ್ದ, ಗಂಧ, ಸ್ಪರ್ಶದ ವಿಷಯಂಗಳು ತಾಗಿದ ಸುಖವ ಸುಖಿಸಿ ಈ ಸುಖ ಲಿಂಗಾರ್ಪಿತ ಮಾಡುವ ಭಾವಿಕರಿಗೂ ಭಕ್ತರಿಗೂ ಶರಣರು ಅಲ್ಲಗಳೆದಿಹರು. ಏಕೆಂದರೆ ಲಿಂಗದೇವನು ಏಕ ಏವ ಅದ್ವಿತೀಯ ಘನನೆಂಬುದಕ್ಕೂ ನಿಲುಕದನುಪಮನಿರುವಲ್ಲಿ ಆ ಪರಾತ್ಪರ ವಸ್ತುವಿಗೆ ಅರ್ಪಿಸುವ ಪದಾರ್ಥವುಂಟೆ? ಅದು ಅನಾಮಯವಾಗಿಹ ಏಕರಸವುಳ್ಳ ಸುಖ, ಅಖಂಡಿತ ಘನ ಪೂರ್ಣವಪ್ಪ ಮಹಾಲಿಂಗವಿರುವಲ್ಲಿ, ಅಲ್ಲಿ ಅರ್ಪಿಸುವ ಪದಾರ್ಥವುಂಟೆ? ಅರ್ಪಿಸುವ ಆಭಾಸ ರೂಪ ಜೀವನುಂಟೆ? ಅರ್ಪಣ ಮಾಡಿಕೊಳ್ಳುವ ದೇವನುಂಟೆ? ತ್ರಿಪುಟಿಗಿಂಬಿಲ್ಲದಿರುವಲ್ಲಿ ಅರ್ಪಣ ಅರ್ಪಿತ ಎಂಬ ಭಾವರೂಪ ಭ್ರಮಕ್ಕಿಂಬುಂಟೆ? ಪದರ್ಥಗಳಾದರೂ ಉಂಟೆ? ಇಲ್ಲದ ಪದಾರ್ಥವು ಇಲ್ಲ, ಇಲ್ಲದ ಭಕ್ತನು ಇಲ್ಲ, ಇಲ್ಲವಾಗಿರುವದರಿಂದ ಈ ಅರ್ಪಿಸುವ ಭಾವ, ಲಿಂಗ ತಿಳಿಯದ ಅಜ್ಞರ ಭಾವ, ತತ್ವಜ್ಞರು ಭಾವಕ್ಕಗಮ್ಯರು, ಅಲ್ಲಿ ಭಾವವೆಂಬುದು ಭ್ರಮೆಯಾಗಿಹುದರಿಂದ ತತ್ವವರಿತವರ ಅರಿವು ಅಲ್ಲ, ಇರುವು ಅಲ್ಲ.

ತತ್ವಜ್ಞರಾದ ಶರಣರ ದೃಷ್ಟಿ ಅರ್ಪಿತ ಮಾಡದೆ, ಅನರ್ಪಿತ ಹೊದ್ದದೆ ಇದ್ದ ನಿಷ್ಕಳಂಕ ದೃಷ್ಟಿ ನಿಜೈಕ್ಯದ ನಿಲುವುಳ್ಳ ನಿಜಾನುಭವಿಗಳು ಆದುದರಿಂದ ಅರ್ಪಿಸುವ ಬೇಧ ತಿಳಿದ ಮಹಾಂತರೆಂದು ಹೇಳಿಹರು. ಅದಕ್ಕಾಗಿ ಪಂಚೇಂದ್ರಿಯ ಮುಖದಲ್ಲಿ ಅಲ್ಲಲ್ಲಿ ತಾಗಿದ ಸುಖವ ಸುಖಿಸಿ ಲಿಂಗಾರ್ಪಿತವೆಂಬರು ಅದು ಲಿಂಗಾರ್ಪಿತವಲ್ಲವೆಂದು ಲಿಂಗದ ಘನವೆಂದು ಎಚ್ಚರ ಮಾಡಿಹರು.

ಅರ್ಪಿತ ಮಾಡಬಾರದು, ಅರ್ಪಿತ ಮಾಡದೆ ಇರಬಾರದು, ಇದು ಮಾಡಿ ಮಾಡದಂತಿರುವ ಗುಟ್ಟು, ಇದು ನಿಸ್ಸಂಗತ್ವ ದಿರುವುಳ್ಳ ಗುಟ್ಟು. ನಿರಾಲಂಬನಾಗಿಹ

ಗುಟ್ಟು, ಈ ರಹಸ್ಯವರಿತವರೆ ಶರಣರು. ಶರಣನೆಂದರೆ ಅಪ್ರಮಾಣನು ಅಗಮ್ಯನು, ಏಕೆಂದರೆ ದೇಹವುಳ್ಳವನಾಗಿ ಕಂಡರು ನಿರ್ದೇಹಿ, ಕಲ್ಪಿತ ಪುರುಷನಾಗಿ ಕಂಡರೂ ಅಕಲ್ಪಿತನು, ಅವಯವವುಳ್ಳವನಾಗಿ ಕಂಡರೂ ನಿರವಯನು ಇಂದ್ರಿಯಂಗಳುಳ್ಳವನಾಗಿ ಕಂಡರೂ ಅತೀಂದ್ರಿಯ. ಗಮನಾಗಮನ ವುಳ್ಳವನಾಗಿ ಕಂಡರೂ ನಿರ್ಗಮನಿ, ಹಸಿವು ತೃಷೆವುಳ್ಳವನಾಗಿ ಕಂಡರು ನಿತ್ಯ ತೃಪ್ತನು. ಒಡಲುಳ್ಳವನಾಗಿ ಕಂಡರೂ ನಿರುಪಾಧಿಯು. ಚತುರ್ವರ್ಣಾಶ್ರಮದವನಾಗಿ ಕಂಡರೂ ನಿರಾಲಂಬನು ನಿಸ್ಸಂಗಿಯಾಗಿಹ ತತ್ತ್ವವೇತ್ತ. ತತ್ತ್ವವೇತ್ತ ನೆಂಬುದು ಅರ್ಪಿತ ಮಾಡದೆ ಅನರ್ಪಿತವ ಮಾಡದೆ ಇರುವ ಮಹಾಜ್ಞಾನಿ. ಈ ಮಹಾನುಭವಿಗೆ ಅರ್ಪಿಸುವ ಅರ್ಪಿಸದಿರವ ಅನುವು ಚೆನ್ನಾಗಿ ವೇದ್ಯವಾಗಿದೆ. ಈ ಮಹಾಂತನದು ದಿವ್ಯದೃಷ್ಠಿಯುಳ್ಳದ್ದಾದುದರಿಂದ ಪಂಚೇಂದ್ರಿಯಂಗಳು ಇಲ್ಲವಾಗಿವೆ. ಅವುಗಳಿಗೆ ತಾಗಿದ ಪಂಚ ವಿಷಯಗಳು ಇಲ್ಲವಾಗಿವೆ. ಇಲ್ಲದವು ಇಲ್ಲವಾಗಿರುವಲ್ಲಿ ಅವುಗಳಿಂದ ತಾಗಿದ ಸುಖವಾದರೂ ನಿಜವೆ? ಅದು ನಿಜಸುಖವಾಗಬಹುದೇ?

ಶ್ರೀಗುರು ಕಾರುಣ್ಯ ತಿಳಿಯದೆ ಇಷ್ಟಲಿಂಗ ಕೊಟ್ಟಂತಾಗಿದೆ, ಕೊಂಡಂತಾಗಿದೆ. ಇಂದೆನ್ನ ಗುರು ಅನಿಮಿಷಂಗೆ ಲಿಂಗ ಕೊಟ್ಟೆನೆಂಬ ಸೂತಕ ಬೇಡ. ಅಂದು ಅನಿಮಿಷನು ನಿನ್ನ ಕೈಯಲ್ಲಿದ್ದುದ ತಕ್ಕೊಂಡನೆಂಬ ಸಂಕಲ್ಪಬೇಡ. ಹಿಂದು ಮುಂದೆಂಬ ಸಂದಳಿದು ನಿಜದಲ್ಲಿ ಭರಿತನಾದ ಬಳಿಕ ಕೊಡಲುಂಟೆ ಕೊಳಲುಂಟೆ ಹೇಳಾ, ಹಿಡಿವಡೆ ಸಿಕ್ಕದು. ಕೊಡುವುಡೆ ಹೋಗದು, ಎಡೆಯಾಟದ ವ್ಯವಹಾರಕ್ಕೆ ಬಾರದು ನೋಡಾ, ರೂಪಿಸಿ ಸಂಚವ ಕೆಡಿಸಿ ನಿರೂಪ ಸಯವಾಯಿತ್ತು ನಿನಗೆ. ಗುಹೇಶ್ವರನೆಂಬ ಲಿಂಗವ ನಿನಗಿನ್ನು ಹೊಸದಾಗಿ ಕೊಡಲುಂಟೆ ಹೇಳಾ ಸಂಗನಬಸವಣ್ಣ.

ಶ್ರೀಗುರು ಕರುಣಿಸಿದ ಲಿಂಗ ಕೊಡಕೊಳ್ಳುವ ಎಡೆಯಾಟದ ವ್ಯವಹಾರಕ್ಕೆ ಸಿಗದ ಲಿಂಗ, ತನ್ನಿಂದ ತನ್ನ ಅರಿದರಿದು, ನೋಡುವ ಸಂಜ್ಞೆ, ಇದು ಶಬ್ದಮುಗ್ಧ ನಿಲುವುಳ್ಳ ಸಂಜ್ಞೆ, ತಾನು ಎಂದೆಂದೂ ಮೌನ ಮುದ್ರೆ ಧರಿಸಿದ ಸಂಜ್ಞೆ, ಇದು ಲಿಂಗವರಿತವರ ಸ್ವರೂಪ ಸಂಜ್ಞೆ. ತಾನಾರೆಂದರಿತವರ ಇರುವಿನ ಸಂಜ್ಞೆ, ಅರಸುವವರ ನಿಲುವಿಗೆ ಮೀರಿದ ಸಂಜ್ಞೆ, ಇದು ತೆರಹಿಲ್ಲದ ಘನದ ಸಂಜ್ಞೆ, ಇದು ನುಡಿಗೂ ನಡೆಗೂ ಎಡೆಗೂಡದ ಸಂಜ್ಞೆಯಾದುದರಿಂದ, ಕ್ರಿಯಾವಂತರಿಗೂ, ಮುಗ್ಧ ಭಾವಿಕರಿಗೂ ಗುರು ಕರುಣಿಸಿದ ಸಂಜ್ಞೆ, ಲಿಂಗದ ಯತಾರ್ಥ ಜ್ಞಾನ ವೇದ್ಯವಾಗುವದು ಹೇಗೆ ಸಾಧ್ಯ, ಲಿಂಗದ ಯತಾರ್ಥ ಅರಿವು ಇಲ್ಲದ್ದರಿಂದ ಅರ್ಪಿತ ಮಾಡಿದರೂ ಅದರ ಘನವ ತಿಳಿಯದಂತಾದರು. ಅರ್ಪಿತ ಮಾಡದೆ ಇರುವ ಘನವು ತಿಳಿಯದಂತಾದರು. ಇದು ಕಾರಣ ಅರ್ಪಿತ ರೌರವ ನರಕವೆಂದಿತ್ತು ಗುರುವಚನ, ಅನರ್ಪಿತ ರೌರವ ನರಕವೆಂದಿತ್ತು ಗುರುವಚನವೆಂದು ಹೇಳಿದೆ.

ಲಿಂಗದಿರುವೆ ತನ್ನದಾದ ಇರವು ಇದು ಸಕಲರ ಇರವು, ವಿಶ್ವದ ಇರವು ತಾನಾರೆಂದರಿತವರ ಇರುವು. ಅರಿವು ಅರುವಿನ ಇರುವು. ಲಿಂಗ, ಲಿಂಗವೆಂದರೆ ತಾನು, ಇದು ಅರ್ಪಿಸುವ ಭೇದವುಳ್ಳ ಶರಣರ ಘನತ್ವ, ಶರಣರ ಘನತ್ವವೆಂಬದು

ಇದ್ದ ಲಿಂಗ ತತ್ವವರಿತು, ಇಲ್ಲದುದು ಇಲ್ಲಾದುದೆ ಅರ್ಪಿತ ಮಾಡಿದ ಘನತ್ವ, ಲಿಂಗ ತಾನೆ, ತನ್ನ ಹೊರ್ತು ಅನ್ಯವಾವುದು ಇಲ್ಲದಿರುವಾಗ ಅಲ್ಲಿ ಅರ್ಪಿಸಿಕೊಳ್ಳುವ ತನಗಿಂತನ್ಯವಾದ ಲಿಂಗಯ್ಯನಿಲ್ಲ. ಅರ್ಪಿಸುವ ಪದಾರ್ಥವಿಲ್ಲ, ಅರ್ಪಣ ಮಾಡುವ ಭಕ್ತನಿಲ್ಲ, ತಾನೊಂದೆ ಅಖಂಡಿತ ಘನ ಪೂರ್ಣವಪ್ಪ, ತನ್ನಿರುವೆ ಅರುವೆಂದರಿದ ಘನವಂತನಿಗೆ ಅರ್ಪಿತ ಮಾಡುವದೆ ಪುಸಿಯಾಗಿ, ತಾನೊಂದೆ ಸ್ವತಃ ಸಿದ್ಧ ಬೆಳಗುಳ್ಳ ಬೆಳಗಾಗಿಹ ಸ್ವಯಂ ಜ್ಯೋತಿಯಾಗಿ ನಿಂದ ಸಯ ನಿಲುವು. ತನ್ನಿಂದ ತನಗದು ವೇದ್ಯವಾದುದು. ಅನರ್ಪಿತ ಹೊದ್ದದೆ ಇದ್ದ ಘನಗಂಭೀರ ಸುಖ.

ಈ ಘನ ಗಂಭೀರದೊಳಗೆ ಘನಕ್ಕೆ ಘನವಾದ ತನ್ನಂ ತನ್ನಿಂದ ತನಗದು ವೇದ್ಯವಾದುದರಿಂದ ಅರ್ಪಿಸುವ ಭೇದವುಳ್ಳ ಶರಣನೆಂದು ಹೇಳಿಹರು.

ಶರಣರೆಂಬ ಪದ, ಅರ್ಪಿತ ಮಾಡದೆ, ಅನರ್ಪಿತ ಹೊದ್ದದೆ ಅರ್ಪಿಸಿದ ಪದ, ಇದುವೆ ಶರಣರ ಅನುಪಮ ನಿಲವು, ಶರಣರ ಅರ್ಪಿತ ಮಾಡುವ ರಹಸ್ಯ. ಭಾವಕ್ಕೂ ನಿಲುಕದ್ದು, ಅರ್ಪಿತ ಮಾಡದೆ ಇದ್ದುದು. ಚಿದಹಮ್ಮಿಗೂ ನಿಲುಕದ್ದು, ಶರಣರು ದಾಸೋಹ ಭಾವಕ್ಕೂ ನಿಲುಕದವರು, ಇತ್ತ ಚಿತ್ತ ಸ್ವರೂಪವರಿಯಹೋಗಿ ಅನುಪಮರಾಗಿಹುದು ಅವರ ನಿಲುವು, ಅವರದು ತನ್ನಿಂದ ತನ್ನ ಕಂಡ ನಿಲುವು ಆದುದರಿಂದ ಲಿಂಗವರಿತು, ಲಿಂಗಕ್ಕೆ ಲಿಂಗವಾಗಿಹ ನಿಲುವು ಶರಣರ ನಿಲವು ಎಂದು ಹೇಳಿಹರು.

**ವಚನ 14**

**ಲಿಂಗದ ಘನವನರಿದೆ ನೆಂದಡೆ ಅದೆ ಕುಚಿತ್ತ.**
**ಜಂಗಮದ ಘನವನರಿದೆ ನೆಂದಡೆ ಅದೆ ಕುಚಿತ್ತ.**
**ಪ್ರಸಾದದ ಘನವನರಿದೆ ನೆಂದಡೆ ಅದೆ ಕುಚಿತ್ತ,**
**ಗುರು, ಲಿಂಗ, ಜಂಗಮದಲೊದಗಿದ ಪ್ರಸಾದವ**
**ಘನಕ್ಕೆ ಘನ ಮನವೇದ್ಯವೆಂದು ತೋರಿದ ನೆನಗೆ**
**ಶ್ರೀಗುರು ಕೂಡಲ ಚೆನ್ನ ಸಂಗಯ್ಯನ ಶರಣಂಗಲ್ಲದಿಲ್ಲ. ॥ 440 ॥**

**ತಾತ್ಪರ್ಯ:** ಲಿಂಗದ ಘನವ ನರಿದೆನೆಂದಡೆ ಅದೆ ಕುಚಿತ್ತ: ಎಲೆ ಚಿತ್ತವೆ? ನೀನು ಲಿಂಗದ ಘನವ ನರಿದೆನೆಂದಡೆ, ಅದೆ ನಿನ್ನ ತಪ್ಪು ತಿಳುವಳಿಕೆ, ಅದೆ ನಿನ್ನ ದೋಷಜ್ಞಾನ.

ಎಲೆ ಚಿತ್ತವೆ, ಲಿಂಗವರಿಯಲು ನೀನು ಲಿಂಗವನ್ನು ಏನೆಂದು ತಿಳಿದು ಅರಿದೆ, ಓ ಚಿತ್ತವೆ ನೀನು ಚಿಂತೆ ಮಾಡುವ ಚಿತ್ತಾ, ಲಿಂಗವೆಂಬುದು ಅಚಿಂತ್ಯ ಘನ. ಈ ಘನ ತತ್ವವರಿಯಲು, ಆ ತತ್ವವಾದ ನಿನಗದೆಂತು ಸಾಧ್ಯ. ಚಿಂತನೆಗೆ ನಿಲುಕದ, ಏಕ ಏವ ಅದ್ವಿತೀಯ ಘನನೆನ್ನಲು ನಿಲುಕದ, ಅಚಿಂತ್ಯ ದೇವನನ್ನು ಅದೆಂತು ಚಿಂತನ ಮಾಡಿದೆ? ಲಕ್ಷಣ, ಲಕ್ಷ್ಯಗಳಿಗೆ ನಿಲುಕದ ಅಲಕ್ಷ್ಯ ದೇವನನ್ನು ಅದಾವ ಲಕ್ಷಣವುಳ್ಳವನಾಗಿ ಅರಿದೆ, ಚಿಂತನೆಗೆಡೆಗೊಡದ ಅಚಿಂತ್ಯತತ್ವ ಅದಾವ ಚಿಂತನ ಮಾಡಿ ನೀನು ನಿಶ್ಚಿಂತನಾದೆ.

ಲಿಂಗ ಚಿಂತನ ಮಾಡಿ ಲಿಂಗವನ್ನು ಅರಿತೆನೆಂದರೆ ಅದು ಲಿಂಗ, ಲಿಂಗ ಎಂಬ ಚಿಂತನೆಗೆ ನಿಲುಕದ ಘನ ತತ್ವವಾಗಿಹುದು. ಅಂಗದ ಚಿಂತನೆ ಇದು ಮರುವಿನ ಚಿಂತನೆ, ಅರಿಯದ ಚಿಂತನೆ, ತನ್ನನ್ನು ತಿಳಿಯದ ಅಜ್ಞಾನ, ತನಗಿಂತನ್ಯವಾದ ದೇಹಾದಿಗಳು ಅವುಗಳ ಧರ್ಮಗಳು ತಾನೆಂದು ತಿಳಿದ ಚಿಂತನೆ. ಕಲ್ಪಿತನಾಗಿ ಸಂಕಲ್ಪ ವಿಕಲ್ಪಕ್ಕೊಳಪಟ್ಟ ಚಿಂತನೆ. ಈ ಚಿಂತನದಿಂದ ಲಿಂಗದ ಘನವರಿಯಲು ಹೇಗೆ ಸಾಧ್ಯ. ಕತ್ತಲು ಎಂದಾದರೂ ಪ್ರಕಾಶವರಿಯಬಹುದೆ? ಹಾಗೆ ಅಜ್ಞಾನವು ಅರುವಿನ ಅರುವು ಇದ್ದಂತಿರುವ ಘನವ ಅದೆಂತು ಅರಿವುದು.

ಲಿಂಗಾಂಗ ಸಮರಸ ಚಿಂತನೆಯಿಂದಲಾದರೂ ಲಿಂಗ ಘನವರಿಯಲು ಸಾಧ್ಯವೆ? ಅಚಿಂತ್ಯ ತತ್ವ ಚಿಂತನ ಮಾಡುವುದದೆಂತು, ಲಿಂಗದ ಘನವರಿಯಲು ಚಿಂತನ ಮಾಡುವದರಿಂದ ಅಸಾಧ್ಯವು ಏಕೆಂದರೆ ಇವರು ಲಿಂಗವೆ ತಿಳಿಯಲು ಹೋದವರಲ್ಲ, ಇವರ ದೃಷ್ಠಿಯಲಿ ಲಿಂಗ, ಚಿಂತನೆಗೆ ನಿಲುಕುವ ಅತತ್ವವಾಗಿ ಕಂಡು ಅದನ್ನು ಲಿಂಗ, ಲಿಂಗ, ಎಂದು ಚಿಂತನ ಮಾಡಿದರು. ಲಿಂಗ, ಅಂಗ ಒಂದೆ ಎಂದು ಚಿಂತನೆ ಮಾಡಿದರು. ಅಂಗವು ಲಿಂಗವೆ ಲಿಂಗದ ಹೊರ್ತು ಅನ್ಯವಾವುದು, ಇಲ್ಲವೆಂದು, ಪೂರ್ಣ ಅಖಂಡ ಸಚ್ಚಿದಾನಂದವೆಂದು ಭರಿತ ಭಾವದವರಾದರು, ನಿರಂತರ ಚಿಂತನ ಮಾಡಿದರು, ಮಾಡಿದರೂ ಚಿಂತನದತ್ತತ್ತ ಭಾವದತ್ತತ್ತವಾದುದು ತಿಳಿಯಲಿಲ್ಲ. "ಹಿಡಿವ ಕೈಯ ಮೇಲೆ ಕತ್ತಲೆಯಯ್ಯ, ನೋಡುವ ಕಂಗಳ ಮೇಲೆ ಕತ್ತಲೆಯಯ್ಯ ನೆನೆವ ಮನದ ಮೇಲೆ ಕತ್ತಲೆಯಯ್ಯ ಕತ್ತಲೆ ಎಂಬುದು ಇತ್ತಲೆಯಯ್ಯ, ಗುಹೇಶ್ವರನೆಂಬುದು ಅತ್ತಲೆಯಯ್ಯ."

ಎಲೆ ಚಿತ್ತವೆ ಲಿಂಗವದು ಅಪ್ರಮಾಣ ಅಗಮ್ಯವು. ನೀನು ಪ್ರಮಾಣವು ಗಮ್ಯವು. ಲಿಂಗವದು, ವಾಙ್ಮನೋತೀತವು. ನೀನು ವಾಕ್, ಮನ, ಬುದ್ಧಿಗೊಳಪಟ್ಟುದು. ಲಿಂಗವದು, ತೋರದಡಗದ ಘನ. ಎಲೆ ಚಿತ್ತವೆ, ನೀನು ತೋರುವವ ಅವಿಚಾರ ಕಾಲದಲ್ಲಿ ತೋಡಿಣವವ ಕಾಲದಲ್ಲಿ ಇಲ್ಲವಾಗುವವ. ಲಿಂಗ, ಅಂದು ಇಂದು ಎಂದೆಂದೂ ಇದ್ದಂತಿರುವ ಅಭಾದಿತ ಘನವು. ಅವಿಕಾರಿ, ಅಕಲ್ಪತೆ, ಅಚಿಂತ್ಯ.

ಎಲೆ ಚಿಂತನ ಮಾಡುವ ಚಿತ್ತಾ, ನೀನು ಬಾಧಿತ. ವಿಕಾರಿ, ಕಲ್ಪಿತ ಚಿಂತನದಿಂದುಕ್ತವಾದುದು. ಅದನ್ನು ಅರಿತ ಬಗೆ ಆವುದು.

ಕಲ್ಪಿತವು ಅಕಲ್ಪಿತವ ಅರಿಯಬಹುದೆ? ಚಿಂತನವು ಅಚಿಂತ್ಯ ಘನವಾಗಬಹುದೆ? ವಿಕಾರವು ನಿರ್ವಿಕಾರವಾಗಬಹುದೆ? ನಾಶವು ಅವಿನಾಶಿಯಾಗಬಹುದೆ? ಅತತ್ವವು ತತ್ವವಾಗಬಹುದೆ? ಮರವು ಅರುವ ಅರಿಯಬಹುದೆ? ಅನಾತ್ಮವು ಆತ್ಮನ ಅರಿಯಬಹುದೆ? ನುಡಿಯು ನಿಃಶಬ್ದ ಘನನಾಗಬಹುದೆ?

ಮರವರುವಿಗೆ ಮೀರಿದ ಘನವನ್ನು ನೀನು ಅದಾವ ಅರುವಾಗಿ ಅರಿದೆ! ಎಲೆ ಚಿತ್ತವೆ! ನೀನು ಅನಾತ್ಮವಾಗಿಹ ನಾಮ ರೂಪಂಗಳ ತ್ಯಜಿಸಿ ಲಿಂಗ, ಲಿಂಗವೆಂದು ಚಿಂತಿಸಿ ನಿಶ್ಚಿಂತವಾಗಿಹೆನೆಂದಲ್ಲಿ ಅದು ನಿಜದ ನಿಲುವಲ್ಲ ಅದು ಆಭಾಸದ ನಿಲುವು. ಕಲ್ಪಿತದ ನಿಲುವಲ್ಲ, ಸಚ್ಚಿದಾನಂದ ನಿತ್ಯ ಪೂರ್ಣ ಅಖಂಡ ಅಸಂಗ ನಾನೆಂಬ

ಚಿಂತನೆ ಅಭಾಸ  ಚಿಂತನೆ. ಕಲ್ಪಿತ ಪುರುಷನ ಚಿಂತನೆ, ಅಂಗನ ಚಿಂತನೆ. ಇದು ಕಾರಣ ಇದು ಅಕಲ್ಪಿತದ ಇರುವು ಆಗದು, ಅಚಿಂತ್ಯದ ಇರುವು ಆಗದ್ದರಿಂದ ಲಿಂಗದ ಆಭಾಸವನ್ನೆ ಕಂಡು, ಲಿಂಗವರಿದೆನೆಂದರೆ ಅದು ಲಿಂಗದ ಯತಾರ್ಥಜ್ಞಾನವು ಅಲ್ಲ. ಅದರ ಇರುವು ಆಗದ್ದರಿಂದ ಲಿಂಗದ ಘನವನರಿದೆ ನೆಂದಡೆ ಅದೆ ಕುಚಿತ್ತವೆಂದು ಹೇಳಿಹರು.

ಜಂಗಮದ ಘನವನರಿದೆ ನೆಂದಡೆ ಅದೆ ಕುಚಿತ್ತ: ಜಂಗಮದ ಘನವೆಂಬುದು ಮರವರುವಿಗೆ ಮೀರಿದ ಘನ ಅರಿದರುಹಿಸಿ ಕೊಂಬುದಕ್ಕೂ ಮೀರಿದ ಘನ ನಿಸ್ಸಂಗ ಜಂಗಮ, ನಿರಾಲಂಬ ಜಂಗಮ, ನಿರ್ಲಿಖಿತ ಜಂಗಮ, ನಿರ್ನಾಮ ಜಂಗಮ, ನಿಜೈಕ್ಯ ಜಂಗಮ, ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗ, ಉಪಮೆಗೆ ತಂದು, ಎರಡೆನ್ನಬಹುದೆ? ಈ ಘನ ಜಂಗಮ ತತ್ವವರಿತು ತತ್ವನಾಗಿಹ ಅನುಪಮ ಜಂಗಮ.

ಎಲೆ ಚಿತ್ತವೆ, ನೀನು ಜಂಗಮ ಘನವರಿಯಲು ಏನಾಗಿ ಅರಿತೆ? ನೀನು ಚಿಂತನದಿಂದುಕ್ತವಾದ ಚಿತ್ತ. ಅನಾತ್ಮ ಚಿಂತನವುಳ್ಳವನಾಗಿರುವ ಚಿತ್ತಾ ಭಾವಕ್ಕಗಮ್ಯವಾಗಿಹ ಜಂಗಮ ಘನವ ಹೇಗೆ ಅರಿಯುವಿ. ಮರುವಿನ ಭಾವವ ತ್ಯಜಿಸಿ, ಅರುವಿನ ಭಾವವುಳ್ಳವನಾಗಿ ಅರಿಯ ಹೋದರೂ ಅರುವಿನ ಅರುವಾಗಿಹ ಘನವನ್ನು ನೀನು ಹೇಗೆ ಅರಿಯುವಿ.

ಅರಿದರುಹಿಸಿಕೊಂಬುದಕ್ಕೂ ಮೀರಿದ ಘನ ಜಂಗಮವನ್ನು ಎಲೆ ಚಿತ್ತವೆ ನೀನು ಅರಿತ ಬಗೆ ಆವುದು, ಜಂಗಮ ಘನವದು, ಲಿಂಗ ಲಿಂಗ ಎಂಬವಂಗೆ ಮೀರಿದ ಘನ. ಜಂಗಮ, ಜಂಗಮ ಎಂಬುವಂಗೆ ಮೀರಿದ ಘನ. ಈ ಘನ ತತ್ವವನ್ನು ನೀನು ಅದನ್ನು ದೃಶ್ಯ ದೃಕ್ ಎಂಬ ಅರುವಿನವನಾಗಿ ಅರಿಯ ಹೋದರೂ ಅದು ತಿಳಿಸಿಕೊಳ್ಳುವ ದೃಶ್ಯರೂಪಿ ಒಂದು ವ್ಯಕ್ತಿಯಾಗಿಲ್ಲ. ದೇಹಾದಿಗಳೂ ಆಗಿಲ್ಲ ದೇಹಾದಿಗಳ ಕಾರ್ಯವೂ ಆಗಿಲ್ಲ, ಕಾರಣವೂ ಆಗಿಲ್ಲ. ಅದು ಅರಿಯುವ ದೃಶ್ಯವೆಂದು ದೃಕ್ ಎಂದು ನಿಸ್ಸಂಗ ನಿರಾಲಂಬವೆಂದು ಜಡ ಅಲ್ಲ ಚೇತನ, ಆತ್ಮ ಎಂದು ಅರಿತರೂ ಅದು ಸರಿಯಾದ ಜ್ಞಾನವಾಗದು. ಲಿಂಗವರಿತು, ಅನುಪಮನಾಗಿಹ ಘನವು ಅದು ಶಬ್ದವೇದಿಗಳಿಗೆ ನಿಲುಕದು. ಇದಲ್ಲದೆ ಜಂಗಮ ಘನವು ದೇಹಿಗೆ ದೇಹಿಯಾಗಿರ್ಪ ಘನವು ಅರುವಿಂಗರುವಾಗಿಹ ಘನವು ಅದನ್ನು ಅರುವಿನಿಂದ ಅರಿಯಹೋದರೂ, ಎಲೆ ಚಿತ್ತವೆ, ನಿನಗದು ಅಸಾಧ್ಯವು ಏಕೆಂದರೆ ಜಂಗಮನಂಥ ಜಂಗಮ, ಸಮಾನವುಳ್ಳ ಅರುವು ಇಲ್ಲ. ಇಲ್ಲದ್ದು ಇಲ್ಲವೆ ಇಲ್ಲ, ಇಲ್ಲದಿರುವಾಗ ಎಲೆ ಚಿತ್ತವೆ ನೀನು ಇಲ್ಲದುದು. ನಿನ್ನ ಚಿಂತನವು ಇಲ್ಲದ್ದು ಆಗಿರುವಲ್ಲಿ ಇದ್ದ ಘನಕ್ಕೆ ಘನವಾಗಿಹ ಜಂಗಮ ತತ್ವವು ಅಬಾಧಿತವು, ನೀನು ಬಾಧಿತವುವಾಗಿರುವಲ್ಲಿ ಅದನ್ನು ಅರಿತ ಬಗೆ ಆವುದು.

ಎಲೆ ಚಿತ್ತವೆ, ನೀನು ಮರವರುವುಳ್ಳದ್ದು. ಜಂಗಮ ಘನವು ಮರವರುವಿಗೆ ಮೀರಿದುದು. ಒಮ್ಮೆ ಮರವಿನಿಂದುಕ್ತನಾಗುವಿ, ಮತ್ತೊಮ್ಮೆ ಅರುವಿನಿಂದುಕ್ತವಗುವಿ. ನೀನು ವಿಕಾರಿ, ಇದ್ದಂತೆ ಇರುವದಲ್ಲ, ಜಂಗಮ ಘನವು ಸಮಸ್ವರೂಪವು ಎಲೆ

ಚಿತ್ತವೆ, ನೀನು ಮರವಿನಿಂದುಕ್ತವಾಗಿದ್ದರೂ, ಅಂಗ ಚಿಂತನೆಯುಳ್ಳದ್ದಾದರೂ ಘನ ಜಂಗಮವು ಇದ್ದಂತೆ ಇದೆ. ನೀನು ಅರುವುಳ್ಳದ್ದಾಗಿ ಲಿಂಗ ಚಿಂತನೆಯಿಂದುಕ್ತವಾದರೂ ಇದ್ದಂತೆ ಇದೆ.

ಜಂಗಮ ಘನಕ್ಕೆ ಸಮತೆಯ ಸಯವಾಗಿದೆ. ಎಲೆ ಚಿತ್ತವೆ, ನಿನ್ನದು, ವಿಷಮತೆಯು ಸಯವಾಗಿದೆ. ನಿನ್ನದು ಹೆತ್ತರಿವು, ಅದು ಸ್ವಯಂ ಅರಿವು. ಎಲೆ ಚಿತ್ತವೆ ನೀನು ಕಲ್ಪಿತವು ಜಂಗಮ ಘನವು ಅಕಲ್ಪಿತವು. ಎಲೆ ಚಿತ್ತವೆ ನೀನು ಎರಡೊಂದಾದುದು ಜಂಗಮ ಘನವು ಎರಡು ಒಂದಾಗದ ಘನವು. ಎಲೆ ಚಿತ್ತವೆ ನೀನು ಎರಡು ಆಗುವೆ ಒಂದು ಆಗುವೆ ಘನವು ಎರಡು ಆಗದುದು, ಒಂದೆಂಬುದು ಆಗದುದು. ಜಂಗಮ ದೃಷ್ಠಿಯಲ್ಲಿ ಒಂದೆರಡೆನ್ನಲು ಶಬ್ದಕ್ಕೆ ತೆರಹಿಲ್ಲ. ಎಲೆ ಚಿತ್ತವೆ ನೀನು ಆದುದು, ಹೋದುದು. ಜಂಗಮ ಘನವು ಆದುದು ಅರಿಯ ಹೋದುದು ಅರಿಯ. ಈ ಜಂಗಮ ಘನವ ನೀನು ಅರಿತುದು ಸರಿಯಾದ ಜ್ಞಾನವಾಗದು. ಇದು ಕಾರಣ ಜಂಗಮ ಘನವನರಿದೆನೆಂಬುದು ಕುಚಿತ್ತವೆಂದು ಹೇಳಿಹರು.

ಪ್ರಸಾದದ ಘನವನರಿದೆನೆಂದಡೆ ಅದೆ ಕುಚಿತ್ತು:

ಎಲೆ ಚಿತ್ತವೆ, ತೆರಹಿಲ್ಲದ ಜ್ಞಾನ ಘನವೆಂಬುದು ಪ್ರಸಾದ. ಈ ಪ್ರಸಾದದ ಘನವ ನೀನು ಅರಿತ ಬಗೆ ಆವುದು? ತಾನೆ ತಾನಾದ ಮಹದರಿವು ಬಯಲು ಬಯಲೆ. ನಿಸ್ಸೀಮವು ಸೀಮಿತದಿಂದುಕ್ತವಾಗಬಹುದೆ? ನಿಸ್ಸೀಮವೆಂಬುದು ಅಖಂಡಿತ ಘನ ಪರಿಪೂರ್ಣವಪ್ಪ ತನ್ನಿರವು ಆಗಿಹ ಅರುವು ಇದು ಅನುತವು.

ಎಲೆ ಚಿತ್ತವೆ, ನೀನು ಆದಿ ಅಂತ್ಯವುಳ್ಳುದು, ಚಿಂತನದಿಂದುಕ್ತವಾದ ಚಿತ್ತವೆ, ನಿನ್ನ ಚಿಂತನವು ಆರಂಭವಾಗುತ್ತದೆ, ಮುಕ್ತಾಯವಾಗುತ್ತದೆ, ನಿನ್ನದು ಅವಸ್ಥಾದೆಶೆ, ಒಮ್ಮೆ ಅಜ್ಞಾನದೆಶೆ. ಒಮ್ಮೆ ಜ್ಞಾನ ದೆಶೆ, ಒಮ್ಮೆ ಬದ್ಧ ದೆಶೆ, ಒಮ್ಮೆ ಮುಕ್ತದೆಶೆ ಆಗುವಿ, ಒಂದಾದಲ್ಲಿ ಇನ್ನೊಂದು ಆಗುವುದಿಲ್ಲ, ನೀನು ಸ್ಥಿತಿ ಗತಿಯಿಂದುಕ್ತವಾದುದು.

ಸ್ಥಿತಿ ಗತಿಗೆ ಮೀರಿದ ಮನ ಮೇರೆದಪ್ಪಿದ ಅರಿಯದರುವಿನ ಘನವ ಅದನೆಂತು ಅರಿವುದು. ಅರಿಯದರುವು ಎಂಬುದು ಅರುವು ಅರುವೆ. ಅದು ಅರಿಸಿಕೊಳ್ಳುವದಲ್ಲ ಅರಿಯುವದಲ್ಲ. ತಾನೆ ತಾನಾದ ತೆರಹಿಲ್ಲದ ಜ್ಞಾನ ಘನ, ಆವಾವ ಮಾಯಿಕ ತತ್ವಕ್ಕಿಂಬುಕೊಡದ್ದರಿಂದ ಘನಕ್ಕೆ ಘನ.

ಎಲೆ ಚಿತ್ತವೆ, ಇದ್ದ ಮಹದರುವನ್ನು ನೀನು ಹೇಗೆ ಅರಿತೆ, ಇಲ್ಲದ ನೀನು ಇದ್ದ ಘನಕ್ಕೆ ಘನವಾದುದನ್ನು ಹೇಗೆ ಅರಿತೆ, ಪೂರ್ಣತೆ ಪೂರ್ಣವಾದುದರಲ್ಲಿ ನೀನು ಇರಲಾದರೂ ಇಂಬುಂಟೆ? ಇಂಬಿಲ್ಲದಿರುವಾಗ ನೀನು ಇದ್ದ ಬಗೆಯಾದರೂ ಹೇಗೆ? ಎಲೆ ಚಿತ್ತವೆ ನೀನು ಇಲ್ಲದವನಾಗಿದ್ದು, ಇದ್ದ ಪ್ರಸಾದದ ಘನವ ನರಿದೆನೆಂದಡೆ ಅದೆ ಕುಚಿತ್ತವೆಂದು ಹೇಳಿದರು.

ಗುರು, ಲಿಂಗ, ಜಂಗಮುದಲೊದಗಿದ ಪ್ರಸಾದವ ಘನಕ್ಕೆ ಘನ, ಮನವೇದ್ಯವೆಂದು ತೋರಿದನೆನಗೆ ಶ್ರೀಗುರು, ಕೂಡಲಚೆನ್ನಸಂಗಯ್ಯನ ಶರಣಂಗಲ್ಲದಿಲ್ಲ: ಎಲೆ ಚಿತ್ತವೆ, ಲಿಂಗ, ಜಂಗಮ, ಪ್ರಸಾದದ ಘನವರಿಯಲು, ಅದು

ನಿನ್ನ ಚಿಂತನೆಗೆ ನಿಲುಕದು. ನೀನು ಅಂಗನಾಗಿ ಅಂದರೆ ಕಲ್ಪಿತ ಪುರುಷನಾಗಿ ಭಾವುಕನಾಗಿ ಅರುವುಳ್ಳವನಾಗಿ ಅರಿಸಿದರೂ ಚಿಂತಿಸಿದರೂ ನಿನಗೆ ಅಸಾಧ್ಯ.

ಎಲೆ ಚಿತ್ತಾ ನಿನ್ನ ಮನಕ್ಕೆ ವೇದ್ಯವಾಗಬೇಕಾದರೆ, ಗುರು, ಲಿಂಗ, ಜಂಗಮದ ಅಸೀಮ ಕೃಪೆಯಿಂದ ದೊರೆತ ಜ್ಞಾನವಾಗಿರಬೇಕು. ಗುರು, ಲಿಂಗ, ಜಂಗಮವೆಂಬುದು ಬೇರೆ ಬೇರಲ್ಲ, ತ್ರಿವಿಧವಾಗಿ ಕಂಡರೂ ಒಂದೆ ಅರಿಯುದರುವಿನ ಘನ ಮಹಿಮೆಯಿಂದುಕ್ತವು, ಲಿಖಿತಕ್ಕೂ ಒಳಪಡದ ಘನ ಮಹಿಮೆಯುಳ್ಳದ್ದು. ಆದುದರಿಂದ ಗುರು, ಲಿಂಗ, ಜಂಗಮದಲೊದಗಿದ ಪ್ರಸಾದವದು ಮಹಾಜ್ಞಾನ ಪರಮಜ್ಞಾನ ಪರಮಾಮೃತ. ಮನಕ್ಕೆ ವೇದ್ಯವಾಗುವಂತೆ ತೋರಿದ ನೆನಗೆ ಶ್ರೀಗುರು, ಈ ಶ್ರೀ ಗುರು ಕೂಡಲಚೆನ್ನಸಂಗಯ್ಯನ ಶರಣಂಗಲ್ಲದಿಲ್ಲವೆಂದಿಹರು.

**ವಚನ 15**

**ಅಗ್ನಿ ಮುಟ್ಟಲು ತೃಣವಗ್ನಿಯಪ್ಪುದು ತಪ್ಪದಯ್ಯ,**
**ಗುರು ಪ್ರಸಾದ ಅಂಗ ಸೋಂಕಿದಲ್ಲಿ ಸರ್ವಾಂಗ ಗುರುವಪ್ಪುದು ತಪ್ಪದಯ್ಯ,**
**ಲಿಂಗ ಪ್ರಸಾದ ಮನ ಸೋಂಕಿದಲ್ಲಿ ಮನ ಲಿಂಗವಪ್ಪುದು ತಪ್ಪದಯ್ಯ,**
**ಜಂಗಮ ಪ್ರಸಾದ ಅರಿವು ಸೋಂಕಿದಲ್ಲಿ ಅಖಂಡಿತ**
**ಪ್ರಸನ್ನ ಪ್ರಸಾದವಪ್ಪುದು ತಪ್ಪದಯ್ಯ,**
**ಶಿವ ಶಿವಾ ಪ್ರಸಾದದ ಮಹಿಮೆಯ ನೇನೆಂದುಪಮಿಸುವೆ, ಪ್ರಸಾದವೆ ಗುರು,**
**ಪ್ರಸಾದವೆ ಲಿಂಗ, ಪ್ರಸಾದವೆ ಜಂಗಮ,**
**ಪ್ರಸಾದವೆ ಪರಾತ್ಪರ, ಪ್ರಸಾದವೆ ಪರಮಾಮೃತ,**
**ಪ್ರಸಾದವೆ ಪರಮಜ್ಞಾನ, ಪ್ರಸಾದವೆ ವಾಙ್ಮನೋತೀತ,**
**ಪ್ರಸಾದವೆ ನಿತ್ಯ ಪರಿಪೂರ್ಣ,**
**ಇಂತಪ್ಪ ಪ್ರಸಾದವ ಕಂಡು ಬದುಕಿದೆನಯ್ಯ ಉರಿಲಿಂಗ**
**ಪೆದ್ದಿ ಪ್ರಿಯ ವಿಶ್ವೇಶ್ವರಾ**

ತಾತ್ಪರ್ಯ: ಅಗ್ನಿ ಮುಟ್ಟಲು ತೃಣವಗ್ನಿಯಪ್ಪುದು ತಪ್ಪದಯ್ಯ, ಗುರು ಪ್ರಸಾದ ಅಂಗ ಸೋಂಕಿದಲ್ಲಿ ಸರ್ವಾಂಗ ಗುರುವಪ್ಪುದು ತಪ್ಪದಯ್ಯ: ಅಗ್ನಿ ಸ್ವಭಾವ, ತನ್ನ ಮುಟ್ಟಿದ ತೃಣವ ತನ್ನಂತೆ ಮಾಡುವ ಸಹಜತ್ವ, ಅಗ್ನಿಗೆ ಆವ ತೃಣವಾದಡೇನು, ಒಣಗಿದ್ದರೆ ಸಾಕು, ತನ್ನ ಮುಟ್ಟಿದವುಗಳಿಗೆಲ್ಲ ತನ್ನಂತೆ ಮಾಡುವ ಮಹಾನ್ ಸಮರ್ಥ ಶಕ್ತಿ. ಅಗ್ನಿ ಮುಟ್ಟದ ಮುನ್ನ ಕಾಷ್ಟಂಗಳು ಭಿನ್ನ ಭಿನ್ನವಾಗಿ ಕಂಡರೂ ಮುಟ್ಟಿದ ಬಳಿಕ ಅಗ್ನಿಯಾಗಿಪ್ಪವು ಹೇಗೋ ಹಾಗೆ ಗುರು ಪ್ರಸಾದ ಅಂಗಕ್ಕೆ ಸೋಂಕಿದ ಬಳಿಕ ಸರ್ವಾಂಗ ಗುರುವಪ್ಪುದು ತಪ್ಪದಯ್ಯ. ಗುರು ಪ್ರಸಾದ ಎಷ್ಟೋ ಅಂಗಗಳಿಗೆ ಪೂರ್ವದಲ್ಲಿ ಸೋಂಕಿದೆ, ಈಗಲೂ ಸೋಂಕುತ್ತಿದೆ, ಸೋಂಕಿದಲ್ಲಿ ಸರ್ವಾಂಗ ಗುರುಘನ ನೋಡಾ. ಎಂದು ನುಡಿದ ಮಹಾತ್ಮರ ಪ್ರಸಾದವಾಣಿ ನೋಡಿದರೆ ಅದೆಷ್ಟು ಶಿಷ್ಯರ ಅಂಗ ಗುರುಘನವಾಗಿವೆ.

ಗುರುಪ್ರಸಾದದ ಘನವರಿಯದುದು ಗುರುಘನವಾಗದು. ಶಿಷ್ಯರ ಅಂಗವು

ಪರಿಶುದ್ಧವಾಗದಿದ್ದಲ್ಲಿ ಅದು ಗುರುಪ್ರಸಾದವ ತಿಳಿಯದು. ಅದು ಶಿಷ್ಯನ ಅಂಗವೆನಿಸದು. ಲೋಕಕ್ಕೆ ಮೆಚ್ಚಿದ ಅಂಗ ಶಿಷ್ಯನಾಗದು. ಮಾಯಿಕ ತತ್ವಕ್ಕೆ ಮೆಚ್ಚಿದುದು ಗುರು ಘನವಾಗದು.

ಗುರುಪ್ರಸಾದವೆಂಬುದು ಬೆಳಗುಳ್ಳ ಜ್ಯೋತಿ, ಪ್ರಕಾಶಮಯ ಸಮಪ್ರಕಾಶವರಿತು ಅದುವೆ ಆದ ಘನಜ್ಯೋತಿ, ಅಗ್ನಿ ಮುಟ್ಟಿದ ತೃಣಗಳನ್ನೆಲ್ಲ ಹೇಗೆ ತನ್ನಂತೆ ಮಾಡಿತ್ತು. ಹಾಗೆ ಗುರುಪ್ರಸಾದವದು ಸಮನಿಲಯ, ಸಮಪ್ರಕಾಶ. ಅದು ಅರಿಯದರುಹಿಸಿ ಕೊಂಬುದಕ್ಕೆ ಮೀರಿದ ನಿಲಯ, ಸಮನಿಲಯ.

ಗುರುಘನ, ಶಿಷ್ಯನ ಅಂಗ ಅರಿಸಿಕೊಳ್ಳುವ ಅನಾತ್ಮ ಮಾಡಲಿಲ್ಲ, ತನ್ನಂಗ ಅರಿಯುವ ಪ್ರತ್ಯಗಾತ್ಮನ ಮಾಡಲಿಲ್ಲ, ಶಿಷ್ಯನ ಅಂಗ ನಾಶವೆನಲಿಲ್ಲ, ತನ್ನಂಗ ನಾಶರಹಿತ ಎನಲಿಲ್ಲ. ಎನೊಂದುಸರಲು ಎಡೆಗೊಡದ ಘನವ ಮಾಡಿ ತೋರಿದ. ಎಲ್ಲಿ ವಾಕ್ ಮನಸ್ಸು ಅರಿಯಲು ಅಶಕ್ತವಾಗಿದೆಯೊ ಅಲ್ಲಿ ಗುರುವಿನಿಂದ ಉಪದೇಶವನ್ನು ಪಡೆಯುವದು ಹೇಗೆ? ಬೋಧಕ್ಕೆ ಮೀರಿದ ಘನವನ್ನೆ ಒಂದನುವ ಮಾಡಿ ಕರುಣಿಸಿದ; ಆ ಬೋಧಕ್ಕೆ ಮೀರಿದ ಘನದನುವ ಶಿಷ್ಯನು ತಿಳಿದನು. ಇದು ಕಾರಣ ಈರ್ವರ ನಿಲುವು ವಾಕ್ ಮನಕ್ಕೆ ಮೀರಿದ ಘನವುಳ್ಳ ನಿಲುವಾಯಿತ್ತು. ಈರ್ವರು ಸಮಪ್ರಕಾಶಮಾನವಾದ ತತ್ವ ತಿಳಿದ ನಿಲುವಾಯಿತ್ತು. ಇಲ್ಲಿ ಅನುಗ್ರಹಿಸಿದ ಗುರುವಾರೋ? ಅನುಗ್ರಹಿಸಿಕೊಂಡ ಶಿಷ್ಯನಾರೋ? ಅನುಪಮರಲ್ಲಿ ಉಪಮೆ ಮಾಡುವದದೆಂತು.

ಗುರುಪ್ರಸಾದದಿಂದ ಶಿಷ್ಯ ಷಡಕ್ಷರ, ಗುರು ಷಡಕ್ಷರ, ಗುರು ಪ್ರಸಾದ ನುಡಿಗೆಡೆಗೊಡದ ಘನ ಶಿಷ್ಯನ ಅಂಗವ ಸೋಂಕಿ ನುಡಿಗೆಡೆಗೊಡದ ಘನವಾದ್ದರಿಂದ ಸಮಪ್ರಕಾಶಮಾನ ತತ್ವತಿಳಿದ ನಿಲಯ, ಬೆಳಗುಳ್ಳ ನಿಲಯ. ಅಲ್ಲಿ ಬೆಳಗಿಸಿಕೊಳ್ಳುವ ಪರಪ್ರಕಾಶ ಕಾಣದ್ದರಿಂದ ಅನಾತ್ಮವೆಂಬುದಿಲ್ಲ. ದೃಕ್ ರೂಪ ಆತ್ಮನೆಂಬುದಿಲ್ಲ. ಇಲ್ಲ ಇಲ್ಲವೆಂಬದು ಇಲ್ಲವಾಗಿ ತನ್ನ ಕಂಡ ನಿಲಯ, ತನ್ನೊಳ ಉದಯ ಅಸ್ತಂಗಳ ಕಾಣದ ನಿಲಯ. ಸಮಪ್ರಕಾಶಮಾನವಾದ ತತ್ವ ತಿಳಿದ ನಿಲಯ ಸಮ ಗೋಷ್ಠಿಯುಳ್ಳವರ ನಿಲಯ.

ಗುರುಪ್ರಸಾದ ಶಿಷ್ಯನ ಅಂಗಕ್ಕೆ ಸೋಂಕಿ ಸರ್ವಾಂಗ ಗುರುವಪ್ಪುದು ತಪ್ಪದಯ್ಯ ಎಂದು ಸಮಗೋಷ್ಠಿಯ ಮಾಡುವುದು, ಉಪಮಿಸಲಮ್ಮೆನಯ್ಯ, ಸಮಗೋಷ್ಠಿ ಅದು ಅಪ್ರಮಾಣ ಅಗಮ್ಯ. ಇದನ್ನು ವಾಣಿಯಿಂದ ವರ್ಣಿಸುವದದೆಂತು. ಸ್ವರೂಪವೆಂಬುದು ಸಮ ಸಮತತ್ವದಲ್ಲಿ ಸಾಮಾನ್ಯ ಜ್ಞಾನವೂ ಇಲ್ಲ. ಕಲ್ಪಿತ ವಿಶೇಷ ಜ್ಞಾನವೂ ಇಲ್ಲ. ಅಲ್ಲಿ ವಿಷಯವೆಂಬುದೂ ಇಲ್ಲ. ಸಮವೆಂಬುದೂ ಇಲ್ಲ.

ಸಮವದು ತತ್ವ, ಅದು ಮಾತಿನಂತುಂಟಲ್ಲ ನಿರಂತರ ಇದು ರೂಪವೆನ್ನಲು ಬರದು, ಅರೂಪವೆನ್ನಲು ಬರದು, ತನಗಿಂತ ಭಿನ್ನವೆನ್ನಲು ಬರದು, ಅಭಿನ್ನವೆನ್ನಲು ಬರದು. ಅರಿವುಡೆ ಸಮ ಸ್ವರೂಪ ತಾನೆ, ಶಿಷ್ಯತಾನೆ, ಗುರು ತಾನೆ, ಸಕಲ ತಾನೆ, ನಿಃಕಳ ತಾನೆ, ತಾನು ತಾನೆ ಆದುದು ವರ್ಣಿಸುವದದೆಂತು.

ಲಿಂಗ ಪ್ರಸಾದ ಮನ ಸೋಂಕಿದಲ್ಲಿ ಮನ ಲಿಂಗವಪ್ಪುದು ತಪ್ಪದಯ್ಯಾ: ಲಿಂಗ ಪ್ರಸಾದವದು ಸಹಜ ಅಜ ಅಚಿಂತ್ಯ ಅಕಲ್ಪಿತ ದರುವೆ ಲಿಂಗಪ್ರಸಾದ ಇದು ನಿರಂತರ. ಇದು ಬೋಧಕ್ಕೆ ಮೀರಿದ ಘನ, ಅಭೋಧಕ್ಕೂ ಮೀರಿದ ಘನ, ಬೋಧಾ ಬೊಧಾಗಳ ಮಿಶ್ರಣ ಇಲ್ಲಿ ಹೇಗೆ ಸಾಧ್ಯ. ಲಿಂಗವದು ಪರಾತ್ಪರ ಜ್ಞಾನ. ಇದು ತರ್ಕದಿಂದ ಬರುವ ಜ್ಞಾನವೂ ಅಲ್ಲ ಸಮಾಧಿ ಯೋಗದಿಂದಲೂ ಬರುವ ಜ್ಞಾವಲ್ಲ. ಗುರೂಪದೇಶವೂ ಅಲ್ಲ, ನಿರಂತರವಾಗಿರುವ ಅಜ, ಅಚಿಂತ್ಯತ್ವ, ಇದು ಇದ್ದಂತಿದ್ದ ಸಹಜವು. ಲಿಂಗಪ್ರಸಾದ, ಇದ್ದಕ್ಕಿದ್ದಂತೆ ವೇದ್ಯವಾದುದು ಜ್ಞಾನದ ಸಹಜ ಸ್ಥಿತಿ. ಲಿಂಗವೆಂಬ ಪರಾತ್ಪರ ದುರುವಿನ ಇರುವು ಮನಸ್ಸಿಗೆ ವೇದ್ಯವಾದುದೆ ಲಿಂಗಪ್ರಸಾದ. ಅದು ಮನಸೋಂಕಿದ ಚಿನ್ಹ, ಆಗ ಮನದ ಪೂರ್ವಾಶ್ರಯ ಇಲ್ಲವಾಗಿ ನಿಶ್ಚಿಂತದ ನಿಜ ನಿವಾಸವಾಗುವುದರಿಂದ ಮನ ಲಿಂಗವಪ್ಪುದು ತಪ್ಪದಯ್ಯಾ ಎಂದು ಹೇಳಿಹರು.

ಜಂಗಮ ಪ್ರಸಾದವೆಂಬ ಅರಿವು ಸೋಂಕಿದಲ್ಲಿ ಅಖಂಡಿತ ಪ್ರಸನ್ನ ಪ್ರಸಾದವಪ್ಪುದು ತಪ್ಪದಯ್ಯಾ: ಜಂಗಮ ಪ್ರಸಾದವೆಂಬುದು ಅರುವೆಂಬುದರ ಅರಿವು ಇರಹು. ಇದು ನಿಜೈಕ್ಯದ ನಿಲುವುಳ್ಳ ನಿ ಿಯ. ಇದು ನಿರ್ಲಿಖಿತದ ಇರವು. ನಿರ್ನಾಮ ದರುವಿನ ಇರುವು, ಲಿಂಗ ಒಂದಾಗಿರ್ದ ತನ್ನಯ ಇರವು, ಅನುಪಮ ಇರವು. ಅರುವೆಂಬುದು ತನ್ನ ಅರಿಯ ಹೋದವರ ಇರುವಿನ ಅರುವು. ಇದು ಅರಸುವವರ ಇರುವಲ್ಲ ಚಿಂತಿಸುವವರ ಅರುವಲ್ಲ, ನಿಶ್ಚಿಂತ ನಿಜ ನಿವಾಸದವರ ಇರವು ಅರುವು ಒಂದಾದುದು, ಘನಕ್ಕೆ ಘನವಾದ್ದರಿಂದ ಜಂಗಮ ಪ್ರಸಾದ ದರಿವು ಸೋಂಕಿದುದು ತನ್ನಿಂದ ತನಗದು ವೇದ್ಯವಾಗುವುಡೆ, ಆಗ ತಾನು ಅಖಂಡಿತ ಪ್ರಸನ್ನ ಪ್ರಸಾದ ತಾನೆ. ಗಗನ ಸದೃಶವಾಗಿರುವ ಚಿದಾಕಾಶ ತಾನೆ, ಚಿದ್ಘನಾನಂದ ತಾನೆ ಪರಮಾನಂದ ಮಯನಾಗಿಹ ಪರಿಪೂರ್ಣ ತಾನೆ. ಸುಖ ಸ್ವರೂಪ ತಾನೆ.

ಜಂಗಮ ಪ್ರಸಾದ ಅದು ಸ್ವರೂಪವಾಗಿಹ ಪ್ರಸಾದ. ಈ ಪ್ರಸಾದ ರೂಪಿ ಪರಮಜ್ಞಾನವು ಪರಮಾಮೃತವು. ಇಲ್ಲಿ ಅನ್ಯ ಆವಾವುದಕ್ಕಿಂಬಲ್ಲ, ಇದು ಅರಿಸಿಕೊಳ್ಳುವುದಾಗಿಲ್ಲ, ಅರಿಯುವದಾಗಿಲ್ಲ. ತಾನೊಂದೆ ಸ್ವತಃ ಸಿದ್ಧವು. ಇದು ಇದ್ದಕಿದ್ದಂತೆ ಮನಕ್ಕೆ ವೇದ್ಯವಾಗಲು, ತಾನು ಅಖಂಡಿತ ಘನನು ಪರಿಪೂರ್ಣವಪ್ಪ ಪರಮಾನಂದಮಯನು ತಾನೆ ಎಂಬುದು ಪ್ರಸಿದ್ಧವಾದ್ದರಿಂದ ಈ ಪ್ರಸಾದದ ಅರಿವು ಸೋಂಕಿದ ಘನತ್ವವ ವರ್ಣಿಸಿಹರು.

ಶಿವ ಶಿವಾ ಪ್ರಸಾದದ ಮಹಿಮೆಯ ನೇನೆಂದು ಉಪಮಿಸುವೆನು, ಪ್ರಸಾದವೆ ಗುರು, ಪ್ರಸಾದವೆ ಲಿಂಗ, ಪ್ರಸಾದವೆ ಜಂಗಮ, ಪ್ರಸಾದವೆ ಪರಾತ್ಪರ, ಪ್ರಸಾದವೆ ಪರಮಾಮೃತ ಪರಮಜ್ಞಾನ, ಪ್ರಸಾದವೆ ವಾಙ್ಮನೋತೀತ, ಪ್ರಸಾದವೆ ನಿತ್ಯ ಪರಿಪೂರ್ಣ ಇಂತಪ್ಪ ಪ್ರಸಾದವ ಕಂಡು ಬದುಕಿದೆನಯ್ಯ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ: ಶಿವ ಶಿವಾ ಭೇದಾ ಭೇದ ವಿನಿರ್ಮುಕ್ತ ಶಿವ, ಅಖಂಡಿತ ಘನ ಶಿವ, ಪರಿಪೂರ್ಣ ಶಿವ, ನಾ ನೀನೆಂಬುದಕ್ಕೂ ತೆರಹಿಲ್ಲದಿರುವ ಶಿವ, ಈ ಪರಮ ಜ್ಞಾನಾಮೃತ ರೂಪಿ ಪ್ರಸಾದವೆಂಬ ಪರಾತ್ಪರ ಪರಮ ಜ್ಞಾನದ ಮಹಿಮೆಯ ಏನೆಂದುಪಮಿಸುವುದು?

ಈ ಪ್ರಸಾದ ರೂಪಿ ವಾಙ್ಮನೋತೀತವು ಸೋಂಕಿದ ಅಂಗ, ಮನ, ಭಾವ, ತನ್ನಂತೆ ಮಾಡಿತ್ತು. ಪ್ರಸಾದವೆಂಬ ವಾಙ್ಮನೋತೀತ ಗುರುಘನವಾಗಿ ಬಂದು ಏನ್ನಂಗಕ್ಕೆ ಸೋಂಕಿ ಗುರುವಿನಂಗವಾಯಿತೇ! ತಾನೆ ಗುರು ಘನವಾಯಿತೆ! ತಾನೆ ನುಡಿಗೆ ಮೀರಿ ನಿಂದಿತ್ತೆ! ಶೃತಿಯ ನೆತ್ತಿಮೆಲೆ ತಾನೆ ಪ್ರಜ್ವಲಿಸಿ ಪ್ರಕಾಶಮಾನವಾಯಿತೆ! ತಾನೆ ಸ್ವಯಂ ಜ್ಯೋತಿಯಾಯಿತ್ತೆ! ಶಬ್ದ ಮುಗ್ಧವಾಗಿ ತಾನೆ ಬೆಳಗುಳ್ಳ ಘನವಾಯಿತ್ತೆ! ಇದೆಂಥ ಗುರು ಪ್ರಸಾದ! ಇದು ಸೋಂಕಿದ ಅಂಗ ಗುರು ಘನವಾದುದರಿಂದ ಪ್ರಸಾದ ಪ್ರಸಾದವೆ ಆಯಿತ್ತು, ಪರಮಾಮೃತವೆ ಆಯಿತ್ತು.

ಪ್ರಸಾದವೆಂಬ ವಾಙ್ಮನೋತೀತ ಲಿಂಗ, ಇದು ಮನಕ್ಕೆ ಸೋಂಕಿ ಮನವ ತನ್ನಂತೆ ಮಾಡಿತ್ತೆ! ಮನವು ತನ್ನ ಪೂರ್ವಾಶ್ರಯವ ಬಿಟ್ಟು ಅಕಲ್ಪಿತ ಘನವಾಯಿತ್ತೆ! ನೆನಹೆ ನಿಷ್ಪತ್ತಿಯಾಗಿ ನಿಶ್ಚಿಂತದ ನಿಜಾಲಯವಾಯಿತ್ತೆ! ಸಂಕಲ್ಪ ವಿಕಲ್ಪದ ಮುಕ್ತಾಯವಾಯಿತ್ತು. ಮನವು ವಾಣಿಗೆ ಮೀರಿದ ಘನಮನವಾಯಿತ್ತೆ! ಧ್ಯಾನಾತೀತವಾಯಿತ್ತು. ಲಿಂಗ ಪ್ರಸಾದ ಮನಕ್ಕೆ ಸೋಂಕಿ ಮನ ಲಿಂಗ ಪ್ರಸಾದವಾಯಿತ್ತು. ಪ್ರಸಾದವು ಲಿಂಗ ಪ್ರಸಾದವು ಲಿಂಗ ಮನ ಸುಮನವಾಗಿ ಪ್ರಸಾದವೆ ಆಗಿ ತೆರಹಿಲ್ಲದ ಜ್ಞಾನವಾಯಿತ್ತು.

ಜಂಗಮ ಪ್ರಸಾದ ದರಿವು ಭಾವ ತ್ರಯಂಗಳಿಗೆ ಸೋಂಕಿ ಭಾವಕ್ಕಗಮ್ಯನ ಮಾಡಿತ್ತು. ನಿರ್ಭಾವ ದರಿವು ಸೀಮೆಯ ಕೆಡಿಸಿ ನಿಸ್ಸೀಮನ ಮಾಡಿತ್ತು. ನಿಸ್ಸೀಮವದು, ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅದುವೆಂದರಿದು ಅದುವೆ ಪ್ರಸನ್ನವಪ್ಪ ಪ್ರಸಾದವಾಯಿತ್ತು. ಈ ಪ್ರಸಾದದ ಮಹಿಮೆಯು ಅದನೆಂತು ವರ್ಣಿಸುವುದು!

ಅವರ್ಣಿಯವ ವರ್ಣೀಸುವರೆ! ರೂಪವೆಂಬುದು ಪ್ರಸಾದ ರುಚಿ ಪ್ರಸಾದ ರಸವದು ಪ್ರಸಾದ, ಶಬ್ದವದು ಪ್ರಸಾದ, ಸ್ಪರ್ಶವೆಂಬುದು ಪ್ರಸಾದ, ಪ್ರಸಾದ ಪ್ರಸಾದವೆ ಆದುದರಿಂದ ಇದು ತೆರಹಿಲ್ಲದ ಘನ, ನುಡಿ ನಡೆ ಮತಿ ಗತಿ ಗಂಟುಗೊಡದ ನಿರಾತಂಕ ನಿರಾಳ ಇದು ಕಾರಣ ಪ್ರಸಾದವೆ ಪರಾತ್ಪರ, ಪ್ರಸಾದವೆ ಪರಮಜ್ಞಾನ ಇದುವೆ ತಾನೆ ತಾನಾಗಿ ಬೆಳಗುವ ಚೈತನ್ಯವಾದುದರಿಂದ, ಇಲ್ಲಿ ವಾಙ್ಮನಸ್ಸು. ಇವುಗಳಿಂದ ರಚಿಸುವ ಸೃಷ್ಟಿ ಸೃಷ್ಟಿ ಕರ್ತರು ಇಲ್ಲಾದುದು ಇಲ್ಲಾದುದು ಎಲ್ಲಿಪ್ಪುದು, ಇಲ್ಲಾದುದು. ಇಲ್ಲಾದುದು ಎಂದಿಪ್ಪುದು, ಎಂದು ತಾನೆ ಪ್ರಸಾದವಾದ ನಿತ್ಯತ್ವ ಪರಿಪೂರ್ಣತ್ವ, ಇದು ಪ್ರಸಾದವರಿತವರ ನಿಜ ನಿಲುವು ಆದ್ದರಿಂದ, ಪ್ರಸಾದವೆ ನಿತ್ಯ ಪ್ರಸಾದವೆ ಪೂರ್ಣವೆಂಬುದು, ತಾನೆ ನಿತ್ಯ, ತಾನೆ ಪೂರ್ಣ ಇಂತಪ್ಪ ಪ್ರಸಾದವ ಕಂಡು ಬದುಕಿದೆನಯ್ಯ.

ಭಕ್ತ ಮಹೇಶ ಪ್ರಸಾದಿಯೆ ಇರಲಿ ಆರೆ ಇರಲಿ ತನಗೆ ತಾನೆ ಬದುಕಿದೆನೆನ್ನುವಲ್ಲಿ ವಾಙ್ಮನೋತೀತವಾದ ಗುರು, ಲಿಂಗ, ಜಂಗಮ, ಪ್ರಸಾದದರಿವು ಹೃದಯಕ್ಕೆ ವೇದ್ಯವಾದ್ದರಿಂದ ಬದುಕಿದೆನೆಂದು ಹೇಳಿಹರು. ಇಂತು ಸಕಲವು ಪ್ರಸಾದಮಯವಾದ ಹಿರಿಮೆಯ ಕಂಡು ಬದುಕಿದೆನೆಂದು ವರ್ಣಿಸಿಹರು.

**ವಚನ 16**

**ಲೋಹ ಪರುಷವ ಮುಟ್ಟುವದಲ್ಲದೆ ಪರುಷ ಲೋಹವ ಮುಟ್ಟುವುದೇ?**
**ಅಂಗವಿಡಿದಂಗೆ ಲಿಂಗವುಂಟಲ್ಲದೆ ಲಿಂಗ ವಿಡಿದಂಗೆ ಅಂಗ ವುಂಟೆ?**
**ಅಣೋ ರಣಿಯಾನ್ ಮಹತೊ ಮಹಿಯಾನ್ ಹಿರಿದಿಂಗೆ ಹಿರಿದು ಕಿರಿದಿಂಗೆ ಕಿರಿದು**
**ವಾಙ್ಮನಕ್ಕಗೋಚರ ಕೂಡಲ ಸಂಗಮದೇವ ಸ್ವರೂಪ ಪ್ರಸಾದ,**
**ನಿರೂಪ ಪ್ರಸಾದದಿಂದ ನಿಂದುದು.**

**ತಾತ್ಪರ್ಯ:** ಲೋಹ ಪರುಷವ ಮುಟ್ಟುವದಲ್ಲದೆ ಪರುಷ ಲೋಹವ ಮುಟ್ಟುವುದೆ: ಕಬ್ಬಿಣವು ಪರುಷರೂಪಿ ಧಾತು ಮುಟ್ಟುವದಲ್ಲದೆ ಪರುಷ ಕಬ್ಬಿಣವ ಮುಟ್ಟುವದಿಲ್ಲ, ಪರುಷ ತಾನು ಇದ್ದಂತಿರುವ ಪರುಷ. ತನಗೆ ತಾಕಿದ ಕಬ್ಬಿನವು ಪರಿವರ್ತನವು ಬಂಗಾರವು ಅದು ಬಂಗಾರವಾದರೂ ತಾನು ಇದ್ದಂತೆಯೆ ಇದೆ. ಕಬ್ಬುನವೆನಿಸಿಕೊಂಡಾಗೂ ತಾನು ಇದ್ದಂತೆ ಇದೆ. ಕಬ್ಬಿಣವು ಪರುಷಕ್ಕೆ ತಾಕಿ ಬಂಗಾರ ವೆನಸಿಕೊಂಡಾಗಲೂ ತಾನು ಇದ್ದಂತೆಯೆ ಇದೆ. ಪರುಷದ ಘನವು ಅವರ್ಣೀಯವು ಕಬ್ಬಿಣವು ಪರುಷಕ್ಕೆ ತಾಕಿ ಅದು ಬಹು ಬೆಲೆಯುಳ್ಳ ಭಂಗಾರವಾದರೂ ಪರುಷವು ತಾನು ಇದ್ದಂತಿದೆ. ಇದು ಕಾರಣ ಪರುಷವು ನಿರ್ವಿಕಾರವು ಕಬ್ಬಿಣವು ವಿಕಾರವು ಬದಲಾವಣೆಯುಳ್ಳದು.

ಅಂಗವಿಡಿದಂಗೆ ಲಿಂಗವುಂಟಲ್ಲದೆ, ಲಿಂಗವಿಡಿದಂಗೆ ಅಂಗವುಂಟೆ: ಅಂಗವಿಡಿದವರು ಸಾಕಷ್ಟು ಇದ್ದಾರೆ. ಲಿಂಗವಿಡಿದವರು ಕೋಟಿಗೊಬ್ಬರು, ವಿರಳ. ಆರು ಲಿಂಗವಿಡಿದಿಹರು ಅವರಿಗೆ ಅಂಗವೆಲ್ಲಿಯದು.

ಇಷ್ಟಲಿಂಗ ಬೇಕಾದದ್ದು ಅಂಗ ವಿಡಿದವಂಗೆ, ಲಿಂಗವಿಡಿದವಂಗೆ ಅಂಗವೆಂಬುದಿಲ್ಲ, ಕತ್ತಲವಿದ್ದಲ್ಲಿ ಬೆಳಕಿನ ಅವಶ್ಯಕತೆ, ಸೂರ್ಯಂಗೆ ಬೆಳಕು ಬೇಕೆ? ಮರವಿಂಗೆ ಅರುವಿನ ಅವಶ್ಯಕತೆ. ಅರುವಿನ ಅರುವಿಂಗೆ ಅರುವಿನ ಅವಶ್ಯಕತೆಯಿಲ್ಲ. ಅಲ್ಲಿ ಮರವಿಲ್ಲ, ಅಂಗಬುದ್ಧಿಯಿಲ್ಲ. ಅಂಗವಿಲ್ಲ. ಇಲ್ಲದ ಅಂಗ ಇಲ್ಲ ಮಾಡಲು ಲಿಂಗಬೇಕು. ಲಿಂಗದ ಯತಾರ್ಥ ಅರಿವು ಬೇಕು.

ಲಿಂಗ? ಗುಡಿಯೊಳಗಿರುವೆ ಲಿಂಗವೆನ್ನಬೇಕೆ? ಎನ್ನಲಾಗದು, ಇದು ಉತ್ಪತ್ತಿಲಿಂಗ ಆರಿಂದಲೂ ಉದಯಿಸದ ಲಿಂಗ, ಇದು ಸಕಲರ ಅಂತರಂಗದೊಳಿರ್ದ ನಿರವಯ ಲಿಂಗವನು ಸಾವಯವ ಲಿಂಗಮಾಡಿ ಶ್ರೀಗುರು ಸ್ವಾಮಿ ಕರಸ್ಥಲಕ್ಕೆ ತಂದುಕೊಟ್ಟ ಲಿಂಗ, ಇದು ಅಂತರಂಗವ ನಾವರಿಸಿ, ಅಂತರಂಗದ ಕರಣಂಗಳೆ ಕಿರಣಂಗಳಾಗಿ ಬೆಳಗುವ ಚಿದಂಶ, ಸಚ್ಚಿದ್ರೂಪ ಉಂಟು, ಇದು ಅಂಗವಿಡಿದವಂಗೆ, ಕಿರಣಂಗಳೆಲ್ಲ ಕರಣಂಗಳಾಗಿ ಬೆಳಗುವ ಚಿದಂಶವಾದ ಲಿಂಗವುಂಟು. ಈ ಲಿಂಗ ;ಬೇಕು ಅರುವು ಬೇಕು. ಇದರ ಯತಾರ್ಥ ಜ್ಞಾನಬೇಕು. ಇದಕಾಗಿ ಶ್ರೀಗುರು ಕರುಣೆ ಅವಶ್ಯವಾಗಿ ಬೇಕು. ಲಿಂಗವದು ಗುರು ಕರುಣೆ, ಇದು ಅಂಗವಿಡಿದವಂಗೆ ಮುಖ್ಯವಾಗಿದೆ.

ಅಂಗವಿಡಿದವರೆಂದರೆ ದೇಹವಿಡಿದವರು. ಜಡದೇಹ ದೇಹಧರ್ಮಂಗಳೆ

ತಾನೆಂದು ಹಿಡಿದವರು, ಅನಾತ್ಮಬುದ್ಧಿಯುಳ್ಳವರು. ಷಡ್ವಿಕಾರವುಳ್ಳ ದೇಹವೆ ತಾನೆಂದು ಹಿಡಿದವರು, ತಾನು ಸಚ್ಚಿದ್ರೂಪನಾಗಿದ್ದರೂ, ತನ್ನ ಸ್ವರೂಪವ ಮರೆತು ದೇಹವೆ ತಾನೆನ್ನುವವರು. ದೇಹಾದಿಗಳ ಕ್ರಿಯೆಯೆ ತಾನೆನ್ನುವ ತನ್ನದೆಂಬುವ ಮರವುಳ್ಳವರು.

ಇವರಿಗೆ ಲಿಂಗವುಂಟು, ಉಪದೇಶ ಉಂಟು, ಕ್ರಿಯೆ ಉಂಟು ಆಚಾರವುಂಟು. ಭಾವ ಉಂಟು ಕುರುಹು ಉಂಟು. ಈ ಕುರುಹು ನಿರವಯ ಲಿಂಗವ ಸಾವಯವ ಮಾಡಿ ತೋರಿದ ಕುರುಹು. ಇದು ಅಂಗವಿಡಿದವರಿಗೆ ಕುರುಹಾಗಿದೆ. ಲಿಂಗವಿಡಿದವರಿಗೆ ತನ್ನಿರುವಿನ ಅರುವಾಗಿದೆ. ಲಿಂಗ ಸಾವಯವವಾಗಿ ಕಂಡರೂ ನಿರವಯವಾಗಿದೆ. ಚಿದಂಶವಾಗಿದೆ, ಚಿದ್ಘನವಾಗಿದೆ. ಲಿಂಗ ನಿರವಯವೆಂದು, ತಿಳಿಯದ ಅಂಗವಿಡಿದವರಿಗೆ ಲಿಂಗವು ಅಣೋರಣಿಯಾನ್ ಮಹತೋ ಮಹಿಮಾನ್ ಎಂದು ತಿಳಿಯರು ತಿಳಿಯದ್ದರಿಂದ, ಇವರು ಅಂಗವಿಡಿದವರು. ಈ ಅಂಗ ಜ್ಞಾನ, ಅಂಗಬುದ್ಧಿ ಇಲ್ಲ ಮಾಡಲು ಗುರು ಕರುಣೆ ಉಂಟು.

ಲಿಂಗವಿಡಿದವರಿಗೆ ಅಂಗವೆಲ್ಲಿಯದು: ಲಿಂಗವದು ಚಿದಂಗ ಚಿದ್ಘನ ಅರಿವುಡೆ ತಾನೆ. ತಾನು ಲಿಂಗ ಎಂಬ ಜ್ಞಾನಿಗೆ ಜ್ಞಾನಲಿಂಗಿಗೆ ಅಂಗವೆಲ್ಲಿಯದು, ಲಿಂಗವರಿತ ಸರ್ವಾಂಗಲಿಂಗಿ, ಲಿಂಗವೆ ತಾನಾದ ಮಹಾಂತಂಗೆ ಅಂಗವುಟೆ? ನಿರ್ದೇಹಿಗೆ ದೇಹ ಉಂಟೆ? ತಾನು ಅಣುವಿಗಿಂತಲೂ ಅಣು ಸ್ವರೂಪನು ಎಂಬ ಜ್ಞಾನವಂತನಿಗೆ ಅಂಗವೆಲ್ಲಿಯದು. ತಾನು ದೊಡ್ಡದೆನ್ನುವುದಕ್ಕಿಂತಲೂ ದೊಡ್ಡದು. ಘನ ಎನ್ನುವದಕ್ಕಿಂತಲೂ ಘನ ಎನ್ನುವ ಜ್ಞಾನಿಯು ಮಹತೋ ಮಹಿಯಾನ್ ಎಂದು ಅರಿತ ಅರುಸ್ವರೂಪ, ಲಿಂಗಸ್ವರೂಪಂಗೆ ಅಂಗವೆಂಬುದಿಲ್ಲ. ಹಿರಿದಿಂಗೆ ಹಿರಿದು, ಕಿರಿದಿಂಗೆ ಕಿರಿದು, ವಾಙ್ಮನಕ್ಕಗೋಚರ ಕೂಡಲಸಂಗಮದೇವ, ಹಿರಿದಿಂಗೆ ಹಿರಿದು ಕಿರಿದಾದುದು ಅನುಪಮವು. ಹಿರಿದು ಕಿರಿದು ಉಪಮಗೆ ಒಳಪಟ್ಟದು. ಅಹಂ ನಿರಹಂ, ಚಿದಹಂ ದಾಸೋಹಂ, ಇವು ಹಿರಿದು ಕಿರಿದು ಹಿರಿದಿಂಗೆ ಕಿರಿದಿಗೆ ಇದು ವಾಙ್ಮನೋತೀತ ಅನುಪಮ, ಕೂಡಲಸಂಗಮದೇವ, ಸ್ವರೂಪ ಪ್ರಸಾದ ನಿರೂಪ ಪ್ರಸಾದದಿಂದ ನಿಂದುದು.

ಕೂಡಲಸಂಗಮದೇವ ಇದು ಸ್ವರೂಪ ಪ್ರಸಾದ, ಪ್ರಸಾದವೆಂಬುದು ತೆರಹಿಲ್ಲದ ಘನ ಜ್ಞಾನಾನಂದ ಚಿನುಮಯಾನಂದ ಅರಿವುಡೆ ತಾನು, ತಾನು ರೂಪನಲ್ಲ ಅರೂಪನಲ್ಲ, ರೂಪ ಅರೂಪನೆಂಬುದಕ್ಕೂ ಮೀರಿದ ಘನ. ಇದು ನುಡಿಗೆಡೆ ಗೊಡದ ಘನ ನಡೆಗೆಡೆಗೊಡದ ಘನವಾದ್ದರಿಂದ ಇದು ವೇದ ವೇದಾಂತಗಳಿಗೆ ಅಸಾಧ್ಯವಾದ ಅನುಪಮ ಲಿಂಗವಾದ್ದರಿಂದ ನಿರೂಪ ಪ್ರಸಾದದಿಂದ ನಿಂದುದು ಎಂದು ಹೇಳಿಹರು.

**ವಚನ 17**

**ಇಲ್ಲೆಂಬುದನಿಲ್ಲೆನ ಬಲ್ಲರೆ ಅರ್ಪಿತ**
**ಉಂಟೆಂಬುದನುಂಟೆನ ಬಲ್ಲರೆ ಪ್ರಸಾದ**
**ಆ ಪ್ರಸಾದವ ತಾನಿಲ್ಲದೆ ಕೊಳಬಲ್ಲರೆ ಪ್ರಸಾದಿ,**
**ಆ ಪ್ರಸಾದಿಯ ಪರಮ ಪರಿಣಾಮವೆ ಪ್ರಸಾದವಾಗಿ**

**ಆ ಪ್ರಸಾದವನೆ ತಾನಾಗಿ ಬೆಳಗುತಿಪ್ಪನಯ್ಯ**
**ಕೂಡಲಚೆನ್ನ ಸಂಗಯ್ಯ ನಿಮ್ಮ ಶರಣ.**

ತಾತ್ಪರ್ಯ: ಇಲ್ಲೆಂಬುದನಿಲ್ಲೆನ ಬಲ್ಲರೆ ಅರ್ಪಿತ, ಉಂಟೆಂಬುದನುಂಟೆನ ಬಲ್ಲರೆ ಪ್ರಸಾದ: ಇವರು ಅರ್ಪಿತ ಮಾಡಬಲ್ಲವರು, ಪ್ರಸಾದವರಿತರಿತು ಬಲ್ಲವರು, ಬಲ್ಲವರೆಂದರೆ, ಇಲ್ಲದ್ದ ಇಲ್ಲ ಮಾಡುವವರು, ಇಲ್ಲೆಂಬುದಕ್ಕೆ ಅವಕಾಶ ಕೊಡದವರು, ಇವರು ಇಲ್ಲೆಂಬುದನಿಲ್ಲೆನ ಬಲ್ಲವರು, ಉಂಟೆಂಬುದಕ್ಕೂ ಮೀರಿ ಘನವರಿತವರು. ಅವರು ಉಂಟೆಂಬುದನುಂಟೆನ ಬಲ್ಲವರು.

ಇಲ್ಲೆಂಬುದು ಕೂಡಾ ಇಲ್ಲವಾದುದು, ಅದಾವುದು? ಉಂಟೆಂಬುದಕ್ಕೂ ಮೀರಿ ಉಂಟಾದುದು ಅದಾವುದು? ಸೂರ್ಯ ಉಂಟು ಎಂಬುದು ಪರೋಕ್ಷವಾಕ್ಯ. ಸೂರ್ಯನು ಈ ಪರೋಕ್ಷವಾಕ್ಯಗಳಿಗೆ ಮೀರಿ, ಅಪರೋಕ್ಷವಾಗಿಹನು. ಇರುವುದರಿಂದ ಸೂರ್ಯಉಂಟೆಂಬುದ ನುಂಟಾಗಿಹನು. ಸೂರ್ಯನು ಉಂಟೆಂಬುದಕ್ಕೂ ಮೀರಿ ಬೆಳಗುವವನಾದ್ದರಿಂದ ಇದು ಪಿಂಡಾಂಡ ಬ್ರಹ್ಮಾಂಡಗಳಿಗೆಲ್ಲ ಬೆಳಗುವದಾಗಿರುವದು. ಇವರು ಸೂರ್ಯಪ್ರಕಾಶವ ಬಲ್ಲವರು. ಇವರ ದೃಷ್ಟಿಯಲ್ಲಿ ಸೂರ್ಯನಿಗೆ ಅರ್ಪಿಸುವ ಪೃಥ್ವಿ ಅಪ್ಪು ತೇಜ, ವಾಯು, ಆಕಾಶವು ಇಲ್ಲ ದವಸ ಧಾನ್ಯಗಳಲ್ಲಿ ಪಂಚ ಪಕ್ವಾನ್ನಗಳಲ್ಲಿ ಇಲ್ಲ ಇಲ್ಲವೆಂಬುವ ವಿವೇಕವೂ ಇಲ್ಲ. ಏಕೆಂದರೆ ಸೂರ್ಯದೇವನು ಇವುಗಳಿಗೆಲ್ಲ ಬೆಳಗುವ ದೇವರು. ಇವುಗಳು ಅವನಿಂದ ಬೆಳಗಿಸಿಕೊಳ್ಳವುಗಳು. ಇದು ಕಾರಣ ಸೂರ್ಯಪ್ರಕಾಶದಲ್ಲಿ ಕೂಡುವವೆ? ಕೊನೆಗೆ ಇಲ್ಲಿ ಇಲ್ಲವೆನ್ನುವ ಈ ವಿವೇಕವಾದರೂ ಕೂಡುವುದೇ? ಸೂರ್ಯನಿಗೆ ಅರ್ಪಿಸುವ ಪದಾರ್ಥಗಳಿಲ್ಲ. ಈ ಇಲ್ಲವೆನ್ನುವ ವಿವೇಕವೂ ಇಲ್ಲವೆಂದು ಆರು ತಿಳಿದಿಹರು; ಅವರು ಪ್ರಕಾಶವ ಬಲ್ಲವರು. ಮತ್ತು ಸೂರ್ಯನಿಗೆ ಅರ್ಪಿತ ಮಾಡಬಲ್ಲವರು ಹೇಗೋ ಹಾಗೆ ಸೂರ್ಯಚಂದ್ರಾದಿಗಳಿಗೆ ಬೆಳಗುವ ಚಿದ್ವಸ್ತು ಉಂಟು. ಈ ಸಚ್ಚಿದ್ರೂಪ ಉಂಟು ಎಂಬುವದಕ್ಕೂ ಮೀರಿ ಬೆಳಗುಳ್ಳ ಪರಂಜ್ಯೋತಿ ಇದು ಉಂಟೆಂಬುದ ನುಂಟೆನ ಬಲ್ಲವರು. ಇದು ಶಬ್ದ ವೇದಿಗಳ ಮತಿಗೆ ಮೀರಿದುದು. ಏಕೆಂದರೆ, ಗುರು ಉಂಟು, ಲಿಂಗ ಉಂಟು, ಜಂಗಮವುಂಟು. ಗುರುಇಲ್ಲ, ಲಿಂಗವು ಇಲ್ಲ, ಜಂಗಮವು ಇಲ್ಲ, ಇದು ಶಬ್ದವೇದಿಗಳ ಮತಿಯು ಆಗಿಹುದು. ಇದು ಲಿಂಗವರಿತ ಸಂಪನ್ನರದು ಆಗದು.

ಇಲ್ಲೆಂಬುದು ಇಲ್ಲೆನಬಲ್ಲವರೂ, ಉಂಟೆಂಬುದನುಂಟೆನ ಬಲ್ಲವರು ಇವರು ನಿಃಶಬ್ದವೇದಿಗಳು. ಇವರು ಪ್ರಸಾದ ಬಲ್ಲವರು. ಅರ್ಪಿತ ಮಾಡುವುದನ್ನು ಬಲ್ಲವರು ಆಗಿಹರು. ಬಲ್ಲವರ ಅರ್ಪಿತಕ್ಕೂ ಅರಿಯದೆ ಅರ್ಪಿತ ಮಾಡುವವರ ವಿಧಾನವೆ ವಿಪರೀತವಾಗಿಹುದು. ಅರಿಯದ ಭಾವಿಕರ ದೃಷ್ಟಿಯಲ್ಲಿ ಅರ್ಪಿಸುವ ಪದಾರ್ಥಗಳಿವೆ, ಅರ್ಪಿಸಿಕೊಳ್ಳುವ ದೇವನು ಇರುವನು. ಅರ್ಪಿತ ಮಾಡುವ ಭಕ್ತನಿದ್ದಾನೆ, ಇವರು ದೇವನನ್ನಾದರೂ ಅರಿತಿರುವರೆ? ಭಕ್ತ ಸ್ಥಲವಾದರೂ ತಿಳಿದಿರುವರಾ? ಅವನಿಗೆ ಅರ್ಪಿಸುವ ಪದಾರ್ಥಗಳಾದರೂ ತಿಳಿದಿರುವರಾ? ತಿಳಿಯದ್ದರಿಂದ ಶರಣರ ಪಥಕ್ಕೆ ಸರಿಯೆನಿಸದು.

ಬಲ್ಲವರು: ಅರ್ಪಿತ ಮಾಡುವದನ್ನು ಬಲ್ಲವರು, ತನ್ನನ್ನು ಬಲ್ಲವರು, ದೇವನನ್ನು ಅರಿತವರು ಇದು ಕಾರಣ, ಇಲ್ಲೆಂಬುದ ನಿಲ್ಲೆನ ಬಲ್ಲರೆ ಅರ್ಪಿತ, ಉಂಟೆಂಬುದ ನುಂಟೆನ ಬಲ್ಲರೆ ಪ್ರಸಾದಿಗಳು ಎಂದು ಹೇಳಿಹರು.

ಶರಣರು, ಲಿಂಗ ಜಂಗಮ ಬಲ್ಲವರು, ಚಿತ್ ಸ್ವರೂಪವರಿಯಹೋಗಿ, ಲಿಂಗ ಉಂಟು, ಜಂಗಮ ಉಂಟೆಂಬುದಕ್ಕೂ ಮೀರಿದವರು. ಲಿಂಗವೂ ಇಲ್ಲ, ಜಂಗಮವೂ ಇಲ್ಲ ಎಂಬುದಕ್ಕೂ ಮೀರಿದವರು. ಮೀರಿದ ಘನಮಹಿಮನು ಉಪಮಿಸುವದದೆಂತು, ನುಡಿಗೆಡೆಗೊಡದ ಘನವಂತರನ್ನು ವರ್ಣಿಸುವದದೆಂತು.

ಸಮತೆ ಸಯವಾದ ಶರಣಂಗೆ ಅರುವು ಮರವುಗಳುಂಟೆ, ನಾಮರೂಪ ಪ್ರಪಂಚವು ಇಲ್ಲೆಂಬುದು ಇಲ್ಲವಾಗಿದೆ ಅಸ್ತಿ, ಭಾತಿ, ಪ್ರಿಯ, ಉಂಟು ಎಂಬುದು ಇಲ್ಲವಾಗಿದೆ. ಏಕೆಂದರೆ ಉಂಟೆಂಬುದ ನುಂಟೆನ ಬಲ್ಲವರು. ಈ ಅನುಪಮ ಲಿಂಗವು ಉಂಟು ಇಲ್ಲೆಂಬುದಕ್ಕೂ ಮೀರಿದುದು. ಇದಕ್ಕೆ ಅರ್ಪಿಸುವ ಪದಾರ್ಥಗಳೆ ಇಲ್ಲ. ಈ ಇಲ್ಲವೆಂಬುದು ಇಲ್ಲವಾದುದೆ ಅರ್ಪಿತ ಮೀರಿದ ಘನ ಲಿಂಗ ಉಂಟೆಂಬುದ ನುಂಟೆನ ಬಲ್ಲವರ ಅರಿವು ಇರುವು ಆಗಿದೆ. ಇದು ಬಲ್ಲವರ ಪ್ರಸಾದವಾದುದರಿಂದ ಆ ಪ್ರಸಾದವ ತಾನಿಲ್ಲದೆ ಕೊಳಬಲ್ಲರೆ ಪ್ರಸಾದಿ ಎಂದು ಹೇಳಿಹರು.

ಪ್ರಸಾದವೆಂಬ ಪರಮಜ್ಞಾನವದು ನಿಸ್ಸೀಮ ಜ್ಞಾನ. ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಜ್ಞಾನ. ಇದು ಪರಮಾಮೃತ ವಾಙ್ಮನೋತೀತವಾದುದು. ಇದು ಅರುವು ಅರಿಯ ಹೋದವರ ಜ್ಞಾನ, ನಾನೀನೆಂಬುದಕ್ಕೂ ತೆರಹಿಲ್ಲದ ಜ್ಞಾನವೆಂಬುದು ತನಗೆ ವೇದ್ಯವಾದಲ್ಲಿ ಆ ಪ್ರಸಾದ ತಾನಿಲ್ಲದೆ ಕೊಳಬಲ್ಲವರು. ಇವರು ಅಹಮಿಲ್ಲದ ಪ್ರಸಾದಿಗಳು. ಪ್ರಸಾದಿಗಳಾದಲ್ಲಿ ಚಿದಹಮ್ಮಿನಿಂದುಕ್ತ ಪ್ರಸಾದವಾಗಬಾರದು. ಅಹಮಿಲ್ಲದ ಚಿದ್ಘನದರುವುಳ್ಳರಾಗಿರುವದು. ಅರಿಯದರುವುಳ್ಳ ನಿಲಯದವರು ಆದುದೆ ಪ್ರಸಾದಿಗಳು.

ಆ ಪ್ರಸಾದಿಯ ಪರಮ ಪರಿಣಾಮವೆ ಪ್ರಸಾದವಾಗಿ ಆ ಪ್ರಸಾದವನೆ ತಾನಾಗಿ ಬೆಳಗುತಿಪ್ಪನಯ್ಯ, ಕೂಡಲ ಚೆನ್ನಸಂಗಾ ನಿಮ್ಮ ಶರಣ:

ಆ ಪ್ರಸಾದಿಯ ಪರಮ ಪರಿಣಾಮವೆ ಪ್ರಸಾದವೆಂಬುದು, ಅಹಮಿಲ್ಲದರವು ತಾನು ಒಂದಾದುದು. ಇದು ತನ್ನಿಂದ ತನಗದು ವೇದ್ಯವಾದುದೇ ಆ ಪ್ರಸಾದವನೆ ತಾನಾಗಿ ಬೆಳಗುತ್ತಿಪ್ಪ ಸಂಕೇತ. ಕೂಡಲ ಚೆನ್ನ ಸಂಗಾ ನಿಮ್ಮ ಶರಣ, ನಿಮ್ಮ ಶರಣ ಜ್ಞಾನಜ್ಞೇಯ ಒಂದಾದ ಶರಣ. ಶರಣನೆಂಬುದು ವಾಙ್ಮನೋತೀತ ಪರಾತ್ಪರ ಪರಮ ಜ್ಞಾನ ರೂಪಿ ಪ್ರಸಾದ, ಇದು ನಿಸ್ಸೀಮ ಪ್ರಸಾದ ಇದುವೆ ತನ್ನಯದಾದ ಇರುವಿನ ಅರಿವು ತಾನೆ ತಾನಾದುದರಿಂದ ಆ ಪ್ರಸಾದವನೆ ತಾನಾಗಿ ಬೆಳಗುತಿಪ್ಪನಯ್ಯ ನಿಮ್ಮ ಶರಣ ಎಂದಿಹರು.

ಶರಣರು ಬೆಳಗುಳ್ಳ ಬೆಳಗು ಬೆಳಗಿನ ಬೆಳಗು ಸ್ವಯಂ ಬೆಳಗು, ಎರವಲ ಜ್ಯೋತಿ ಅಲ್ಲ ತಾನೆ ತಾನಾಗಿಪ್ಪ ಸ್ವಮಹಿಮನು, ಸ್ವಯಂ ಜ್ಯೋತಿ, ಶೃತಿ ಸ್ಮೃತಿ ಗಗೋಚರ ತಾನೆ ಎಂದು ಹೇಳಿಹರು.

**ವಚನ 18**

**ಜಿಂಹ್ವೆ ಗುರು**
**ಕಂಗಳು ಲಿಂಗ**
**ನಾಸಿಕ ವಾಚಾರ**
**ಕರ್ಣ ಪ್ರಸಾದ**
**ಹಸ್ತ ಜಂಗಮ**
**ಭಾವ ಮಹಾಲಿಂಗ**
**ಕೂಡಲಚೆನ್ನಸಂಗಯ್ಯ**
**ನಿಮ್ಮ ಶರಣ ಸರ್ವಾಂಗ ಪ್ರಸಾದಿ. ॥ 315 ॥**

**ತಾತ್ಪರ್ಯ:** ಜಿಂಹ್ವೆ ಗುರು: ಈ ಜಿಂಹ್ವೆ ಜ್ಯೋತಿರ್ಲಿಂಗ. ಸಮ ಪ್ರಕಾಶ ಮಾನವಾದ ತತ್ವವನ್ನು ತಿಳಿಸುವ ಅನುವುಳ್ಳ ಜಿಂಹ್ವೆ, ನಾನೀನೆಂಬ ಅಹಂಕಾರ ನಿರಹಂಕಾರಕ್ಕೆ ಮೀರಿಸುವ ಅನುವುಳ್ಳ ಜಿಂಹ್ವೆ, ಭೇದಾ ಭೇದ ಜ್ಞಾನ ಕೆಡಿಸಿ ಶಬ್ದಕ್ಕೆ ತೆರಹಿಲ್ಲದಂತೆ ಮಾಡುವ ಅನುವುಳ್ಳ ಜಿಂಹ್ವೆ ನುಡಿಗೆ ಮೀರಿಸುವ ಜಿಂಹ್ವೆ ನುಡಿಗೆಡೆಗೊಡದ ಜಿಂಹ್ವೆ, ನುಡಿದು ನುಡಿಯಾಗದಂತಿದ್ದ ಜಿಂಹ್ವೆ, ನುಡಿಸಿ ನುಡಿಯದವನನ್ನಾಗಿ ಮಾಡುವ ಜಿಂಹ್ವೆ ಮರವರುವಿಗೆ ಮೀರಿಸುವ ಜಿಂಹ್ವೆ, ಅರಿದರುಹಿಸಿ ಕೊಂಬುದಕ್ಕೆ ಮೀರಿಸುವ ಜಿಂಹ್ವೆ, ಶೃತಿ ಸ್ಮೃತಿಗಳಿಗೂ ಮೀರಿಸುವ ಜಿಂಹ್ವೆ, ಈ ಜಿಂಹ್ವೆ, ನುಡಿದುದೆಂಬೆನೆ? ನುಡಿದುದಲ್ಲ, ನುಡಿದು ನುಡಿಯದಂತಿದ್ದ ಘನ ನಿಶಬ್ದ ಘನದನುವುಳ್ಳ ಜಿಂಹ್ವೆ. ಮಿಕ್ಕಿ ಮೀರಿನಿಂದ ನಿಲುವುಳ್ಳ ಜಿಂಹ್ವೆಯಾದುದರಿಂದ ಜಿಂಹ್ವೆ ಗುರು ಎಂದು ಹೇಳಿಹರು. ಇದು ಅರುಹೃದಯ ಮಾಡುವ ಅನುವುಳ್ಳ ಜಿಂಹ್ವೆ ಮರುವರುವಿಗಿಂಬುಗೊಡದ ಜಿಂಹ್ವೆ, ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸಾದದಿರುವು ತನ್ನಿಂದ ತನಗೆ ವೇದ್ಯವಾಗುವಂತೆ ತಿಳಿಸುವ ಅನುವುಳ್ಳ ಜಿಂಹ್ವೆ, ಈ ಜಿಂಹ್ವೆ ನಿಃಶಬ್ದವೇದಿಗಳ ಅನುವುಳ್ಳ ಜಿಂಹ್ವೆಯಾದುದರಿಂದ ಜಿಂಹ್ವೆ ಗುರು ಎಂದು ಹೇಳಿಹರು.

ಈ ಗುರು ಘನದ ಪರಿ ವಿಪರೀತ ನೋಡಾ; ತನ್ನ ನೆನಹನ್ನ ಬರ ತನ್ನಂತೆ ಮಾಡುವ ಗುರುಘನ ಸಮಪ್ರಕಾಶದರುವುಳ್ಳ ಗುರುಘನನಾದುದರಿಂದ ಈ ಘನವಂತನ ಕಂಗಳು ಲಿಂಗ ಎಂದು ಹೇಳಿಹರು.

ಲಿಂಗವದು ತನ್ನಿಂದ ಅರಿಸಿಕೊಂಬುದಲ್ಲ, ಇನ್ನೊಂದನ್ನು ಅರಿಯುವದಲ್ಲ, ತಾನೆ ತಾನಾದ ಸ್ವಯಂ ಪ್ರಕಾಶ, ಈ ಸ್ವಪ್ರಕಾಶ ದೃಷ್ಟಿಗೆ ಅರಿತವರಿಲ್ಲ. ಅರಿಯದವರಿಲ್ಲ, ಅಜ್ಞಾನಿಗಳಿಲ್ಲ, ಜ್ಞಾನಿಗಳಿಲ್ಲ, ನಾನೆಂಬುದಿಲ್ಲ, ನೀನೆಂಬುದಿಲ್ಲ, ಅಹುದಾದುದಿಲ್ಲ, ಅಲ್ಲಾದುದಿಲ್ಲ, ಮರವುಳ್ಳ ಶಿಷ್ಯರಿಲ್ಲ ಅರುವುಳ್ಳ ಗುರುತನವಿಲ್ಲ. ನಿರ್ವಿಕಾರ, ನಿರಾಲಂಬ ದೃಷ್ಟಿಯುಳ್ಳದ್ದಾದುದರಿಂದ ಲಿಂಗವೆಂದು, ಹೇಳಿಹರು.

ಲಿಂಗವದು ಕಂಗಳು. ನೋಡುವದ ನೋಡಿದ ಕಂಗಳು, ತನ್ನ ನೋಡಿದ ಕಂಗಳು. ತನ್ನಿಂದ ತನ್ನ ನೋಡಿದ ಕಂಗಳು. ಕಣ್ಣಿನಂಥ ಇನ್ನೊಂದು ಕಣ್ಣು ಇಲ್ಲ.

ಇದು ಸಯಪ್ರಕಾಶದ ಕಣ್ಣು. ಸಮ ಪ್ರಕಾಶದಿಂ ತಾನೊಂದೆ ಇದ್ದ ಕಂಗಳು, ಆವುದರೊಳಕೊಡದ ಕಣ್ಣು, ತನ್ನಿಂದ ಬೇರಾಗದ ಕಣ್ಣು. ತಾನೆ ತಾನಾಗಿ ಬೆಳಗಿನ ಬೆಳಗಾಗಿಹ ಕಂಗಳು ಆದುದರಿಂದ ಲಿಂಗವೆಂದಿಹರು.

ನಾಸಿಕವಾಚಾರ: ಈ ಆಚಾರ ಕೆಡದ ಆಚಾರ ಕುಂದದ ಕಂದದ ಆಚಾರ, ಅಕಳಂಕ ಆಚಾರ, ಸ್ತುತಿಗೆ ಉಬ್ಬದ ಆಚಾರ, ನಿಂದೆಗೆ ಕುಗ್ಗದ ಆಚಾರ ಶುದ್ಧಾಚಾರ ಮೊದಲು ಕೆಟ್ಟು ನಂತರ ಶುದ್ಧವಾಗದಾಚಾರ, ಇದು ಶುದ್ಧಾ ಶುದ್ಧ ಕಾಣದಾಚಾರ, ಸುಗಂಧವ ಕಂಡುದಲ್ಲ, ದುರ್ಗಂಧವ ಕಂಡುದಲ್ಲ. ಮತ್ತೊಂದನ್ನು ಕಾಣದೆ ತನ್ನ ಕಂಡುದರಿಂದ ಕೆಡದ ಆಚಾರ. ಇದು ದೇಹೊಹಂ ಭಾವರೂಪಿ ದುರ್ಗಂಧವ ಕಂಡು ಕುಗ್ಗಲಿಲ್ಲ. ಸೋಹಂ ಎಂಬ ಸುಗಂಧವ ಕಂಡ ಹಿಗ್ಗಲಿಲ್ಲ, ಇದು ದಾಸೋಹಂ, ನಿಲುವುಳ್ಳದ್ದಾದುದರಿಂದ ಭರಿತಭಾವದಾಚಾರ. ಇದು ಗುರುವಿನ ಕೈಯಲ್ಲಿ ಆನೆಂಬುದು ಸತ್ತು ಹುಟ್ಟಿದುದರಿಂದ ನಾನೀನೆಂಬ ಸಂದಳಿದ ನಿಜದ ನಿಲುವುಳ್ಳ ನಿಷ್ಕಳಂಕ ಆಚಾರ. ಇದು ಲಿಂಗಾಂಗ ಸಮರಸ ಸಂಜ್ಞೆಯುಳ್ಳದ್ದು ಆದುದರಿಂದ ಕೂಟಸ್ಥದಾಚಾರ, ನಾಸಿಕದ ಮುಖ ಎರಡಾಗಿ ಕಂಡರೂ ಒಂದೆ, ಎರಡೆಂಬುದು ಒಂದು, ಒಂದಾಗಿರ್ದ ಘನವ ಉಪಮೆಗೆ ತಂದು ನುಡಿಯಬಹುದೇ? ಇದು ಕಾರಣ ಇದು ಕೆಡದ ಆಚಾರವೆಂದು ಹೇಳಿದೆ.

ಕರ್ಣಪ್ರಸಾದ: ನಿಃಶಬ್ದ ನಿಲುವುಳ್ಳ ಕರ್ಣವಾದುದರಿಂದ ಕರ್ಣಪ್ರಸಾದವೆಂದು ಹೇಳಿಹರು, ಈ ಕರ್ಣ ಕೇಳದುದ ಕೇಳಿದ ಕರ್ಣ. ಶಬ್ದ ಕೇಳಿದ ಕರ್ಣಗಳುಂಟು, ದ್ವೈತ ಬೋಧವ ಕೇಳಿದ ಕರ್ಣಗಳು ಉಂಟು, ವಿಶಿಷ್ಟಾದ್ವೈತ ಬೋಧ ಕೇಳಿದ ಕರ್ಣಗಳು ಉಂಟು. ಶಕ್ತಿ ವಿಶಿಷ್ಟಾದ್ವೈತ ಬೋಧ ಕೇಳಿದ ಕರ್ಣಗಳೂ ಉಂಟು. ಅದ್ವೈತ ತತ್ವ ಕೇಳಿದ ಕರ್ಣಗಳೂ ಉಂಟು, ಇವೆಲ್ಲವುಗಳಿಗೆ ಸಮಾನವಾಗಿ ಬೆಳಗುವ ಬೆಳಗು, ಅಖಂಡಿತ ಘನದ ಬೆಳಗು. ಸೀಮಾತೀತ ಬೆಳಗು, ನಿಸ್ಸೀಮ ಬೆಳಗು ಸ್ವಯಂ ಬೆಳಗುಳ್ಳ ತತ್ವ, ಈ ಮಹದರುವುಳ್ಳ ಮಹಾನುಭವ ಕೇಳಿದ ಕರ್ಣಂಗಳುಂಟೆ? ಅರಸುವ, ಅರ್ಚಿಸುವ, ಜಪ, ತಪಂಗಳ, ಪಾಠ ಪಾರಾಯಣಂಗಳ, ಧಾರಣ ಧ್ಯಾನಗಳ ಮಾಡಲು ಕೇಳಿದ ಕರ್ಣಂಗಳುಂಟು, ಅರಸದ ಅರ್ಚಿಸದ ಅನುವರಿತು, ಘನವ ಬೆರತು ತನ್ನಲ್ಲಿ ತಾನು ಸನ್ನಿಹಿತವಾದ ಕರ್ಣವೆ ಕರ್ಣಪ್ರಸಾದ. ಈ ಕರ್ಣ ಪ್ರಸಾದ ನಿಃಶಬ್ದ ಘನದನುವುಳ್ಳ ಕರ್ಣವಾದುದರಿಂದ ಕರ್ಣ ಪ್ರಸಾದವೆಂದು ಹೇಳಿಹರು.

ಹಸ್ತ ಜಂಗಮ, ಅಭಯಹಸ್ತ, ವರ ಹಸ್ತ, ಕೃಪಾಹಸ್ತದ ಜಂಗಮ, ಈ ಘನಜಂಗಮ, ನಿರ್ದೇಹಿ, ನಿರಾಲಂಬಿ, ನಿಸ್ಸಂಗ , ನಿಜೈಕ್ಯನಾಗಿರುವದರಿಂದ ಈ ದೇವನಮಹಾನುಭವದಿಂದ ಸಕಲ ಮಾನವ ಕೋಟಿಗೂ ಭಯದಿಂದ ಬಿಡುಗಡೆಯಾಗುವ ಸುಸಂಧಿ ದೊರೆತರೂ ಅವರವರ ಹೃದಯದ ದೋಷದಿಂದ, ಘನ ಜಂಗಮದಲ್ಲಿ ಅಪಾರ ಶ್ರದ್ಧೆ ಬಾರದ್ದರಿಂದ ಅವರು ಭಯದಿಂದುಕ್ತರು, ಕೌರವರು ಭಯದಿಂದುಕ್ತರು. ಪಾಂಡವರು ಭಯದಿಂದ ವಿಮುಕ್ತರು.

ಅನನ್ಯ ಭಕ್ತರಿಗೆ ಭವ ವಿರಹಿತರ ಮಾಡುವ ಹಸ್ತ, ಅತೀಂದ್ರಿಯರ ಮಾಡುವ

ಹಸ್ತ, ಲಿಂಗ ಪ್ರಾಣಿಗಳ ಮಾಡುವ ಹಸ್ತ, ಮನ ಸುಮನ ಮಾಡುವ ಹಸ್ತ, ಒಡಲಿಲ್ಲದವನನ್ನಾಗಿ ಮಾಡುವ ಹಸ್ತ. ತನ್ನ ನೆನಹನ್ನ ಬರ ತನ್ನಂತೆ ಮಾಡುವ ಕೃಪಾಹಸ್ತ. ದೇಹ, ದೇಹಿ ಎಂಬ ಭೇದವ ಕೆಡಿಸಿ ನಿರ್ದೇಹಿಯನ್ನಾಗಿ ಮಾಡುವ ಅಭಯಹಸ್ತ. ಕ್ಷರಾಕ್ಷರವೆಂಬ ಮತಿಯ ಕೆಡಿಸಿ ಸುಮತಿ ಸುಜ್ಞಾನವ ಕರುಣಿಸುವ ವರಹಸ್ತ, ಮರವರುವ ಕೆಡಸಿ, ಅರುವಿನರುವ ಕರುಣಿಸುವ ಕೃಪಾಹಸ್ತ, ಚಿಂತನವ ಕೆಡಿಸಿ, ಅಚಿಂತ್ಯತ್ವ ಕರುಣಿಸುವ ಅಪೂರ್ವಿಕ ಹಸ್ತ, ಮುನ್ನ, ಮುನ್ನಲಾದ ಘನದಿರುವ ಕರುಣಿಸುವ ವರಹಸ್ತ ಭವಭವಂಗಳ ಭಯವ ಕೆಡಿಸಿ ನಿರ್ಭಯರ ಮಾಡುವ ಅಭಯ ಹಸ್ತ, ಭಾವ ಭ್ರಾಂತಿಯ ಕೆಡಿಸಿ, ಭಾವಕ್ಕಗಮ್ಯರ ಮಾಡುವ ಅಭಯ ಹಸ್ತ, ಅತ್ಯಂತ ದುಃಕ ನಿವೃತ್ತಿ, ಪರಮಾನಂದ ಪ್ರಾಪ್ತಿರೂಪ, ಪ್ರಾಪ್ತ ಕರುಣಿಸುವದರಿಂದ, ಅಭಯ ಹಸ್ತ ಜಂಗಮನದು ಎಂದು ಹೇಳಿಹರು.

ಭಾವ ಮಹಾಲಿಂಗ: ಭಾವ, ಅಚಿಂತ್ಯಪದ ದಲ್ಲಿದ್ದು, ನಿಶ್ಚಿಂತ ನಿಜಾಲಯನೋಡಾ. ನಿಜ ನಿವಾಸದಲ್ಲಿದ್ದ ಘನವ ಅದನೆಂತು, ವರ್ಣಿಸುವದು, ಸರ್ವಪ್ರಪಂಚ ನಿವೃತ್ತವಾಗಿಹ ಘನವ ಅದನೆಂತು ವರ್ಣಿಸುವದು, ಅಲ್ಲಿ ಪ್ರಪಂಚ ಸತ್ಯಮಿಥ್ಯವೆಂಬ ವೃತ್ತಿಗಿಂಬಿಲ್ಲ, ಪರಮಾರ್ಥ ಸತ್ಯಮಿಥ್ಯೆವೆಂಬ ವೃತ್ತಿಗಿಂಬಿಲ್ಕ, ಎಲ್ಲೆಲ್ಲೂ ಲಿಂಗವೆ. ಶಬ್ದ ಲಿಂಗವು, ರೂಪ ಲಿಂಗವು, ಸ್ಪರ್ಶ ಲಿಂಗವು, ರಸ ಲಿಂಗವು, ಗಂಧ ಲಿಂಗವು, ಕಂಡುದೆಲ್ಲವೂ ಲಿಂಗವು. ಲಿಂಗದ ವಿನಃ ಅನ್ಯವ ಕಾಣದ ಅಖಂಡ ದೃಷ್ಟಿ ಅಖಂಡ ಭಾವ, ಅಖಂಡ ಜ್ಞಾನ ತುಂಬಿದುದು. ಈ ಪೂರ್ಣಭಾವ ತುಂಬಿ ತುಳಕದ ಭಾವ, ನಾನೀನೆಂಬುದಕ್ಕೂ ತೆರಹಿಲ್ಲದ ಭಾವ, ಪಿಂಡಾಂಡ ಕಂಡರೂ ತೆರಹಿಲ್ಲದ ಘನವಾಗಿದೆ. ಬ್ರಹ್ಮಾಂಡವ ಕಂಡರೂ ತೆರಹಿಲ್ಲದ ಘನವು. ಅಂಗ ಲಿಂಗವೆಂಬುದು ತೆರಹಿಲ್ಲದ ಘನವು. ಇದ್ದುದೊಂದೆ ತೆರಹಿಲ್ಲದ ಘನವು. ಮನ ಮೇರೆದಪ್ಪಿದ ಘನದ ಭಾವವೆ ಭರಿತ ಭಾವವಾದ್ದರಿಂದ ಭಾವ ಮಹಾಲಿಂಗವೆಂದು ಹೇಳಿಹರು.

ಈ ಭರಿತ ಭಾವವೆ ಮಹಾಲಿಂಗವಾದುದರಿಂದ ಅಂಗವೆನಲಿಲ್ಲ ಲಿಂಗವೆನಲಿಲ್ಲ. ಬದ್ಧನೆನಲಿಲ್ಲ, ಮುಕ್ತನೆನಲಿಲ್ಲ, ಸಂಗಿ ಎನಲಿಲ್ಲ, ನಿಸ್ಸಂಗಿ ಎನಲಿಲ್ಲ, ಅರಿತವ ನೆನಲಿಲ್ಲ, ಅರಿಯದವ ನೆನಲಿಲ್ಲ, ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ನಿಜವೆಂದರಿ ತಿರುವದರಿಂದ ಕೂಡಲ ಚೆನ್ನಸಂಗಾ ನಿಮ್ಮ ಶರಣ ಸರ್ವಾಂಗಪ್ರಸಾದಿ. ಶರಣ ಸರ್ವಾಂಗ ಪ್ರಸಾದಿಯಾದುದರಿಂದ, ಸರ್ವಾಂಗವೆಂಬುದು ಬೆಳಗುಳ್ಳ ಬೆಳಗಿನ ನಿಲಯ, ನಿರವಯದ ನಿಲುವುಳ್ಳ ಸರ್ವಾಂಗ, ಸಚ್ಚಿದ್ರೂಪವರಿತು, ಅದುವೆ ಆಗಿಹ ಸರ್ವಾಂಗ ಮತಿ ಗತಿಗೆ ಮೀರಿದ ಸರ್ವಾಂಗ, ನಿಷ್ಪತ್ತಿ ನಿರಾಳ ನಿಲುವುಳ್ಳ ಸರ್ವಾಂಗ ಇದು ಚಿದಂಗ, ಚಿದ್ಘನದ ಬೆಳಗುಳ್ಳ ಬೆಳಗಿನ ಅಂಗ ಅರಿದರುಹಿಸಿ ಕೊಂಬುದಕ್ಕೂ ಮೀರಿದ ಬೆಳಗುಳ್ಳ ಸ್ವಯಂ ತೇಜ ನಿಮ್ಮ ಶರಣ ಸಂಗಮ ಸರ್ವಾಂಗವು ಎಂದು ಹೇಳಿಹರು.

**ವಚನ 19**

**ಕಲ್ಪಿಸಿ ಅರ್ಪಿಸಲಿಲ್ಲ,**

**ಅರ್ಪಿಸಿ ಭೋಗಿಸಲಿಲ್ಲ,**
**ಅರ್ಪಿತ ಅನರ್ಪಿತವೆಂಬೆರಡಳಿದನಾಗಿ**
**ಕಾಯದ ಕೈಗಳ ಕೈಯ**
**ಭಾವದ ಕೈಗಳ ಕೈಯ ಅರ್ಪಿಸುವನಲ್ಲ,**
**ಆತ ಅರ್ಪಿತ ತಾನಾಗಿ,**
**ಅರ್ಪಿತ ಅನರ್ಪಿತವೆಂಬ ಸಂದಳಿದುಳಿದನು**
**ಕೂಡಲಚನ್ನ ಸಂಗಾ, ನಿಮ್ಮ ಶರಣಂಗೆ ಪ್ರಸಾದವೆ ಪ್ರಳಯವಾಯಿತ್ತು.**

ತಾತ್ಪರ್ಯ: ಕಲ್ಪಿಸಿ ಅರ್ಪಿಸುವವನಲ್ಲ, ಅರ್ಪಿಸಿ ಭೋಗಿಸುವವನಲ್ಲ: ಆರಿಗೆ ತಾನು ಕಲ್ಪಿತ ಪುರಷನು, ಜೀವನು ಎಂಬ ಭ್ರಮಾತ್ಮಕ ಬುದ್ಧಿಯುಳ್ಳವಾನಾಗಿರುವನು. ಅವನಿಗೆ ದೇವರು ದೊಡ್ಡವನು, ನಾನು ಸಣ್ಣವನು ಎನ್ನುವ ಭೇದ ಜ್ಞಾನವಿದೆ. ಅಲ್ಲಿಯೆ ಮಾಯೆ ಉಪಾಧಿಯಳ್ಳ ಈಶ್ವರನು ಸರ್ವಜ್ಞನನು, ಸರ್ವಶಕ್ತನು, ಸರ್ವಾಂತರ್ಯಾಮಿ, ಸ್ವತಂತ್ರ, ಪರೋಕ್ಷ, ಬಂಧಮೋಕ್ಷರಹಿತ, ಆನಂದ ಸ್ವರೂಪ ಅವಿದ್ಯೆ ಉಪಾಧಿಯ ಜೀವನು ಅಲ್ಪಜ್ಞ, ಕುಂಚಿಜ್ಞತ್ವ ಪರತಂತ್ರ ಬಂಧಮೋಕ್ಷ ಸಹಿತ, ಕರ್ತೃತ್ವ ಭೋಕ್ತೃತ್ವಾದಿ ಗಳಿಂದುಕ್ತ ನಾದುದರಿಂದ ಜೀವ ಈಶ್ವರ ಭೇದವೆ ದೃಢತರವಾದುದು.

ಎಲ್ಲಿ ಜೀವ ಈಶ್ವರರನ್ನು ಕಲ್ಪಿಸಿರುವನು ಅಲ್ಲಿಯೆ ತಪ್ಪು ತಿಳುವಳಿಕೆ ಇದೆ. ಈ ಭ್ರಾಂತಿಜ್ಞಾನ, ಯುತಾರ್ಥ ಜ್ಞಾನ ದರ್ಶನವಿಲ್ಲದುದರರಿಂದ, ಭ್ರಾಂತಿಯಿಂದುಕ್ತರಾದವರು. ಅವರಿಗೆ ಕಲ್ಪಿತ ಪುರುಷ ಕಲ್ಪಿತ ಪ್ರಪಂಚ ಅವನ ಕಾರ್ಯಇದ್ದಂತಾಗಿದೆ. ವಿಚಾರ ಮಾಡಲು ಕಲ್ಪಿತ ಪರುಷನು ಇಲ್ಲವಾದುದು ಅವನ ಪ್ರಪಂಚ ಇಲ್ಲಾದುದು, ಇಲ್ಲವಾಗಿ ಇಲ್ಲ. ಮಾಯೆಯು ಇದು ಇಲ್ಲವಾಗಲೊಲ್ಲದು, ಇದು ಭ್ರಮೆ, ಇದು ಇಲ್ಲವಾಗದ್ದರಿಂದ ಭ್ರಮೆ ಬುದ್ಧಿ ನಷ್ಟವಾಗಲಿಲ್ಲ. ನಷ್ಟವಾಗದ್ದರಿಂದ ಜೀವ ಅಲ್ಪಜ್ಞ, ಶಿವ ಸರ್ವಜ್ಞನೆಂಬ ಭೇದಜ್ಞಾನ ಹೋಗಲಿಲ್ಲ.

ಆರಿಗೆ ಅಕಲ್ಪಿತ ಘನವೆ ತಾನು ಎಂಬ ಯತಾರ್ಥಜ್ಞಾನವಾಗಿದೆ. ಆ ಘನವಂತನು ಕಲ್ಪಿಸಿ ಅರ್ಪಿಸುವವನಲ್ಲ. ಅರ್ಪಿಸಿ ಭೋದಿಸುವವನಲ್ಲ, ಅಖಂಡ ಜ್ಞಾನಿಗೆ ಕಲ್ಪಿತನಿಲ್ಲ, ಕಲ್ಪಿಸುವ ಮನವಿಲ್ಲ. ಕಲ್ಪಿತ ಪದಾರ್ಥವಿಲ್ಲ, ಎಲ್ಲಿ ಮನವಿಲ್ಲ, ಅಲ್ಲಿ ಕಲ್ಪಿಸುವುದಿಲ್ಲ, ಕಲ್ಪನೆಯಿಲ್ಲ. ಇಲ್ಲಾದುದು ಇಲ್ಲಾದುದು ಇಲ್ಲವಾದಲ್ಲಿ ಅಲ್ಲಿ ಜೀವನೆಂಬುದಿಲ್ಲ, ಪರಮನೆಂಬುದಿಲ್ಲ, ಎರಡೆಂಬುದಿಲ್ಲ, ಒಂದೆಂಬುದಿಲ್ಲ. ಇಲ್ಲಾದುದು ಇಲ್ಲಾದುದು ಇಲ್ಲವಾದಲ್ಲಿ ಪ್ರಮಾತೃವೆಂಬುದಿಲ್ಲ. ಪ್ರಮಾಣವೆಂಬುದಿಲ್ಲ. ಪ್ರಮೇಯುವೆಂಬುದಿಲ್ಲವಾದುದರಿಂದ ಕಲ್ಪಿಸಿ ಅರ್ಪಿಸುವವನಲ್ಲ, ಅರ್ಪಿಸಿ ಭೋಗಿಸುವುವವನಲ್ಲ, ಆ ಮಹಾಂತ ಅರ್ಪಿತ ಅನರ್ಪಿತ ವೆಂಬೆರಡಳಿದನಾಗಿ ಕಾಯದ ಕೈಗಳ, ಕೈಯ, ಭಾವದ ಕೈಗಳ ಕೈಯ ಅರ್ಪಿಸುವನಲ್ಲ, ಆತ ಅರ್ಪಿತ.

ಈ ಘನಮಹಿಮನ ದಿವ್ಯದೃಷ್ಟಿಗೆ ಅಕಲ್ಪಿತ ಘನವೊಂದೆ ಬೆಳಗುಳ್ಳ ಬೆಳಗು, ಇದುವೆ ತಾನಾದ ತನ್ನಿರುವ ಅರಿವು. ಆದುದರಿಂದ ಆತ ಅರ್ಪಿತ ಆತನಿಗೆ ಪ್ರಮಾತೃ ತಾನೆಂಬುದಿಲ್ಲ. ಪ್ರಮಾಣವೆನಿಸಿಕೊಂಡಿಹ ಕಾಯದ ಕೈಗಳ ಕೈಯ ಭಾವದ ಕೈಗಳ

ಕೈಯ ಪ್ರಮೇಯರೂಪಿ ಪದಾರ್ಥ, ಈ ತ್ರಿಪುಟಿಯೆ ಇಲ್ಲಾದುದು ಇಲ್ಲಾದುದರಿಂದ ಆತ ಅರ್ಪಿತ, ಆ ಮಹಿಮಂಗೆ ಅರ್ಪಿತವೆಂಬುದಿಲ್ಲ, ಅನರ್ಪಿತ ವೆಂಬುದಿಲ್ಲವಾದ್ದರಿಂದ ಎರಡಳಿದ ಘನವಂತ ತಾನಾಗಿ ಅರ್ಪಿತ ಅನರ್ಪಿತವೆಂಬ ಸಂದಳಿದನು.

ಕೂಡಲ ಚೆನ್ನಸಂಗಾ ನಿಮ್ಮ ಶರಣಂಗೆ ಪ್ರಸಾದವೆ ಪ್ರಳಯವಾಯಿತ್ತು: ಕೂಡಲಚೆನ್ನಸಂಗಾ ನಿಮ್ಮ ಶರಣ ನಿರ್ಭಾವಿ, ನಿರ್ದೇಹಿ, ನಿರಾಲಂಬ ತಾನೆಂದರಿತ ಮಹಾನು ಭಾವ. ಈ ಮಹದರುವು ತಾನಾಗಿ ಅರ್ಪಿತ, ಅನರ್ಪಿತವೆಂಬ ಭಾವಂಗಳಿಗೆ ಮೀರಿದ ಸ್ವಯಂಜ್ಯೋತಿ ತಾನಾಗಿ ಉಳಿದನು. ಶರಣಂಗೆ ಅರ್ಪಿತವು ಭ್ರಮವೆ ಅನರ್ಪಿತವೆಂಬುದು ಭ್ರಮವೆ ಆದುದರಿಂದ ಉಂಟೆಂಬುದನುಂಟೆನ ಬಲ್ಲ ಪ್ರಸಾದವು ಪ್ರಳಯುವಾಯಿತ್ತು. ಇಲ್ಲೆಂಬುದನಿಲ್ಲೆಂಬ ಸಾಪೇಕ್ಷತೆಯಿಂದ ಉಂಟೆಂಬುದನುಂಟೆಂಬುದು ಉಂಟಾಗಿತ್ತು. ಇಲ್ಲೆಂಬುದು ಇಲ್ಲವಾದಾಗ ಉಂಟೆಂಬುದನುಂಟೆಂಬುದು ಪ್ರಳಯವಾಯಿತ್ತು ನಿಮ್ಮ ಶರಣಂಗೆ.

ಇಲ್ಲೆಂಬುದು ಇಲ್ಲಾದುದು ಎನ್ನುವುದು ಮರವು ವುಂಟೆಂಬುದನುಂಟೆನಬಲ್ಲದು ಅರುವು. ಈ ಮರವರುವು ಸಂದುಳಿದ ಶರಣ ಅನುಪಮ ಶರಣನ ನಿಲುವು ಘನಕ್ಕೆ ಘನ, ಮರವರುವಿಂಗೆ ಮೀರಿದ ಘನ, ತಾನೆ ತಾನಾಗಿ ಬೆಳಗುವ ಪರಮ ನಿರಂಜನ ನಿರಾಳಂಗೆ, ಇಲ್ಲವೆಂಬುದು ಇಲ್ಲವಾದುದರಿಂದ ಅರ್ಪಿತ, ಅನರ್ಪಿತ ವೆಂಬೆರಡರ ಸಂದಳಿದುಳಿದ ಮಹಾಂತ, ಉಂಟೆಂಬುದನುಂಟೆನ ಬಲ್ಲ ಪ್ರಸಾದ ಪ್ರಳಯವಾಗಿ ತೆರಹಿಲ್ಲದ ಮಹದರುವಿನ ಮಹಾಪ್ರಸಾದಿ ಆ ಪ್ರಸಾದವೆ ತಾನಾಗಿ ಬೆಳಗುವ ಪರಂಜ್ಯೋತಿ, ಉದಯಾಸ್ತಗಳಿಲ್ಲದೆ, ಬೆಳಗುಳ್ಳ ಪರಂಜ್ಯೋತಿ ಅದು ಚೈತನ್ಯವದು ನಿರಂತರ, ಏಕ ಏವ ಅದ್ವಿತೀಯವಾದ ಘನ ಅರಿವುಡೆ ತಾನೆ, ತಾನೆಂಬುದು ನುಡಿಗೆಡೆಗೊಡದ ಘನವು, ತನಗಿಂತ ಭಿನ್ನವಾದುದು ಇಲ್ಲ, ತನ್ನೊಂದಿಗೆ ಸೇರಿದುದು ಇಲ್ಲ. ತಾನೆ ತಾನಾಗಿರುವುದರಿಂದ ಘನಕ್ಕೆ ಘನನಾಗಿ ಉಂಟೆಂಬದುನುಂಟೆನ ಬಲ್ಲ ಪ್ರಸಾದ ಪ್ರಳಯವಾಯಿತ್ತು ಎಂದು ಹೇಳಿಹರು. ಗುರುವಿನಿಂದ ಬಂದುದಿರಲಿ, ಲಿಂಗದಿಂದ ಬಂದುದಿರಲಿ, ಆವುದರಿಂದಲಾದರೂ ಬಂದುದಿರಿಲಿ, ಬಂದ ಪ್ರಸಾದ ಪ್ರಳಯವಾಯಿತ್ತು. ಹೆತ್ತರಿವು ಪ್ರಳಯವಾಯಿತ್ತು, ನಿಮ್ಮ ಶರಣಂಗೆ ಎಂದು ಹೇಳಿಹರು.

**ವಚನ 20**

**ಮುಟ್ಟದ ಮುನ್ನ ದಿಟ ಘಟಿಸಿ ಬಂದುದು ಸಟೆಯಲ್ಲ ಕಾಣಿರೆ?**
**ಮುಟ್ಟಿತ್ತೆ ಮಹಾಪ್ರಸಾದ ಕೂಡಲಸಂಗಮದೇವಾ ॥ 815 ॥**

**ತಾತ್ಪರ್ಯ:** ಮುಟ್ಟದ ಮುನ್ನ ದಿಟ ಘಟಿಸಿ, ಬಂದುದು ಸಟೆಯಲ್ಲ ಕಾಣಿಕೆ: ಎಲ್ಲಿಯುವರೆಗೆ ದಿಟವು ತನ್ನಿಂದ ತನಗೆ ಲಭ್ಯವಾಗಿರುವದಿಲ್ಲ ಬಂದುದು ಸಟೆಯೆನಿಸುವದಿಲ್ಲ, ಅದು ನಿಜವೆನ್ನುವಂತೆ ಕಂಡರೂ ಅದು ಯತಾರ್ಥವಲ್ಲ.

ಬಂದುದು ಆವುದು? ಗುರುವಿನಿಂದ ಬಂದುದು ಲಿಂಗದಿಂದ ಬಂದುದು, ಜಂಗಮದಿಂದ ಬಂದುದು ಆದುದರಿಂದ ನಿಜವಲ್ಲ.

ನಿಜವೆಂಬುದು, ನಿಜವೆನಲು ಮೀರಿದುದು, ನಿರಂತರವದು ದಿಟ. ಇದು

ತನ್ನಿಂದ ತನಗದು ವೇದ್ಯವಾಗಲು, ತಾನೆ ದಿಟ, ಆಗ ಬಂದುದೆಲ್ಲ ಸಟೆಯಲ್ಲ ಕಾಣಿರೆ? ತಾನು ಗುರು ಮುಟ್ಟಿದ ಮುನ್ನ ಲಿಂಗ ಮುಟ್ಟದ ಮುನ್ನ ಜಂಗಮ ಮುಟ್ಟದ ಮುನ್ನ ಇದ್ದುದು. ಪಾದೋದಕ ಪ್ರಸಾದ ಮುಟ್ಟದ ಮುನ್ನ ಇದ್ದುದು. ಇದ್ದುದು ತಾನೆ. ಅಂದು, ಇಂದು, ಎಂದೆಂದೂ ತಾನೆ, ತಾನೆ ಇದ್ದುದು.

ತಾನಿಲ್ಲದ ಮುನ್ನ ಗುರುವೆಲ್ಲಿಯದು, ಲಿಂಗವೆಲ್ಲಿಯದು, ಜಂಗಮವೆಲ್ಲಿಯದು, ಪಾದೋದಕವೆಲ್ಲಿಯದು, ಪ್ರಸಾದ ವೆಲ್ಲಿಯದು, ಸ್ವಯಂವೆಲ್ಲಿಯದು, ಪರವೆಲ್ಲಿಯದು ಇವೆಲ್ಲವು ಹೆತ್ತರಿವು, ತಾನೆ ಸ್ವಯಂಜ್ಯೋತಿ ಕಲ್ಲೇಶ್ವರ. ಎಂಬ ಮಹದರಿವು ತನ್ನಿಂದ ತನಗೆ ವೇದ್ಯವಾಗುವುಡೆ, ತಾನೆ ನಿರಂತರ ಇದ್ದವನು, ತಾನೆ ದಿಟ, ತನಗೆ ತಾನು ಲಭ್ಯವಾದ ಮೇಲೆ ಇನ್ನೇನಿನ್ನೇನು. ಆಗ ಬಂದುದೆಲ್ಲ ಸಟೆಯಲ್ಲ ಕಾಣಿರೆ? ಗುರು, ಲಿಂಗ, ಜಂಗಮ, ಪ್ರಸಾದ ರೂಪವಾಗಿ ಬಂದುದು ಸಟೆಯಲ್ಲ, ತನಗಿಂತ ಭಿನ್ನವಾದುದಿಲ್ಲ, ತನ್ನೊಂದಿಗೆ ಸೇರಿದುದು ಇಲ್ಲ, ತಾನೊಂದೆ ನಿರಂತರಮಯವಾಗಿಹ ಮಂಗಳಮಯ ತತ್ವ ಇರುವಲ್ಲಿ, ಗುರುವಾಗಿ ಕಂಡರೂ ತಾನೆ, ಲಿಂಗವಾಗಿ ಕಂಡರೂ ತಾನೆ, ಜಂಗಮವಾಗಿ ಕಂಡರೂ ತಾನೆ, ಪಾದೋದಕ ಪ್ರಸಾದ ತಾನೆ, ಅದಕ್ಕಾಗಿ ಮುಟ್ಟಿತ್ತೆ ಮಹಾ ಪ್ರಸಾದ ಕೂಡಲ ಸಂಗಮದೇವಾ ಎಂದು ಬಸವಣ್ಣನವರು ಹೇಳಿಹರು. ತಾನೆ ತನ್ನನ್ನು ಮುಟ್ಟಿತ್ತೆ ಮಹಾಪ್ರಸಾದ.

ಗುರುಶಿಷ್ಯರಾಗಿ ಮುಟ್ಟಿದುದು ಮಹಾಪ್ರಸಾದವಲ್ಲ, ಲಿಂಗಬೇರೆ ತಾನು ಬೇರಾಗಿ ಮುಟ್ಟಿದುದು ಮಹಾಪ್ರಸಾದವಲ್ಲ. ಭಕ್ತ ಜಂಗಮರಾಗಿ ಮುಟ್ಟಿದುದು ಮಹಾ ಪ್ರಸಾದವಲ್ಲ, ಮಹಾಪ್ರಸಾದವೆಂಬುದು ತಾನೆ ತಾನಾಗಿ ಬೆಳಗುವ ಬೆಳಗು. ಸ್ವಯಂ ಬೆಳಗು ಅದು ತಾನಾರೆಂದರಿತ ತನ್ನರುವಿನ ಅರುವು ಸ್ವಯಮೇವ ಇರುವು. ಈ ಮಹದರಿವು, ಗುರು,ಲಿಂಗ, ಜಂಗಮದಿಂದ ಬಂದ ಪ್ರಸಾದವಲ್ಲ ಹೆತ್ತರಿವು ಅಲ್ಲ. ತನ್ನಿರುವಿನ ಅರುವು ತನ್ನಿಂದ ತನಗೆ ವೇದ್ಯವಾದುದು. ಇದು ವೇದ್ಯವಾದಾಗ ತನ್ನ ಹೊರ್ತು ಅನ್ಯವಸ್ತು ಇಲ್ಲ, ತನ್ನ ಸಮಾನ ವಸ್ತುವಿಲ್ಲ, ತಾನೆ ತಾನು ತಾನೊಂದೆ ಇದ್ದುದರಿಂದ, ತನ್ನಿಂದ ತನ್ನ ಮುಟ್ಟಿತ್ತೆ ಮಹಾಪ್ರಸಾದ. ತೆರಹಿಲ್ಲದ ಘನ, ಘನಕ್ಕೆ ಘನ ಬೆಳಗಿನ ಬೆಳಗು, ಅರುವಿನ ಅರುವು ಅರಿಯದರವು. ತಾನೆ ತಾನಾಗಿ ನಿಂತ ನಿಜ ನಿಲಯ. ಇದು ತನ್ನಿಂದ ತನಗೆ ವೇದ್ಯವಾದಾಗ ಬಂದುದೆಲ್ಲ ಸಟೆಯಲ್ಲ.

ದಿಟವು ಲಭ್ಯವಾದಾಗ ಸಟೆಯೆಂಬುದಿಲ್ಲ, ಎಲ್ಲಿಯವರೆಗೆ ತಾನಾರೆಂದು ತನ್ನನ್ನು ತಿಳಿಯುವುದಿಲ್ಲ. ಅಲ್ಲಿಯವರೆಗೆ ಬಂದುದಾಗಿ ಭಾಸವಾಗುವದು. ಅದು ಎರವಲ ಅರಿವು ಎಂದೆನ್ನುವರು. ಆವಾಗ ತಾನಾರೆಂದು ತನ್ನನ್ನು ತಿಳಿದನು. ಆಗ ಬಂದುದಿಲ್ಲ ಹೋದುದಿಲ್ಲ, ಸಕಳ ತಾನೆ, ನಿಃಕಳ ತಾನೆ, ದೀಪ್ತಿ ತಾನೆ, ದೀಪ ತಾನೆ, ಪ್ರಕಾಶ ತಾನೆ, ಕಿರಣ ತಾನೆ, ಎಂದಂತೆ. ಗುರು, ಲಿಂಗ, ಜಂಗಮ ತಾನೆ, ತಾನೆ ತನ್ನ ಮುಟ್ಟಿದುದು. ತಾನೆ ದಿಟ, ತನಗೆ ತಾನೆ ದಿಟವೆಂದು ಸಿದ್ಧವಾದುದು ಮಹಾಪ್ರಸಾದವೆಂದು ಹೇಳಿಹರು.

**ವಚನ 21**

**ಜ್ಯೋತಿ ಮುಟ್ಟಿದ ಬತ್ತಿಯೆಲ್ಲ ಜ್ಯೋತಿಯಪ್ಪವಯ್ಯ**
**ಸಾಗರ ಮುಟ್ಟಿದ ನದಿಗಳೆಲ್ಲ ಸಾಗರವಪ್ಪವಯ್ಯ**
**ಪ್ರಸಾದ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪವಯ್ಯ**
**ಲಿಂಗ ಮುಟ್ಟಿದ ಅಂಗವೆಲ್ಲ ಲಿಂಗವಪ್ಪವಯ್ಯ,**
**ಸಕಳೇಶ್ವರ ದೇವ ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪವಯ್ಯ.**

**ತಾತ್ಪರ್ಯ :** ಜ್ಯೋತಿ ಮುಟ್ಟಿದ ಬತ್ತಿಯೆಲ್ಲ ಜ್ಯೋತಿಯಪ್ಪವಯ್ಯ: ಜ್ಯೋತಿ ಮುಟ್ಟಿದ ಬತ್ತಿ, ಅದು ಬತ್ತಿಯೇ? ಅಲ್ಲಲ್ಲ ಜ್ಯೋತಿಯು ಮುಟ್ಟಿದುದು ಜ್ಯೋತಿಯು, ಜ್ಯೋತಿಯ ಮುಟ್ಟಿಸಿಕೊಂಡ ಬತ್ತಿಯು ಜ್ಯೋತಿಯು, ಜ್ಯೋತಿ ಜ್ಯೋತಿಯಾಗಿ ಪ್ರಜ್ವಲಿಸುವಲ್ಲಿ ಅಲ್ಲಿ ಆವುದು ಮುಂದು ಆವುದು ಹಿಂದೆಂದರಿವುದು.

ಸಾಗರ ಮುಟ್ಟಿದ ನದಿಗಳೆಲ್ಲ ಸಾಗರವಪ್ಪವಯ್ಯ: ನದಿಗಳು ಸಾಗರ ಮುಟ್ಟದ ಮುನ್ನ ಭಿನ್ನ ಭಿನ್ನ ನಾಮದಿಂದ ಕರೆಯಿಸಿಕೊಂಡವು. ಸಾಗರವ ಮುಟ್ಟಿದ ಬಳಿಕ ನದಿಗಳಾಗಿ ಕಾಣದಾದವು. ಭಿನ್ನ ಭಿನ್ನ ನಾಮಂಗಳು ಪುಸಿಯಾಗಿ ಸಾಗರವಾಗಿ ನಿಂದವು, ಅಲ್ಲಿ ಸಾಗರ ನದಿಗಳೆಂಬ ಬಿನ್ನದೃಷ್ಟಿಗಿಂಬುಂಟೆ? ಸಾಗರ ಸಾಗರವೆ ನಿಸ್ಸೀಮವಾಗಿ ನಿಂದ ನಿಲುವು, ಅಪಾರ ಜಲನಿಧಿಯ ನಿಲವು.

ಜ್ಯೋತಿ ಅದು ಬೆಳಗುವ ಜ್ಯೋತಿ ಇದು ಮುಟ್ಟಿದ ಬತ್ತಿಯೆಲ್ಲ ಬೆಳಗುವ ಜ್ಯೋತಿ. ಗುರು ಪ್ರಸಾದ ರೂಪಿ ಜ್ಯೋತಿಯು, ಶಿಷ್ಯರ ಅಂಗಾಂಗರೂಪಿ ಬತ್ತಿಯ ಮುಟ್ಟುವಡೆ ಗುರುಘನವು ನೋಡಾ. ಗುರುಘನವೆಂಬ ಜ್ಯೋತಿ ಇದು ಮುಟ್ಟುವುಡೆ ತನ್ನಂತೆ ಮಾಡುವ ಜ್ಯೋತಿ, ಸಮ ಪ್ರಕಾಶ ತತ್ವ ಕರುಣಿಸುವ ಜ್ಯೋತಿ, ಬೋಧಿಸಿಹನೆಂದಡೆ ಬೋಧಿಸದೆ ಇದ್ದ ಜ್ಯೋತಿ, ಬೋಧಿಸದೆ ಇರದ ಜ್ಯೋತಿ, ಕಲಿತು ಕಲಿಯದಂತಿದ್ದ ಜ್ಯೋತಿ, ಕಲಿಯದೆ ಬಾರದಂತಿದ್ದ ಜ್ಯೋತಿ, ಸಮಪ್ರಕಾಶ ತತ್ವ ಅರಿತ ಜ್ಯೋತಿ, ಸಮ ಸ್ವರೂಪವೆ ತಾವಾದ ಜ್ಯೋತಿ.

ಸಾಗರ ಮುಟ್ಟಿದ ನದಿಗಳೆಲ್ಲ ಸಾಗರವಪ್ಪವಯ್ಯ, ಸಾಗರವೆಂಬುದು ಅಖಂಡ. ನದಿ ಖಂಡ ಸೀಮಿತವಾದವುಗಳು. ಸೀಮಿತ ನದಿಗಳು ನಿಸ್ಸೀಮವಾದ ಸಾಗರ ಮುಟ್ಟಿದ ನದಿಗಳು ಸಾಗರಗಳೆ. ಹಾಗೆ ಲಿಂಗೈಕ್ಯ ಶರಣರು ಸಾಗರ ರೂಪಿಗಳು. ಶರಣಸತಿ ಲಿಂಗಪತಿ ಎಂಬುವವರು ನದಿಗಳು ಜಂಗಮ ಶುದ್ಧ ಶಿವೈಕ್ಯ ಸಾಗರ ರೂಪನು, ದಾಸೋಹಂಭಾವಿ ಶರಣ ನದಿ ರೂಪನು, ಪ್ರಭು ಸಾಗರ ರೂಪನು. ಸಿದ್ಧರಾಮ ದೇವನು ನದಿ ರೂಪನು. ಅಚಿಂತ್ಯಪದ ರೂಪರು ಸಾಗರ ಸ್ವರೂಪರು, ಚಿಂತನದಿಂದುಕ್ತರಾದವರು ನದಿಗಳು. ಲಿಂಗ ಲಿಂಗ ಎನ್ನದವರು ಸಾಗರ ಸ್ವರೂಪರು, ಲಿಂಗ ಲಿಂಗ ಎಂದು ಭಾವಿಸುವವರು ನದಿಗಳು. ಜಂಗಮ, ಜಂಗಮ ಎನ್ನದವರು ಸಾಗರ ಸ್ವರೂಪರು. ಜಂಗಮ ಎನ್ನುವವರು ನದಿಗಳು, ಭಾವಕ್ಕಗಮ್ಯರು ಸಾಗರ ಸ್ವರೂಪರು. ಭಾವಿಕರು ನದಿಗಳು. ಅರುವ ಅರಿತವರು, ಸಾಗರ ಸ್ವರೂಪರು. ಅರುವ ಚಿಂತಿಸುವವರು ನದಿಗಳು. ಲಿಂಗೈಕ್ಯರಾಗಿಹ ಶರಣರೂಪಿ ಸಾಗರ ಮುಟ್ಟಿದ

ದಾಸೋಹಂ ಭಾವರೂಪಿ ನದಿಳಾಗಿಹ ಶರಣರು, ತಾವು ಲಿಂಗೈಕ್ಯರು. ಅಚಿಂತ್ಯ ಪದವ ನೈದ ಶರಣ ರೂಪಿ ಸಾಗರ ಮುಟ್ಟಿದ ಲಿಂಗ, ಲಿಂಗ ಎಂಬ ಚಿಂತನರೂಪ ನದಿಗಳಾಗಿಹ ಶರಣರು ಅಚಿಂತ್ಯಪದವ ನೈದಿಹರು. ಅರಿಯದರುವು ಆಗಿಹ ಶರಣ ಸಾಗರ, ಈ ಶರಣರೂಪಿ ಸಾಗರ ಮುಟ್ಟಿದ ಅರಿಯುವ ಹಂಬಲವುಳ್ಳ ಶರಣರು ತಾವು ಅರಿಯದರುವು ಆಗಿಹರು. ನಿರ್ದೇಹಿಯ ಮುಟ್ಟಿದ ದೇಹಗಳೆಲ್ಲ ನಿರ್ದೇಹಿ ನೋಡಾ ಅಹಮಿಲ್ಲದ ಚಿದ್ಘನವೆ ನಿರ್ದೇಹಿ ನೋಡಾ. ಈ ಚಿದ್ಘನ ಮುಟ್ಟಿದ ಚಿದಹಮ್ಮುಳ್ಳವರು ಅಹಮಿಲ್ಲದ ಚಿದ್ಘನವಾಗಿಹರು.

ಪ್ರಸಾದ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪವಯ್ಯ: ಪ್ರಸಾದವೆಂಬ ತೆರಹಿಲ್ಲದ ಘನ ಪರಮ ಜ್ಞಾನ, ಪರಮಾಮೃತ ವಾಙ್ಮನೋತೀತವು. ಪ್ರಸಾದವೆಂಬ ವಾಙ್ಮನೋತೀತವು ಪದಾರ್ಥವೆಂಬ ವಾಕ್ ಮನವುಳ್ಳ ಭಕ್ತನ ಮುಟ್ಟುವುಡೆ, ವಾಙ್ಮನೋತೀತ ಪ್ರಸಾದವಪ್ಪುದು ತಪ್ಪದಯ್ಯ. ಪ್ರಸಾದರೂಪಿ, ನಾನೀನೆಂಬುದಕ್ಕೂ ತೆರಹಿಲ್ಲದ ಜ್ಞಾನಘನವು, ಪದಾರ್ಥವೆಂಬ ಚಿದಹಂ, ದಾಸೋಹಂಭಾವವುಳ್ಳ ಭಕ್ತನ ಮುಟ್ಟುವುಡೆ ನಾ ನೀನೇಂಬುದಕ್ಕೂ ತೆರಹಿಲ್ಲದ ಜ್ಞಾನ ಘನಪ್ರಸಾದವಪ್ಪುದು ತಪ್ಪದಯ್ಯ, ಅಚಿಂತ್ಯವೆಂಬ ಘನರೂಪೀ ಪ್ರಸಾದವ ಪದಾರ್ಥವೆಂಬ ಶರಣಸತಿ ರೂಪವ ಮುಟ್ಟುವುಡೆ ಅಚಿಂತ್ಯ ಘನವಪ್ಪುದು ತಪ್ಪದಯ್ಯಾ, ಪ್ರಭುವೆಂಬ ಪ್ರಸಾದಕ್ಕೆ ಬಸವಣ್ಣ ಚನ್ನಬಸವಣ್ಣನೆ ಪದಾರ್ಥಮುಟ್ಟಿ ಪ್ರಸಾದವಪ್ಪುದು ನೋಡಯ್ಯ, ಪರಮಜ್ಞಾನರೂಪಿ ಪ್ರಸಾದವ ಪದಾರ್ಥವೆಂಬ ಜ್ಞಾನ, ಭಾವ, ಮುಟ್ಟುವಡೆ ಪರಮಜ್ಞಾನವಪ್ಪುದು, ತಪ್ಪದಯ್ಯ.

ಪುರಷೋತ್ತಮ ರೂಪಿ ಪ್ರಸಾದವ ಪದಾರ್ಥವೆಂಬ ಭಕ್ತರೂಪಿ ಪುರುಷ ಮುಟ್ಟುವಡೆ ಪುರುಷೋತ್ತಮ ಪ್ರಸಾದವಪ್ಪುದು ತಪ್ಪದಯ್ಯಾ.

ಲಿಂಗಮುಟ್ಟಿದ ಅಂಗವೆಲ್ಲ ಲಿಂಗವಪ್ಪವಯ್ಯಾ: ಲಿಂಗವದು ಅಕಲ್ಪಿತ, ಅಂಗವದು ಕಲ್ಪಿತ, ಲಿಂಗ ಅಚಿಂತ್ಯಘನವು, ಅಂಗ ಚಿಂತನವುಳ್ಳದ್ದು. ಲಿಂಗ ಅಕ್ರಿಯೆ, ಅಂಗ ಕ್ರಿಯೆಯಿಂದುಕ್ತವು, ಲಿಂಗ ನಿರಾವರಣ, ನಿರಾಲಂಬ, ಅಂಗ ಆವರಣವುಳ್ಳದು ಆಲಂಬನವುಳ್ಳದು, ಲಿಂಗ ನಿಷ್ಕಳಂಕ, ಅಂಗ ಕಳಂಕ, ಲಿಂಗ ನಿರೂಪ, ಅಂಗ ರೂಪವು ಕತ್ತಲೆಯ ಬೆಳಕು ಸೂರ್ಯಪ್ರಕಾಶಿಸುವುಡೆ, ಕತ್ತಲೆಯು ಅತ್ಯಂತಾಭಾವವು ಹೇಗೋ ಹಾಗೆ, ಅಂಗನಿಗೆ ಅಚಿಂತ್ಯರೂಪ ಲಿಂಗದರ್ಶನವಾಗುವುಡೆ ಆಗ ಅಂಗನು ಲಿಂಗವಪ್ಪುದು ತಪ್ಪದಯ್ಯಾ. ಅಕ್ರಿಯ ಘನನಾಗಿಹ ಲಿಂಗದರ್ಶನ, ಅಂಗನಿಗೆ ಯತಾರ್ಥ ಅರಿವು ಆಗುವುಡೆ, ಲಿಂಗವಪ್ಪುದು ತಪ್ಪದಯ್ಯಾ, ಲಿಂಗ ಚೈತನ್ಯ ಅಂಗ ಚೇತನ, ಲಿಂಗ ಅರುವಿನರುವು, ಅಂಗ ಅರುವು, ಅರುವನರುವಾಗಿಹ ಲಿಂಗವ ಮುಟ್ಟುವುಡೆ, ಆಗ ಅಂಗ ಅರುವಿನರವುವಪ್ಪುದು ತಪ್ಪದಯ್ಯಾ. ಅಚಿಂತ್ಯಪ್ರಮಾಣವುಳ್ಳ ಲಿಂಗವ ಮುಟ್ಟಿದ ಅಂಗ ತಾನು ಅಚಿಂತ್ಯ ಅಪ್ರಮಾಣನೆಂಬುದು ತಪ್ಪದಯ್ಯಾ, ಲಿಂಗದರಿವು ಅಂಗನಿಗೆ ತಿಳಿಯಬೇಕಾಗಿದೆ. ಅಂಗನಿಗೆ ಲಿಂಗದರಿವು ಯಾವಾಗ ಯತಾರ್ಥ ವೇದ್ಯವಾಗುವುದು. ಆಗ ಅಂಗ, ಲಿಂಗವೆಂಬುದು, ತನ್ನಿಂದ ತನಗೆ ಸಿದ್ಧವಾಗುವದು.

ಸಕಳೇಶ್ವರ ದೇವಾ ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯ: ಸಕಳೇಶ್ವರನೆಂಬುದು ಸರ್ವಾತ್ಮ ಸಕಲರ ಸ್ವರೂಪ, ಇದು ನಿಸ್ಸೀಮ ನಿಲುವು, ಸಮದೃಷ್ಟಿಯಲ್ಲಿ ನಿಂತು ತಾವಾರೆಂದರಿತವರ ನಿಲಯ, ಅರುವ ಅರಿತವರು ಸಕಳೇಶ್ವರ. ಅವರದು ಅರುಹೃದಯ. ಅರು ಹೃದಯ ಆರನ್ನು ಮುಟ್ಟುವದೊ, ಅವರು ತಮ್ಮ ತಾವರಿತ ಅನುಪಮರು. ಇದು ಮಿಕ್ಕಿ ಮೀರಿನಿಂತ ನಿಲವು, ತನ್ನಯ ಇರವು. ಈ ಇರವು ಆರ ಹೃದಯಕ್ಕೆ ವೇದ್ಯವಾಗುವದು. ಅವರು ಸಕಳೇಶ್ವರ ದೇವರ ಮುಟ್ಟಿ, ಸಕಳೇಶ್ವರವಾದವರು ಎಂದು ಹೇಳಿಹರು.

**ವಚನ 22**

**ರೂಪೆಂದಡೆ ರುಚಿಯಾಯಿತ್ತು,**
**ರುಚಿಯೆಂದಡೆ ಸವಿಯಾಯಿತ್ತು,**
**ಸವಿಯೆಂದಡೆ ಸಂದಾಯಿತ್ತು,**
**ರೂಪೆನ್ನದೆ, ರುಚಿಯೆನ್ನದೆ, ಸವಿಯೆನ್ನದೆ, ಸಂದೆನ್ನದೆ**
**ಇದ್ದ ಪ್ರಸಾದಿಗೆ ನಮೋ ನಮೋ ಎಂಬೆ ಕೂಡಲ ಚೆನ್ನ ಸಂಗಮದೇವಾ. ॥ 326 ॥**

**ತಾತ್ಪರ್ಯ:** ರೂಪೆಂದಡೆ, ರುಚಿಯಾಯಿತ್ತು: ಓಹೋ, ಪ್ರಸಾದ! ಇದು ರೂಪೆಂದಡೆ ರುಚಿಯಾಯಿತ್ತೆ! ಇದೆಂಥ ಪ್ರಸಾದ, ಪಂಚ ಪಕ್ವಾನ್ನಗಳಿಂ ತೋರುವದಕ್ಕೆ ರೂಪ ಪ್ರಸಾದವೆನ್ನಬೇಕೆ? ಅದು ಕೂಡಾ ರೂಪೆಂದಡೆ ರುಚಿಯಾಗಿಹದು, ರುಚಿಯೆಂದಡೆ ಸವಿಯಾಗಿಹುದು, ಸವಿಯೆಂದಡೆ ಅದೊಂದು ಸೇವಿಸುವ ಪದಾರ್ಥವಾಯಿತ್ತು, ಪದಾರ್ಥವೆಂದಡೆ ಅದನ್ನು ಸೇವಿಸುವನೊಬ್ಬ, ಹೀಗೆ ಸಂದಾಗಿಪ್ಪುದು. ಇದು ಪಂಚಪಕ್ವಾನ್ನಗಳಿಂದುಕ್ತವಾದುದೆಂದರೆ, ವೈಶ್ವಾನರಿಗೆ ಹಾಕಿ ತೃಪ್ತಿ ಪಡಿಸುವ ಪ್ರಸಾದ. ಇದು ಪ್ರಸಾದವಲ್ಲ, ಪ್ರಸಾದವೆಂಬ ಪರಮಾಮೃತ, ಅದು ಪರಮಜ್ಞಾನದಿಂದ ರಚಿತವಾದ ಪಕ್ವಾನ್ನ. ಸತ್, ಚಿತ್, ಆನಂದ, ನಿತ್ಯ, ಪೂರ್ಣವೆಂಬ ಪಕ್ವಾನ್ನ, ಇದು ಶ್ರೀಗುರು ಹೃದಯದಿಂದ ಹೊರ ಹೊಮ್ಮಿ ಬಂದ ಜ್ಞಾನಾಮೃತ, ಇದು ನಿರ್ಧೇಹಿ ಜಂಗಮ ಮುಖದಿಂದ ಲಭ್ಯವಾದ ಪ್ರಸಾದ, ಇದು ಪರಾತ್ಪರವಾದುದು. ವಾಙ್ಮನೋತೀತವಾದುದರಿಂದ ಇದು ಹೃದಯದೊಳ್ ಪ್ರಜ್ವಲಿಸುವ ರೂಪ, ಈ ರೂಪ ನಿರೂಪ, ತೋರದಡಗದ ಘನವಾದುದರಿಂದ ಪರಮ ನಿರಂಜನ. ಇದು ರೂಪ ಅರೂಪವೆಂಬುದಕ್ಕೂ ಬೆಳಗುವ ಬೆಳಗು ಸ್ವಯಂ ಪ್ರಕಾಶ. ಇದು ಸತ್ಯಜ್ಞಾನಾನಂದವಾದುದರಿಂದ ರೂಪೆಂದಡೆ ರುಚಿಯಾಯಿತ್ತು. ರುಚಿಯೆಂದಡೆ ನಾಲಗೆಗೆ ತೋರುವ ಷಡ್ರುಚಿ ಅಲ್ಲ, ಇದು ಹೃದಯಕ್ಕೆ ಬಹುರುಚಿಯಾಗಿಹ ಜ್ಞಾನಾಮೃತ ಪರಮಾಮೃತ.

ಜ್ಞಾನಾಮೃತವೆಂಬೆನೆ ಇದು ಬಹುಸವಿಯಾಯು, ಸವಿಯೆಂದಡೆ ಮಧುರಾಮೃತದಿಂದುಕ್ತ ವಾದುದಲ್ಲ, ಇದು ಜ್ಞಾನಾಮೃತವ ನುಂಡ ಚಿದ್ರಸ ಇದು ಸವೆಯದ ಸುಖ, ಅಕ್ಷಯ ಸುಖ, ಸುಖಸ್ವರೂಪ ಸುಖ ಎಂಬೆನೆ ಸಂದಾಯಿತ್ತು, ಸಂದೆಂದರೆ ಜ್ಞಾನಾಮೃತ ಬಂದು ಅದನ್ನು ಅನುಭವಿಸುವ ಹೃದಯ, ಮತ್ತೊಂದು

ಹೀಗೆ ಎರಡಾಗಿ ಕಂಡುದರಿಂದ ಸಂದಾಯಿತ್ತು ಎಂದು ಹೇಳಿದ್ದಾರೆ.

ರೂಪೆನ್ನದೆ, ರುಚಿಯೆನ್ನದೆ, ಸವಿಯೆನ್ನದೆ, ಸಂದೆನ್ನದೆ ಇದ್ದ ಪ್ರಸಾದಿಗೆ ನಮೋ ನಮೋ ಎಂಬೆ ಕೂಡಲ ಚೆನ್ನ ಸಂಗಮದೇವಾ, ರೂಪೆನ್ನದೆ, ಶ್ರೀಗುರುವಿನಿಂದ ದೊರೆತುದಾಗಿರಲಿ ಲಿಂಗ ಒಂದಾಗಿರ್ದ ಜಂಗಮ ಮುಖದಿಂದ ಲಭ್ಯವಾದುದು, ಅದು ಪರಾತ್ಪರ ಪರಮಜ್ಞಾನ ವಾಙ್ಮನೋತೀತ ವಾದುದರಿಂದ ಗುರು ಬೇರೆ, ಹೃದಯಬೇರೆ ಪರಮಜ್ಞಾನಬೇರೆ, ಶುದ್ಧಶಿವೈಕೆ ಜಂಗಮ ನಿಲುವು ಬೇರೆಂದು ಅರಸಬಾರದು. ಅದನ್ನು ಕಂಡ ಭಕ್ತರು ಬೇರೆ ಹೃದಯ ಬೇರೆಂದು ವಿಭಾಗಿಸಬಾರದು. ಅದು ವಾಙ್ಮನೋತೀತವಾದುದರಿಂದ ಪರಾತ್ಪರವು ಪರಮಾಮೃತ ವಾದುದರಿಂದ ಗುರುವಾಗಿ ಕಂಡರೂ ರೂಪಲ್ಲ, ಜಂಗಮನಾಗಿ ಕಂಡರೂ ರೂಪನಲ್ಲ, ಅದನ್ನು ಕಂಡ ಹೃದಯದೊಳಗಣ ಜ್ಞಾನವೂ ರೂಪನಲ್ಲ ಅದು ಜ್ಞಾನಾಮೃತ ಅದಕ್ಕೆ ರುಚಿ ಎನ್ನಲು ಬರದು.

ಜ್ಞಾನಾಮೃತ, ಜ್ಞಾನಾನಂದದಂತ್ತಿದ್ದಿತ್ತು, ಜ್ಞಾನವದು ಜ್ಞಾನವೆ! ಆನಂದ ಆನಂದವೇ! ಇದಕ್ಕೆ ಬೇರೆ ಭಾಷೆ ಹೇಗೆ ತರುವುದು, ಪ್ರಕಾಶ ಪ್ರಕಾಶವೆ! ಅಲ್ಲಿ ವಿಭಾಗಿಸಲು ಎಡೆಯಿಲ್ಲ, ಎರಡು ಆದುದು ಒಂದು ಮಾಡಬಹುದು. ಒಂದಾಗಿರ್ದದ ಎರಡು ಮಾಡಲು ಬರದು. ಅರುವು ಅದು ಅರುವಾಗಿಪ್ಪಲ್ಲಿ ಅಲ್ಲಿ ಅರಿಸಿಕೊಳ್ಳುವ ದೃಶ್ಯವಿಲ್ಲ, ಅರಿಯುವ ದೃಕ್ ವೆಂಬುದಿಲ್ಲ. ಇದು ಕಾರಣ ಗುರು ತೋರಿದ ಪ್ರಸಾದ ಉಣ್ಣದ ಊಟ ಬಹು ರುಚಿಯಾದದು. ಈ ರುಚಿಯಾದರೂ ತಾನೆ ತಾನಾದ ರುಚಿ. ಇಲ್ಲಿ ಗುರು ಬೇರೆ, ಗುರು ಕರುಣಿಸಿದ ಪ್ರಸಾದ ಬೇರೆ ಜ್ಞಾನಾಮೃತ ಬೇರೆ. ಅದನು ಉಣಬಂದ ಭಕ್ತವೃಂದ ಬೇರೆ, ಅವರ ಹೃದಯ ಬೇರೆಂದು ವಿಭಾಗಿಸುವ ದೃಷ್ಟಿ ಇಲ್ಲುದುದೆ ಜ್ಞಾನಾಮೃತದ ನಿಸ್ಸೀಮತ್ವವೆ ರುಚಿಯೆಂದು ಹೇಳಿಹರು.

ಈ ಚಿದ್ರಸದ ರುಚಿ, ವರ್ಣನೆಗಿಂಬುಕೊಡದ್ದರಿಂದ ಸವಿ ಎನ್ನದೆ, ಈ ಸವಿ ಕಥನ ಕ್ಕೊಳಪಡದ್ದರಿಂದ ಸವಿ, ಸವಿ, ಎನ್ನಲು ಬಾರದ್ದರಿಂದ ಸವಿ ಎನ್ನದೆ ಎಂದು ಹೇಳಿದ್ದಾರೆ.

ಈ ತೃಪ್ತರೂಪ ತೃಪ್ತಿಯ ಸವಿ, ಅದು ಮೂಕ ಸಕ್ಕರೆ ಮೆದ್ದ ಸವಿ ಹೃದಯ ಹೃದಯವೆ ತೃಪ್ತ ರೂಪ ತೃಪ್ತಿಯಾದ ಘನದ ವರ್ಣನೆ, ವಾಣಿಯು ಮಾಡುವದದೆಂತು. ಜ್ಞಾನಾಮೃತವು ಹೃದಯದಲ್ಲಿ ತನ್ನಿಂದ ತನಗದು ವೇದ್ಯವಾದದು. ಅದು ತೃಪ್ತರೂಪ ತೃಪ್ತಿ ಎನಲಿಲ್ಲವಾದ್ದರಿಂದ ಸವಿ ಎನ್ನದೆ ಎಂದು ಹೇಳಿದ್ದಾರೆ.

ಸದಾ ತೃಪ್ತರೂಪವಾದ ಘನವು ಅದನ್ನು ಕಥನ ಮಾಡುವದದೆಂತು, ಸಂದೆನ್ನದೆ ಇದ್ದ ಪ್ರಸಾದಿಗೆ ನಮೋ ನಮೋ ಎಂಬೆ ಕೂಡಲ ಚೆನ್ನಸಂಗಾಮದೇವಾ.

ತೆರಹಿಲ್ಲದ ಘನದೊಳ್ ಗುರು, ಲಿಂಗ, ಜಂಗಮ, ಇವುಗಳಿಂದ ದೊರೆತ ಪ್ರಸಾದವೆನ್ನಲು ಸಂದುಂಟೆ? ನಿಸ್ಸೀಮವಾದುದು ಸೀಮಿತವಾಗದು. ಗುರುವೆಂದರೂ ನಿಸ್ಸೀಮವು, ಲಿಂಗ ಜಂಗಮವೆಂದರೂ ನಿಸ್ಸೀಮವು, ಮೂರಾಗಿ ಕಂಡರೂ ಅಖಂಡಿತ ಘನವು ಅಖಂಡಿತ ಘನವದು ಒಂದೆ; ಅರಿವುಡೆ ತಾನೆ.

ಅರಿತವರ ದೃಷ್ಟಿಗೆ ತನಗಿಂತ ಅನ್ಯ ವಸ್ತು ಇರಲು ಇಂಬುಂಟೆ? ಇಲ್ಲದ್ದರಿಂದ ಸಂದಿಲ್ಲದೆ ಇಪ್ಪ ಪ್ರಸಾದಿಗೆ ನಮೋ ನಮೋ ಎಂದು ಹೇಳಿಹರು. ಪರಾತ್ಪರವಾದ ಪರಮಜ್ಞಾನರೂಪಿ ಪ್ರಸಾದ ವಿರವುಡೆ ತಾನೆ ಪ್ರಸಾದಿ ಮಹಾಪ್ರಸಾದಿ ಇಂತಪ್ಪ ಪ್ರಸಾದಿಗೆ ನಮೋ ನಮೋ ಎಂದು ಹೇಳಿಹರು.

**ವಚನ 23**
**ಗುರು, ಲಿಂಗ, ಜಂಗಮದಿಂದ**
**ಪಾದೋದಕ, ಪ್ರಸಾದವಾಯಿತ್ತು.**
**ಅನುಭಾವವೆ ಮಹಾನುಭಾವವಾಯಿತ್ತು**
**ಎನಗೆ ಬೇರೆ ಪ್ರಸಾದವೆಂಬುದಿಲ್ಲ ಕೂಡಲಸಂಗಮದೇವಾ.** ॥ 777 ॥

ತಾತ್ಪರ್ಯ: ಗುರು, ಲಿಂಗ, ಜಂಗಮದಿಂದ ಪಾದೋದಕ ಪ್ರಸಾದವಾಯಿತ್ತು: ಗುರು ಪಾದೋದಕವೆಂಬುದು ಅರಿದರುಹಿಸಿ ಕೊಂಬುದಕ್ಕೆ ಮೀರಿದ ಘನದನುವ ಕರುಣಿಸಿದ ಕಾರುಣ್ಯವ ನೇನೆಂಬೆ? ಪಿಂಡವ ಕರಗಿಸಿ ಅಖಂಡಮಯ ದನುವ ಕರುಣಿಸಿದುದು ಏನೆಂಬೇನೆಂಬೆ, ದೃಶ್ಯವೆನಲಿಲ್ಲ, ದೃಕ್ ಎನಲಿಲ್ಲ, ಅಲ್ಲೆನಲಿಲ್ಲ, ಅಹುದೆನಲಿಲ್ಲ, ಮರವರುವೆಂಬುದಕ್ಕೂ ಮೀರಿದ ಘನದನುವ ಕರುಣಿಸಿದುದು ಉಪಮಿಸುವದದೆಂತು? ಮರವುಳ್ಳವನೆನಲಿಲ್ಲ, ಅರುವುಳ್ಳವ ನೆನೆಲಿಲ್ಲ, ನುಡಿದು ಹೇಳಲಿಲ್ಲ. ನಡೆದು ತೋರಿಸಲಿಲ್ಲ, ನಾನೆನಲಿಲ್ಲ, ನೀನೆನಲಿಲ್ಲ, ಶಬ್ದಸೀಮೆಯ ಕೆಡಿಸಿ, ನಿಃಶಬ್ದ ಘನದನುವ ಕರುಣಿಸಿದ ಕಾರುಣ್ಯವನೇನೆಂಬೇನೆಂಬೆ.

ಅದ್ವಿತೀಯ ಘನವು ಶಬ್ದಕ್ಕೆ ತೆರಹಿಲ್ಲ, ಇಲ್ಲಾದುದಿಲ್ಲಾದುದು ಎಲ್ಲಿಪ್ಪುದು, ಇಲ್ಲಾದುದಿಲ್ಲಾದುದೆಂದಿಪ್ಪುದು, ಅನುವರಿತು ಘನವ ಬೆರೆತ ಅನುಭಾವವೆ ಮಹಾನುಭಾವವಾಯಿತ್ತು. ಎನಗೆ ಬೇರೆ ಪ್ರಸಾದವಿಲ್ಲ, ನುಡಿಗೆಡೆಗೊಡದ ಘನದಿರುವ ಕರುಣಿಸಿದ ಗುರಘನವ ಏನೆಂಬೇನೆಂಬೆ. ಅಬೋಧವು ನಷ್ಟ, ಬೋಧವು ನಷ್ಟ, ಬೋಧಾಬೋಧವು ನಷ್ಟ ಮಾಡಿದನುವ ಉಪಮಿಸುವದೆಂತು, ತಾ ಗುರುವೆನಲಿಲ್ಲ, ನೀ ಶಿಷ್ಯನೆನಲಿಲ್ಲ, ಬೋಧದ ಹಿರಿಮೆ ತೋರಿಸಲಿಲ್ಲ, ಅಬೋಧವ ಕೆಡಿಸದೆ ಬಿಡಲಿಲ್ಲ, ಬೊಧಾ ಬೋಧದ ದ್ವಂದ್ವದಲ್ಲಿ ಸಿಲುಕಿಸಲಿಲ್ಲ ದೇಹವೆನಲಿಲ್ಲ ದೇಹಿ ಎನಲಿಲ್ಲ ದೇಹಿಗೆ ದೇಹಿಯಾಗಿರ್ಪ ಘನದನುವ ಕರುಣಿಸಿದುದು ಗುರು ಪಾದೋದಕ ಪ್ರಸಾದವಾಯಿತ್ತು. ಈ ಅನುಭವ ಎನಗೆ ಮಹಾನುಭಾವವಾಯಿತ್ತು. ಇದಕ್ಕಿಂತ ಎನಗೆ ಬೇರೆ ಪ್ರಸಾದವಿಲ್ಲ.

ನೆನಹು ನಷ್ಟ ಮಾಡಿದ ಲಿಂಗ ಪಾದೋದಕ ದನುವ ಏನೆಂಬೇನೆಂಬೆ ಅಂಗವೆನಲಿಲ್ಲ, ಲಿಂಗವೆನಲಿಲ್ಲ, ಅಸತ್ ಎನಲಿಲ್ಲ, ಸತ್ ಎನಲಿಲ್ಲ, ಅಸತ್ ಸತ್ ಎಂಬುದಕ್ಕೂ ಮೀರಿದ ಘನಗಂಭೀರ ಮಹಾಘನ ಲಿಂಗ, ಇದನರಿಯೆಂದು ಕರುಣಿಸಿದ ಕಾರುಣ್ಯ ಲಿಂಗವರಿಯ ಹೋಗಿ ಘನಕ್ಕೆ ಘನವಾದ ತನ್ನಂ ಉಪಮಿಸಲಳವಲ್ಲ, ಈ ಉಪಮಾತೀತ ದಿರುವೆ ಲಿಂಗದಿರುವು, ತನ್ನಿರುವು ಒಂದಾದ ಲಿಂಗ ಪಾದೋದಕ ಪ್ರಸಾದವಾಯಿತ್ತು, ಈ ಅನುಭಾವವೆ ಮಹಾನುಭಾವವಾಯಿತ್ತು.

ಗಮನಾಗಮನ ನಷ್ಟ ಮಾಡಿದ ಜಂಗಮ ಪಾದೋದಕದನುವ ಏನೆಂಬೇನೆಂಬೆ?

ಚಿತ್ ಎನಲಿಲ್ಲ, ಅಚಿತ್ ಎನಲಿಲ್ಲ, ಪ್ರಕಾಶಿತ ವೆನಲಿಲ್ಲ, ಪ್ರಕಾಶಮಯ ವೆನಲಿಲ್ಲ, ಬೆಳಗುವ ದೆನಲಿಲ್ಲ, ಬೆಳಗಿಸಿಕೊಳ್ಳುವ ದೆನಲಿಲ್ಲ, ಬೆಳಗುವ ಬೆಳಗಿಸಿಕೊಳ್ಳುವದಕ್ಕೂ ಮೀರಿದ ಘನವು ಸಮುಸ್ವರೂಪವು. ಈ ಸಮತೆ ಸಯುವಾದ ಗೋಷ್ಠಿಯ ಉಪಮಿಸುವದದೆಂತು, ಮರವರುವಿಂಗೆ ಮಿಕ್ಕಿ ಮೀರಿ ನಿಂತುದು, ಅಚಿಂತ್ಯವು ಚಿಂತನಗೊಳಪಡಿಸಿ ಚಿಂತಿಸಬಹುದೆ? ನಿಶ್ಚಿಂತವು ಚಿಂತನವುಳ್ಳದ್ದಾಗಬಹುದೆ? ಲಿಂಗ ಒಂದಾಗಿರ್ದ ಜಂಗಮ ನಿರಾಲಂಬ ಜಂಗಮ, ನಿಸ್ಸಂಗ ಜಂಗಮ, ಪಾದೋದಕದಿಂದ ಗಮನಾಗಮನ ನಷ್ಟವಾಗಿ ಆ ಲೋಕವೆನಲಿಲ್ಲ, ಈ ಲೋಕವೆನಲಿಲ್ಲ, ಸ್ವರ್ಗವೆನಲಿಲ್ಲ, ನರಕವೆನಲಿಲ್ಲ, ಸಾಲೋಕ್ಯವೆನಲಿಲ್ಲ, ಸಾಮೀಪ್ಯವೆನಲಿಲ್ಲ, ಸಾಯುಜ್ಯವೆನಲಿಲ್ಲ, ಸಾರೂಪ್ಯವೆನಲಿಲ್ಲ, ಜಂಗಮ ಪಾದೋದಕವೆಂಬುದು ಸುಖದ ಸುಖ, ಅಖಂಡ ಸುಖ, ಅಕ್ಷಯ ಸುಖವೆ ತನ್ನದಾಗಿ ತಾನಾದ ಅನುಭಾವವೆ ಮಹಾನುಭವವಾಯಿತ್ತು. ಎನಗೆ ಬೇರೆ ಪ್ರಸಾದವೆಂಬುದಿಲ್ಲ, ಕೂಡಲಸಂಗಮದೇವಾ.

ನುಡಿಗೆಡೆಗೊಡದ ಘನದಿರುವ ಕರುಣಿಸಿದುದು ಗುರುಪಾದೋದಕ ಪ್ರಸಾದವಾಯಿತ್ತು. ಆವಾವ ನೆನಹು ನಿರ್ಣಯಗೊಳಪಡದ ಅಚಿಂತ್ಯಪದದನುವ ಕರುಣಿಸಿದುದು, ಲಿಂಗಪಾದೋದಕ ಪ್ರಸಾದವಾಯಿತ್ತು. ಅಂಗವೆನ್ನದೆ ಲಿಂಗವೆನ್ನದೆ ಇದ್ದ ನಿರಂತರವಾಗಿಹ ನಿಶ್ಚಿಂತತೆಯ ಲಿಂಗ ಪಾದೋದಕ ಪ್ರಸಾದವಾಯಿತ್ತು. ಭಾವಕ್ಕಗಮ್ಯವಾಗಿಹ ಘನದಿರುವೆ ಜಂಗಮ ಪಾದೋದಕ ಪ್ರಸಾದವಾಯಿತ್ತು. ಎನಗೆ ಬೇರೆ ಪ್ರಸಾದವೆಂಬುದಿಲ್ಲ, ಕೂಡಲಸಂಗಮದೇವಾ.

**ವಚನ 24**

**ಸ್ಪರ್ಶನ ವಿರಹಿತ ಅರ್ಪಿತ,**
**ರುಚಿ ವಿರಹಿತ ಪ್ರಸಾದಿಯೆಂದೆನೆಂದೆ**
**ಆರಿಗಾದರೂ ಸಾಧ್ಯವಾಗಲಿ,**
**ಕೂಡಲ ಚೆನ್ನ ಸಂಗನ**
**ಪ್ರಸಾದಿಯ ಪ್ರಸಾದದಿಂದಯೆಂದೆನೆಂದೆ**
**ಆರಿಗಾದರೂ ಸಾಧ್ಯವಾಗಲಿ.**

**ತಾತ್ಪರ್ಯ:** ಸ್ಪರ್ಶನ ವಿರಹಿತ ಅರ್ಪಿತ, ರುಚಿ ವಿರಹಿತ ಪ್ರಸಾದಿಯೆಂದೆನೆಂದೆ ಆರಿಗಾದರೂ ಸಾಧ್ಯವಾಗಲಿ: ಮುಟ್ಟಿಸದವನೆ ಅರ್ಪಿತ, ರುಚಿ ಕಾಣದವನೆ ಪ್ರಸಾದಿ, ಈ ಅರ್ಪಿತ ಈ ಪ್ರಸಾದಿ ಕೂಡಲ ಚನ್ನಸಂಗನ ಪ್ರಸಾದಿಯ ಪ್ರಸಾದ. ಇದು ಆರಿಗಾದರೂ ಸಾಧ್ಯವಾಗಲಿ, ಎಂದೆನೆಂದೆ ಎಂದು ಷಟ್ ಸ್ಥಲ ಚಕ್ರವರ್ತಿ ಚೆನ್ನ ಬಸವರಾಜದೇವರು ಬಿತ್ತರಿಸಿರುವಾಗ ಈ ಅರ್ಪಿತದ ಘನವಂತ ಈ ಪ್ರಸಾದಿಯ ಮಹಾಪ್ರಸಾದ ಉಪಮೆ ಮಾಡುವದು ಅದೆಂತು? ಈತ ಅಕಲ್ಪಿತ ಘನ ತಾನಾದ ಮಹಾಂತ. ಈತ ಸ್ಪರ್ಶನ ವಿರಹಿತ ಅರ್ಪಿತ, ಇದು ಕಲ್ಪಿತ ಪುರುಷನ ಅರ್ಪಿತವಲ್ಲ, ಕಲ್ಪಿತ, ಕಲ್ಪನೆಯೆ ನಷ್ಟವಾಗಿರುವದರಿಂದ, ಕಲ್ಪಿಸಿ ಅರ್ಪಿಸಲಿಲ್ಲ. ಅರ್ಪಿಸಿ ಭೋಗಿಸಲಿಲ್ಲ. ಅರ್ಪಿತ ಅನರ್ಪಿತ ವೆಂಬೆರಡಳಿದನಾಗಿ ಈ ಮಹಾಂತನಿಗೆ ಅರ್ಪಿಸಲು ಕಾಯದ

ಕೈಗಳ ಕೈಯ ಇಲ್ಲವಾಗಿವೆ. ಭಾವದ ಕೈಗಳ ಕೈಯ ಇಲ್ಲವಾಗಿವೆ. ಕೈಗಳು ಇದ್ದವನಾಗಿದ್ದಲ್ಲಿ ಅರ್ಪಿಸುತ್ತಿದ್ದ, ಇಲ್ಲದವನು ಅರ್ಪಿಸುವದೆಂತು, ಶಬ್ದಾದಿ ವಿಷಯಂಗಳು ಲಿಂಗವಾಗಿವೆ.

ಎಲ್ಲಿ ಶಬ್ದವಲ್ಲಿಂಯೆ ಲಿಂಗವಾಯಿತ್ತು. ಎಲ್ಲಿ ರೂಪವಲ್ಲಿಂಯೆ ಲಿಂಗಸ್ವಾಯತವಾಯಿತ್ತು, ಎಲ್ಲಿ ಸೋಂಕಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ಗಂಧವಲ್ಲಿಯೇ ಲಿಂಗ ಸ್ವಾಯುತ್ತವಾಯಿತ್ತು. ಎಲ್ಲಿ ರಸವಲ್ಲಿಯೇ ಲಿಂಗ ಸ್ವಾಯತ್ತವಾಯಿತ್ತು. ಅನಿತ್ಯಗಳೆ ನಿತ್ಯವಾದಾಗ ಈ ವಿಷಯಂಗಳು ಇದ್ದುದೆಲ್ಲಿ? ಇಲ್ಲಾದುದಿಲ್ಲಾದುದು ಎಲ್ಲಿಪ್ಪವು ಪ್ರಾಣಸಂಚಯ ತಪ್ಪಿ ಲಿಂಗಸಂಚಯವಾದವಂಗೆ ಗಮನಾಗಮನವೆಲ್ಲಿ? ನಿರವಯುನಿಗೆ ಅವಯುವಂಗಳೆಲ್ಲಿ ! ಅತೀಂದ್ರಿಗೆ ಇಂದ್ರಿಯಂಗಳೆಲ್ಲಿ. ಈ ಘನವಂತನ ದಿವ್ಯದೃಷ್ಟಿಗೆ ದೇಹಎಂಬುದಿಲ್ಲ. ದೇಹಿವೆಂಬುದಿಲ್ಲ, ವಿದೇಹಿಎಂಬುದು ಇಲ್ಲ. ಈ ಇಲ್ಲೆಂಬದು ಇಲ್ಲವಾದುದೆ ಅರ್ಪಿತ.

ಲಿಂಗವರಿತು ಲಿಂಗವಾಗಿಹ ಮಹಾಂತ ನಿಷ್ಕಳಂಕ ಸಚ್ಚಿದಾನಂದ ನಿತ್ಯಪೂರ್ಣ, ಪರಾನಂದ ತೃಪ್ತರೂಪ ತೃಪ್ತಿಗೆ ಅರ್ಪಿತ ಮಾಡುವ ವಸ್ತುಗಳುಂಟೆ? ಲಿಂಗದ ಹೊರ್ತು ಅನ್ಯವಸ್ತುಗಳಾದರೂ ಉಂಟೆ? ಲಿಂಗದ ಸಮಾನ ವಸ್ತುಗಳಾದರೂ ಉಂಟೆ? ಇಲ್ಲವಾದುದರಿಂದ ಇಲ್ಲೆಂಬುದು ಇಲ್ಲವಾದುದೆ ಅರ್ಪಿತ.

ಜಂಗಮವದು ಲಿಂಗ ಒಂದಾಗಿರ್ದ ಲಿಂಗ, ಅಲ್ಲಿ ಜಂಗಮವೆಂದು, ಎರಡು ಮಾಡಿ ನುಡಿಯಬಹುದೆ? ನಿಜೈಕ್ಯ ಜಂಗಮ ನಿರಾಲಂಬ ಜಂಗಮನಾದುದರಿಂದ ಕಲ್ಪಿಸಿ ಅರ್ಪಿಸಲಿಲ್ಲ. ಅರ್ಪಿಸಿ ಭೋಗಿಸಲಿಲ್ಲ, ಭಾವಕ್ಕೆ ಮೀರಿದ ನಿರ್ಭಾವ, ನಿರ್ಭಾವಿಗೆ ಭಾವದ ಕೈಗಳ ಕೈಯ ಇಲ್ಲವಾದುದೆ ಅರ್ಪಿತ.

ರುಚಿ ವಿರಹಿತ ಪ್ರಸಾದಿ: ಅಮೃತಕ್ಕೆ ಅದಾವ ಮಧುರ ಹಾಕಿ ರುಚಿ ಮಾಡುವದು, ಪರಮಾಮೃತಕ್ಕೆ ಅದಾವ ಸಿಹಿ ಹಾಕಿ ರುಚಿ ಮಾಡುವದು? ಪ್ರಸಾದವೆಂಬ ಜ್ಞಾನಾಮೃತ ಅದಕ್ಕಾವ ಅಮೃತವ ಹಾಕಿ ರುಚಿ ಮಾಡುವದು. ಇದು ಕಾರಣ ರುಚಿ ವಿರಹಿತ ಪ್ರಸಾದಿ ಎಂದು ಹೇಳಿಹರು.

ಜ್ಞಾನಾಮೃತವದು ಅಚಿಂತ್ಯತ್ವ ಇದು ಚಿಂತನದಿಂದ ಪ್ರಾಪ್ತವಾದುದಲ್ಲ, ಕೊಟ್ಟುದಲ್ಲ, ಕೊಂಡುದಲ್ಲ, ಕೊಂಡು ಕೊಟ್ಟುದಲ್ಲ, ಇದು ಪೂರ್ವದಲ್ಲಿ ಅಪ್ರಾಪ್ತಿ ಈಗ ಪ್ರಾಪ್ತವಾದುದೆಂದು ಹೇಳಲು ಬರದು. ಏಕೆಂದರೆ ಕೂಡಲ ಚೆನ್ನ ಸಂಗನ ಪ್ರಸಾದಿಯ ಪ್ರಸಾದದಿಂದ ಎಂದೆನೆಂದೆ ಎಂದು ಹೇಳಿದುದರಿಂದ ಕೂಡಲ ಚೆನ್ನ ಸಂಗಯ್ಯ ನಿರಂತರ ಅಂದು, ಇಂದು, ಎಂದೆಂದೂ ಇದ್ದಂತಿರುವ ಘನಕ್ಕೆ ಘನವಾದುದರಿಂದ ಅನುವರಿತು ಘನವ ಬೆರೆಯಲು ಇದ್ದಕ್ಕಿದ್ದಂತೆ ತನ್ನಿಂದ ತನಗದು ವೇದ್ಯವಾದುದು, ಕೂಡಲ ಚೆನ್ನಸಂಗನಪ್ರಸಾದಿ.

ಈ ಮಹಾ ಪ್ರಸಾದಿಗೆ ಆನು ನೀನೆಂಬುದಿಲ್ಲ. ತಾನಿಲ್ಲ ತಾನರಿದ ಬಳಿಕ ಏನೂ ಇಲ್ಲ, ಇಲ್ಲಾದುದು ಇಲ್ಲಾದುದು ಎಲ್ಲಿಪ್ಪುದು. ಅನುವರಿತು ತನುವ ಮರೆತ ಭಾವರಹಿತ ಮಹಾಜ್ಞಾನಿ, ಮಹದರಿವು ಅರಿಯದರುವು ತಾನೆ ತಾನಾದ ಇರವು. ಇದು ಆರಿಗಾದರೂ ಸಾದ್ಯವಾಗಲಿ. ಎಲ್ಲಿ ಅವರು ಇವರು ಎನ್ನುವ ಭೇದದೃಷ್ಟಿಗಿಂಬಿಲ್ಲ,

ಗುರುವಿರಲಿ, ಶಿಷ್ಯರಿರಲಿ, ಭಕ್ತರಿರಲಿ, ಜಂಗಮಯ್ಯಗಳಿರಲಿ, ಅವರು ಭೋಗಿಯಾಗಿರಲಿ, ತ್ಯಾಗಿಯಾಗಿರಲಿ, ಆರೆ ಇರಲಿ, ಇದ್ದಂತಿರುವ ತಮ್ಮ ಸಹಜ, ಅಜ, ಅಚಿಂತ್ಯ ಸ್ವರೂಪ ತಿಳಿಯಲು ಆರಾದರಿರಲಿ, ಆರಿಗಾದರೂ ಸಾಧ್ಯವಾಗಲಿ.

**ವಚನ 25**

**ಎಡೆಗೊಡುವನಲ್ಲ, ಎಡೆಗೊಂಬುವನಲ್ಲ,**
**ನುಡಿಯೆಡೆಯೊಳಗೆ ಮರಳುವನಲ್ಲ,**
**ತನ್ನ ತಾನು ಮಹಾಪ್ರಸಾದಿ.**
**ಎಡೆಯಲ್ಲಿ ಅಂಧಕಾರ ರೂಪನಲ್ಲ.**
**ಇದು ಕಾರಣ, ಕೂಡಲ ಚೆನ್ನ ಸಂಗಯ್ಯನಲ್ಲಿ**
**ಇರ್ದುದ ನರ್ಪಿಸ ಬಲ್ಲನಾಗಿ ಮಹಾಪ್ರಸಾದಿ. ॥ 293 ॥**

**ತಾತ್ಪರ್ಯ:** ಎಡೆಗೊಡುವನಲ್ಲ, ಎಡೆಗೊಂಬುವನಲ್ಲ ನುಡಿಯೆಡೆಯೊಳಗೆ ಮರಳುವನಲ್ಲ ತನ್ನ ತಾನು ಮಹಾಪ್ರಸಾದಿ: ತನ್ನ ತಾನರಿತು ತಾನೆ ಮಹಾಪ್ರಸಾದಿಯಾದ ಮಹಾಂತ ಆವಾವುದಕ್ಕೂ ಅವಕಾಶ ಕೊಡುವವನಲ್ಲ. ಅವಕಾಶ ಮಾಡಿಕೊಡುವನಲ್ಲ, ಸ್ವತಂತ್ರ ಸ್ವಯಮೇವ ತಾನೆ, ಬೆಳಗುವ ಮಹಾಬೆಳಗು ತಾನೆ, ಸ್ವಯಂ ಜ್ಯೋತಿ ತಾನೆ, ನುಡಿಗೆಡೆಗೊಡದ ಘನನಾದುದರಿಂದ ನುಡಿಯೊಳಗೆ ಮರಳುವನಲ್ಲ, ಗುರುಪ್ರಸಾದಕ್ಕೂ ಮೀರಿ ಬೆಳಗುವವನು ತಾನೆ. ಲಿಂಗ, ಜಂಗಮ, ಪ್ರಸಾದಕ್ಕೂ ಮೀರಿ ಬೆಳಗುವವನು ತಾನೆ. ಎರವಲ ಪ್ರಸಾದಕ್ಕೆ ಎಡೆಗೊಡುವನಲ್ಲ, ತನಗಿಂತ ಬೇರೆ ಏನನ್ನು ಕಾಣನು. ತನ್ನ ಸಮಾನವಾದುದನ್ನು ಕಾಣನು. ಇದು ಕಾರಣ ಧಾರಣ, ಧ್ಯಾನ, ಸಮಾಧಿಗೂ ಎಡೆಗೊಡುವವನಲ್ಲ. ಇವುಗಳಿಗೆ ಅವಕಾಶ ಕೊಟ್ಟವನಲ್ಲ, ಪ್ರಮಾತೃ ಪ್ರಮಾಣ ಪ್ರಮೇಯವೆಂಬ ತ್ರಿಪುಟಿಗೂ ಇಂಬುಗೊಡದವನು. ಧ್ಯಾತೃ, ಧ್ಯಾನ, ಧ್ಯೇಯ ಎಂಬ ಮಾಯಿಕ ಕಾರ್ಯವಾದ ಚಿಂತನಕ್ಕೂ ಭಾವಕ್ಕೂ ಮೀರಿದ ಮಹಾಂತನಾದುದರಿಂದ, ಕಡೆಗೊಂಡ ನಿರ್ಲೇಪ ಪ್ರಸಾದಿ.

ಧ್ಯಾನಾತೀತ ತಾನೆ ಭಾವಾತೀತ ತಾನೆ ಕಲ್ಪನಾತೀತ ತಾನೆ, ತಾನೆ ತಾನಾದುದರಿಂದ ತನ್ನ ತಾನು ಮಹಾಪ್ರಸಾದಿ ತೆರಹಿಲ್ಲದ ಘನವು ತಾನಾದುದು. ಮಹಾಪ್ರಸಾದಿ, ಅಕಲ್ಪಿತ, ಅಚಿಂತ್ಯ ಪ್ರಮಾಣ ಅಗಮ್ಯ ತಾನೆ ಆದುದರಿಂದ ತನ್ನ ತಾನು ಮಹಾಪ್ರಸಾದಿ, ತನ್ನರವು ಇರವು ಒಂದಾದ ಶಬ್ದ ಮುಗ್ಧ, ನಿಶ್ಚಿಂತ ನಿರಾಳ ಸುಖದೇಕ ರಸ ಅನಾಮಯನಾಗಿರುವ ನಿರ್ವಾಣ ತಾನೆ ಆದ ತನ್ನ ತಾನು ಪ್ರಸಾದಿ.

ಕಡೆಗೊಂಡ ನಿರ್ಲೇಪ ಪ್ರಸಾದಿ, ಅರಿತೆ, ಅರಿಯೆನೆಂಬುದು, ನಿಃಕರಿಸಿ ಮರವರುವೆಂಬುದು ನಿಃಕರಿಸಿ, ಅಂಗ, ಲಿಂಗವೆಂಬುದ ನಿಃಕರಿಸಿ, ಪ್ರಕಾಶ ಪ್ರಕಾಶಿತವೆಂಬುದು ನಿಃಕರಿಸಿ, ನಿರಂತರವಾಗಿರುವ ಮಂಗಳಮಯ ತಾನೆಂಬುದು ತನ್ನಿಂದರಿದು ತಾನೆ ತಾನಾಗಿ ನಿಂತ ನಿಜದಿರುವೆ ಕಡೆಗೊಂಡ ನಿರ್ಲೇಪ ಪ್ರಸಾದಿ.

ಎಡೆಯಲ್ಲಿ ಅಂಧಕಾರ ರೂಪನಲ್ಲ, ತನ್ನ ಸಮೀಪದಲ್ಲಿ ಬೇರೊಂದು ಉಪಾಧಿ ಕಾಣದವನು. ತತ್ವ, ಅತತ್ವವೆಂಬ ವಿವೇಕವ ಕಾಣದವನು, ನಾನೀನೆಂಬುದನ್ನು

ಕಾಣದವನು, ಅಹಂ ಮಮವನ್ನು ಕಾಣದವನು, ಭೋಗ ತ್ಯಾಗವನ್ನು ಕಾಣದವನು, ಬೋಧವನ್ನು ಕಾಣದವನು ಅಬೋಧವ ಕಾಣದವನು, ಬೋಧಾ ಬೋಧವನ್ನು ಕಾಣದವನು, ನಿರಂತರವಾಗಿರುವ, ಮಂಗಳಮಯ ಪರಮಸತ್ಯ ತಾನಾಗಿ ಬೆಳಗುವುದರಿಂದ ಎಡೆಯಲ್ಲಿ ಅಂಧಕಾರ ರೂಪನಲ್ಲವೆಂದಿಹರು.

ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಇರ್ದುದ ನರ್ಪಿಸಬಲ್ಲನಾಗಿ ಆತ ಮಹಾಪ್ರಸಾದಿ, ಮಹಾಪ್ರಸಾದಿ ಎಂಬುದು ಕೂಡಲ ಚೆನ್ನ ಸಂಗಯ್ಯನಲ್ಲಿ, ಇರ್ದುದ ನರ್ಪಿಸಬಲ್ಲವರು. ಇರ್ದುದು ಆವುದು, ಅದನ್ನೆ ಅರ್ಪಿಸಬಲ್ಲಾತ. ಆತ ಮಹಾಪ್ರಸಾದಿ, ಇರ್ದುದು ಆವುದೆಂದಲ್ಲಿ ನಿರಂತರ ವಾಗಿರುವ ಮಂಗಳಮಯ ಪರಮಸತ್ಯವೆಂಬುದೆ ಇರ್ದುದು. ಪರಮಸತ್ಯವೆಂಬ ನುಡಿಯನ್ನು ಚಿಂತನವನ್ನು ಭಾವವನ್ನು ಇಲ್ಲ ಮಾಡುವದೆ ಇರ್ದುದ ಅರ್ಪಿಸಬಲ್ಲವ. ಕೊನೆಗೆ ಕೂಡಲ ಚೆನ್ನ ಸಂಗಯ್ಯನೆಂಬುದು ಕೂಡಾ ಇಲ್ಲವಾಗಿ ಶಬ್ದ ಮುಗ್ಧ ನಾದುದೆ, ಆತ ಮಹಾಪ್ರಸಾದಿ ಎಂದು ಹೇಳಿಹರು. ಇದುವೆ ತಾನಾರೆಂದರಿತ ಅರಿದರುಹಿಸಿ ಕೊಂಬುದಕ್ಕೂ ಮೀರಿದ ಘನದಿರುವಿನ ಅರುವು ತಾನೆ ಆದುದರಿಂದ ಆತ ಮಹಾಪ್ರಸಾದಿಯಾಗಿಹನು.

**ವಚನ 26**

**ರೂಪವನರ್ಪಿಸಿ ತಾ ನಿರೂಪ ಪ್ರಸಾದಿ,**
**ತನ್ನನರ್ಪಿಸಿ ತಾನಿಲ್ಲದ ಪ್ರಸಾದಿ**
**ಇಲ್ಲವೆಯ ನರ್ಪಿಸಿ ಬಯಲ ಪ್ರಸಾದಿ,**
**ಕೂಡಲ ಚೆನ್ನ ಸಂಗಯ್ಯ ನಿಮ್ಮ ಪ್ರಸಾದಿ. ॥ 326 ॥**

**ತಾತ್ಪರ್ಯ:** ರೂಪವನರ್ಪಿಸಿ ತಾ ನಿರೂಪ ಪ್ರಸಾದಿ, ತಾ ನಿರೂಪ ಪ್ರಸಾದಿಯಾಗಿಹ ಶರಣರು ಶರಣೆಯರು, ಇವರು ಲಿಂಗ ಪ್ರಸಾದಿಗಳು, ರೂಪನರ್ಪಿಸಿದ ಪರಮ ಜ್ಞಾನಿಗಳು ಇವರ ದಿವ್ಯ ದೃಷ್ಟಿಗೆ ಪಿಂಡಾಂಡ ಬ್ರಹ್ಮಾಂಡರೂಪಿ ಜಗವನ್ನೆ ಅರ್ಪಿಸಿ ತಾನೆ ಚಿತ್ ಸ್ವರೂಪನೆಂಬ ಪರಮಜ್ಞಾನಿಯು ರೂಪವ ಕರಗಿಸಿ ತಾ ನಿರೂಪನಾಗಿಹ ಪರವಸ್ತು.

ಆದುನಿಕ ಸಮಯದಲ್ಲಿ ನಾನಾ ಪಂಥದವರು ಇದ್ದಾರೆ, ಪಕ್ಷದವರು ಇದ್ದಾರೆ. ರೂಪ ಕಂಡವರೆ ಹೆಚ್ಚು ನಿರೂಪ ಕಂಡವರು ವಿರಳ. ಅದರಲ್ಲಿ ಇದು ರೂಪವಲ್ಲ, ನಿರೂಪವೆಂದು ತಿಳಿದವರು ವಿರಳ. ರೂಪದ ಮೇಲೆ ವೈರಾಗ್ಯತಾಳಿದವರು ಉಂಟು. ವೈರಾಗ್ಯವ ತಿರಸ್ಕರಿಸಿ ಸೇರದವರಾಗಿ ಮಾತಾಡಿದವರು ಉಂಟು, ರೂಪವ ನಿರೂಪವಾಗಿ ಕಂಡುದು ಹೇಗೆ?

ರೂಪವನರ್ಪಿಸಿ ನಿರೂಪ ಪ್ರಸಾದಿಗಳಾದವರು ರೂಪವ ನಿರೂಪವಾಗಿ ಕಂಡವರು ಬಸವಾದಿ ಪ್ರಮಥರು. ಅವರು ರೂಪವ ನರ್ಪಿಸಬಲ್ಲವರು, ನಿರೂಪ ಪ್ರಸಾದ ಬಲ್ಲವರು ಇವರು ಅಜಾತರು, ಅಯೋನಿಜರು, ಗುರುಪ್ರಸಾದ ಅಂಗಸೋಂಕಿ ಸರ್ವಾಂಗ ಗುರುವಾಗಿಹ ಘನವಂತರು ಲಿಂಗಪ್ರಸಾದ ಮನಕ್ಕೆ ಸೋಂಕಿಮನ ಲಿಂಗವಾಗಿಹ ಮಹಾಂತರು, ಇವರು. ರೂಪ ಇಲ್ಲೆಂಬುದ ಇಲ್ಲಮಾಡಿದವರು, ಇವರು

ನರರ ಸುರರ ರೂಪ ಇಲ್ಲೆಂಬುದ ಇಲ್ಲ ಮಾಡಿದವರು, ದೇವಗಣ, ರುದ್ರಗಣ, ಪ್ರಮಥಗಣ, ರೂಪ ಇಲ್ಲೆಂಬುದು ಇಲ್ಲ ಮಾಡಿದವರು, ಇದು ಕಾರಣ ಚತುರ್ದಶ ಭುವನಂಗಳೆಲ್ಲ ಇಲ್ಲೆಂಬುದ ಇಲ್ಲ ಮಾಡಿದ ಅರ್ಪಿತರು. ಈ ಶರಣರ ದೃಷ್ಟಿಗೆ ಜಗವು ಇದ್ದುದು ಆವಾಗ, ಇಲ್ಲೆಂಬುದಕ್ಕೂ ಒಪ್ಪದಿರುವಾಗ ಸೃಷ್ಟಿ ಎಲ್ಲಿ, ಸೃಷ್ಟಿಕರ್ತರೆಲ್ಲಿ? ಕಾರ್ಯವೆಲ್ಲಿ? ಕಾರಣವೆಲ್ಲಿ? ಕಾರ್ಯ ಕಾರಣಂಗಳೂ ಇಲ್ಲೆಂಬುದು ಇಲ್ಲ ಮಾಡಿದುದರಿಂದ ತತ್ವ ದೃಷ್ಟಿಯುಳ್ಳವರು, ಇವರು ವೇದ ವೇದಾಂತಗಳಿಗೆ ಸಾಧ್ಯವಾಗಿಹ ಅನುಪಮ ಲಿಂಗ ಪ್ರೇಮಿಗಳು. ಲಿಂಗ ಪ್ರಸಾದಿಗಳು ಇವರು ನಿರೂಪ ಪ್ರಸಾದಿಗಳು, ಎಂದು ಹೇಳಿಹರು. ಲಿಂಗವದು ನಿರೂಪ, ಅದು ರೂಪಾರೂಪವೆಂಬುದಕ್ಕೂ ನಿಲುಕದ ಸಮ ಸ್ವರೂಪವು, ಸಮ ತತ್ವವದು, ಈ ತತ್ವಲಭ್ಯವಾಗದ್ದರಿಂದ ವಿಷಮ ದೃಷ್ಟಿಗೆ ಪ್ರಾಧಾನ್ಯತೆಯಾಗಿದೆ. ಗುಣಕಾರ್ಯಕ್ಕೆ ಪ್ರಾಧಾನ್ಯತೆಯಾಗಿದೆ. ಪ್ರಕೃತಿ, ಪುರುಷರೆಂಬ ಭಾವಾಚಾರ, ಕ್ರಿಯಾಚಾರವೆ ಪ್ರಬಲವಾಗಿ ಸಟೆಯೆ ದಿಟವಾಗಿ ನಿರೂಪ ಪ್ರಸಾದ ಲಭ್ಯವಾಗುವದು, ಕಠಿಣವಾಗಿದೆ. ಲಿಂಗಾರ್ಚಕರು ಉಂಟು. ಜಂಗಮ ಪ್ರೇಮಿಗಳು ಉಂಟು. ನಿರೂಪ ಪ್ರಸಾದದ ಹಸಿವು ಉಳ್ಳವರು ಶಿಕ್ಕುವರೆ? ಹಸಿವಂತವಂಗೆ ಪ್ರಸಾದವು. ಹಸಿವೆ ಇಲ್ಲವೆಂದ ಮೇಲೆ ಪ್ರಸಾದ ಆರಿಗೆ, ಈ ಪರಮ ಪ್ರಸಾದ ಹಸಿವುಳ್ಳವರು ಲೋಕದ ನೆಚ್ಚುಮೆಚ್ಚು ಬಿಟ್ಟವರು. ನಿಶ್ಚಿಂತರಾಗಲು ಬಯಸುವವರು.

ಆವಲ್ಲಿ ಸಮಪ್ರಕಾಶಮಾನವಾದ ತತ್ವದ ತಿಳುವಳಿಕೆ ಇದೆ, ಅಲ್ಲಿ ರೂಪವ ನರ್ಪಿಸಿದ ಸಂಕೇತ, ಸಮ ನಿಲಯು, ಸಮಗೋಷ್ಟಿ, ಸಮ್ಯಜ್ಞಾನವದು, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನ, ಅದು ನಿರೂಪದ ನಿಜದ ನಿಲುವು.

ಗುರು ಪ್ರಸಾದ ಅಂಗಕ್ಕೆ ಸೋಂಕು. ಗುರಘನನು ನಿರೂಪನು, ಗುರುಪ್ರಸಾದ ಮುಟ್ಟಬಂದ ಶಿಷ್ಯ ತನ್ನ ರೂಪವ ನರ್ಪಿಸಿ ಅವನು ನಿರೂಪನೆ ಆದ ಇಲ್ಲದನಾಮರೂಪ ಇಲ್ಲೆಂಬುದ ಇಲ್ಲವಾಗಲು ಇದ್ದ ತತ್ವ ತಾನೆಂಬುದು ತನಗೆ ವಿದಿತವಾಗುವುಡೆ ತಾ ನಿರೂಪ ಪ್ರಸಾದಿ, ನಿರೂಪವದು ಸತ್ಯ ಜ್ಞಾನಾನಂದವು, ಸತ್ಯ ಜ್ಞಾನ, ಸಚಿದ್ರೂಪ ತಾನೆಂಬುದೆ ನಿರೂಪ ಪ್ರಸಾದಿ.

ತನ್ನ ನರ್ಪಿಸಿ ತಾನಿಲ್ಲದ ಪ್ರಸಾದಿ, ತನ್ನ ನರ್ಪಿಸಿ, ಸಚ್ಚಿದ್ರೂಪ ತಾನೆಂಬುದೆ ತನ್ನ ಚಿದಹಂ ಆಗಿದೆ. ಆ ಚಿದಹಮ್ಮು ಅರ್ಪಿಸುವದೆ ತನ್ನ ಅರ್ಪಿಸಿದುದು, ಲಿಂಗಪ್ರಸಾದ ಮನಕ್ಕೆ ಸೋಂಕಿ ಮನ ಲಿಂಗವಪ್ಪುದು ತಪ್ಪದಯ್ಯಾ. ಲಿಂಗ ಪ್ರಸಾದವದು ಅಕಲ್ಪಿತ ಘನ, ಅಚಿಂತ್ಯತ್ವ, ಈ ಅಚಿಂತ್ಯಮಯನಾದವಂಗೆ ತಾನು ಸಚ್ಚಿದ್ರೂಪನೆಂಬ ಚಿದಹಮ್ಮು ಅರ್ಪಿಸುವುಡೆ, ಆಗ ಚಿದಹಮ್ಮು ಇಲ್ಲವಾಗಲು ಅಹಮಿಲ್ಲದ ಚಿದ್ಘನ ತಾನಾದುದೆ ತಾನಿಲ್ಲದ ಪ್ರಸಾದ.

ಇಲ್ಲವೆಯ ನರ್ಪಿಸಿ ಬಯಲ ಪ್ರಸಾದಿ: ಬಯಲ ಪ್ರಸಾದಿ ಎಂಬುದು ಏನೆಂದು ಸರಲು ಬಾರದ ಘನಕ್ಕೆ ಚಿದಹಮು ಇಲ್ಲೆಂಬುದು ನರ್ಪಿಸಿ, ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದುದು ಬಯಲು ಪ್ರಸಾದಿ.

ಈ ತ್ರಿವಿಧ ರೂಪಿ ಪ್ರಸಾದಿ ಕೂಡಲ ಚೆನ್ನ ಸಂಗಯ್ಯ ನಿಮ್ಮ ಪ್ರಸಾದಿ, ತ್ರಿವಿಧ

ರೂಪಿ ಪ್ರಸಾದಿ, ನಿಮ್ಮ ಪ್ರಸಾದಿ ತಾ ನಿರೂಪ ಪ್ರಸಾದಿ, ನಿಮ್ಮ ಪ್ರಸಾದಿ ತಾನಿಲ್ಲದ ಪ್ರಸಾದಿಯು ನಿಮ್ಮ ಪ್ರಸಾದಿ, ಬಯಲ ಪ್ರಸಾದಿಯು ನಿಮ್ಮ ಪ್ರಸಾದಿಯು.

ಪ್ರಸಾದಿಯ ಪ್ರಸಾದ, ಪರಾತ್ಪರ, ಪರಮಜ್ಞಾನ, ಪರಮಾಮೃತ, ವಾಙ್ಮನೋತೀತ ಅದು ಇದ್ದಂತಿರುವ ಘನ, ಎಡೆಯಿಲ್ಲದ ಪರಿಪೂರ್ಣವಾದುದರಿಂದ ತೆರೆಹಿಲ್ಲದ ಘನವೆಂದು ಹೇಳಿದುದು. ತೆರಹಿಲ್ಲದ ಘನರೂಪಿ ಪ್ರಸಾದಕ್ಕೆ ರೂಪವ ನರ್ಪಿಸುವುಡೆ, ತಾನಿರೂಪ ನೆಂಬದರಿವು ಆಗುವುದು.

ತಾ ನಿರೂಪನೆಂಬರುವ ಅಕಲ್ಪಿತ ಘನಕ್ಕರ್ಪಿಸಲು ತಾ ನಿರೂಪನೆಂಬರುವು ಇಲ್ಲವಾಗಿ ಅಕಲ್ಪಿತ ಘನ ತಾನೆಂಬರುವುಳ್ಳನಾಗುವುದು. ತಾ ಅಕಲ್ಪಿತ ಘನನೆಂಬರಿವು, ಖಂಡಾಖಂಡಸಂಯೋಗವಿಲ್ಲದ ಅಖಂಡಿತ ಘನ ಪೂರ್ಣವಪ್ಪ ತನ್ನಿರುವಿಂಗೆ ಅರ್ಪಿಸಲು ಏನೊಂದಸರಲು ಬಾರದ ಘನಗಂಭೀರ ಮಹಾಘನ ತಾನಾದುದೆ ಬಯಲ ಪ್ರಸಾದಿ ಈ ತ್ರಿವಿಧ ಪ್ರಸಾದವು ಕೂಡಲ ಚೆನ್ನ ಸಂಗಯ್ಯ ನಿಮ್ಮ ಪ್ರಸಾದ, ನಿರೂಪ ಪ್ರಸಾದಿಯಾಗಿ, ಕಂಡರೂ ತಾನೆ, ತಾನಿಲ್ಲದ ಪ್ರಸಾದಿಯಾಗಿ ಕಂಡರೂ ತಾನೆ, ಬಯಲ ಪ್ರಸಾದಿಯಾಗಿ ಕಂಡರೂ ತಾನೆ, ಎಲ್ಲೆಲ್ಲೂ ಕೂಡಲ ಚೆನ್ನ ಸಂಗಯ್ಯಾ ತಾನೆ.

**ವಚನ 27**

**ಮಧ್ಯಾಹ್ನದಿಂದ ಮೇಲೆ ಹಿರಿಯರಿಲ್ಲ,**
**ಅಸ್ತಮಾನದಿಂದ ಮೇಲೆ ಜಿತೇಂದ್ರಿಯರಿಲ್ಲ**
**ವಿಧಿ ಮೀರಿರುವ ಅಮರರಿಲ್ಲ,**
**ಕ್ಷುಧೆ ವ್ಯಸನ್ನಕ್ಕಂಜಿ ನಾ ನಿಮ್ಮ ಮರೆಹೊಕ್ಕು**
**ಬದುಕಿದೆ ಚೆನ್ನಮಲ್ಲಿಕಾರ್ಜುನ.**

**ತಾತ್ಪರ್ಯ:** ಮಧ್ಯಾಹ್ನದ ಮೇಲೆ ಹಿರಿಯರಿಲ್ಲ, ಅಸ್ತಮಾನದಿಂದ ಮೇಲೆ ಜೀತೇಂದ್ರಿಯರಿಲ್ಲ, ವಿಧಿ ಮೀರಿರುವ ಅಮರರಿಲ್ಲ, ಕ್ಷುಧೆ ವ್ಯಸನಕ್ಕಂಜಿ ನಾ ನಿಮ್ಮ ಮರೆಹೊಕ್ಕು ಬದುಕಿದೆ ಚೆನ್ನಮಲ್ಲಿಕಾರ್ಜುನ: ಎಂದು ವೀರ ವೈರಾಗಿಣಿಯಾದ ಅಕ್ಕ, ವೈರಾಗ್ಯವನ್ನೆ ಉಡಿಗೆತೊಡಿಗೆ ಮಾಡಿದ ಅಕ್ಕ, ಲಿಂಗದೊಳ್ ದೃಷ್ಟಿ ನಟ್ಟ ಅಕ್ಕ, ಶರಣ ಸತಿ ಲಿಂಗಪತಿಯಾಗಿಹ ಸ್ವಾನುಭವದನುವುಳ್ಳ ಅಕ್ಕ ಕ್ಷುಧೆ ವ್ಯಸನ್ನಕ್ಕಂಜಿ ನಾ ನಿಮ್ಮ ಮರೆಹೊಕ್ಕು ಬದುಕಿದೆನೆಂದು ಬಿತ್ತರಿಸಿದುದು ನೋಡುವುಡೆ, ಈ ಅಂಗ ಭಾವ, ವೀರ ವೈರಾಗಿಣಿಯಾದ ಅಕ್ಕನನ್ನೆ ಅಂಜಿಸಿದೆ ಎಂದಲ್ಲಿ, ಎಲ್ಲಿಯವರೆಗೆ ಅಂಗ ಭಾವಿಗಳು ಅಲ್ಲಿಯವರೆಗೆ ಮಧ್ಯಾಹ್ನ ಅಸ್ತಮಾನಕ್ಕೆ ಒಳಪಟ್ಟವರೆ ಕಾಲನಿಗೊಳಪಟ್ಟವರೆ ಉದಯ, ಮಧ್ಯಾಹ್ನ, ಅಸ್ತಮಾನಂಗಳು ಅಂಗಭಾವವನ್ನೊಳಗೊಂಡ ಮರವಿನ ದೃಷ್ಟಿ. ಇವು ಕ್ಷುಧೆ ವ್ಯಸನಕ್ಕೊಳಪಟ್ಟುದು, ವಿಧಿಗೊಳಪಟ್ಟುದು, ಇದು ಕಾರಣ ಮಾನವ, ಅಕ್ಕನು ಹೇಗೆ ಚೆನ್ನಮಲ್ಲಿಕಾರ್ಜುನ ನಾ ನಿಮ್ಮ ಮರೆಹೊಕ್ಕು ಬದುಕಿದೆನೆಂದು ಬಿತ್ತಿರಿಸಿದಂತೆ ಪ್ರತಿಯೊಬ್ಬರು ಕ್ಷುಧೆ ವ್ಯಸನ ವಿಧಿ ಮೀರಬೇಕಾದರೆ ತತ್ವದೃಷ್ಟಿ, ತತ್ವಜ್ಞಾನ, ತತ್ವಸಾಕ್ಷಾತ್ಕಾರ, ಅವಶ್ಯಕವಾದುದು.

ತತ್ವದೃಷ್ಟಿ, ತತ್ವಜ್ಞಾನದಿಂದ, ತಾನಲ್ಲದ ತನಗಿಲ್ಲದ ಅಂಗಭಾವ, ಅಂಗದೃಷ್ಟಿ, ಅಂಗಜ್ಞಾನ, ತನಗಿಲ್ಲವಾಗುವವು. ಇವು ತನಗೆ ತೋರಲಿ, ತೋರದಿರಲಿ, ತಾನಾಗುವುದಿಲ್ಲ, ತನ್ನದಾಗುವದಿಲ್ಲ, ಆಗ ಸಹಜ, ಅಜ ಅಚಿಂತ್ಯ ತಾನೆಂಬ ಸ್ವರೂಪ ಸಾಕ್ಷಾತ್ಕಾರವಾಗುವುದರಿಂದ ಕ್ಷುಧೆ ವ್ಯಸನದ ಭಯ ನಿವೃತ್ತವಾಗಿ ಅಮರತ್ವ ತಾನೆ ಸಿದ್ಧಿಸುವದು.

ಮಾನವನಿಗೆ ಅಮರತ್ವ ಸಿದ್ಧಸದ ತನಕ, ಹಸಿವು, ತೃಷೆ, ವ್ಯಸನಂಗಳು ತೋರುವವು. ತೋರುವ ಈ ಹಸಿವು, ತೃಷೆ, ವ್ಯಸನ ತನ್ನದಾಗಿರುವವು, ತಾನಾರು ಎಂಬ ಯತಾರ್ಥಜ್ಞಾನವಿಲ್ಲವಾದ್ದರಿಂದ ಉದಯ, ಮಧ್ಯಾಹ್ನ, ಅಸ್ತಮಾನಂಗಳು, ದಿಟವಾಗಿವೆ. ಈ ತ್ರಿವಿಧಗಳ ಮೀರಬೇಕು. ಮೀರಬೇಕಾದರೆ ಉದಯ, ಮಧ್ಯಾಹ್ನ, ಅಸ್ತಗಳ ಮೀರಿದ ಜ್ಞಾನವಾಗಬೇಕು. ಎಲ್ಲಿಯವರೆಗೆ ಕಲ್ಪಿತ ಪುರುಷನಾಗಿಹನು, ಅವನ ಅಜ್ಞಾನ, ಜ್ಞಾನದವಸ್ಥೆ, ಉದಯ, ಮಧ್ಯಾಹ್ನ, ಅಸ್ತಂದಿಂದುಕ್ತವಾದವು. ಇದು ಕಾರಣ ಅಕಲ್ಪಿತ ಘನದಿರುವಿನ ಅರುವು ಆಗಬೇಕು. ಆಗ ಕಲ್ಪಿತನ ಉದಯ ಮಧ್ಯಾಹ್ನ, ಅಸ್ತಂಗಳ ಭೀತಿ, ನಿವೃತ್ತವಾಗುವದು, ಆಗ ಅಮರತ್ವ ನೋಡಿದವನು ಅಂದರೆ ತನ್ನ ನೋಡಿದವನು.

ನೋಡುವುದ ನೋಡಲರಿಯದೆ ಕೆಟ್ಟಿತೀ ಜಗವೆಲ್ಲ, ನೋಡುವುದ ನೋಡುವುಡೆ ಕೂಡಲಿಲ್ಲ, ಅಗಲಲಿಲ್ಲ, ಗುಹೇಶ್ವರ ನಿಮ್ಮ ಶರಣ ಅನುಪಮ ಸುಖ, ಎಂದು ಬಿತ್ತರಿಸಿದ ಪ್ರಸಾದವಾಣಿ ನೋಡುವುಡೆ, ಮಾನವರೆ ಆಗಲಿ, ಜಿಜ್ಞಾಸುಗಳೆ ಆಗಲಿ, ನೋಡಬೇಕಾದುದು, ತನ್ನನ್ನು ತನ್ನ ನೋಡಲಿಲ್ಲ, ತತ್ವ ನೋಡಲಿಲ್ಲ, ಅತತ್ವವ ಕಂಡ, ತಾನಾಗದ ಅನಾತ್ಮಗಳ ನೋಡಿದ. ಇಲ್ಲದ ಸಂಕಲ್ಪ ವಿಕಲ್ಪವ ಕಂಡು ವ್ಯಸನಿಯಾದ. ತನ್ನ ನೋಡಲಿಲ್ಲ, ತನಗಿಂತ ಭಿನ್ನವಾದ ತನ್ನಿಂದ ತಿಳಿಸಿಕೊಳ್ಳುವ ತೋರಿ ಇಲ್ಲವಾಗುವ ದೇಹವ ಕಂಡ, ನಾಮರೂಪಿ ದೃಶ್ಯಂಗಳ ಕಂಡ, ಇವುಗಳ ಭಾವ ಭ್ರಮಿತನಾಗಿ ತಾನು ಅದುವೆ ಆದ, ಇದು ಕಾರಣ. ತಾನೆ ಹಸಿವುಳ್ಳವನಾದ. ತಾನೆ, ತೃಷೆಯುಳ್ಳವನಾದ, ವ್ಯಸನಿ ತಾನೆ ಆದ, ವಿಧಿಗೊಳಪಟ್ಟವನು ಆದನು.

ಆರು ಸದ್ಗುರುದೇವನಿಗೆ ಶರಣಾಗತರಾಗಿ ತತ್ವೋಪದೇಶ ಪಡೆದು, ತತ್ವವೇತ್ತರಾಗಿಹರು. ಅವರು ತಾವಾರೆಂದರಿತ ಅನುಪಮರು. ಅವರು ಕಾಲಾತೀತರು, ಅವರು ಮಧ್ಯಾಹ್ನದ ಮೇಲಿನವರು, ಅಸ್ತಮಾನದ ಮೇಲಿನವರು.

ಸೂರ್ಯನಿಗೆ ಕತ್ತಲೆಯ ಕಾಣುವದೆ? ಕಾಣದಿದ್ದಲ್ಲಿ ಕತ್ತಲೆ ಮಧ್ಯರಾತ್ರಿ ಆವುದು? ಅಸ್ತವಾವುದು, ಚಿತ್ ಸ್ವರೂಪವೆ ತನ್ನಿರುವಿನ ಅರುವಾದವಂಗೆ, ಕಲ್ಪಿತ ಪುರುಷನ, ಅಜ್ಞಾನದವಸ್ಥೆಯ ಅಸ್ತವೂ ಕಾಣ, ಜ್ಞಾನದವಸ್ಥೆಯ ಮಧ್ಯಾಹ್ನವೂ ಕಾಣ, ಕಾಣದುದ ಕಂಡವನು, ತನ್ನ ಕಂಡವನು, ತನ್ನ ಕಂಡವನಾಗದ್ದರಿಂದ ತಾನಲ್ಲದ ತನಗಿಲ್ಲದ ಮಧ್ಯಾಹ್ನ ಅಸ್ತಗಳ ಕಂಡು ಕ್ಷುಧೆ ವ್ಯಸನ ಕೊಳಪಟ್ಟು ಬಳಲಿದರೂ ಅದು ನಿಜವೆ? ಮರವಿನಿಂದುಕ್ತನಾದವಂಗೆ ನಿಜವಾಗಿಪ್ಪುವು, ಅರುವಿನಿಂದುಕ್ತನಾದವಂಗೆ ಕ್ಷುಧೆ ವ್ಯಸನಾದಿಗಳಿಗೆ ಅಸಂಗನು ತಾನಾರೆಂದು ತನ್ನಿಂದ ತನ್ನ ನೋಡುವುಡೆ, ತಾನು

ತನ್ನಿಂದ ಅಗಲಿರುವನೆ? ಅಗಲದಿದ್ದಲ್ಲಿ ತನ್ನೊಳ್ ಆವುದರಲ್ಲಾಗಲಿ ಕೂಡುವುದಿದೆಯೋ? ತನಗೆ ತಾನು ಕೂಡುವುದಾದರೂ ಇದೆಯೆ? ಇಲ್ಲದುದು ಇಲ್ಲವೆ ಇಲ್ಲ, ಇಲ್ಲಾದುದಿಲ್ಲಾದುದು ಎಲ್ಲಿಪ್ಪುದು, ಇಲ್ಲಾದುದಿಲ್ಲಾದುದೆಂದಿಪ್ಪುದು ಅನುವರಿತು, ತನುವ ಮರೆದಡೆ ತಾನು ತಾನೆ. ತನಗಿಂತನ್ಯವಾವುದು ಇಲ್ಲ, ಈ ಇಲ್ಲೆಂಬುದು ಇಲ್ಲದಿರುವಾಗ, ಇಲ್ಲದ ಹಸಿವು, ತೃಷೆ, ಜನನ ಮರಣ, ಇಲ್ಲವೆ ಇಲ್ಲ, ಇದ್ದ ನಿರಂತರವಾಗಿಹ ಮಂಗಳಮಯ ಪರಮ ಸತ್ಯ, ತಾನೆ ಇರುವಲ್ಲಿ ತನಗೆಲ್ಲಿ ಮಧ್ಯಾಹ್ನ, ಅಸ್ತಮಾನಂಗಳು ತಾನು ಮರವರುವಿಂಗೆ ಮೀರಿದ ಘನ ಅರುವಿಂಗರುವಾಗಿಹ ಘನ ತಾನಾದುದರಿಂದ, ಮಧ್ಯಾನ್ಹದ ಮೇಲೆ ತಾನೆ, ಅಸ್ತಮಾನದ ಮೇಲೆ ತಾನೆ, ಹಸಿವು ತೃಷೆಗಳ ಮೇಲೆ ತಾನೆ ತನ್ನ ಮೇಲೆ ಆವುದು ಇಲ್ಲ. ತನಗಾವು ಇಲ್ಲ, ಸಕಲ ತತ್ವಂಗಳಿಗೆಲ್ಲ ಬೆಳಗುವ ಮಹಾಬೆಳಗು ತಾನೆ, ಅಖಂಡಿತ ಘನಪೂರ್ಣ ತಾನೆ.

ತನ್ನಯ ಮರವಿನಿಂದ ಇಲ್ಲದುದು ಕಂಡು ತನು ಭಾವಿಯಾದ, ಇಂದ್ರಿಯಂಗಳ ಕಾರ್ಯ ತಾನಾಗಿ ಬಳಲಿದ ಜಠರಾಗ್ನಿಯ ಕಾರ್ಯವೆ ತಾನಾಗಿ ಹಸಿವು ತೃಷೆಗೊಳಗಾದ, ಪ್ರಾಣಾದಿಗಳೆ ತಾನಾಗಿ ವಿಧಿಗೊಳಪಟ್ಟ ಇದ್ದ ನಿರಂತರವಾಗಿಹ ತನ್ನಿರವಿನ ಅರುವು ವೇದ್ಯವಾಗುವುಡೆ, ತಾ ಬದುಕಿದ ಚೆನ್ನ, ಬದುಕದವರು ಯಾರು? ಚೆನ್ನಮಲ್ಲಿಕಾರ್ಜುನನ ಮರೆಹೊಕ್ಕು, ಬದುಕಿದವರು, ಮಲ್ಲಿಕಾರ್ಜುನನೆಂಬುದು ಅಚಿಂತ್ಯಪದ, ಅಚಿಂತ್ಯಪದದಿಂದ ದೂರಾದವರು, ಒಡಲುಳ್ಳವರು, ಹಸಿವು, ತೃಷೆ ವ್ಯಸನಕ್ಕೊಳಪಟ್ಟರು, ವಿಧಿಗೊಳಪಟ್ಟವರು.

ಅಚಿಂತ್ಯಪದಕ್ಕಾರು ಮರೆಹೋಗಿಹರು, ಅವರು ಚಿಂತನವ ಸೇರದವರು ತಾನಾರೆಂಬ ತನ್ನಿರುವಿನ ಅರುವು ತನ್ನಿಂದ ತನಗೆ ವೇದ್ಯವಾದವರು ಅವರಿಗೆ ಚಿಂತನವೆಂಬುದಿಲ್ಲ, ನಿಶ್ಚಿಂತರು. ಅಚಿಂತ್ಯದಿರುವೆ ತನ್ನ ಸ್ವರೂಪವಾಗಿಹ ಘನವಂತರು, ಅವರೆ ಮಧ್ಯಾಹ್ನದ ಮೇಲೂ ಅಸ್ತಮಾನದ ಮೇಲೂ ಹಿರಿಯರು, ವಿಧಿಗೆ ಮೀರಿರುವ ಅಮರರು.

ಅಮರತ್ವವರಿತ ಮಹಾಂತರಿಗೆ ಎಲ್ಲಿದೆ ವೈಶ್ವಾನರ, ಮನದಲ್ಲಿದೆ ಮನದ ಕಾರ್ಯವೆಲ್ಲಿದೆ, ಅಲ್ಲಿ ವ್ಯಸನ ಉಂಟು ಮನ ನಷ್ಟ ತನು ನಷ್ಟ ನೆನಹು ನಷ್ಟ ಜ್ಞಾನ ನಷ್ಟ, ಭಾವ ನಷ್ಟವಾದವಂಗೆ ಪ್ರಾರಾಬ್ಧವುಂಟೆ? ಲಿಂಗವರಿತು ಲಿಂಗವಾಗಿಹ ಶರಣ ಅಳಿದವನಲ್ಲ ಉಳಿದವನಲ್ಲ, ಘನಕ್ಕೆ ಗಮನನಲ್ಲ, ಮನಕ್ಕೆ ಸಾಧ್ಯನಲ್ಲ, ತನ್ನ ತಪ್ಪಿಸಿ ಇದಿರನೊಪ್ಪಿಸಿದೆನೆಂಬ ಭಿನ್ನ ಭಾವಿಯಾಗದ ಶರಣ ಅನುಪಮ ಶರಣ, ಈ ಮಹಾಂತನೆ, ಬದುಕಿದ ಶರಣ ಸಾವಯವ ನಿರವಯ ಒಂದಾಗಿ ಕಾಣುವ ಶರಣ, ಕ್ಷುಧೆ ವ್ಯಸನಂಗಳ ತನ್ನೊಳ್ ಕಾಣದ ಶರಣ ಅಚ್ಚ ಸುಖದ ಸುಖಿ.

**ವಚನ 28**

**ಬೇಡದ ಮುನ್ನ ಮಾಡಬಲ್ಲಡೆ ಭಕ್ತಿ,**
**ಬೇಡುವನೆ ಲಿಂಗ ಜಂಗಮ?**

**ಬೇಡುವರಿಗೆಯೂ, ಬೇಡಿಸಿಕೊಂಬುವರಿಗೆಯೂ**
**ಪ್ರಸಾದವಿಲ್ಲ ಗುಹೇಶ್ವರಾ. ॥ 157 ॥**

ತಾತ್ಪರ್ಯ: ಬೇಡದ ಮುನ್ನ ಮಾಡಬಲ್ಲಡೆ ಭಕ್ತ ಬೇಡುವನೆ ಲಿಂಗ ಜಂಗಮ: ಆಧುನಿಕ ಸಮಯದಲ್ಲಿ ಬೇಡದ ಮುನ್ನ ಮಾಡಬಲ್ಲ ಭಕ್ತ ಬೇಡದ ಲಿಂಗಜಂಗಮ, ಇವರೀರ್ವರು ಶಿಕ್ಕುವದು ವಿರಳ. ಭಕ್ತನ, ಭಕ್ತಿಯ ಉಜ್ವಲಕ್ಕಾಗಿ ಸಂಚರಿಸುವ ಜಂಗಮದೇವ. ಈ ಮಹಾಂತ ಲಿಂಗ ತಾನು ಒಂದಾಗಿರ್ದ ಜಂಗಮ, ಅನುಪಮ ದೇವನನುಪಮೆಗೆ ತಂದು ಎರಡೆನ್ನಬಹುದೆ? ಮಹಾಘನ ಈ ಜಂಗಮದೇವನು ಶುದ್ಧ ಶಿವೈಕ್ಯನು, ಪರಾತ್ಪರ ಶಿವನು ಬೇಡುವನೆ? ಈ ಪರಶಿವನಿಗೆ ಬೇಡದ ಮುನ್ನ ಮಾಡಬಲ್ಲಾತ ಭಕ್ತ. ಈ ಭಕ್ತಿ ಅಭವನ ಭಕ್ತಿ, ಭವದೊಳಗೆ ತಾನಿರ್ದು ಮಾಡುವ ಭಕ್ತಿಯಲ್ಲ, ತಾನಭವನಾಗಿ ಮಾಡಬಲ್ಲ ಭಕ್ತಿ, ಇದು ಸಹಜ ಭಕ್ತಿ. ಈ ಭಕ್ತಿಯೆ ಬೇಡದ ಮುನ್ನ ಮಾಡುವ ಭಕ್ತಿ.

ಬೇಡದ ಜಂಗಮನಿಗೆ ಮಾಡುವ ಭಕ್ತಿ. ತನುವಿಲ್ಲದ ಭಕ್ತಿ, ಮನವಿಲ್ಲದ ಭಕ್ತಿ, ಧನವಿಲ್ಲದ ಭಕ್ತಿ, ಪಂಚೇಂದ್ರೀಯ ಸುಖವಿಲ್ಲದ ಭಕ್ತಿ, ಕಾಯವಿಲ್ಲದ ಭಕ್ತಿ, ಕರ್ಮವಿಲ್ಲದ ಭಕ್ತಿ, ಕಲ್ಪಿತವೆಂಬುದ ಅರಿಯದಿಹ ಭಕ್ತಿ, ಅಶನ ವ್ಯಸನವ ನರಿಯದ ಭಕ್ತಿ, ವ್ಯಸನಕ್ಕಳಸದ ಭಕ್ತಿ, ಲಿಂಗಕ್ಕಾಧಾರ ಭಕ್ತಿ, ಜಂಗಮಕ್ಕಾಧಾರ ಭಕ್ತಿ, ಪ್ರಸಾದಕ್ಕಾಧಾರ ಭಕ್ತಿ, ಈ ಭಕ್ತಿಯ ಭಕ್ತ ಕೂಡಲಚೆನ್ನಸಂಗಯ್ಯನಲ್ಲಿ ಮಾತಾ ಪಿತಿ ನೀ ಭಕ್ತ.

ಭಕ್ತನೆಂಬುದು ಜ್ಞಾನ ಜ್ಞೇಯ ಒಂದಾದುದು. ಗುರುವಿನ ಅರವು ತನ್ನರವು ಒಂದಾದುದು; ಲಿಂಗದಿರುವು ತನ್ನಿರುವು ಒಂದಾದುದು. ಜಂಗಮ ಜ್ಞಾನ, ತನ್ನ ಸ್ವರೂಪ ಜ್ಞಾನ ಒಂದಾದುದು, ಗುರು ಲಿಂಗ ಜಂಗಮ ಈ ಮೂರೊಂದಾಗಿ ಕಾಣುವ ಭಕ್ತ. ಈ ಭಕ್ತ ಬೇಡದ ಮುನ್ನ ಮಾಡಬಲ್ಲ ಭಕ್ತ. ಲಿಂಗ, ಅಂಗ ಒಂದು ಮಾಡುವ ಭಕ್ತ. ಲಿಂಗ, ಜಂಗಮ ಒಂದು ಮಾಡುವ ಭಕ್ತ, ಗುರು ಶಿಷ್ಯರೊಂದು ಮಾಡುವ ಭಕ್ತ, ಸಮತೆ ಸಯವಾದ ಭಕ್ತ, ನಿಸ್ಸೀಮ ಭಕ್ತ, ಸದ್ ಜ್ಞಾನ ಭರಿತ ಭಕ್ತ. ಭಾವ ಭರಿತ ಭಕ್ತ, ಎಲ್ಲೆಲ್ಲೂ ಅಖಂಡಿತ ಘನವ ಕಂಡಿಹ ಭಕ್ತ ತನ್ನ ಮುನ್ನ ಮುನ್ನಲಾದ ಘನದನುವರಿತ ಘನ, ಘನಕ್ಕೆ ಘನ ತಾನಾಗಿಹ ಘನಭಕ್ತ, ಈ ಭಕ್ತ ವ್ಯವಹಾರಿಕನೆ? ಅಲ್ಲ. ತನು, ಮನ, ಧನವ ಕಾಣದವ ಪಂಚೇಂದ್ರಿಯ ಸುಖವ ಕಾಣದವನಾದುದರಿಂದ ಅಸಿಪದ ತಾನೆ.

ತತ್ವ ಮಸಿಯನ್ನೆ ಕರಗಿಸಿದ ಭಕ್ತ, ತ್ವಂಪದ ಕಂಡವನಲ್ಲ, ತತ್ವಪದಕಂಡವನಲ್ಲ, ತತ್ವ ಲಕ್ಷ್ಯ, ತ್ವಂಪದಲಕ್ಷ್ಯವೆಂದು ವಿಭಾಗ ಮಾಡಿದವನಲ್ಲ, ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಅನುಪಮ, ಇದು ಕಾರಣ ಕಾಯವಿಲ್ಲದ ಭಕ್ತ, ಕರ್ಮವಿಲ್ಲದ ಭಕ್ತ ಕಲ್ಪಿತವೆಂಬುದ ಅರಿಯದಿಹ ಭಕ್ತ, ಅಶನವ ನರಿಯದಿಹ ಭಕ್ತ, ವ್ಯಸನಕ್ಕೆಳಸದ ಭಕ್ತನಾದುದರಿಂದ ಲಿಂಗಕ್ಕಾಧಾರ ಭಕ್ತ. ಜಂಗಮಕ್ಕಾಧಾರ ಭಕ್ತ. ಪ್ರಸಾದಕ್ಕಾಧಾರ ಭಕ್ತನೆಂದು ಹೇಳಿಹರು.

ಲಿಂಗ ಒಂದಾಗಿರ್ದ ಜಂಗಮ, ಈ ಮಹಾಂತನು ಬೇಡುವದೆಂತು? ನಿರ್ಜನಿತ

ಜಂಗಮ ಬೇಡುವನೆ? ನಿರ್ಲೇಪ ಜಂಗಮ, ಬೇಡುವದಾದರೂ ಏತಕ್ಕಾಗಿ ನಿರಾಳ, ನಿರ್ಮಾಯ ಜಂಗಮ ದೇವನನ್ನು ಅವಯವಕ್ಕೆ ತರಬಹುದೆ? ನಿಸ್ಸಂಗ ಜಂಗಮ ಆವುದರ ಸಂಗ ಮಾಡುವನು? ನಿರಾಲಂಬ ಜಂಗಮನಿಗೆ ಆವುದರ ಆಲಂಬನ? ಅನುಪಮ ಜಂಗಮ ದೇವನನ್ನು ಉಪಮೆಯುಳ್ಳವನನ್ನಾಗಿ ಕಾಣಬಾರದು. ಲಿಂಗ ಒಂದಾಗಿರ್ದ ಜಂಗಮವೆ ಜಂಗಮಲಿಂಗ ಈ ಮಹಾಂತ ನಿರ್ಜನಿತ, ಜನನ ಕಾಣಬಾರದು ನೋಡಾ. ಶಬ್ದಮುಗ್ಧನ ನಿಲವು ಶಬ್ದದಲ್ಲಿ ಹುಡುಕಬಾರದು ನೋಡಾ.

ಜ್ಞಾನ, ಜ್ಞೇಯ ಒಂದಾದುದು ಶಬ್ದ ಮುಗ್ಧ, ಅಜಾತ ಅಚಿಂತ್ಯತ್ವ, ಹೀಗೆಯೆ ಎಂದು ಹೇಳುವದಾದರೂ ಹೇಗೆ? ಈ ಭಕ್ತನ ಜ್ಞಾನ, ಜ್ಞೇಯವೆ ತಾನಾದ ಜ್ಞಾನ, ಇದು ಸಹಜ ಜ್ಞಾನ, ಸ್ವರೂಪ ಸಾಕ್ಷಾತ್ಕಾರದ ನಿಲುವು, ಇದು ನಿರಂತರ, ಇಲ್ಲಿ ಬೋಧ, ಅಬೋಧ, ಬೋಧಾ ಬೋಧ ಇವುಗಳಾವು ಇಲ್ಲ. ಇಲ್ಲವೆಂಬುದು ಇಲ್ಲವಾದ ಜ್ಞಾನವಾದುದರಿಂದ ಅಚಿಂತ್ಯ ನಿಲುವು, ಅಕಲ್ಪಿತ ಘನವೆ ತನ್ನದಾದ ನಿಲುವು, ಇಂತಪ್ಪ ಮಹಾಪ್ರಸಾದಿಗಳೆ ಜಂಗಮರು, ಭಕ್ತರು. ಇವರೆ ಜ್ಞಾನಾಮೃತರು, ತೃಪ್ತರೂಪ ತೃಪ್ತರು, ಅಚಿಂತ್ಯ ಚಿನ್ಮಾತ್ರರು, ಸ್ವಸುಖಿಗಳು, ನಿರ್ದೇಹಿಗಳು ದೇಹಭಾವಿಗಳಾಗಬಹುದೆ? ಬೇಡುವುದು, ಬೇಡಿಸಿಕೊಳ್ಳುವುದು ಅಂಗಭಾವ, ಈ ಅಂಗಭಾವಿಗಳು ಭಾವಕ್ಕಗಮ್ಯವಾಗಿಹ ಅಚಿಂತ್ಯ ಚಿನ್ಮಾತ್ರರು ಹೇಗಾಗುವರು? ಸ್ವಸುಖಿಗಳು ಆಗದ್ದರಿಂದ ಜ್ಞಾನಾಮೃತರಲ್ಲ, ವಾಙ್ಮನೋತೀತವಾದ ಘನಾಮೃತ ಇವರಿಗೆ ಲಭ್ಯವಾಗದ್ದರಿಂದ ಇವರಲ್ಲಿ ಬೇಡುವದು ಇದೆ. ಬೇಡಿಸಿಕೊಳ್ಳುವುದು ಇದೆ, ಇದು ಕಾರಣ ಬೇಡುವವರಿಗೂ ಬೇಡಿಸಿಕೊಂಬುವವರಿಗೂ ಪ್ರಸಾದವಿಲ್ಲ ಗುಹೇಶ್ವರ ಎಂದು ಪ್ರಭುದೇವರು ಹೇಳಿಹರು.

**ವಚನ 29**

**ತ್ರಿವಿಧ ನಿತ್ಯವ ತ್ರಿವಿಧದ ಅನಿತ್ಯವ ಬಲ್ಲವರಾರೊ?**
**ತ್ರಿವಿಧಕ್ಕೆ ತ್ರಿವಿಧವನಿತ್ತು, ತ್ರಿವಿಧವ ಪ್ರಸಾದವ ಕೊಳಬಲ್ಲಡೆ;**
**ಆತನೆ ಧೀರನೆಂಬೆ, ಆತನೆ ಗುಹೇಶ್ವರ ಲಿಂಗದಲ್ಲಿ ಅಚ್ಚ ಪ್ರಸಾದಿ ಎಂಬೆ ॥ 138 ॥**

ತಾತ್ಪರ್ಯ: ತ್ರಿವಿಧ ನಿತ್ಯವ, ತ್ರಿವಿಧದ ಅನಿತ್ಯವ ಬಲ್ಲವರಾರೊ: ತ್ರಿವಿಧ ನಿತ್ಯವದು, ಗುರು, ಲಿಂಗ, ಜಂಗಮ. ತ್ರಿವಿಧ ಅನಿತ್ಯವೆಂಬುದು, ತನು, ಮನ, ಧನ. ತ್ರಿವಿಧ ನಿತ್ಯದ ಘನವ ಬಲ್ಲವರಾರೊ? ಅಯ್ಯ ಚರಿಸಿ ಜಂಗಮವೆನಿಸಿತ್ತಯ್ಯ ಲಿಂಗವು ನೆಲೆಸಿ ಲಿಂಗವೆನಿಸಿತ್ತಯ್ಯ ಲಿಂಗವು. ಇದರಿರವ ಅರುಹಿದಲ್ಲಿ ಗುರು ವೆನಿಸಿತ್ತಯ್ಯ ಲಿಂಗವು, ಗುರು, ಲಿಂಗ, ಜಂಗಮಕ್ಕೆ ತಿಲಾಂಶವು ಭೇದವಿಲ್ಲ ನೋಡಾ ಎಲೆ ದೇವಾ ಬೇಧಿಸಿದವಂಗೆ ಭವ ಬಾಧೆ ತಪ್ಪುವದೆ ದೇವರ ದೇವ ಕಪಿಲ ಸಿದ್ಧ ಮಲ್ಲಿಕಾರ್ಜುನ.

ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧ ಪ್ರಸಾದವ ಕೊಳಬಲ್ಲರೆ ಆತನೆ ಧೀರನೆಂಬೆ ಆತನೆ ಗುಹೇಶ್ವರ ಲಿಂಗದಲ್ಲಿ ಅಚ್ಚ ಪ್ರಸಾದಿ ಎಂಬೆ.

ತ್ರಿವಿಧಕ್ಕೆ ತ್ರಿವಿಧ ನಿತ್ತ ಪರಿ ಆವುದು? ಗುರುವೆಂಬ ಸಮಪ್ರಕಾಶಮಾನವಾದ ತತ್ವಕ್ಕೆ ತನ್ನ ಅಂಗವ ಸಿಕ್ಕಬೇಕು, ಲಿಂಗವೆಂಬ ಅಕಲ್ಪಿತ ಘನಕ್ಕೆ, ಸಂಕಲ್ಪ ವಿಕಲ್ಪರೂಪಿ ಮನವನಿಕ್ಕಬೇಕು, ಜಂಗಮವೆಂಬ ಅಖಂಡ ಅರುವಿಂಗೆ ಧನವನಿಕ್ಕಬೇಕು.

ಗುರುವೆಂಬುದು ಸಕಲರ ಸ್ವರೂಪ, ಸಮ ಸ್ವರೂಪ, ಇದು ಬೋಧ ಬೋಧಕತ್ವಕ್ಕೆ ಮೀರಿ ಬೆಳಗುವ ಸ್ವಯಂಪ್ರಕಾಶ, ಸದ್ ಜ್ಞಾನ ಘನ, ಇದು ಗುರು ರೂಪ, ಗುರು ತತ್ವ, ತಿಳಿಯದವರು ಬೋಧವೆ ಗುರು ರೂಪವೆಂದು ಭಾವಿಸಿದ ಭಾವುಕರಿಗೆ, ಬೋಧವೆ ಗುರುಸ್ವರೂಪವಾದರೆ ಇದು ನಿತ್ಯ ರೂಪವಾಗದು, ಬೋಧವೆಂಬುದು, ತೋರಿ ಇಲ್ಲವಾಗುವ ಮಾಯಿಕ, ಈ ಮಾಯಿಕ ತತ್ವ, ನಿತ್ಯ ಸ್ವರೂಪವಾಗದು, ಇದು ಕಾರಣ ಗುರುಘನ, ಬೋಧ ಬೋಧಕತ್ವಕ್ಕೆ ಮೀರಿ ಬೆಳಗುವ ಸಚ್ಚಿದಾನಂದ ನಿತ್ಯ ಪರಿಪೂರ್ಣ ಗುರುರೂಪಾಗಿದೆ.

ತ್ರಿವಿಧ ಅನಿತ್ಯವೆಂಬುದು ತನು ಮನ ಧನ ಇವುಗಳಲ್ಲಿ ಗುರು ಸ್ವರೂಪಮಾದ ಸದ್ ಜ್ಞಾನ ಘನಕ್ಕೆ ಅಂಗ ನಿಕ್ಕುವದರಿಂದ ಅಂಗವು ಸದ್ ಜ್ಞಾನ ಘನವಾಗುವುದು, ಗುರು ತತ್ವ ಇದು ಶುದ್ಧ ತತ್ವ ಅಕಳಂಕ ತತ್ವ, ಮೀಸಲ ತತ್ವ, ಮರವರುವಿಂಗೆ ಮೀರಿರುವುದರಿಂದ ನಿಸ್ಸಂಗವು ನಿರಲಂಬವಾದ ನಿರುಪಾಧಿ ತತ್ವ, ಈ ತತ್ವವು ಅಂಗಕ್ಕೆ ಸೋಂಕಿದಡೆ ಪರ ತತ್ವವಾಗುವದು. ಆಗ ತನುವಿಗೆ ತೋರಿಕೆ ಇಲ್ಲವಾಗುವದು. ಇಲ್ಲವೆಂಬುದು ಇಲ್ಲವಾಗಿ ಇದ್ದ ನಿರಂತರವಾಗಿಹ ಸದ್ ಜ್ಞಾನ ಘನವು ತಾನಾಗುವುದು.

ಗುರುವೆಂಬ ಅರುವಿಂಗೆ ಅಂಗವ ಸಿಕ್ಕುವುದಾದರೂ ಅರುವಿನಿಂದ ಸಿಕ್ಕುವದು, ಅರುವಿಂಗೆ ಅರುವಿನಿಂದ ಅರ್ಪಿತವಾದ ಅಂಗ, ಅರುವು ಅರು ಸ್ವರೂಪವಾಗಿಯೆ ಬೆಳಗುವದು, ಇದು ಅರುವಿನ ಘನತ್ವ ತಿಳಿಸುವ ತಿಳಿಯುವ ವರ್ಮದಿಂದುಕ್ತವಾದುದು, ಈ ವರ್ಮವರಿತಲ್ಲಿ ಗುರುವಿನಿಂದ ಲಭ್ಯವಾದ ಕರುಣಾಜಲವೆನಿಸುವುದು, ಇದುವೆ ಶುದ್ಧ ಪ್ರಸಾದವಾಗಿಹದು, ಈ ಶುದ್ಧ ಪ್ರಸಾದ ಮೊದಲು ಕೆಟ್ಟು ನಂತರ ಶುದ್ಧವಾದ ಪ್ರಸಾದವಲ್ಲ. ಇದು ನಿರಂತರ ಶುದ್ಧಪ್ರಸಾದ.

ಲಿಂಗವದು ಅಕಲ್ಪಿತ ಘನ, ಅಚಿಂತ್ಯಘನ, ಅವರ್ಣೀಯಘನ, ಇದು ಘನಗಂಭೀರವಾಗಿಹ ಮಹಾಘನ. ಈ ಘನಲಿಂಗಕ್ಕೆ ಸಂಕಲ್ಪ ವಿಕಲ್ಪರೂಪಿ ಮನವ ಸಿಕ್ಕವುಡೆ, ಮನವು ತನ್ನ ಪೂರ್ವಾಶ್ರಯ ಬಿಟ್ಟು ಅದು ಲಿಂಗವಾಗಿ ಪ್ರಜ್ವಲಿಸುವದು.

ಲಿಂಗಕ್ಕೆ ಮನವ ಸಿಕ್ಕುವದೆಂದಲ್ಲ, ಅಕಲ್ಪಿತ ಘನಲಿಂಗವರಿಯಲು ಮನಕ್ಕೆ ಸುಭೋಧವ ಕೊಡುವುದು, ಎಲೆ ಮನವೆ ನೀನು ಅರಿಸಿಕೊಳ್ಳುವ ಮನವಾಗಿಲ್ಲ, ಅಂದರೆ ಅನಾತ್ಮವಾಗಿಲ್ಲ, ಇಲ್ಲದುದೆ ಕಲ್ಪಿಸುವ ಸಂಕಲ್ಪವು ನೀನು ಆಗಿಲ್ಲ, ಇದ್ದ ನಿನ್ನ ಸ್ವರೂಪ ಅರಿಯದ್ದರಿಂದ ಸಂಕಲ್ಪ ವಿಕಲ್ಪಕ್ಕೊಳಪಟ್ಟು ಪ್ರಮಾದದಿಂದ ನೀನು ಮನವೆಂದು ತಿಳಿದುದು ತಪ್ಪು. ನೀನು ಸಚ್ಚಿದ್ಘನ ನಿರುವಿ, ನೋಡು, ನೋಡು ಮನವೆ, ನಿನ್ನಿರವು ಅಚಿಂತ್ಯ ಚಿಂತನೆಗೆ ಮೀರಿದ ಇರವು, ವ್ಯರ್ಥಚಿಂತನದಿಂದುಕ್ತನಾಗಿ ನಿನ್ನ ಅಚಿಂತ್ಯ ಪದದಿಂದ ದೂರಾಗಿರುವೆ. ಚಿಂತನ ಮಾಡುವುದು ನಿನ್ನಭ್ರಮೆ ನೀನು ಚಿಂತನೆಗೆಡೆಗೊಡದ ಘನ ಪರಬ್ರಹ್ಮ, ನಿನ್ನಲ್ಲಿ ಭ್ರಮೆ ಏತರದು, ನಿನ್ನ ಘನಗಂಭೀರವಾಗಿಹ ಮಹಾಘನವ ತಿಳಿಯದ್ದರಿಂದ ವಿಕಲ್ಪಕ್ಕೊಳಗಾಗಿ, ನೀನು ಮನ, ಬುದ್ಧಿ, ಚಿತ್ತಾ, ಅಹಂಕಾರವೆಂದು ಜೀವನೆಂದು ಭ್ರಮಿತನಾಗಿರುವೆ.

ಎಲೆ ಮನವೆ ಹವಣಿಸಬಾರದ ಅಖಂಡ ಬೆಳಗು ತೋರುತ್ತಿಹುದು, ಅದೀಗ

ನಿನ್ನನಿಜ, ಎಲೆ ಮನವೆ ನೀನೆಂಬ ಶಂಕೆ ಹಿಂಗಿ ತಾನೆ ತೋರುತ್ತಿಹುದು, ಅದೀಗ ನಿನ್ನ ನಿಜ, ನಿನ್ನ ನಿಜವ ನರಿಯಬಲ್ಲಡೆ ಅದೆ ಬ್ರಹ್ಮಜ್ಞಾನ, ಅದೆ ಕೇವಲ ಮುಕ್ತಿ, ಅದೆ ನಮ್ಮ ಗುಹೇಶ್ವರ ಲಿಂಗವನರಿದ ಸಹಜ ಭಕ್ತಿ ಕುಳ ಕಾಣಾ, ಎಲೆ ಮನವೆ ನೀನಿದ ನಿಶ್ಚಿಯಿಸಿಕೊ ಮರೆಯದೆ ಎಂದು ಸುಭೋಧವ ಹೇಳಿ ಅರುವಿನಿಂದ ಅರು ಸ್ವರೂಪಿಯಾಗಿಹ ಅಖಂಡ ಬೆಳಗು ನೋಡುವುಡೆ, ಸಿದ್ಧ ಪ್ರಸಾದವೆಂಬ ಮಹದರಿವು ತನ್ನಿಂದ ತನಗೆ ವೇದ್ಯವಾಗುವದು, ಆಗ ತನ್ನ ಪೂರ್ವಸ್ವಭಾವ ಮಾದ ಸಂಕಲ್ಪ ವಿಕಲ್ಪ ಮರವು ಅರಿವು, ಚಿಂತನ ನಿರ್ಣಯ ಅಹಂಕಾರ ಇವುಗಳ ಅಧ್ಯಾಸ ಸ್ವಭಾವತಃ ನಷ್ಟವಾಗುವುದು, ಆಗ ಕರಣಂಗಳ ಕೆಟ್ಟು, ಲಿಂಗ ಕಿರಣಂಗಳಾಗುವವು.

ಜಂಗಮುವೆಂಬ ಅಖಂಡಿತ ಅರುವಿಂಗೆ ಪ್ರಾಣರೂಪಿ, ಸೋಹಂ ಧನವನಿಕ್ಕುವುಡೆ ಆಗ ಭಾವರೂಪಿ ಭ್ರಮ ನಿರಸನವಾಗಿ ನಾನೀನೆಂಬುದಕ್ಕೂ ತೆರಹಿಲ್ಲದ ಘನವಾಗಿ ಪ್ರಜ್ವಲಿಸುವದು, ಜಂಗಮ ರೂಪಿ ಅಖಂಡಿತ ಅರಿವು ತನ್ನೊಳ ಉದಯವಾಗಬೇಕಾದರೆ ಕರ್ಮಕಾಂಡಿಯಾಗಿ ಕಾಯನಾನೆಂಬ ಅಭಿಮಾನಿಗೂ ಅಸಾಧ್ಯ. ಈಶಾರ್ಪಣ ಮಾಡುವ ಭಕ್ತಾಭಿಮಾನಿಗೂ ಅಸಾಧ್ಯ. ಸಕಲ ಕರ್ಮಕ್ಕೆ ಸಾಕ್ಷಿ ನಾನೆನ್ನುವ ಚಿದಹಮ್ಮುಳವನಿಗೂ ಅಸಾಧ್ಯ.

ದಾಸೋಹಂ ಭಾವವೆಂಬುದು ಸೋಹಂ ನೀನೆ ಎಲೆ ಅಯ್ಯ, ಕೋಹಂ ತತ್ವ ತೂರ್ಯಾರ್ಥವು ನೀನೆ ಅಯ್ಯ, ನಾಹಂ, ನಾಹಂ, ನೀನೆ ಅಯ್ಯ, ಆನೆಂಬುದೊಂದು ಭ್ರಾಂತುಂಟೆ? ಕಪಿಲಸಿದ್ಧಮಲ್ಲಿಕಾರ್ಜುನ ಗುರುವಿನ ಕೈಯಲ್ಲಿ ಆನು ಸತ್ತು ಹುಟ್ಟಿದ ಬಳಿಕ ಆನು ನೀನೆಂಬ ಸಂದಳಿದೆ. ಗುರುವಿನ ಕೈಯಲ್ಲಿ ಆನು ಸತ್ತು ಹುಟ್ಟಿದವರು, ಇವರು ಜಂಗಮವೆಂಬ ಅಖಂಡಿತ ಘನದಿರುವಿಂಗೆ ತಮ್ಮ ಪ್ರಾಣರೂಪಿ ಸೋಹಂ ಧನವ ನಿಕ್ಕಿದುದರಿಂದ ಆನು ಸತ್ತು ಹುಟ್ಟಿದವರು. ನಾನೀನೆಂಬ ಸಂದಳಿದವರು. ಎಲ್ಲಿ ನೋಡಿದಡಲ್ಲಲ್ಲಿ ಅಖಂಡಿತ ಘನವಪ್ಪ ಪೂರ್ಣ ದರ್ಶನ, ತನ್ನಿಂದ ತನ್ನಕಂಡ ದರ್ಶನ ಈ ಭರಿತ ಭಾವವುಳ್ಳ ದಾಸೋಹಂ, ಧನವ ಭಾವಕ್ಕಗಮ್ಯವಾಗಿಹ ನಿರಾಳ ಜಂಗಮ, ನಿರಾಲಂಬ ಜಂಗಮಕ್ಕೆ ನುಡಿಗೆಡೆಗೊಡದ ಘನವು ಪ್ರಜ್ವಲಿಸುವದರಿಂದ ಇದು ಪ್ರಸಿದ್ಧ ಪ್ರಸಾದವೆಂದು ಹೇಳಿಹರು.

ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧ ಪ್ರಸಾದ ಕೊಳಬಲ್ಲಡೆ ಆತನೆ ಧೀರನೆಂಬೆ, ಆತನೆ ಗುಹೇಶ್ವರ ಲಿಂಗದಲ್ಲಿ ಅಚ್ಚ ಪ್ರಸಾದಿ ಎಂಬೆ, ಗುರುವೆಂಬ ನಿತ್ಯಕ್ಕೆ, ಶಿಷ್ಯನಂಗವೆಂಬ ಅನಿತ್ಯವನ್ನಿಕ್ಕಿ ಸಮಪ್ರಕಾಶಮಾನವಾದ ತತ್ವದಿರುವೆ. ನನ್ನ ಅರವು ಗುರುವಿನ ಅರುವು ಒಂದೆ ಎಂದು ಶುದ್ಧ ಪ್ರಸಾದ ಕೊಳಬಲ್ಲಾತಧೀರ, ಲಿಂಗವೆಂಬ ನಿತ್ಯಕ್ಕೆ ಶಿಷ್ಯನ ಮನವೆಂಬ ಅನಿತ್ಯವನಿಕ್ಕಿ ಅಕಲ್ಪಿತ ಘನದಿರುವಿನ ಅರುವುಳ್ಳವನಾಗಿ ತನ್ನಿರುವೆ ಲಿಂಗದಿರುವು ಲಿಂಗದಿರುವೆ ತನ್ನಯ ಇರುವು ಅರುವು ಎಂದು ತನ್ನಿಂದ ತನಗದು ಸಿದ್ಧವಾದುದು ಸಿದ್ಧಪ್ರಸಾದ. ಇದು ಲಿಂಗದಿಂದ ಕೊಳಬಲ್ಲಾತ ಆತ ಧೀರನೆಂಬೆ. ಜಂಗಮವೆಂಬ ನಿತ್ಯಕ್ಕೆ ಶಿಷ್ಯನ ಪ್ರಾಣವೆಂಬ ಅನಿತ್ಯವ ನಿಕ್ಕಿ ಅಖಂಡಿತ ಘನವಪ್ಪ ಪೂರ್ಣವಾಗಿಹ ಇರುವೆ ತನ್ನರುವೆಂದು ಪ್ರಸಿದ್ಧ ಪ್ರಸಾದವ ಕೊಳಗಬಲ್ಲಾತ,

ಧೀರನೆಂಬೆ. ಈ ತ್ರಿವಿಧ ಪ್ರಸಾದವುಳ್ಳಾತ ಗುಹೇಶ್ವರ ಲಿಂಗದಲ್ಲಿ ಅಚ್ಚಪ್ರಸಾದಿಗಳು ಎಂದು ಹೇಳಿಹರು.

**ವಚನ 30**

**ಮರ್ತ್ಯಲೋಕದ ಮಾನವರು;**
**ದೇಗುಲದೊಳಗೊಂದು ದೇವರ ಮಾಡಿದಡೆ,**
**ಆನು ಬೆರಗಾದೆನಯ್ಯ,**
**ನಿಚ್ಚಕ್ಕೆ ನಿಚ್ಚ ಅರ್ಚನೆ ಪೂಜೆಯ ಮಾಡಿಸಿ,**
**ಭೋಗವ ಮಾಡುವರ ಕಂಡು ನಾನು ಬೆರಗಾದೆನು**
**ಗುಹೇಶ್ವರ ನಿಮ್ಮ ಶರಣರು ಹಿಂದೆ ಲಿಂಗವನಿರಿಸಿ ಹೋದರು.** ॥ 176 ॥

ತಾತ್ಪರ್ಯ: ಮರ್ತ್ಯಲೋಕದ ಮಾನವರು, ದೇಗುಲದೊಳಗೊಂದು ದೇವರ ಮಾಡಿದೊಡೆ, ಆನು ಬೆರಗಾದನೆಯ್ಯ: ಪ್ರಭುದೇವ, ಮರ್ತ್ಯಲೋಕದ ಮಾನವನು ತಾವಿದ್ದ ದೇಗುಲದೊಳಗೊಂದು ದೇವರ ಮಾಡಿದುದು ಎನಗೆ ಆಶ್ಚರ್ಯವಾಗಿದೆ. ಏಕೆಂದರೆ, ಈ ಮಾನವರು ಹುಟ್ಟು ಸಾವುಳ್ಳ ಮಾನವರು ಇವರ ಲೋಕ ಮೃತ್ಯು ಲೋಕ, ಈ ಸಾವುಳ್ಳಲೋಕದಲ್ಲಿ ದೇವರ ಮಾಡುವರೆಂದಲ್ಲಿ ಆಶ್ಚರ್ಯವಲ್ಲವೆ?

ಮರ್ತ್ಯ ಲೋಕವದು, ಮೃತ್ಯುವಿನ ಲೋಕ, ಇಲ್ಲಿ ವಾಸಿಸುವವರೆಲ್ಲರು, ಮೃತ್ಯುವಿನ ದವಡಿಯಲ್ಲಿದ್ದವರೆ! ತಾವು ಮೃತ್ಯುವಿಗೊಳಪಟ್ಟು ಮೃತ್ಯುಂಜಯ ದೇವನನ್ನು ಮಾಡುವೆವೆಂಬುದು ಇದೆಂಥಹ ಆಶ್ಚರ್ಯ.

ಮರವುಳ್ಳ ಮಾನವ, ಮರವಿನಿಂದುಕ್ತನಾಗಿ ದೇಗುಲ ಮಾಡಿದೆನೆನ್ನುವದು ಮರವೆ, ದೇವರ ಮಾಡಿದೆನೆನ್ನುವದು ಮರವೆ, ಈ ಮರವುಳ್ಳವರ ಮರವಿನ ಆಟವ ನೋಡಿ ನನಗೆ ಆಶ್ಚರ್ಯವಾಗಿದೆ. ಓ ಮಾನವ, ಸೃಷ್ಟಿಯ ಕಾರ್ಯ ಈಶ್ವರನದು, ನಿನ್ನದಲ್ಲ, ಈಶ್ವರನನ್ನು ಮಾಡಲು ಆರಿಗಾದರೂ ಬರುವುದೆ? ಓ ಮಾನವ, ನೀನಾರು ಎನ್ನುವ ಪರಿಚಯ ನಿನಗಿಲ್ಲ, ನಿನ್ನ ನಿವಾಸದ ಪರಿಚಯವಾದರೂ ನಿನಗಿದೆಯಾ? ದೇವನ ಪರಿಚಯುವಾದರೂ ನಿನಗಿದೆಯಾ? ದೇವನ ದೇಗುಲವಾವುದೆಂಬುದನ್ನಾದರೂ ಅರಿತಿರುವೆಯಾ? ಪರಿಚಯವಿಲ್ಲದ ಅಪರಿಚಿತರು ನೀವಾಗಿದ್ದರೂ ದೇವರ ಗುಡಿ ಕಟ್ಟಿಸುವಿರಾ? ದೇವರ ಸ್ಥಾಪಿಸುವಿರಾ? ಇದೆಂಥ ನಿಮ್ಮಯ ಮರವು, ಈ ಮರವ ಕಂಡು ಎನಗೆ ಆಶ್ಚರ್ಯವಾಗಿದೆ.

ದೇವನಿರುವ ಗುಡಿ ಅದು ದೇಗುಲವಲ್ಲವೆ? ಓ ಮಾನವ ದೇವನು ಪರಿಪೂರ್ಣನಿರುವಲ್ಲಿ ಪಿಂಡಾಂಡದೊಳಗೂ ಅವನೆ, ಬ್ರಹ್ಮಾಂಡದೊಳಗೂ ಅವನೆ, ಹೊರಗೂ ಅವನೆ, ಒಳಹೊರಗೆನ್ನದೆ ಪೂರ್ಣನಾದವನು ಅವನಿರುವುದೆಲ್ಲಿ? ಎಲ್ಲಿ ನೋಡಿದಡಲ್ಲಲ್ಲಿ ಅವನೆ, ಅವನದೆ ದೇಗುಲ. ಪಿಂಡಾಂಡ ಅವನ ದೇಗುಲ, ಬ್ರಹ್ಮಾಂಡ ಅವನ ದೇಗುಲ, ಚತುರ್ದಶ ಭುವನಂಗಳು ಅವನ ದೇಗುಲ, ತತ್ವ ಅತತ್ವವೆಂಬ ವಿವೇಕ ಅವನ ದೇಗುಲ, ಜಗಭರಿತ ನೆನ್ನದೇವ ಜಗವ ಹೊದ್ದನೆನ್ನದೇವ, ದೇವ ಜಗದ ಕಾರ್ಯವನ್ನು ಹೊದ್ದವನು, ಕಾರಣವನ್ನು ಹೊದ್ದದವನು, ಹೊದ್ದದವನೆನ್ನುವನೆ!

ಜಗಭರಿತನು.

ಓ ಮಾನವಾ, ದೇವನ ದೇಗುಲ ಮಾಡಲು ನಿನಗೆ ಬರುವದೆ? ದೇವನ ನಿರ್ಮಾಣ ಮಾಡಲು ಬರುವುದೆ? ನೀ ಮಾಡುವ ಕೃತಿ ಕಂಡು ಎನಗೆ ಆಶ್ಚರ್ಯವಾಗಿದೆ, ಮಾನವಾ ದೇವನ ನಿರ್ಮಾಣ ಮಾಡಲು ದೇವನು ಸಾಕಾರ ನಿರಾಕಾರನೆಂದು ತಿಳಿದಿರುವೆಯಾ? ದೇವನು ನಿನ್ನ ಮತಿಗೊಳಪಟ್ಟವನೆಂದು ತಿಳಿದಿರುವೆಯಾ? ಭಾವಕ್ಕೊಳಪಟ್ಟವನೆ? ಶೃತಿಗೆ ಮೀರಿದ ಘನ ತತ್ವ ಸಾಕಾರನೆಂದರೂ ಅತ್ತತ್ತ ನಿರಾಕಾರನೆಂದರೂ ಅತ್ತತ್ತ. ದೇವ, ಆದಿ ಅನಾದಿ ಎಂಬುದರ ಅತ್ತತ್ತ ಮುನ್ನ ಮುನ್ನಲಾದ ಪರತತ್ವ, ಅದನ್ನು ಅರಿಯದೆ ನೀನು ದೇಗುಲವ ಮಾಡಿದುದು ಆಶ್ಚರ್ಯ, ದೇಗುಲದೊಳಗೊಂದು ದೇವರ ಮಾಡಿದುದು ಆಶ್ಚರ್ಯವಾಗಿದೆ. ಇದಲ್ಲದೆ ನಿತ್ಯ ನಿತ್ಯ ಅರ್ಚನ ಪೂಜೆಯ ಮಾಡಿಸಿ ಭೋಗವ ಮಾಡುವದು ಕಂಡು ನಾನು ಬೆರಗಾದೆನು ಗುಹೇಶ್ವರಾ.

ಪ್ರಭುದೇವ, ಮಾನವರು ತಾವು ರಚಿಸಿದ ಗುಡಿಯೆ ದೇಗುಲವೆಂದು ಅದರೊಳಿರುವ ದೇವರೆ ದೇವರೆಂದು ತಿಳಿದು ಪ್ರತಿದಿನ ಮಾಡುವ ರುದ್ರಾಭಿಷೇಕ ಷೋಡಶೋಪಚಾರ, ಜಪ, ತಪ, ಅರ್ಚನೆಯ ಮಾಡಿಸಿ, ಈ ದೇವನು, ಅಷ್ಟ ಭೋಗೈಶ್ವರ್ಯ ಕೊಡುವವನಾಗಿದ್ದಾನೆ. ಇವನು ಅವನಿಂದ ಫಲ ಪದಂಗಳ ಪಡೆಯುವ ಭಕ್ತನಾಗಿಹನು. ಇವನು ಪೂಜೆಯ ಮಾಡುವದರಿಂದ ಅದರ ಪ್ರತಿಫಲವೆ ಉತ್ತರೋತ್ತರ ಲೋಕಂಗಳು ಚತುರ್ವಿಧ ಪದವಿಗಳು, ಪೂಜೆಯ ಮಾಡಿದಡೆ ಸ್ವರ್ಗ, ಮಾಡದಿರೆ ನರಕ. ದೇವನಲ್ಲ, ಆಸ್ತೀಕರು ಭಕ್ತರು, ನಾಸ್ತಿಕರಾದವರು ಭವಿಗಳು, ಈ ದೇವನಿಗೆ ಮುಡುಪು ಇತ್ಯಾದಿಗಳ ಮುಟ್ಟಿಸುವವರು ಭಕ್ತರು ದೇವನಿಗೆ ಕೊಟ್ಟಷ್ಟು ಇವನ ಭಕ್ತರಿಗೆ ಅವನು ದಿವ್ಯಭೋಗವ ಕೊಡುವನೆಂಬ ಮತಿಯ ಬೆಳದುದುಕಂಡು ಬಹು ಆಶ್ಚರ್ಯವಾಗಿದೆ. ಇದಲ್ಲದೆ ದೊಡ್ಡ ದೊಡ್ಡ ಕ್ಷೇತ್ರಗಳಲ್ಲಿ ಈ ಭಾವ ಭ್ರಮಿತರ ಭಾವ ನಡೆದು ಬಂದ ಬಂಡಾಯ, ಆವ ಆವ ದೇವರಲ್ಲಿ ಹೆಚ್ಚು ಹೆಚ್ಚು ನಿಧಿ ಕೂಡುವುದು, ಅದು ಘನವುಳ್ಳ ದೇವರು, ಈ ದೇವನಿಗೆ ಭಕ್ತರು ತಪ್ಪು ಕಾಣಿಕೆಯನ್ನು ಮುಡುಪುಗಳನ್ನು ಹೇಗೆ ಹೇಗೆ ಸಲ್ಲಿಸುವರೋ ಹಾಗೆ ಹಾಗೆ ಆ ದೇವನು ಅವರಿಗೆ ಅತಿ ಅತಿಯಾಗಿ ಭೋಗೈಶ್ವರ್ಯ ಕೊಡುವವನಾಗಿರುವನೆಂದೆನ್ನುವ ಮತಿ ಮಂಕು ಕಂಡು ಪ್ರಭಾದೇವ ಬೆರಗಾಗಿಹನು.

ಓ ಮಾನವಾ, ದೇವನ ನಿತ್ಯ ನಿತ್ಯ ಪೂಜೆಯ ಮಾಡಿ ಭೋಗೈಶ್ವರ್ಯವ ಪಡೆಯಲು ದೇವನು ಕೊಡಕೊಳ್ಳುವ ವ್ಯವಹಾರಕ್ಕೊಳಪಟ್ಟವನೆ? ದೇವ ದೇವ, ನಿರಾಲಂಬ ನಿಸ್ಸಂಗ ನಿತ್ಯ ತೃಪ್ತರೂಪ ತೃಪ್ತ, ವಾಙ್ಮನೋತೀತ. ಮಾನವಾ ಅನಾಮಯವಾಗಿರುವ ನಿರ್ವಾಣನಿಗೆ ನೀನಾವ ನಾಮದಿಂದ ಜಪಿಸಿದೆ, ನೆನಹಿಂಗೆ ಅತೀತ ನಾದವನನ್ನು ನೀನಾವ ನೆನಹಿನಿಂದುಕ್ತನಾಗಿ ಒಲಿಸಿಕೊಂಡಿರುವಿ, ಭಾವಕ್ಕಗಮ್ಯನಿಗೆ ಅದಾವ ಭಾವದಿಂದ ಭಾವಿಸಿದೆ, ಅಚಿಂತ್ಯಾತ್ಮಗೆ ಅದಾವ ಚಿಂತನ ಮಾಡಿ ಚಿಂತಿಸಿದೆ, ಅರಿದರುಹಿಸಿಕೊಂಬುದಕ್ಕೆ ಮೀರಿದ ಘನಕ್ಕೆ ಅದಾವ ಅರುವಿನಿಂದ

ಅರಿದೆ, ಅಕಲ್ಪಿತ ಘನವೆತ್ತ, ಕಲ್ಪಿತನಾದ ನೀನೆತ್ತ.

ಓ ಮಾನವಾ ನಿನ್ನನ್ನಾದರೂ ತಿಳಿಯಲಿಲ್ಲ, ದೇವನನ್ನಾದರೂ ತಿಳಿಯಲಿಲ್ಲ, ತಿಳಿಯದೆ ಅರ್ಚನೆ ಪೂಜೆಯ ಮಾಡಿಸಿ ಭೋಗೈಶ್ವರ್ಯ ಪಡೆಯುವೆನೆಂಬ ನಿನ್ನ ಹುಚ್ಚುತನವ ಕಂಡು ಬೆರಗಾದೆ, ಗುಹೇಶ್ವರ ನಿಮ್ಮ ಶರಣರು ಹಿಂದೆ ಲಿಂಗವ ನಿರಿಸಿಹೋದರು. ಶರಣರೆಂದರೆ, ಲಿಂಗವರಿಯ ಹೋಗಿ ಲಿಂಗ ತಾವಾದವರು, ತಮ್ಮ ತಾವರಿತವರು, ಎಲ್ಲೆಲ್ಲೂ ಲಿಂಗವ ಕಂಡವರು, ತನ್ನ ಕಂಡವರು ಈ ಶರಣರು ಮನದೆರದು ಮಾತನಾಡಿದಾಗ ಲಿಂಗವ ಕಾಣಬಹುದು.

ಕೆರೆ ಹಳ್ಳ ಬಾವಿಗಳು ಮೈದೆಗೆದಾಗ ಗುಳ್ಳೆಗೊರಚೆ ಕಾಣುವವು. ಸಮುದ್ರ ಮೈದಗೆದಾಗ ರತ್ನಗಳು ಕಾಣುತ್ತವೆ, ಶರಣರು ಮನದೆರೆದು ಮಾತನಾಡಿದಾಗ ಲಿಂಗವ ಕಾಣಬಹದು.

ಅರಿತ ಶರಣ ಮನದೆರೆದು ಎಲ್ಲಿಯವರೆಗೆ ಮಾತಾಡುವುದಿಲ್ಲ, ಅಲ್ಲಿಯವರೆಗೆ ಗುರು ಕರುಣಿಸಿದ ಲಿಂಗ ಮುಂದೆ ಇದ್ದರೂ ಲಿಂಗ ಹಿಂದೆಯೆ, ಅರುವರಿತ ಶರಣ ಲಿಂಗೈಕ್ಯ ಶರಣ ಮನದೆರೆದು ಮಾತಾಡದ್ದರಿಂದ, ಲಿಂಗಜ್ಞಾನದಿಂದ ದೂರಾದವರು, ಹಿಂದುಳಿದವರು ಮರವುಳ್ಳವರು, ಇವರು ದೇವರ ಗುಡಿ ಕಟ್ಟಲಿ, ಕಟ್ಟಿಸಲಿ ಹಿಂದೆಯೆ. ದೇವರು ನಿರ್ಮಾಣ ಮಾಡಿದರೂ ಹಿಂದೆಯೆ. ಏಕೆಂದರೆ ಈ ಮರ್ತ್ಯಲೋಕದ ಮಾನವರ ಮುಂದೆ, ಲಿಂಗೈಕ್ಯ ಶರಣರು ತಮ್ಮ ಸ್ವಾನುಭವವುಳ್ಳ ಲಿಂಗವ ಇವರ ಮುಂದೆ ಇಡಲಿಲ್ಲ, ಇವರು ಲಿಂಗಾಂಗಸಮರಸ ಜ್ಞಾನವಿಲ್ಲದ ಕುರುಡರು, ಇವರಿಗೆ ಲಿಂಗ ತತ್ವ, ಮುಂದಿಟ್ಟರೂ ತಿಳಿಯದು. ಹೇಳಿದರೂ ಕೇಳರು ಇದು ಕಾರಣ ಪರಮ ಜ್ಞಾನವ ಇವರ ಮುಂದೆ ಇಡದೆ ಇಷ್ಟಲಿಂಗವ ನಿರಿಸಿ ಹೋದರು ಶರಣರು ನಿರೂಪಲಿಂಗವೆಂಬುದು ತಿಳಿದಿಹರು, ಆ ಘನಾನುಭವ ಹಿಂದೆ ಲಿಂಗವ ನಿರಿಸಿ ಹೋದರು. ಪೂಜಾಲಿಂಗವ ಇವರ ಮುಂದಿರಿಸಿ ಹೋದರು.

**ವಚನ 31**

**ಹೊತ್ತಾರೆ ಪೂಜಿಸಲು ಬೇಡ ಕಂಡಾ.**
**ಬೈಗೆ ಪೂಜಿಸಲು ಬೇಡ ಕಂಡಾ,**
**ಇರಳುವನು ಹಗಲುವನು ಕಳೆದು,**
**ಪೂಜಿಸಲು ಬೇಕು ಕಂಡಾ**
**ಇಂತಪ್ಪ ಪೂಜೆಯ ಪೂಜಿಸುವವರ,**

**ಎನಗೆ ತೋರಯ್ಯ ಗುಹೇಶ್ವರಾ. ॥ 203 ॥**

**ತಾತ್ಪರ್ಯ:** ಹೊತ್ತಾರೆ ಪೂಜಿಸಲು ಬೇಡ, ಬೈಗೆ ಪೂಜಿಸಲು ಬೇಡ ಕಂಡಾ: ಪ್ರಭುದೇವ, ಹೊತ್ತಾರೆ ಎದ್ದು ಪೂಜಿಸುವ ಭಕ್ತರಿಗೂ, ರಾತ್ರಿಯಲ್ಲಿ ಪೂಜಿಸುವ ಭಕ್ತರಿಗೂ, ಪೂಜಿಸಲು ಬೇಡ ಕಂಡಾ ಎಂದು ಹೇಳಿದುದು ಇರುಳು ಹಗಲುಗಳನ್ನು ಕಾಣುವ ಭಕ್ತರಿಗೆ ವಿರೋಧವಾಗಿ ಭಾಸವಾಗುತ್ತದೆ. ಏಕೆಂದರೆ, ದೇವನ ಪೂಜಿಸಲು ಕಾಲಗಳ ನಿಯಮ ಮಾಡಿಕೊಂಡಿಹರು. ಉದಯಕಾಲ, ಮಧ್ಯಾನ್ಹ ಕಾಲ,

ಸಾಯಂಕಾಲವೆಂದು ತ್ರಿಕಾಲ ಸಂಧ್ಯಾವಂದನ ಮಾಡುವವರು, ಲಿಂಗಾರ್ಚನ ಮಾಡುವವರು ಉಂಟು. ತ್ರಿಕಾಲವೆ ಪೂಜಿಸಲಿ, ದ್ವಿಕಾಲವೆ ಪೂಜಿಸಲಿ, ಏಕ ಕಾಲವೆ ಪೂಜಿಸಲಿ ಇವರಿಗೆ ಕಾಲವು ಮುಖ್ಯವೊ ದೇವನು ಮುಖ್ಯನೊ? ಇವರಿಗೆ ಕಾಲಭಕ್ತರೆನಬೇಕೆ? ದೇವ ಭಕ್ತರೆನಬೇಕೆ ಕಾಲ ಭಕ್ತರೆಂದರೆ ಕಾಲವನ್ನೆ ದೇವರೆಂದು ತಿಳಿದಿರುವಿರಾ ಹಾಗಿಲ್ಲ. ದೇವನ ಚಿಂತನವುಳ್ಳವರಾಗಿಹರು, ದೇವನ ಭಕ್ತರೆಂದರೆ ದೇವನ ತಿಳಿದು ಕಾಲಗಳ ಮಹತ್ವ ಮಾಡಿ ಪೂಜಿಸುವದು ಆಶ್ಚರ್ಯವಲ್ಲವೆ? ಕಾಲಾತೀತನು ಕಾಲಕ್ಕೊಳಪಟ್ಟನೆ? ಕಾಲಗಳ ನಿರ್ಮಾಣ ಮಾಡಿ ಪೂಜಿಸುವವರು ಶಿವ ಪಥವರಿತವರೆ?

ಶಿವಪಥವರಿಯಲು ಗುರುಪಥವೆ ಮುಖ್ಯ. ಗುರುಪಥ ಶಿವಸ್ವರೂಪ ತಿಳಿಸುವುದಲ್ಲದೆ ಕಾಲಗಳ ಸೂಚಿಸುವದಲ್ಲ, ಕಾಲಗಳ ಪ್ರಾಮುಖ್ಯತೆ, ಗುರುಮುಟ್ಟಿ ಗುರುವಾದವರದಲ್ಲ, ಒಂದು ಕೋಳಿ ಕೂಗುತ್ತಿದೆ ಇರುಳು ಹಗಲುಗಳೆನ್ನದೆ ಅದಾನರು ಅರಿಯರಲ್ಲ, ಮರ್ತ್ಯಲೋಕದ ಮಹಾಗಣಂಗಳು. ಅರಿದಡೆ ಭವ ಭಂಧನವಿಲ್ಲ, ಮರೆದಡೆ ಜನನ ಮರಣಕ್ಕಳವಿಲ್ಲ, ಕಪಿಲಸಿದ್ಧ ಮಲ್ಲಿಕಾರ್ಜುನ ಎಂಬ ಸಿದ್ಧರಾಮ ಶಿವಯೋಗಿಗಳು ಪ್ರತಿಯೊಂದು ಪ್ರಾಣಿಯಲ್ಲಿ ಮಾನವರಲ್ಲಿ ಈಶ್ವರನ ಅಜಪಾ ಗಾಯತ್ರಿ ಎಂಬ ಕೋಳಿ ಕೂಗುತ್ತದೆ, ಇರಳು ಹಗಲುಗಳೆನ್ನದೆ ಅದನರಿಯರಲ್ಲ. ಇವರು ಮರ್ತ್ಯದ ಗಣಂಗಳೂ ಗಣಾಧೀಶರು, ಮಾನವರಲ್ಲಿ ಅಷ್ಟೆ ಈ ಕೋಳಿ ಕೂಗುತ್ತಿದೆ, ಇನ್ನುಳಿದ ಪ್ರಾಣಿಗಳಲ್ಲಿ ಇಲ್ಲವೆನ್ನುವಂತಿಲ್ಲ. ಉದಯ, ಮಧ್ಯಾನ್ಹ, ಸಾಯಂಕಾಲಗಳಷ್ಟೆ ಕೂಗುತ್ತಿದೆ, ಇನ್ನುಳಿದ ಸಮಯದಲ್ಲಿ ಎನ್ನುವುದಿಲ್ಲ.

ಕೋಳಿ ಎಂದರೆ ಶ್ವಾಸೋಚ್ಚ್ವಾಸ ಮೂಗಿನಿಂದ ವಾಯುವನ್ನ ಮೇಲೆ ಎಳೆಯುವದಕ್ಕೆ ಉಚ್ಛ್ವಾಸವೆಂತಲೂ, ಹೊರಗೆ ಬಿಡುವದಕ್ಕೆ ನಿಃಶ್ವಾಸವೆನ್ನುವರು. ಈ ಶ್ವಾಸೋಚ್ಚ್ವಾಸ ಕ್ರಿಯೆಯು ಒಂದೇ ಸವನೆ ನಡೆದಿರುತ್ತದೆ. ಇಪ್ಪತ್ತುನಾಲ್ಕು ತಾಸುಗಳಲ್ಲಿ 21600 ಶ್ವಾಸೋಚ್ಛ್ವಾಸುಗಳು ಆಗುತ್ತವೆ. ಈ ಶ್ವಾಸೋಚ್ಛ್ವಾಸಗಳ ಸಂಖೆಗಳ ಮೇಲಿಂದ ಮನುಷ್ಯನ ಆಯುಷ್ಯ ಪ್ರಮಾಣವನ್ನು ಶಾಸ್ತ್ರವು ಗೊತ್ತು ಮಾಡಿರುತ್ತದೆ. ಇರಲಿ ಪ್ರತಿಯೊಂದು ಶ್ವಾಸೋಚ್ಚ್ವಾಸದಲ್ಲಿ ಒಳಗೆ ಎಳೆದುಕೊಳ್ಳುವ ಶ್ವಾಸದಲ್ಲಿ ಸಕಾರದಂತಹ ಧ್ವನಿಯು ಕೇಳಿಬರುತ್ತದೆ. ಹಾಗೂ ಹೊರಗೆ ಬಿಡುವ ನಿಶ್ವಾಸದಲ್ಲಿ ಹ ಕಾರದಂತ ಹ ಧ್ವನಿಯು ಕೇಳಬರುತ್ತದೆ. ಈ ಸಕಾರ ಮತ್ತು ಹಕಾರ ಇವುಗಳನ್ನು ಹೆಚ್ಚು ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಿದರೆ ಒಳಗೆ ಎಳೆದುಕೊಳ್ಳುವ ವಾಯುವಿನಲ್ಲಿ ಸೋ ಎಂಬ ಧ್ವನಿಯು ಮತ್ತು ತುಟಿಯನ್ನು ಮುಚ್ಚಿ ಹೊರಗೆ ಬಿಡುವ ವಾಯುವಿನಲ್ಲಿಹ ಎಂಬ ಧ್ವನಿಯು ಕೇಳಿ ಬರುತ್ತದೆ, ಈ ಎರಡು ಧ್ವನಿಗಳು ಕೂಡಿ ಸೋಹಂ ಸಂಸ್ಕೃತ ವಾಕ್ಯವಾಗುತ್ತದೆ. ಇದರ ಅರ್ಥವು ಸಃ ಅಂದರೆ ಅವನು ಮತ್ತು ಅಹಂ ಎಂದರೆ ನಾನು ಅಂದರೆ ಅವನು ನಾನೆ ಇದ್ದೇನೆ, ಎಂಬುದಾಗಿ ಆಗುವದು. ಇದರಲ್ಲಿ ಒಂದು ರಹಸ್ಯವಿರುವದು.

ಈಶ್ವರನು ಪ್ರತಿಯೊಂದು ಪ್ರಾಣಿರೂಪ ಶರೀರದಲ್ಲಿ ಅವನು ನಾನಿದ್ದೇನೆಂಬ

ಬ್ರಹ್ಮಾಸ್ಮಿ ಎಂಬ ಮಹಾವಾಕ್ಯವನ್ನೆ ಇಟ್ಟಿರುತ್ತಾನೆ. ಇದನ್ನು ಅರಿಯರಲ್ಲ ಮರ್ತ್ಯದ ಮಹಾಗಣಂಗಳು ಎಂದಿದ್ದಾನೆ. ಅರಿತರೆ ಭವ ಬಂಧನವಿಲ್ಲವೆಂದು ಹೇಳಿಹರು.

ಸಕಲ ಶರೀರಗಳಲ್ಲಿ ಬ್ರಹ್ಮನ ವಾಸವು ಸ್ವಯಂಪ್ರಕಾಶನದ ವಾಸ, ಸಚ್ಚಿದಾನಂದದ ನಿವಾಸವು. ಇರಳು, ಹಗಲುಗಳೆನ್ನದೆ ಬೆಳಗುವ ಬೆಳಗುಳ್ಳ ಅಖಂಡಿತಘನ ಪೂರ್ಣವಪ್ಪ ಈ ಅರುವು ತಿಳಿವರಲ್ಲ, ತಿಳಿಯದೆ ಹೊತ್ತಾರೆ ಎದ್ದು ಪೂಜಿಸುವವರಾದಿರಾ? ಪ್ರತಿಯೊಂದು ಜೀವರು ಸೋಹಂ ಸ್ವರೂಪರೆ, ಅಹ್ಮಬ್ರಹ್ಮಸ್ಮಿಯೆ, ಆಗಿರುವಲ್ಲಿ ಅರಿತು ನೋಡಿರೆ? ಅರಿತಲ್ಲಿ ಇರುಳಾವುದು? ಹಗಲಾವುದು? ಮರವಿಂಗೆ ಹಗಲು ರಾತ್ರಿಗಳುಂಟು, ಅರುವಿಂಗೆ ಹಗಲು ಇಲ್ಲ ರಾತ್ರಿ ಇಲ್ಲ, ಅರುವು ಅರುವೆ ಪ್ರಕಾಶಿಸುವಲ್ಲಿ ಮಧ್ಯಾನ್ಹವಿಲ್ಲ, ಸಾಯಂಕಾಲವಿಲ್ಲ, ಇಲ್ಲದುದು ಇಲ್ಲವಾದುದೆ ಹಗಲು ರಾತ್ರಿ ಕಳೆದು ಪೂಜಿಸಿದವರು, ಪರಬೊಮ್ಮವೆ ತಾವಾದವರು. ತನ್ನ ಹೊರ್ತು ಅನ್ಯ ಕಾಣದವರು, ಅರಿತವರದು ನಿರಂತರ ಪೂಜೆ ಅವರ ಪ್ರಜ್ಞೆ ನಿರಂತರ. ಅರುವು ಅರುವರಿತ ಇರವು ನಿರಂತರ, ಅವರದು ಪರಮಶಾಂತಿಯ ಪೂಜೆ, ಪರಮಾನಂದವೆ ಪೂಜೆ, ಇಂತಪ್ಪ ಪೂಜೆಯ ಪೂಜಿಸುವವರ ಎನಗೆ ತೋರಯ್ಯ ಗುಹೇಶ್ವರ.

**ವಚನ 32**

**ಎನಗೊಂದು ಲಿಂಗ,**
**ನಿನಗೊಂದು ಲಿಂಗ,**
**ಮನೆಗೊಂದು ಲಿಂಗವಾಯಿತ್ತು,**
**ಹೋಯಿತ್ತಲ್ಲಾ ಭಕ್ತಿ ಜಲವ ಕೂಡಿ.**
**ಉಳಿಮುಟ್ಟದ ಲಿಂಗವ**
**ಮನ ಮುಟ್ಟಬಲ್ಲುದೆ ಗುಹೇಶ್ವರಾ ॥ 207 ॥**

**ತಾತ್ಪರ್ಯ:** ಎನಗೊಂದು ಲಿಂಗ ನಿನಗೊಂದು ಲಿಂಗ ಮನೆಗೊಂದು ಲಿಂಗವಾಯಿತ್ತು. ಹೋಯಿತ್ತಲ್ಲಾ ಭಕ್ತಿ, ಜಲವ ಕೂಡಿ: ಪ್ರಭುದೇವ, ಲಿಂಗಧಾರಕರ ಭಿನ್ನ ಜ್ಞಾನ, ಭಿನ್ನ ಭಾವ ಭಿನ್ನ ದೃಷ್ಟಿ ಭಿನ್ನ ಭಿನ್ನತ್ವ ಕಂಡು ಜರಿಯುತ್ತಿದ್ದಾನೆ.

ಓ ಲಿಂಗಧರಿಸಿದ ಲಿಂಗಾರ್ಚಕರೆ ಶ್ರೀಗುರು ಕರುಣಿಸಿದ ಕಾರುಣ್ಯವದು, ಅಖಂಡಿತ ಘನ ಪೂರ್ಣವಪ್ಪ ಚಿಜ್ಯೋತಿ ಅದು ಸಚ್ಚಿದಾನಂದ ನಿತ್ಯರೂಪಲಿಂಗ, ಅದು ನನ್ನಲಿಂಗ, ನಿನ್ನಲಿಂಗ, ಮನೆಯಲಿಂಗ, ಮಠದ ಲಿಂಗ, ತೀರ್ಥ ಕ್ಷೇತ್ರಗಳಲ್ಲಿಯ ಲಿಂಗ, ಇದಲ್ಲದೆ ಬಾರಾ ಜ್ಯೋತಿರ್ಲಿಂಗ ಹೀಗೆ ಲಿಂಗಘನವು ಖಂಡ ಖಂಡವಾಯಿತೆ? ಅವ್ಯಕ್ತವದು ವ್ಯಕ್ತವಾಯಿತೆ? ನಿರೂಪವದು ರೂಪವಾಯಿತೆ? ನಿಸ್ಸೀಮವು ಸೀಮಿತವಾಯಿತೆ? ಸಮ ಸ್ವರೂಪವು ವಿಷಯ ದೃಷ್ಟಿಯುಳ್ಳದ್ದಾಯಿತೆ? ಅನುಪಮ ಲಿಂಗವು ಉಪಮೆಗೊಳಪಟ್ಟಿತೆ? ಅಜಾತ ತತ್ವ, ಜಾತಿ ವಾಚಕಕ್ಕೊಳಪಟ್ಟಿತೆ? ಅಪೂರ್ವಿಕವು ಪೂರ್ವಿಕವಾಯಿತೆ? ಅಕ್ರಿಯೆಯು ಕ್ರಿಯೆದಿಂದುಕ್ತವಾಯಿತೆ? ಅದ್ವಿತೀಯ ಘನದಲ್ಲಿ ದ್ವಿತೀಯತ್ವ ಕಂಡಿತೆ? ಅನಿಯಮದ ಬೆಡಗವು ನಿಯಮಕ್ಕೊಳಪಟ್ಟ ಬೆಡಗವಾಯಿತೆ? ಜ್ಞಾನಾಚಾರವು ಕ್ರಿಯೆಕರ್ಮಕ್ಕೊಳಪಟ್ಟಿತೆ? ಸಚ್ಚಿದಾನಂದ

ರೂಪಿಲಿಂಗವು ಪೂಜಾಲಿಂಗವಾಯಿತೆ? ಇದು ಲಿಂಗವರಿಯದ ಮರವು ಮರವೆ ಅರುವಾಗಿ ನಿಂತುದಲ್ಲ, ಸೋಜಿಗ? ಇದು ಕಲಿಯಕಾಲ. ಇದು ಕಾರಣ ಎನಗೊಂದು ಲಿಂಗ ನಿನಗೊಂದು ಲಿಂಗ, ಗುರುವಿಗೊಂದು ಲಿಂಗ, ಶಿಷ್ಯನಿಗೊಂದು ಲಿಂಗ, ಭಕ್ತನಿಗೊಂದು ಲಿಂಗ, ಜಂಗಮಯ್ಯನದೊಂದು ಲಿಂಗ, ವಿರಕ್ತರಿಗೊಂದು ಲಿಂಗ, ಗೃಹಸ್ಥರಿಗೊಂದು ಲಿಂಗ, ಸಕಲರಿಗೂ ಪೂಜಿಸುವ ಲಿಂಗ, ಪೂಜಾಲಿಂಗ ಒಂದಾದರೂ ಲಿಂಗ ಅಖಂಡವೆಂಬುದನರಿಯುಲಿಲ್ಲ, ಅರಿಯುದ್ದರಿಂದ ಲಿಂಗಧರಿಸಿದವರಲ್ಲೆ ನಾನಾ ಪಕ್ಷ ಪಂಗಡಗಳಿಂದುಕ್ತರಾದ ಲಿಂಗವಂತರಾಗಿ ಇದೊಂದು ಜಾತಿ ವಾಚಕದ ಮತವಾದುದು ಸೋಜಿಗ.

ಲಿಂಗವೆಂಬುದು ಸಕಲರ ಇರವು ಅರುವು ಎಂಬುದನಾರು ಅರಿಯರಲ್ಲ, ಇದೆಂಥ ಸೋಜಿಗ. ಲಿಂಗ ತತ್ವವದು, ತತ್ವ ನಿಷ್ಠರಾದ ಮೇಲೆ, ಭಿನ್ನ ದೃಷ್ಟಿ, ಭಿನ್ನ ಜ್ಞಾನ, ಭಿನ್ನ ಭಾವ ಇರಲುಂಟೆ? ಲಿಂಗವದು ಸಮನಿಲಯ, ಸಮದೃಷ್ಟಿ, ಸಮರತಿ, ಸಮಸುಖ, ಈ ಸುಖ ಸವೆಯದ ಸುಖ, ಅಖಂಡ ಸುಖ, ಅದುವೆ ಲಿಂಗವರಿತು ಲಿಂಗವಾದವರ ಸುಖ, ಈ ಸ್ವಸುಖವೆ ಲಿಂಗ, ಇದುವೆ ಎನ್ನಲಿಂಗ, ನಿನ್ನಲಿಂಗ, ಗುರುವಿನ ಲಿಂಗ, ಶಿಷ್ಯನಲಿಂಗ, ಭಕ್ತ ಜಂಗಮರ ಲಿಂಗ, ಸಕಲರ ಸ್ವರೂಪವಾದುದನ್ನು ತಿಳಿಯರಲ್ಲ, ತಿಳಿಯದ್ದರಿಂದ ಹೋಯಿತಲ್ಲಾ ಭಕ್ತಿ ಜಲವು ಕೂಡಿ, ಲಿಂಗಾಂಗ ಸಮರಸ ಜ್ಞಾನವಿಲ್ಲದೆ, ಭೇದ ಜ್ಞಾನದಿಂದ ಕೂಡಿದವರು ಇವರು ಲಿಂಗವರಿಯರು ಲಿಂಗವರಿಯರದ ಪ್ರಮಾದವೆ ಎನ್ನಲಿಂಗ, ನಿನ್ನಲಿಂಗವೆಂದು ಬೇರು ಮಾಡುವುಡೆ, ಲಿಂಗ ತಾನು ಒಂದೆ ಎಂಬ ಏಕತ್ವ ಹೋಯಿತ್ತು. ಅಖಂಡ ಜ್ಞಾನ ದೂರಾಯಿತ್ತು. ಲಿಂಗದಲ್ಲಿ ತಾನು ಒಂದಾಗುವದು ತನ್ನಲ್ಲಿ ಲಿಂಗ ಒಂದಾಗುವ ಭಕ್ತಿ ಹೋಯಿತ್ತು. ಅಚಿಂತ್ಯ ಸುಖವು ಹೋಯಿತ್ತು. ಇದು ಕಾರಣ ಹೋಯಿತ್ತಲ್ಲಾ ಭಕ್ತಿ ಜಲವ ಕೂಡಿ ಎಂದು ಪ್ರಭುದೇವರು ಹೇಳಿಹರು.

ಜಲವು ಕೂಡಿ ಎಂದು ಹೇಳಿದುದು ಅಷ್ಟೆ ಸಮಂಜಸವಾದುದು. ಜಲವು ಹೇಗೆ ಹರಿದು ಹೋಗುವುದು ಬತ್ತಿ ಹೋಗುವದು ಹಾಗೆ ವೀರಶೈವರು ಲಿಂಗ ಧರಿಸಿದರೂ ಬಹು ಲಿಂಗವಂತರಲ್ಲಿ ಲಿಂಗದ ಯತಾರ್ಥ ಜ್ಞಾನ ಆರಲ್ಲಿ ಉಳಿಯಲಿಲ್ಲವೆಂಬುದಕ್ಕೆ ಹೋಯಿತ್ತು ಜಲವು ಕೂಡಿ ಎಂದು ಹೇಳಿಹರು.

ಉಳಿ ಮುಟ್ಟದ ಲಿಂಗವು ಮನ ಮುಟ್ಟಬಲ್ಲುದೆ ಗುಹೇಶ್ವರ: ಲಿಂಗವೆಂದರೆ ಆರೂ ಮಾಡಿದ ಲಿಂಗವಲ್ಲ, ಸ್ವತಃ ಸಿದ್ಧಲಿಂಗ, ಸ್ವಯಂಜ್ಯೋತಿ ಲಿಂಗ, ಚಿಜ್ಯೋತಿ ಲಿಂಗ ಸಕಲಕ್ಕೂ ಬೆಳಗುವ ಪರಂಜ್ಯೋತಿ ಚೈತನ್ಯವೆ ಲಿಂಗ, ಇದು ಉಳಿಮುಟ್ಟದ ಲಿಂಗ, ಮನಮುಟ್ಟಬಲ್ಲುದೆ? ಮನಕ್ಕೆ ನಿಲುಕದ ಲಿಂಗ, ಸಂಕಲ್ಪ ವಿಕಲ್ಪಕ್ಕೂ ನಿಲುಕದ ನೆನಹು ನಿರ್ಣಯುಕ್ಕೂ ನಿಲುಕದ ಲಿಂಗ, ಚಿಂತನಕ್ಕೆಡೆಗೊಡದ ಲಿಂಗ, ಭಾವಕ್ಕಗಮ್ಯವಾಗಿಹ ಲಿಂಗ, ಇದು ಕಾರಣ ವಾಙ್ಮನೋತೀತ ಲಿಂಗವೆಂದು ಪ್ರಭು ಹೇಳಿಹನು.

**ವಚನ 33**

**ಹಿಡಿವ ಕೈಯ ಮೇಲೆ ಕತ್ತಲೆಯಯ್ಯ,**
**ನೋಡುವ ಕಂಗಳ ಮೇಲೆ ಕತ್ತಲೆಯಯ್ಯ,**
**ನೆನೆವ ಮನದ ಮೇಲೆ ಕತ್ತಲೆಯಯ್ಯ,**
**ಕತ್ತಲೆಯೆಂಬುದು ಇತ್ತಲೆಯಯ್ಯ,**
**ಗುಹೇಶ್ವರನೆಂಬುದು ಅತ್ತಲೆಯಯ್ಯ ॥ 219 ॥**

ತಾತ್ಪರ್ಯ: ಹಿಡಿದ ಕೈಯ ಮೇಲೆ ಕತ್ತಲೆಯಯ್ಯಾ: ಕತ್ತಲೆಯೆಂಬುದು ಇತ್ತಲೆಯಯ್ಯ ಗುಹೇಶ್ವರನೆಂಬುದು ಅತ್ತಲೆಯಯ್ಯ. ಪ್ರಭುದೇವ, ಗುರುಘನನಾಗಿಹ ಅನಿಮಿಷನ ಕರಕಮಲದಲ್ಲಿ ಪ್ರಕಾಶಿಸುವ ಲಿಂಗ. ಇದನು ಕಂಡರಿದ ಅನಿಮಿಷ ದೃಷ್ಟಿ, ಲಿಂಗದೃಷ್ಟಿ, ಲಿಂಗ ತಾನು ಒಂದಾದ ದೃಷ್ಟಿ, ವಾಙ್ಮನಕ್ಕೆ ಬಾರದ ಅಪ್ರತಿಮಲಿಂಗವೆ ತಾನಾದ ದೃಷ್ಟಿ, ಅಚಲಾನಂದದೊಳಿಪ್ಪ ಪರಮ ನಿರ್ಲೇಪಿ. ಇದು ಕುರುಹಳಿದ ಕರಸ್ಥಲದ ನಿಬ್ಬೆರಗಿನ ನೋಟ. ಇದನ್ನು ಪ್ರಭುದೇವ ಕಂಡರಿದು ಲಿಂಗಧರಿಸಿದ ಲಿಂಗಾರ್ಚಕರನೆಲ್ಲ ಎಚ್ಚರಿಸುತ್ತಿಹನು.

ಹಿಡಿವ ಕೈಯ ಮೇಲೆ ಕತ್ತಲೆಯಯ್ಯ: ಲಿಂಗ ಧರಿಸಿದ ಲಿಂಗಾರ್ಚಕರಿಗೆ, ಪ್ರಭುವಿನ ಈ ಮಹದರುವು ಅರಿಯುವ ಭಾಗ್ಯ ಅದೆಷ್ಟು ಅರುಹೃದಯಂಗಳು ಶಿಕ್ಕಬಹುದು; ವಿರಳ. ಲಿಂಗವರಿಯದ ಲಿಂಗವಂತರು ಶಿಕ್ಕುವರು. ಇವರು ಲಿಂಗ ಬೇರೆ ಅಂಗಬೇರೆಂಬ ಭೇದ ಜ್ಞಾನಿಗಳು. ಇವರಿಗೆ ಶ್ರೀಗುರು ಕರುಣಿಸಿದ ಲಿಂಗಾಂಗ ಸಮರಸದ ಅರಿವು ಲಭ್ಯವಾಗದ್ದರಿಂದ ಅವರು ಲಿಂಗದ ಘನವರಿಯಲಿಲ್ಲ. ತಾವಾರೆಂಬುದು ಅರಿಯಲಿಲ್ಲ. ಭೇದಜ್ಞಾನವೆ ಪ್ರಬಲವಾಗಿ ಅಂಗಬುದ್ಧಿಯೆ ದೃಢವಾಗಿ ಲಿಂಗವು ಬೇರಾಯಿತು. ಅದನ್ನು ಹಿಡಿವ ಕೈಗಳು ಉಂಟಾದವು. ಪ್ರಭು ಇದನ್ನು ಕಂಡು ಹಿಡಿದ; ಕೈಯ ಮೇಲೆ ಕತ್ತಲೆಯಯ್ಯ ಎಂದು ಹೇಳಿದ. ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗ, ನಿರುಪಮ ಲಿಂಗ ನಿರವಯ ಲಿಂಗ ಸಚ್ಚಿದಾನಂದಲಿಂಗ ಈ ಘನ ಲಿಂಗವರಿಯದ್ದರಿಂದ, ಬಹು ಲಿಂಗವಂತರಿಗೆ ಇದು ರೂಪವಾಗಿ ಕಂಡಿತು. ಗೋಲಾಕಾರವಾಗಿ ಕಂಡಿತು. ಇದು ಲಿಂಗ ಕಂಡ ಲಿಂಗದೃಷ್ಟಿಯಾದುದು ಬಹು ಆಶ್ಚರ್ಯ ಪರಮಾಶ್ಚರ್ಯ.

ವಿಶ್ವ ಕಾಣದ ಲಿಂಗ, ವಿಶ್ವಾತೀತ ಲಿಂಗ, ಸಚ್ಚಿದ್ಘನವಾಗಿಹ ಲಿಂಗ, ಈ ಘನಲಿಂಗವು ಲಿಂಗವಂತರ ಕರ ಕಮಲದಲ್ಲಿ ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗ ಬೆಳಗುಳ್ಳ ಘನವಾಗಿ ಪ್ರಜ್ವಲಿಸುತ್ತಿದ್ದುದು ಅರಿಯದ್ದರಿಂದ ಪೂಜಾಲಿಂಗವಾಗಿ ಕಂಡು ಪೂಜಿಸ ಹೋದುದರಿಂದ ಇವರ ಹಿಡಿವ ಕೈಯಮೇಲೆ ಕತ್ತಲೆಯಯ್ಯಾ ಎಂದು ಪ್ರಭು ಹೇಳಿದುದು.

ನೋಡುವ ಕಂಗಳು ಕತ್ತಲೆಯಯ್ಯಾ: ಗುಹೇಶ್ವರ ದೃಷ್ಟಿ ಎತ್ತ, ಲಿಂಗಧರಿಸಿ ಲಿಂಗವಂತರೆನ್ನಿಸಿಕೊಂಡು ಲಿಂಗಪೂಜಿಸುವವರ ದೃಷ್ಟಿ ಎತ್ತ, ಅನಿಮಿಷ ದೃಷ್ಟಿ ಎತ್ತ, ಲಿಂಗಾರ್ಚಕರ ಲಿಂಗ ಲಿಂಗ ಎಂದು ನೋಡುವ ನೋಟವೆತ್ತ.

ಲಿಂಗವರಿತು, ಲಿಂಗವಾಗಿಹ ಲಿಂಗದೃಷ್ಟಿ, ಅನಿಮಿಷ ದೃಷ್ಟಿ ಬ್ರಹ್ಮದೃಷ್ಟಿ, ತಾನೆ ತನ್ನ ನೋಡಿದ ದೃಷ್ಟಿ, ನೋಡದ ನೋಟ, ಅರಿಯದರುವುಳ್ಳ ನೋಟ, ತನ್ನ ನೋಟ, ಈ ನೋಟ, ಶ್ರೀಗುರು ಕೃಪೆಯಿಂದ ಲಭ್ಯವಾದ ನೋಟ ಅನುಮಿಷ ನೋಟ.

ಸೂರ್ಯ ಪ್ರಕಾಶಮಯ, ಅವನ ನೋಟ ಪ್ರಕಾಶಮಯ, ಅದನು ನೋಡಹೋದ ಕಣ್ಣಿಂಗೆ ಪ್ರಕಾಶವೆ ಪ್ರಕಾಶ. ಅಲ್ಲಿ ಕತ್ತಲೆಗಿಂಬುಂಟೆ? ಅನುಮಿಷ ನೋಟ, ಲಿಂಗವೆಂಬ ಸ್ವಯಂ ಪ್ರಕಾಶವೆ ನೋಡಹೋಗಿ ಅದುವೆ ಆಗಿಹ ನೋಟ. ತನ್ನ ಹೊರ್ತು ಅನ್ಯ ಆವುದು ಕಾಣದ ನೋಟ. ಅಖಂಡಿತ ಘನವಪ್ಪ ಪೂರ್ಣ ನೋಟ, ಇಲ್ಲಿ ಭ್ರಮಾ ಬುದ್ಧಿಗಿಂಬುಂಟೆ? ಮರವರುವೆಂಬ ಭಿನ್ನ ದೃಷ್ಟಿಗಿಂಬುಂಟೆ! ಇಲ್ಲಿ ಮರತವನೆಂಬುದಿಲ್ಲ ಅರತವನೆಂಬುದಿಲ್ಲ ಅರುವ ನೋಡ ಹೋಗಿ ಅರುವೆ ಆಗಿಹ ದೃಷ್ಟಿ. ಇದು ನಿರಂತರವಾಗಿಹ ಮಂಗಳಮಯ ದೃಷ್ಟಿ ಇಲ್ಲಿ ಭಾವಕ್ಕಿಂಬಿಲ್ಲ ಶಬ್ದ ಮೀಸಲು ನೋಡಾ, ಅಖಂಡಿತ ಘನವಪ್ಪ ಲಿಂಗದೊಳ್ ಲಿಂಗ ಬೇರೆ ಅದನ್ನು ನೋಡುವ ತಾನು ಬೇರೆ ಅದನ್ನು ನೋಡುವ ಕಣ್ಣು ಬೇರೆಂಬ ಪರಿಚ್ಛಿನ್‌ದೃಷ್ಟಿ ಯವರಾದುದರಿಂದ ಲಿಂಗವರಿಯಲಿಲ್ಲ. ತಾವಾರೆಂಬುದ ಅರಿಯಲಿಲ್ಲ. ಅರಿಯದ ಪ್ರಮಾದವು ನೋಡುವ ಕಂಗಳು ಅಜ್ಞಾನದಿಂದುಕ್ತವಾದವು. ಲಿಂಗದೃಷ್ಟಿಯಾಗಲಿಲ್ಲ ಇದು ಕಾರಣ ನೋಡುವ ಕಂಗಳು ಕತ್ತಲೆ ಎಂದು ಹೇಳಿಹರು.

ನೆನೆವ ಮನದ ಮೇಲೆ ಕತ್ತಲೆಯಯ್ಯ: ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗವರಿಯದ್ದರಿಂದ ಮನವಾದರೂ ನೆನೆವ ಮನವಾಯಿತ್ತಲ್ಲದೆ ನೆನೆಯದ ಮನವಾಗಲಿಲ್ಲ. ಸುಮನವಾಗಲಿಲ್ಲ. ಕಲ್ಪಿತ ಮನವಾಯಿತ್ತಲ್ಲದೆ ಅಕಲ್ಪಿತ ಘನವಾಗಲಿಲ್ಲ. ಗುಹೇಶ್ವರ ರೂಪಿ ಅನುಮಿಷ ಗುರುಘನವರಿಯಲಿಲ್ಲ.

ಆವುದು ಘನವರಿತು ನೆನೆವ ಮನವಾಗಲಿಲ್ಲ. ಚಿಂತನಕ್ಕೊಳಪಟ್ಟ ಮನವಾಗಲಿಲ್ಲ. ಅಚಿಂತ್ಯಮನವಾಯಿತ್ತು. ವಾಙ್ಮನೋತೀತವಾದ ಲಿಂಗವರಿಯಲು ಹೋಗಿ ತಾನೆ ನಿಶ್ಚಿಂತ ನಿರಾಳವಾಯಿತ್ತು. ಇದು ಲಿಂಗ ಲಿಂಗವೆಂದು ಚಿಂತಿಸಲಿಲ್ಲ. ಚಿಂತಿಸದ್ದರಿಂದ ನೆನೆವ ಮನದ ಮೇಲೆ ಕತ್ತಲೆಯಿಲ್ಲ.

ಆವಲ್ಲಿ ಲಿಂಗಲಿಂಗ ಎಂದು ನೆನೆವ ಮನವಾಗಿದೆ, ಅಲ್ಲಿ ಮನವು ಆವರಣವುಳ್ಳದ್ದಾಗಿದೆ. ಅಲ್ಲಿ ಆವರಣ ನಷ್ಟ ಮಾಡುವ ಲಿಂಗಾಂಗ ಸಮರಸ ಜ್ಞಾನವಿಲ್ಲ, ಜ್ಞಾನವಿಲ್ಲದ್ದರಿಂದ ಅದು ನೆನೆವ ಮನವಾಯಿತ್ತು. ನೆನೆಯುವ ಮನವೆತ್ತ, ನೆನೆಯದ ಮನವೆತ್ತ, ಚಿಂತಿಸುವ ಮನವೆತ್ತ, ನಿಶ್ಚಿಂತ ಮನವೆತ್ತ, ತೃಪ್ತವಾಗಬೇಕೆಂಬ ಹಂಬಲವುಳ್ಳ ಮನವೆತ್ತ ನಿರಂಕುಶ ತೃಪ್ತಿಯುಳ್ಳ ಮನವೆತ್ತ, ಕಲ್ಪಿಸುವ ಮನವೆತ್ತ, ಕಲ್ಪಿಸದ ಮನವೆತ್ತ, ಕಲ್ಪಿತ ಮನ ಸಂಕಲ್ಪ ವಿಕಲ್ಪಕ್ಕೊಳಪಟ್ಟ ಮನ ಅದು ಆವರಣವುಳ್ಳಮನ, ನೆನೆಯುವ ಮನ ಚಿಂತಿಸುವ ಮನ ಹಲಬುವ ಮನವಾದ್ದರಿಂದ ಮನದ ಮೇಲೆ ಕತ್ತಲೆಯಯ್ಯ ಎಂದು ಪ್ರಭು ಹೇಳಿದುದು.

ಕತ್ತಲೆಯೆಂಬುದು ಇತ್ತಲೆಯಯ್ಯ ಗುಹೇಶ್ವರನೆಂಬುದು ಅತ್ತಲೆಯಯ್ಯ: ಕತ್ತಲೆಯೆಂಬುದು ಗುಹೇಶ್ವರ ಅರಿಯದಿದ್ದುದು ಅದಕ್ಕಾಗಿ ಅದು ಇತ್ತಲೆ, ವಾಙ್ಮನಕ್ಕೆ

ಬಾರದ ಅಪ್ರತಿಮ ಲಿಂಗದತ್ತ ಹೋಗಲೊಲ್ಲದು ಇತ್ತ ಕಡೆಗೆ ನೋಡುವುದರಿಂದ ಕತ್ತಲೆ ಎಂಬದು ಇತ್ತಲೆಯಯ್ಯ ಎಂದು ಹೇಳಿದ.

ಕತ್ತಲೆಂಬದು ಅರುವ ಅರಿಯದಿದ್ದುದೆ. ಮರವು ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗವ ನರಿಯದಿದ್ದುದೆ ಮರವು. ಈ ಮರವೆ ಲಿಂಗವನ್ನು ಕುರುಹುಳ್ಳದ್ದನ್ನಾಗಿ ಕಂಡುದೆ ಕತ್ತಲೆ ಲಿಂಗವ ಹಿಡಿವ ಕೈಯಾದುದರಿಂದ ಕತ್ತಲೆ. ಲಿಂಗ, ಬೆಳಗುಳ್ಳ ಜ್ಯೋತಿ, ಘನ ಜ್ಯೋತಿ, ಚಿಜ್ಯೋತಿ. ಇದು ಸ್ವಯಂ ಪ್ರಕಾಶ, ಇದನ್ನು ಸ್ವಪ್ರಕಾಶ ಘನವಾಗಿ ಕಾಣದಿದ್ದುದೆ ಕತ್ತಲೆ ಕತ್ತಲೆಂಬದು ಇತ್ತಲೆಯಯ್ಯ. ಮನ, ನೆನೆವ ಮನ, ಚಿಂತಿಸುವ ಮನ, ಹಲಬುವ ಮನವಾದ್ದರಿಂದ ಇದು ಇತ್ತಲೆ. ಇದಲ್ಲದೆ ಇದು ಮರವಿನಿಂದುಕ್ತವಾದುದರಿಂದ ಇತ್ತಲೆ ಭಾವ ಭ್ರಮವುಳ್ಳದ್ದಾದುದರಿಂದ ಇತ್ತಲೆ.

ಗುಹೇಶ್ವರನೆಂಬುದು ಅತ್ತಲೆಯಯ್ಯಾ, ಗುಹೇಶ್ವರ ನರಿಯಹೋದ ಅನುಮಿಷ ದೃಷ್ಟಿ, ಶಬ್ದಮುಗ್ಧ ನಿಲಯ, ಅಚಿಂತ್ಯ ನಿಲವು, ಸುಖಸವಿಯುವ ನಿಲಯ, ವಾಙ್ಮನಕ್ಕೆ ನಿಲುಕದ ನಿಲಯ, ಹಿಡಿವ ಕೈಗಳಿಗೆ ನಿಲುಕದ ನಿಲವು, ನೋಡುವ ನೋಟಕ್ಕೆ ನಿಲುಕದ ನಿಲವು, ನೆನೆವ ಮನಕ್ಕೆ ನಿಲುಕದ ನಿಲವು, ಅರಸದ ನಿಲವು, ಅರುವರಿತು ಅರಿಯದರುವು ಆದುದರಿಂದ ಗುಹೇಶ್ವರನೆಂಬುದು ಅತ್ತಲೆಯಯ್ಯ ಎಂದು ಹೇಳಿಹರು.

**ವಚನ 34**

**ಉದಯ ಮುಖದಲ್ಲಿ ಪೂಜಿಸ ಹೋದರೆ,**
**ಹೃದಯ ಮುಖದಲ್ಲಿ ಕತ್ತಲೆಯಾಯಿತ್ತು,**
**ಹಾರಿಹೋಯಿತ್ತು ಪ್ರಾಣಲಿಂಗ,**
**ಹರಿದು ಬಿದ್ದಿತ್ತು ಸೆಜ್ಜೆ,**
**ಕಟ್ಟುವ ಬಿಡುವ ಸಂಬಂಧಿಗಳ**
**ಕಷ್ಟವ ನೋಡಾ ಗುಹೇಶ್ವರಾ.** ॥ 216 ॥

**ತಾತ್ಪರ್ಯ:** ಉದಯ ಮುಖದಲ್ಲಿ ಪೂಜಿಸಹೋದರೆ ಹೃದಯ ಮುಖದಲ್ಲಿ ಕತ್ತಲೆಯಾಯಿತ್ತು. ಹಾರಿಹೋಯಿತ್ತು., ಪ್ರಾಣಲಿಂಗ ಹರಿದು ಬಿದ್ದಿತ್ತು ಸೆಜ್ಜೆ, ಕಟ್ಟುವ ಬಿಡುವ ಸಂಬಂಧಿಗಳ ಕಷ್ಟವ ನೋಡಾ ಗುಹೇಶ್ವರಾ. ಪ್ರಭುದೇವ ದೇವರ ದೇವ, ಘನಕ್ಕೆ ಘನ ಈ ಮಹಾಂತನ ಮಹಾಪ್ರಸಾದದ ಘನವ ಅದೆಂತು ವರ್ಣಿಸುವುದು.

ಓ ನನ್ನಯ್ಯಗಳಿರಾ, ಇಷ್ಟಲಿಂಗ ಧರಿಸಿದ ಲಿಂಗವಂತರೆ ಗುರುಕರುಣಿಸಿದ, ಘನ ನೋಡಿರೆ, ಘನ ವರಿಯದ್ದರಿಂದ ಲಿಂಗ ಕಟ್ಟುವ ಬಿಡುವ ಸಂಬಂಧಿಗಳ ಕಷ್ಟವ ನೋಡಿದರಲ್ಲದೆ ಲಿಂಗವಂತ ಲಿಂಗಾಂಗಿಯು ಘನವರಿತಿರಾ? ಇಷ್ಟಲಿಂಗವೆಂಬುದು ವೇದವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವೆಂದು ತಿಳಿದಿರಾ? ತಿಳಿಯದ್ದರಿಂದ, ಲಿಂಗ ಕಟ್ಟಿಕೊಂಡು ಉದಯಮುಖದಲ್ಲಿ ಎದ್ದು, ಲಿಂಗಾರ್ಚನೆ ಮಾಡುವ ಕಷ್ಟವು ಎಂದು ಪ್ರಭುದೇವ ಹೇಳಿದುದು.

ಪಟ್ಟವ ಕಟ್ಟಿದ ಬಳಿಕ ಲಕ್ಷಣ ವರುಸುವರೆ? ಗುರುಘನನು ಅನುಪಮಲಿಂಗ, ಅಖಂಡಿತ ಲಿಂಗ, ಅಚಲಿತ ಲಿಂಗವೆಂದು ನಿನ್ನ ಅಂಗ, ಲಿಂಗಾಂಗ ಚಿದಂಗ ಚಿದ್ಘನ,

ವಾಙ್ಮನೋತೀತ ಅಚಿಂತ್ಯ ಘನವೆಂದು ಪಟ್ಟವ ಕಟ್ಟಿದ ಬಳಿಕ ಮುಮುಕ್ಷು, ಜಿಜ್ಞಾಸು, ತಪಸ್ವಿ, ತ್ಯಾಗಿ, ಯೋಗಿ, ಭವಿ ಭಕ್ತ, ಬದ್ಧ, ಮುಕ್ತ, ಅಜ್ಞಾನಿ, ಜ್ಞಾನಿ ಎಂದು ಕಾಣಬೇಕೆ? ಮರವಿನ ಅಂಗಕ್ಕೆ ಉದಯ ಅಸ್ತವುಂಟಲ್ಲದೆ, ಲಿಂಗಕ್ಕೆ ಉದಯ ಅಸ್ತವುಂಟೆ? ಮರವು ಇದ್ದಲ್ಲಿ ಉದಯ ಅಸ್ತವುಂಟಲ್ಲದೆ, ಅರುವಿಂಗೆ ಅರುವಾಗಿಹ ಮಹಾಘನಕ್ಕೆ ಉದಯ ಅಸ್ತಗಳುಂಟೆ? ಗುರು ಕರುಣಿಸಿದ ಅನುಪಮ ಲಿಂಗವರಿತು, ಅನುಪಮ ಲಿಂಗವಾಗಿಹ ಶರಣರು, ಅಖಂಡಿತ ಲಿಂಗವರಿತು ಅಖಂಡ ಘನವೆ ತಾವಾಗಿಹ ಶರಣರ ದಿವ್ಯ ದೃಷ್ಟಿಗೆ ಪರಪ್ರಕಾಶಮಯನಾಗಿಹ ಸೂರ್ಯನ ಉದಯಾಸ್ತಂಗಳು ದಿಟವಾಗಬಹುದೆ? ಶರಣರ ಸ್ವಯಂ ಪ್ರಕಾಶದ ಮುಂದೆ ಉದಯ ಅಸ್ತಗಳು ಕಾಣಬಹುದೆ? ಆರಿಗೆ ಉದಯ ಅಸ್ತಂಗಳು ಘನವಾಗಿ ಕಂಡುದರಿಂದ ಉದಯ ಮುಖದಲ್ಲಿ ಪೂಜಿಸ ಹೋಗಿ ಹೃದಯ ಮುಖವೆ ಕತ್ತಲೆಯಾಗಿದೆಂದು ಪ್ರಭುದೇವ ಹೇಳಿದುದು.

ಹಾರಿಹೋಯಿತ್ತು ಪ್ರಾಣಲಿಂಗ, ಹರಿದು ಬಿದ್ದಿತ್ತು ಸಜ್ಜೆ: ಪೂಜಾಲಿಂಗವ ಪೂಜಿಸುವ ಪೂಜಕರು, ಶಿವದಾರ ಹರಿದುದನ್ನೆ ಕಂಡಿಹರು. ಲಿಂಗದ ಕಾಯಿ ಕೆಳಗೆ ಬಿದ್ದುದ ಕಂಡು ಮತ್ತು ಹೊಸ ಶಿವದಾರ ಲಿಂಗದ ಕಾಯಿಗೆ ಕಟ್ಟಿ ಕೊರಳೊಳ್ ಲಿಂಗದ ಕಾಯಿ ಹಾಕಿ ಕೊಂಡುದೆ ಕಂಡರಲ್ಲದೆ ಅರು ಹೃದಯ ಕೆಟ್ಟು ಮರವಿನ ಹೃದಯ ಆದುದು ಕಾಣರಲ್ಲ. ಲಿಂಗಾಂಗ ಸಮರಸದರಿವು ಮರೆ ಆದುದು ಕಾಣಲಿಲ್ಲ. ಲಿಂಗದಿರುವಿನ ಅರುವಿನಿಂದ ದೂರಾದದ್ದು ಕಾಣಲಿಲ್ಲ. ತಾನು ಅಕಲ್ಪಿತ ಘನ, ಅಚಿಂತ್ಯಾತ್ಮನೆಂಬುದು ಮರೆಯಾಗಿ ದೇಹ ಬುದ್ಧಿಯವನಾದುದು ನೋಡಲೊಲ್ಲರು. ತನ್ನ ಸವೆಯದ ಸುಖ ಅಖಂಡ ಸುಖ ಪರಮಾನಂದ ರೂಪಿ ಪರಮಾಮೃತ ಕಳೆದುಕೊಂಡುದಕ್ಕಾಗಿ ಮರುಗಲೊಲ್ಲ. ಮನ ನೊಂದಲೊಲ್ಲದು ಕಳವಳವಾಗಲೊಲ್ಲದು ತ್ರಾಹಿ, ತ್ರಾಹಿ ಎಂದು ಪ್ರಾಯಶ್ಚಿತ್ತವಾದರೂ ಮಾಡಿಕೊಳ್ಳಲೊಲ್ಲ ಇದೆಂಥ ಜಡಬುದ್ಧಿ. ಇವನೆಂಥ ಮತಿಹೀನ ಮಾನವ.

ಅಂಗದುದಯ ಲಿಂಗಸುಖ ಲಿಂಗದುದಯ ಅಂಗಸುಖ ಎರಡಿಲ್ಲದ ಘನವ ನೇನೆಂಬೆನಯ್ಯ ಎರಡಿಲ್ಲದ ಘನವನೇನೆಂಬೆ ಮಿಕ್ಕಿ ಮೀರಿನಿಂದ ನಿಲವು ಏನೆಂಬೆನಯ್ಯ ಕೂಡಲ ಚೆನ್ನಸಂಗನ ಶರಣನೇನೆಂಬೆನಯ್ಯ ಎಂದು ಹೇಳಿದ ಚೆನ್ನಬಸವರಾಜ ದೇವರು ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗವರಿತು ಅಚಲಾನಂದ ದೊಳಿಪ್ಪ ಪರಮನಿರ್ಲೇಪಿ ನಿಸ್ಸೀಮ ನಿಜವನೊಳಕೊಂಡ ಘನಕ್ಕೆ ಘನ ಎರಡಿಲ್ಲದ ಘನವಂತ ಮಿಕ್ಕಿ ಮೀರಿನಿಂದ ನಿಲುವುಳ್ಳ ಸ್ವಸುಖದ ಸುಖಿ ಪ್ರಾಣಲಿಂಗ. ಇದು ಹಾರಿಹೋಯಿತ್ತು ಎಂದು ಪ್ರಭುದೇವ ಮರುಗುತ್ತಾನೆ. ಇದಲ್ಲದೆ ಹರಿದು ಬಿದ್ದಿತ್ತು ಸೆಜ್ಜೆ, ಎಂದು ಕಳವಳ ಮಾಡಿಕೊಳ್ಳುತ್ತಾನೆ. ಓಹೋ ಇದೆಂಥ ಸೆಜ್ಜೆ, ಗುರು ಕರುಣೆಯಿಂದ ಲಭ್ಯವಾದ ಪ್ರಸಾದ ಕಾಯ, ಚಿತ್ಕಾಯ, ಇದು ತೆರಹಿಲ್ಲದ ಜ್ಞಾನ ಕಾಯ, ಈ ಸ್ವಾನುಭವರೂಪ ಕಾಯ ಹರಿದು ಬಿದ್ದಿತೆ, ಕೇವಲ ಶವ ಶರೀರವಾಗಿ ನಿಂತಿತೆ, ಕಾಯದ ಘನತ್ವ ತಿಳಿಯದಾಯಿತೆ?

ಕಾಯದಿಂದ ಗುರುದರ್ಶನ, ಕಾಯದಿಂದ ಲಿಂಗದರ್ಶನ, ಕಾಯದಿಂದ

ಜಂಗಮ ದರ್ಶನ, ಕಾಯದಿಂದ ಪಾದೋದಕ ಪ್ರಸಾದ ದರ್ಶನ. ಕಾಯದಿಂದ ನಿಮ್ಮವ ಕಂಡೆನ್ನ ಮರೆದೆ ಕೂಡಲಚನ್ನಸಂಗಮದೇವಾ ಎಂದು ಬಿತ್ತಿರಿಸಿರುವಲ್ಲಿ, ಈ ಕಾಯವಿದ್ದಾಗ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದದಿಂದ ನಿಮ್ಮನ್ನು ಕಾಣಲು ಬರುತ್ತದೆ. ನಿಮ್ಮನ್ನು ಕಂಡ ಮೇಲೆ ಎನ್ನ ಮರೆಯಲು ಬರುತ್ತದೆ. ಇಂತಪ್ಪ ಶ್ರೀಗುರು ಕೃಪೆಗೆ ಪಾತ್ರವಾದ ಕಾಯ, ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗವ ಕೂಡಿ ಅಚಲಾನಂದದೊಳಿರುವ ಕಾಯ, ಈ ಕಾಯದಲ್ಲಿ ಪ್ರಾಣ ಚೇತನ ರೂಪಿ ದಾರ ಹರಿದು ನೆಲೆಕ್ಕರುಳುವುಡೆ ಇನ್ನೆಲ್ಲಿ ಇಂತಪ್ಪ ಪ್ರಾಣಲಿಂಗದನುಭವ! ಅರುವರಿತು ಅದುವೆ ತಾನಾಗಿಹ ಕಾಯ ಸರ್ವಾಂಗ ಲಿಂಗಮಯವಾಗಿಹ ಕಾಯ, ಈ ಘನ ಕಾಯವೆ ಹರಿದು ಬಿದ್ದಿತ್ತಲ್ಲಾ ಎಂದು ಮರ ಮರನೆ ಮರಗಿ ಎಚ್ಚರಿಸುತ್ತಿದ್ದಾನೆ.

ಪ್ರಭುದೇವ ಘನಗಂಭೀರ ಮಹಾಘನವರಿತು ಘನಕ್ಕೆ ಘನವಾಗಿಹ ಸುಖ, ಸ್ವಸುಖ, ಸುಖದ ಸುಖ, ಇದು ಅಪ್ರತಿಮ ಲಿಂಗವರಿತು ಅಚಲಾನಂದದೊಳಿದ್ದ ಪ್ರಾಣಲಿಂಗಿಯ ಸುಖ, ಈ ಅಚ್ಚಸುಖ ಮರೆತು, ಪೂಜಾಲಿಂಗವ ಕಟ್ಟುವ ಬಿಡುವ ಸಂಬಂಧಿಗಳ ಕಷ್ಟವ ನೋಡಾ ಗುಹೇಶ್ವರಾ. ಇವರು ಉದಯ ಮುಖದಲ್ಲಿ ಪೂಜಾಲಿಂಗವ ಪೂಜಿಸ ಹೋದವರು. ಪೂಜೆ ತೀರಿದ ಮೇಲೆ ಲಿಂಗವಸ್ತ್ರದಲ್ಲಿ ಲಿಂಗಯ್ಯನನ್ನು ಕಟ್ಟಿದವರು ಪುನಃ ಸೂರ್ಯಾಸ್ತವಾದನಂತರ ಲಿಂಗಯ್ಯನನ್ನು ವಸ್ತ್ರದಿಂದ ಹೊರಗೆ ತೆಗೆಯುವ ಬಿಡುವ ಲಿಂಗವಾದುದರಿಂದ ಈ ಸಂಬಂಧ ಕಷ್ಟ ಸಂಬಂಧ ಇದರಿಂದ ಲಿಂಗಯ್ಯನ ಪೂಜೆಯು ಭವತಾಪ ಬಿಡುಗಡೆ ಮಾಡದ್ದರಿಂದ ಇದು ಕಟ್ಟುವ ಬಿಡುವ ಸಂಬಂಧಿಗಳ ಕಷ್ಟವ ನೋಡಾ ಎಂದು ಪ್ರಭು ಹೇಳಿದುದು.

**ವಚನ 35**

**ಅರಿವೆ ಬಿಡಾಡಿ, ಅರಿಯದೆ ಬಿಡಾಡಿ**
**ಮರವೆ ಬಿಡಾಡಿ ಮರೆಯದೆ ಬಿಡಾಡಿ**
**ಅರುವರಿತು ಕುರುಹಿಲ್ಲದಾತ ನೀನೆ ಬಿಡಾಡಿ.**

**ತಾತ್ಪರ್ಯ: ಅರಿವೆ ಬಿಡಾಡಿ:** ಬಿಡಾಡಿ ಸಕಲದರ ಹಂಗು ತೊರೆದುದು ಬಿಡಾಡಿ. ಅರುವು ಅದು ಆವಾವುದರ ಹಂಗು ಇಲ್ಲದುದರಿಂದ ಬಿಡಾಡಿ, ವಿಧಿ ನಿಷೇಧಗಳ ಮೀರಿರುವದೆ ಬಿಡಾಡಿ, ನೀತಿ ನಿಯಮಂಗಳ ಮೀರಿರುವದೆ ಬಿಡಾಡಿ, ಪುಣ್ಯಾಪಾಪಂಗಳ ಹಂಗು ಹರಿದುದೆ ಬಿಡಾಡಿ, ಅಂಗದ ಹಂಗು ಹರಿದುದೆ ಬಿಡಾಡಿ. ಭೋಗ ತ್ಯಾಗಂಗಳಿಗೆ ಮೀರಿರುವದೆ ಬಿಡಾಡಿ, ಅರಿವೆ ಬಿಡಾಡಿ.

ಅರಿವು ಸಕಲರಲ್ಲಿ ತದ್ಗತವಾದ ಅರಿವು. ಇರುವೆಯಿಂದ ಹಿಡಿದು ಬ್ರಹ್ಮನವರೆಗೆ ಅರಿವು ಸಕಲದರಲ್ಲಿ ತದ್ಗತವಾದ ಅರಿವು. ಪಿಂಡಾಂಡ ಬ್ರಹ್ಮಾಂಡವೆನ್ನದೆ ವ್ಯಾಪಕವಾದ ಅರಿವು. ಈ ವ್ಯಾಪಕವಾದ ಅರುವಿಂಗೆ ವಿಧಿ ಇಲ್ಲ. ನಿಷೇಧವಿಲ್ಲ. ಇದು ಅಖಂಡಿತ ಘನವಪ್ಪ ಪೂರ್ಣವಾದುದರಿಂದ ನೀತಿ ನಿಯಮವಿಲ್ಲದೆ ಎಲ್ಲೆಲ್ಲೂ ತುಂಬಿರುವುದರಿಂದ ಇದು ಬಿಡಾಡಿ. ಪಿಂಡವೆಂಬ ಭಾಂಡದಲ್ಲಿ ತಾನೆ, ಬ್ರಹ್ಮಾಂಡವೆಂಬ ಭಾಂಡದಲ್ಲಿ

ತಾನೆ ನರರಲ್ಲಿ ತಾನೆ ಸುರರಲ್ಲಿ ತಾನೆ, ಅಸುರರಲ್ಲಿ ತಾನೆ ದೇವಗಣ ರುದ್ರಗಣರಲ್ಲಿ ತಾನೆ, ಪ್ರಮಥ ಗಣರು ನಿತ್ಯರು, ಸತ್ಯರು ಮುಕ್ತರೆಂಬ ಮಹಾಮಹಿಮರಲ್ಲಿ ತಾನೆ, ಇದು ಪುಣ್ಯ ಶರೀರದಲ್ಲಿರುವದು, ಪಾಪ ಶರೀರದಲ್ಲಿಬಾರದೆಂಬ ವಿಷಮ ದೃಷ್ಟಿಯುಳ್ಳ ಅರಿವು ಇದಲ್ಲ. ಭೋಗಿಯೆ ಇರಲಿ ಯೋಗಿಯೆ ಇರಲಿ ಆರೆ ಇರಲಿ ಅವರಲ್ಲಿ ಸಮಸ್ವರೂಪವಾಗಿರುವದರಿಂದ ಈ ಅರಿವು ಬಿಡಾಡಿ.

ಇರುವೆಯುಲ್ಲಿದ್ದರೂ ಅಷ್ಟೆ. ಬ್ರಹ್ಮನಲ್ಲಿದ್ದರೂ ಅಷ್ಟೆ, ಸರ್ವತ್ರ ಸಮವಾಗಿರುವುದರಿಂದ ಈ ಅರಿವು ಬಿಡಾಡಿ ಚಲಿಸದ ಸ್ಥಾವರದಲ್ಲಿಯೂ ಇದ್ದಂತೆ ಇದೆ. ಚರಿಸುವ ಜಂಗಮವಸ್ತುವಿನಲ್ಲಿದ್ದರೂ ಇದ್ದಂತೆ ಇದೆ. ಇದು ಸಕಲದೋಳ್ ಅಸ್ತರೂಪದಿಂ ಇರುವದರಿಂದ ಇದಕ್ಕೆ ವಿಧಿ ಇಲ್ಲ. ನಿಷೇಧವಿಲ್ಲ ನೀತಿ ಇಲ್ಲ. ನಿಯಮವಿಲ್ಲವಾದುದರಿಂದ ಈ ಅರಿವು ಬಿಡಾಡಿ.

ಅರಿಯದೆ ಬಿಡಾಡಿ: ಈ ಅರಿವು ಸಕಲದರೊಳ್ ಇದ್ದರೂ ಆವಾವುದನ್ನು ಹೊದ್ದದೆ ಅರಿಯದೆ ಇದ್ದುರಿಂದ ಅರಿಯದೆ ಬಿಡಾಡಿ. ಜಗಭರಿತವಾಗಿದ್ದೂ ಜಗವರಿಯುದಂತಿದೆ, ಗುಣದೊಳಗಿದ್ದರೂ ಗುಣವ ಅರಿಯದಂತೆ ಇದೆ. ಮನದೊಳಗಿದ್ದರೂ ಮನವ ಅರಿಯದಂತಿದೆ ಭಾವದೊಳಗಿದ್ದರೂ ಆವಾವ ಭಾವ ಅರಿಯದಂತಿದೆ ಅರುವಾಗಿಯೂ ಅರಿಯದರುವಾಗಿ ಇದ್ದುದರಿಂದ ಅರಿಯದೆ ಬಿಡಾಡಿ.

ನೆನೆವ ಮನದೊಳಗಿದ್ದರೂ ನೆನಹಿಂಗೆ ನಿಸ್ಸಂಗವಾಗಿ, ನಿರಾಲಂಬಿವಾಗಿದ್ದುದರಿಂದ ಅರಿಯದೆ ಬಿಡಾಡಿ, ಮರವೆ ಬಿಡಾಡಿ, ಈ ಬಿಡಾಡಿ, ಇದ್ದಕ್ಕಿದ್ದಂತೆ ತಿಳಿಯದೆ ವಿಪರೀತವಾಗಿ ತಿಳಿದುದೆ ಮರೆವು. ಹಗ್ಗಕ್ಕೆ ಹಾವೆಂದು ತಿಳಿದುದೆ ಮರುವ. ನುಡಿಗೆಡೆಗೊಡದ ಘನವ ನುಡಿಗೊಳಪಡಿಸಿರುವದೆ ಮರವು. ಶೃತಿಗಗೋಚರವಾಗಿಹ ತತ್ವ ಶೃತಿಗೊಳಪಡಿಸಿ ನುಡಿವುದೆ ಮರವು, ಈ ಮರವೆ ಬಿಡಾಡಿ. ಬೆಳಗುಳ್ಳ ಘನವನ್ನು ಪ್ರಕಾಶಿತ, ಪ್ರಕಾಶಕವೆಂದು ದ್ವಿವಿಧವಾಗಿ ಕಂಡುದೆ ಮರವೆ, ಚೈತನ್ಯದಲ್ಲಿ ಜಡ ಚೇತನವ ಕಲ್ಪಿಸುವದೆ ಮರವೆ, ನಿಸ್ಸೀಮದಲ್ಲಿ ಸೀಮೆ ಮಾಡಿದುದು ಮರವೆ. ಲಿಂಗ, ಲಿಂಗ, ಎಂಬುದು ಮರವೆ. ಜಂಗಮ, ಜಂಗಮ ಎಂಬುದು ಮರವೆ. ಅರುವು ಅರುವು ಎಂಬುದು ಮರವೆ. ಅರುವರಿತಲ್ಲಿ ನಾಮವೆಂಬುದಿಲ್ಲ ರೂಪವೆಂಬುದಿಲ್ಲ, ಇಹವೆಂಬುದಿಲ್ಲ ಪರವೆಂಬುದಿಲ್ಲ, ನಾನೆಂಬುದಿಲ್ಲ, ನೀನೆಂಬುದಿಲ್ಲ, ಅಹುದಾದುದಿಲ್ಲ, ಅಲ್ಲಾದುದಿಲ್ಲ, ಇಲ್ಲ ಇಲ್ಲವೆಂಬುದು ಇಲ್ಲವಾಗಿ ತಾನೆ ತಾನಾಗಿಹ ಘನಕ್ಕೆ ಘನವಾಗಿಹ ತನ್ನ ಉಪಮಿಸಲುಂಟೆ? ಅನುಪಮನನ್ನು ಉಪಮೆಗೊಳಪಡಿಸುವದೆಲ್ಲ ಮರವು. ಈ ಮರವು ಮರೆತುದೆ ಮರವೆ ಬಿಡಾಡಿ.

ಮರೆಯದೆ ಬಿಡಾಡಿ: ತಾನಾರೆಂಬುದು ತನ್ನ ತಾನೆ ಅರಿವುದು ಆವುದಾದರೂ ಮರೆಯಲ್ಲ, ತನ್ನಂ ಮರೆಯದಿರುವುದು. ಗುರುವಿಡಿದ ಅರುವು ಮರೆಯಬಹುದು, ಲಿಂಗವಿಡಿದ ಅರಿವು ಮರೆಯಬಹುದು, ಕಲ್ಪಿತ ಮರೆವುದು ಗುರುವಿಡಿದ ಅರುವು

ಅರುವಲ್ಲ, ಲಿಂಗವಿಡಿದ ಅರುವು ಅರುವಲ್ಲ, ಗುರುವೆಂಬದು ಕಲ್ಪಿತ, ಲಿಂಗವೆಂಬುದು ಕಲ್ಪಿತ, ಕಲ್ಪಿತಕ್ಕೆ ಅರುವಹುದೆ ತನ್ನಿಂದ ತನ್ನ ಅರಿವುಡೆ ಅರುವು ಗುಹೇಶ್ವರ.

ಏನನ್ನಾದರೂ ಮರೆಯಬಹುದು, ತನ್ನಿಂದ ತನ್ನ ಅರಿದ ಅರುವು ಮರೆಯದೆ ಇದ್ದುದೆ ಬಿಡಾಡಿ. ಆದುದೆಲ್ಲ ಮರೆಯಬಹುದು, ಏನೊಂದಾಗದ ಘನ ತಾನು, ತನ್ನ ಮರೆಯದೆ ಇದ್ದುದೆ ಬಿಡಾಡಿ, ಸಟೆಯ ಮರೆಯಬಹುದು ದಿಟ ಮರೆಯದಿದ್ದುದೆ ಬಿಡಾಡಿ.

ಅರುವರಿತು ಕುರುಹಿಲ್ಲದಾತ ನೀನೆ ಬಿಡಾಡಿ, ಸಕಲವನ್ನು ಅರಿವುದು ಅರುವು, ಆ ಅರುವ ಅರಿಯುವರಾರು? ತಾನೆ, ನಾಮರೂಪಂಗಳ ಅರಿವುದು ಅರುವು, ಅರುವು ಅರುವು ಎಂಬುದನ್ನು ಅರಿವುದು ತಾನೆ, ತನ್ನಂ ಅರಿವುದು ಅದಾವದು? ತಾನು ಅರುವಿಂಗೆ ಅರುವಾಗಿಹ ಘನವಾಗಿರುವದರಿಂದ ತನ್ನೊಳ ಕುರುಹಿಲ್ಲ ಅರುವರಿತಲ್ಲಿ ಸುಮ್ಮನೆ ಹೇಳುವದಕ್ಕಾದರೂ ನಾಮರೂಪಂಗಳಿಲ್ಲ ತನಗಿಂತ ಭಿನ್ನವೂ ಇಲ್ಲ ಸಮಾನ ವಸ್ತುವೂ ಇಲ್ಲ ತಾನೊಂದೆ ಸ್ವತಃ ಸಿದ್ಧನಾಗಿರುವದರಿಂದ ಗಗನದಂತೆ ಅಖಂಡವಾಗಿರುವ ಜ್ಞಾನಾಮೃತ ತಾನಾದುದರಿಂದ ಅರುವರಿತು ಕುರುಹಿಲ್ಲದಾತ ನೀನೆ ಬಿಡಾಡಿ ಎಂದು ಹೇಳಿಹರು.

**ವಚನ 36**

**ಕಂಡೊಂದ ನುಡಿವುದೀ ಲೋಕ,**
**ಕಾಣದೊಂದ ನುಡಿವುದೀ ಲೋಕ**
**ಹಿಂದೆ ನಿಂದಿಸಿದರೆಂದು ಕುಂದಲಿಲ್ಲ**
**ಮುಂದೆ ವಂದಿಸಿದರೆಂದು ಉಬ್ಬಲಿಲ್ಲ**
**ವಂದನೆ ನಿಂದೆ ಎಂಬುದು**
**ಉಪಜೀವಿಗಲ್ಲದೆ ಉಪಮಾತೀತ**
**ಶರಣಂಗುಂಟೆ ಗುಹೇಶ್ವರಾ.**

**ತಾತ್ಪರ್ಯ:** ಕಂಡೊಂದ ನುಡಿವುದೀ ಲೋಕ, ಕಾಣದೊಂದ ನುಡಿವುದೀ ಲೋಕ: ಅನುಪಮ ಶರಣನ ಘನತ್ವ ಕಾಣದೆ ತಮ ತಮಗೆ ತಿಳಿದಂತೆ ಲೋಕವು ನುಡಿವುತಿರ್ಪುದು. ಸರ್ವಸಂಗ ಪರಿತ್ಯಾಗ ಮಾಡಿದ ಶಿವಶರಣನ ಲೋಕದ ಸಂಸಾರಿಗಳೆಂತು ಮೆಚ್ಚುವುದು? ಊರೊಳಗಿದ್ದರೆ ಉಪಾಧಿಕನೆಂಬರು, ಅಡವಿಯೊಳಗಿದ್ದರೆ ಮೃಗನೆಂಬರು ಹೊನ್ನ ಬಿಟ್ಟರೆ ದರಿದ್ರನೆಂಬರು ಹೆಣ್ಣು ಬಿಟ್ಟರೆ ನಪುಂಸಕನೆಂಬರು, ಮಣ್ಣು ಬಿಟ್ಟರೆ ಪೂರ್ವಕರ್ಮಿಯಂಬರು. ಮಾತನಾಡದಿದ್ದರೆ ಮೂಗನೆಂಬರು ಮಾತನಾಡಿದರೆ ಜ್ಞಾನಿಗೇಕಯ್ಯ ಮಾತೆಂಬರು, ನಿಜವನಾಡಿದಡೆ ನಿಷ್ಠುರ ಎಂಬರು ಸಮತೆಯ ನುಡಿದಡೆ ಅಂಜದವನೆಂಬರು. ಇದು ಕಾರಣ ಕೂಡಲಚೆನ್ನಸಂಗಯ್ಯ ನಿಮ್ಮ ಶರಣ ಲೋಕದಿಚ್ಛೆಯ ನುಡಿಯ, ಲೋಕದಿಚ್ಛೆಗೆ ನಡೆಯ.

ಅಲೌಕಿಕನು ಲೋಕದಿಚ್ಛೆಯಂತೆ ನುಡಿಯನು, ನಡೆಯನು. ಅಗಣಿತನ ಘನವ

ಗುಣವಂತರೇನುಬಲ್ಲರು, ಭಾವಕ್ಕಮಗ್ಯನ ಅದಾವ ಭಾವದಿಂದ ಭಾವಿಸುವದು. ನಿಃಕ್ರಿಯೆಯಲ್ಲಿ ನಿಂದ ಮಹಾಂತ ನುಡಿದು ನಿಃಶಬ್ದ ನಡೆದು ನಿರ್ಗಮನಿ ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿಯಾಗಿಹ ಘನವಂತನ ಕಂಡೊಂದು ಕಾಣದೊಂದು ನುಡಿವುದೀ ಲೋಕ. ಕ್ರಿಯಾಶೀಲರಿಗೊಂದು ಪರಿಕಂಡರೆ, ಉಪಾಸಕರಿಗೊಂದು ಪರಿ, ಜ್ಞಾನಾಕಾಂಡಿಗಳಿಗೊಂದು ಪರಿ, ಹೀಗೆ ನಾನಾ ರೂಪವಾಗಿ ಕಾಣುವರು. ಕ್ರಿಯಾಶೀಲ ಕರ್ಮದ ಕಟ್ಟಳೆ ಕಾಣದ್ದರಿಂದ ಅವನು ದೂಷಿಸುವನು. ಉಪಾಸಕನು ಇವನು ತನ್ನಂತೆ ಉಪಾಸನೆ ಕಾಣದ್ದರಿಂದ ಇವನು ಸೇರನು. ಜ್ಞಾನ ಕಾಂಡಿಯು ಅನಾತ್ಮಗಳ ತಿರಸ್ಕೃತ, ಆತ್ಮತಾನೆನ್ನುವ ಚಿದಹಂದಿದುಕ್ತನಾಗಿರುವದರಿಂದ ಈ ಮಹಾಂತ ನಿಸ್ಸೀಮ ಸೇರನು. ಇವರುಗಳಲ್ಲಿ ಕೆಲವರು, ಅವನ ಮುಂದೆ ಕೊಂಡಾಡುವರು. ಕೆಲಬರು ಅವನ ಹಿಂದೆ ನಿಂದಿಸುವರು, ಶರಣ ನಿಂದಿಸಿದರೆಂದು ಕುಗ್ಗುವದಿಲ್ಲ, ವಂದಿಸಿದರೆಂದು ಹಿಗ್ಗುವದಿಲ್ಲ, ಶರಣ ಬೆಳಗುವ ಜ್ಯೋತಿ ಅರುವರಿತ ಶಬ್ದಮುಗ್ಧ ಭೇದಾಭೇದ ವಿನಿರ್ಮುಕ್ತ ಶಿವ ಸ್ವಸುಖದಲ್ಲಿದ್ದ ಸಚ್ಚಿದಾನಂದ ಎರಡಿಲ್ಲದ ಘನಮಹಿಮ, ಮಿಕ್ಕಿ ಮೀರಿನಿಂದ ನಿಲುವುಳ್ಳ ಘನಕ್ಕೆ ಘನ, ಪರಬೊಮ್ಮವರಿತು ನಿಃಶಬ್ದ ಬ್ರಹ್ಮವೆ ತಾನಾಗಿ ನಿಂತ ನಿಲವು ಶೃತಿಗಳೆ ಕೇಳದ ಕಿವುಡನಿಗೆ ಲೋಕದ ಶಬ್ದಗಳು ಕೇಳುವದದೆಂತು, ನಿರವಯನಿಗೆ ಅವಯವಂಗಳು ಕಾಣುವದದೆಂತು, ನಿರ್ದೇಹಿಗಳಿಗೆ ದೇಹ ಧಾರಿಗಳು ಕಾಣುವದದೆಂತು, ಕಾಣದಿದ್ದ ಮೇಲೆ ಲೋಕದ ಸ್ತುತಿ ನಿಂದೆಗಳು ಕಂಡುದು ಹೇಗೆ? ಹುಲಿಗೆ ನರಿಯ ಕೂಗು ಕೇಳಬಹುದೆ? ಅರುವರಿತ ಚಿದ್ಘನ ದೇವನಿಗೆ ಲೋಕದ ಸ್ತುತಿ ನಿಂದೆಯ ಕೂಗು ಕೇಳಬಹುದೆ? ಅಹಂ ಬ್ರಹ್ಮಾಸ್ಮಿ ಎಂಬ ಬ್ರಹ್ಮಜ್ಞಾನಿಗೆ ಸ್ತುತಿ ನಿಂದೆಯುಳ್ಳ ಶಬ್ದವ ಕೇಳಿ ಉಬ್ಬಲಿಲ್ಲ ಕುಂದಲಿಲ್ಲ.

ವಂದನೆ, ನಿಂದೆ ಎಂಬುದು ಉಪಜೀವಿಗಳಿಗಲ್ಲದೆ ಉಪಮಾತೀತ ಶರಣಂಗುಂಟೆ ಗುಹೇಶ್ವರಾ: ಹೊಟ್ಟೆ ಹೊರೆಯುವ, ಆಧ್ಯಾತ್ಮ ಜೀವಿಗಳು ಉದರ ಪೋಷಕಕ್ಕಾಗಿ ಕಲಿತುಕೊಂಡ ವಾದಿಗಳು, ಅಭ್ಯಾಸಿಗಳು ಇವರು ವಂದನೆಗೆ ಉಬ್ಬುವರು. ನಿಂದೆ ಮಾಡುವರು ಕಂಡರೆ ಕುಗ್ಗುವರು, ಇವರು ಜ್ಞಾನಾಮೃತವ ಸ್ವೀಕರಿಸದ ಅತೃಪ್ತರು, ಇವರು ಆಗಮ ಉಪನಿಷದ ಪಾಠ ಮಾಡಿದ ಪಾರಾಯಣವಂತರಾದರೂ ಅದನ್ನು ತಮ್ಮ ಹೃದಯ ತೃಪ್ತಿಗಾಗಿ ಜ್ಞಾನಯಜ್ಞದ ಉಪಯೋಗವಾಗಲಿಲ್ಲ. ಲೋಕದವರಿಂದ ಪ್ರತಿಷ್ಠೆ ಬೆಳಿಸುವದಕ್ಕೆ ಹಣವ ಗಳಿಸುವದಕ್ಕಾಗಿ ಅಭ್ಯಾಸಿಗಳಾದರಲ್ಲದೆ ನಿತ್ಯ ತೃಪ್ತಿರೂಪ ತೃಪ್ತಿಗಾಗಿ ಇವರ ಪಾಠವಾಗಲಿಲ್ಲ. ಇವರಿಗೆ ಶಬ್ದಗಳೆ ಸತ್ಯವಾಗಿ ನಿಂತವು. ಶ್ರೀಗುರು ಸಂಜ್ಞೆಯಿಂ ಕರುಣಿಸಿದ ಮುನ್ನ ಮುನ್ನಲಾದ ತನ್ನಿಂದ ತಾನಾದ ತನ್ನ ಸ್ವರೂಪದ ಘನವರಿಯುವ ಭಾಗ್ಯದಿಂದ ವಂಚಿತರಾಗಿ ಉಪಜೀವಿಗಳಾದರು.

ಉಪಮಾತೀತ ಶರಣಂಗುಂಟೆ? ವಂದನೆ, ನಿಂದೆ? ಶರಣ, ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗವರಿತ ಲಿಂಗಾಂಗಿ ಈತ ಘನಾಂಗಿಯಾದುದರಿಂದ ಸರ್ವವು ಲಿಂಗಮಯವು ತನಗೆ ತಾನು ಆರಾದರೂ ವಂದನೆ ನಿಂದೆ ಮಾಡಬಹುದೆ? ಅನ್ಯರಿದ್ದಲ್ಲಿ

ಒಂದನೆ ಮಾಡಿದುದು ನಿಶ್ಚಯ, ನಿಂದೆ ಮಾಡಿದುದು ನಿಶ್ಚಯ, ಅನಾಮಯವಾಗಿರುವ ನಿರ್ವಾಣವೆ ತಾನೆಂಬ ಸ್ವಯಂಮಹಿಮಂಗೆ ಭಿನ್ನವೆಂಬುದಿಲ್ಲ ಅಭಿನ್ನವೆಂಬುದಿಲ್ಲ, ಸಂಸಾರವೆಂಬುದಿಲ್ಲ, ಪರಮಾರ್ಥವೆಂಬುದಿಲ್ಲ, ಇಲ್ಲ ಇಲ್ಲವೆಂಬುದು ಇಲ್ಲವಾದನುಪಮ, ಎರಡನ್ನು ಕಾಣದ ಮಹಾಂತ ತಾನೆ ತಾನಾದ ಮಹಾಂತನಿಗೆ ಸ್ತುತಿ ಆವುದು, ನಿಂದೆ ಆವುದು, ಅನುಪಮನ ಉಪಮೆಗೆ ತಂದು ನುಡಿಯಲಾಗದೆಂದು ಪ್ರಭುದೇವ ಶರಣತ್ವ ಹಿರಿಮೆ ಕೊಂಡಾಡಿದ್ದಾನೆ.

**ವಚನ 37**

**ತಂದೆಯಿಲ್ಲದ, ತಾಯಿಯಿಲ್ಲದ, ಹೆಸರಿಲ್ಲದ, ಕುಲವಿಲ್ಲದ, ಹುಟ್ಟಿಲ್ಲದ,**
**ಅಯೋನಿ ಸಂಭವ ನೀನಾದ ಕಾರಣ, ನಾನು ನೀನು**
**ನಿಷ್ಕಲ ಲಿಂಗವೆಂದೆನಯ್ಯ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ.**

**ತಾತ್ಪರ್ಯ:** ತಂದೆಯಿಲ್ಲದ, ತಾಯಿಯಿಲ್ಲದ, ಹೆಸರಿಲ್ಲದ, ಕುಲವಿಲ್ಲದ, ಹುಟ್ಟಿಲ್ಲದ, ಅಯೋನಿ ಸಂಭವ ನೀನಾದ ಕಾರಣ, ನಾನು, ನೀನು ನಿಷ್ಕಲ ಲಿಂಗವೆಂದೆನಯ್ಯ: ಇದು ಗುರ್ವಾನುಗ್ರಹ ಈ ದಯಾಮಯನ ಕಾರುಣ್ಯವ ಅದನೆಂತು ಬಣ್ಣಿಸುವದು, ತಾನು ಅಯೋನಿಸಂಭವನಾದ ಕಾರಣ, ತನ್ನ ನಂಬಿದ ಅನನ್ಯ ಭಕ್ತರನ್ನು ತನ್ನಂತೆ ಮಾಡಿದ ಗುರುಘನ, ಈ ಕಾರ್ಯ ಗುರುಘನನೊಬ್ಬನಿಂದಲ್ಲದೆ ಮತ್ತಾರಿಗೆ ಸಾಧ್ಯ.

ಹರಿ ಹರ ಶಿವ ಶಂಕರ ಗಣಪತಿ ಶಕ್ತಿ ಇವರುಗಳ ಕೃಪೆಯಿಂದ ಭೋಗೈಶ್ವರ್ಯ ಹಾಗೂ ಸಾಲೋಕ್ಯ ಸಾಯುಜ್ಯ ಸಾಮೀಪ್ಯ ಸಾರೂಪ್ಯವೆಂಬ ಪದವಿಗಳು ದೊರೆಯಬಹದು. ಇವುಗಳು ಕೆಲವು ಕಾಲತೋರಿ ಇಲ್ಲವಾಗುವ ಮಾಯಿಕ ಪದವಿ, ನಿತ್ಯ ನಿರತಿಶಯವಾದ ಸಚ್ಚಿದಾನಂದ ಪದ ಲಭ್ಯವಾಗಲು ಸರ್ವಾತ್ಮರೂಪದಲ್ಲಾದ ಶ್ರೀಗುರು ರೂಪವು ಅವಶ್ಯಕವು, ಇಂತಪ್ಪ ಶ್ರೀಗುರು ಘನ ಲಭ್ಯವಾದಾಗ ಸಮಪ್ರಕಾಶಮಾನವಾದ ಸಚ್ಚಿದಾನಂದತ್ವವು ಆಗ ಸಾಧ್ಯವು ಇದು ಕಾರಣ ಗುರುಘನನ ಕರುಣೆಯು ಅವರ್ಣೀಯವು, ಮರವಿನ ಯೋನಿಜರನ್ನು, ತನ್ನರುವಿನ ಘನತ್ವದಿಂದ ಅಯೋನಿಜರನ್ನಾಗಿ ಮಾಡುವ ಪರಬೊಮ್ಮ, ಅಖಂಡಿತ ಘನವಪ್ಪ ಪರಿಪೂರ್ಣವಾಗಿಹ ಘನಗುರು, ಅಜ್ಞಾನಿಗಳ ದೃಷ್ಟಿಗೆ ತಾನು ಯೋನಿಜನಾಗಿ ಕಂಡರೂ ತನ್ನ ದಿವ್ಯ ದೃಷ್ಟಿಗೆ, ಸಕಲ ಚರಾಚರ ಜಗವೆಲ್ಲ ಅಯೋನಿಜ ತತ್ವವನ್ನಾಗಿ ಕಾಣಿಸುವ ಸ್ವಮಹಿಮ ಸ್ವಯಂ ಜ್ಯೋತಿ. ಈ ಮಹಾಂತನ ಹೃದಯದಿಂದ ಹೊರ ಬಂದವರೆಲ್ಲ ಅಯೋನಿ ಸಂಭವರೆ, ಗುರು ಕರ ಸಂಜಾತರೆಲ್ಲ ಅಯೋನಿ ಸಂಬಭರು, ಹುಲಿಯ ಗರ್ಭದಿಂದ ಹೊರ ಬಂದವರೆಲ್ಲ ಹುಲಿಗಳೆ, ಗುರು ಹೃದಯದಿಂದ ಹೊರ ಬಂದವರೆಲ್ಲ ಗುರು ಸ್ವರೂಪರೆ ಅಯೋನಿಜರು, ತಂದೆಯಿಲ್ಲದ ತಾಯಿಯಿಲ್ಲದ, ಹೆಸರಿಲ್ಲದ ಕುಲವಿಲ್ಲದ ಹುಟ್ಟಿಲ್ಲದವರೆ.

ಕೆಲವರು, ತಂದೆಯಿಲ್ಲದ ತಾಯಿಯಿಲ್ಲದವರೆಂದರೆ ಪರದೇಶಿ, ದಿಕ್ಕಿಲ್ಲದವನೆನ್ನುವರು, ಅಹುದು ಕ್ಷರಾಕ್ಷರವೆಂಬುದಕ್ಕೂ ಮೀರಿದ ಘನ ಮಹಿಮೆಗೆ

ತಂದೆ ತಾಯಿಗಳೆಲ್ಲಿಂದ ತರಬೇಕು. ಈ ಮಹಾಮಹಿಮನನ್ನು ಕಾಣುವ ಭಾಗ್ಯ, ನಿತ್ಯಾನಿತ್ಯವೆಂಬ ಪುರುಷಾರ್ಥಜ್ಞಾನಿಗಳಿಗೂ, ಅಸಾಧ್ಯವಾಗಿರುವಲ್ಲಿ, ಅವಿಚಾರವುಳ್ಳವನಾದ ಮಂದ ಮನುಜರಿಗೆ ಕಾಣುವದದೆಂತು, ತಿಳಿಯುವದದೆಂತು, ಆನು ಅರಿದೆ ಮರಿದೆ ಅಳಿದೆ ಉಳಿದೆನೆಂಬುವರಿಗೂ ಅಂತರ್ಮುಖ, ಬಹಿರ್ಮುಖವೆಂಬ ದ್ವಿವಿಧ ಮುಖದವರಿಗೂ ಕಾಣನು. ತತ್ವ ಅತತ್ವವೆಂಬ ವಿವೇಕಿಗಳಿಗೂ ಕಾಣನು. ಅನುವರಿತು, ಘನವ ಬೆರೆತು, ತನ್ನಲ್ಲಿ ತಾನು ಸನ್ನಿಹತವಾದಲ್ಲಿ ಕಾಣದುದ ಕಂಡವರು, ಕೇಳದುದು ಕೇಳಿದವರು, ತನ್ನ ಕಂಡವರು. ತಂದೆಯಿಲ್ಲದ ತಾಯಿಯಿಲ್ಲದ ಹೆಸರಿಲ್ಲದ ಕುಲವಿಲ್ಲದ ಹುಟ್ಟಿಲ್ಲದ ಅಯೋನಿ ಸಂಭವನನ್ನು ಕಂಡವರು. ಘನಗುರು ಕಾರುಣ್ಯದಲ್ಲಿ ಪ್ರಕಟವಾದವರು. ಗುರುದೇವನು ಅನುಪಮ, ತಾನು ಅನುಪಮ ಇದು ಕಾರಣ ನಾನೆಂಬುದು ಅನುಪಮ, ನೀನೆಂಬುದು ಅನುಪಮ ಈ ಅನುಪಮ ನಿಲುವುಳ್ಳ ಶರಣರಿಗೆ, ನಿಷ್ಕಲ ಲಿಂಗವೆಂದೆನಯ್ಯ ಎಂದು ಹೇಳಿಹರು.

ನಿಷ್ಕಲ ಲಿಂಗಕ್ಕೆ, ಇಷ್ಟಲಿಂಗವೆನ್ನಬೇಕೆ? ಪ್ರಾಣಲಿಂಗವೆನ್ನಬೇಕೆ? ಭಾವಲಿಂಗವೆನ್ನಬೇಕೆ? ಮಹಾಲಿಂಗವೆನ್ನಬೇಕೆ? ಅನುಪಮವಾದುದಕ್ಕೇನನ್ನಬೇಕು.

ಶ್ಲೋಕ: ಅಲಕ್ಷ್ಯ ಮದ್ವಯಂ, ಶೂನ್ಯ ಮಮೂರ್ತ, ಪರಮ ಅವ್ಯಯಮ್ ।
ಅನಾಮ ಮಕುಲಂ ಶುದ್ಧ ಅನಾದ್ಯಂ ಶಿವ ಮುಚ್ಯತೆ ।
ಅಕಾರಣ ಮಕಾರ್ಯಂಚ ಮನೋ ವಾಚಾ ಮ ಗೋಚರಮ್ ।
ಆದ ಮಧ್ಯಾಂತ ಶೂನ್ಯಂಚ ವೋಮಾ ವ್ಯೋಮ ವಿವರ್ಜಿತಮ್ ।
ಧ್ಯಾನ್ ಜ್ಞಾನ ದ್ವಯೋ ಹೀನಂ ಶೂನ್ಯ ಲಿಂಗ ಮನಾಶ್ರಯಮ್ ॥

ಈ ನಿಷ್ಕಲ ಲಿಂಗವೆ ತಾವಾದ ನಿಲವು, ಗುರ್ವಾನುಗ್ರಹ ನಿಲವು, ಗುರುಹೃದಯದಿಂದ ಹೊರಬಂದವರ ನಿಲವು, ಇದು ನೆಲೆಯಿಲ್ಲದ ನಿಲುವು ಆದುದರಿಂದ ಲಕ್ಷಣ ಲಕ್ಷ್ಯವೆಂಬುದಕ್ಕೂ ಮೀರಿದ ತನ್ನಿರುವೆ ಅಲಕ್ಷ್ಯವು ಅದ್ವಯವು ನಿಸ್ಸೀಮವು, ಇಲ್ಲಿ ಕುರುಹು ಕೂನವೆಂಬುದೆಲ್ಲವೂ ಶೂನ್ಯವಾಗಿದೆ. ಏಕೆಂದರೆ ಅಮೂರ್ತವಾಗಿದೆ, ಇದನ್ನು ಅವ್ಯಯ ಅಥವಾ ಅವಿನಾಶಿ ಎಂದು ಹೇಳಲು ಬಾರದ್ದರಿಂದ ತನ್ನಿಂದ ತನ್ನಿರವು ತನಗೆ ವೇದ್ಯ, ಇದು ಕಾರಣ ತನ್ನಿರುವುಳ್ಳದು ಪರಮವ್ಯಯವೆಂದು ಹೇಳಿದೆ.

ಇದು ರೂಪ, ಅರೂಪವೆಂಬುದಕ್ಕೂ ಮೀರಿ ಬೆಳಗುವ ಮಹಾಬೆಳಗುಳ್ಳ ಘನಕ್ಕೆ ಅದಾವ ನಾಮ ತರಬೇಕು. ಇಲ್ಲಿ ಸಕಲ ನಾಮಂಗಳು, ಕುಲಂಗಳು, ಬೆಳಗಿಸಿಕೊಳ್ಳುವ ಮಾಯಿಕವಾಗಿರುವಲ್ಲಿ ಬೆಳಗುಳ್ಳ ಸ್ವಯಂ ಜ್ಯೋತಿಗೆ ನಾಮವಿಲ್ಲ, ಕುಲವಿಲ್ಲ ವಾದ್ದರಿಂದ ಅನಾಮಮಕುಲಂ ಎಂದು ಹೇಳಿದೆ.

ಶುದ್ಧ ಅನಾದ್ಯಂ ಶಿವ ಮುಚ್ಯತೆ ಎಂದು ಹೇಳಿದುದು ನೋಡುವುಡೆ ಆದಿ, ಮಧ್ಯ, ಅಂತ್ಯದಿಂದ ಕೂಡಿದುದು ಶಿವನಾಗಲಾರದು, ಆವುದಕ್ಕೆ ಆದಿ ಇಲ್ಲ, ಮಧ್ಯ ಇಲ್ಲ, ಅಂತ್ಯವಿಲ್ಲ, ಅದುವೆ ಶುದ್ಧವಾಗಿದೆ. ಅನಾದ್ಯವು ಆಗಿದೆ, ಅದುವೆ ಶಿವನಾಗಿದೆ, ಅದುವೆ ಗುರುವಾಗಿದೆ. ಶಿಷ್ಯವಾಗಿದೆ, ಅಯೋನಿ ಸಂಭವವಾಗಿದೆ. ಇದನ್ನು

ಕಾರಣವೆನ್ನಲು ಬರದು ಕಾರ್ಯವೆನ್ನಲು ಬರದು ಮತ್ತು ವಾಙ್ಮನೋತೀತವಾದುದರಿಂದ ಅನಾಮಯ ವಾಗಿರುವ ನಿರ್ವಾಣವೆ ನಿಷ್ಕಲ ಲಿಂಗ, ಇದು ನನ್ನ ಸ್ವರೂಪ, ಗುರು ಸ್ವರೂಪವ ಧ್ಯಾನ ಮಾಡುವದೆಂತು ಬೋಧವ ಬೋಧಿಸುವದಾದರೂ ಅದೆಂತು ಇದು ಕಾರಣ, ಇಲ್ಲಿ ಧ್ಯಾನ ಕ್ರಿಯೆ ಉಪದೇಶದ ಕ್ರಿಯೆ ನಷ್ಟವಾದ ನಿಜ ನಿಲವೆ ನಿಷ್ಕಲ ಲಿಂಗ. ಇದುವೆ ತನ್ನ ಸ್ವರೂಪ ತಾನಾರೆಂದರಿತ ತನ್ನ ಇರವು. ಗುರುವಿನ ಇರವು. ಈರ್ವರು ಒಂದಾದುರಿಂದ ನಾನು ನೀನು ನಿಷ್ಕಲಲಿಂಗವೆಂದೆನಯ್ಯ ಮಹಾಲಿಂಗ ಗುರುಶಿವ ಸಿದ್ದೇಶ್ವರ ಪ್ರಭುವೆ ಎಂದು ಹೇಳಿಹರು.

***

# ಕಲ್ಪ ವೃಕ್ಷ

(ಶಿವಶರಣರ 41 ವಚನಗಳು ಹಾಗೂ ತಾತ್ಪರ್ಯ)

ಲೇಖಕರು:

**ಪರಮಪೂಜ್ಯ ಸದ್ಗುರು**

**ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು**

ಓಂ ತತ್ ಸತ್

# ಗ್ರಂಥಕರ್ತರ ಮಾತು

ವೃಕ್ಷಗಳಲ್ಲಿ ನಾನಾ ಬಗೆಯ ವೃಕ್ಷಗಳಿದ್ದರೂ ಕಲ್ಪವೃಕ್ಷದಂಥ ವೃಕ್ಷಗಳಿರುವವೆ? ವೃಕ್ಷಗಳಡಿಯಲ್ಲಿ ಹೋದವರಿಗೆ ನೆರಳು, ಪತ್ರಿ, ಪುಷ್ಪ, ಕಾಯಿ, ಹಣ್ಣುಗಳನ್ನಷ್ಟೆ ಕೊಡುವವು. ಈ ಕಲ್ಪವೃಕ್ಷ ಏನನ್ನು ಕಲ್ಪಿಸುವನೊ, ಅದನ್ನೆಲ್ಲ ಕೊಡುವದು. ಏನು ಕೊಟ್ಟರೂ ಅನಿತ್ಯ ಫಲಗಳನ್ನು ಕೊಡುವದು. ಇದು ಕಾರಣ ಕಲ್ಪವೃಕ್ಷಕ್ಕೆ ವೃಕ್ಷವೆನಬೇಕೆ?

ಕಾಮಿಸದೆ ಕೊಡದು ಕಾಮಧೇನು, ಕಲ್ಪಿಸದಲ್ಲದೆ ಕೊಡದು, ಕಲ್ಪತರು. ಚಿಂತಿಸದಲ್ಲದೆ ಕೊಡದು ಚಿಂತಾಮಣಿ, ಭಾವಿಸದೆ ಕೊಡನು ಶಿವನು. ಕಾಮಿಸದೆ, ಕಲ್ಪಿಸದೆ, ಚಿಂತಿಸದೆ, ಭಾವಿಸದೆ ಕೊಡಬಲ್ಲರು ಕೂಡಲಚೆನ್ನಸಂಗಾ ನಿಮ್ಮ ಶರಣರು.

ಆವ ತರುಗಳಾದರೂ ಸಿಗಬಹುದು, ಕಲ್ಪತರು ಸಿಗುವದು ದುಸ್ತರವು. ಪುಣ್ಯವುಳ್ಳವಂಗೆ ಕಲ್ಪತರು ಸಿಕ್ಕರೂ ಸಿಗಬಹುದು. ಕೂಡಲಚೆನ್ನಸಂಗನ ಶರಣರೂಪಿ ಕಲ್ಪವೃಕ್ಷ ಸಿಗುವದು ಅನನ್ಯ ಭಕ್ತರಿಗಲ್ಲದೆ ಅನ್ಯರಿಗದೆಂತು ಸಾಧ್ಯ.

ಶರಣರೂಪಿ ಕಲ್ಪತರು ಕಾಮಿಸದೆ, ಕಲ್ಪಿಸದೆ, ಚಿಂತಿಸದೆ, ಭಾವಿಸದೆ, ಕೊಡುವುದು, ಅನುಪಮ ಜ್ಞಾನರತ್ನವನ್ನು ಈ ಜ್ಞಾನ ರತ್ನದ ಘನವ ಅದೆಂತು ವರ್ಣಿಸುವುದು, ಇದು ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗವರಿತು ಅಚಲಾನಂದ ದೊಳಿಪ್ಪ ಪರಮ ನಿರ್ಲೇಪಿ ಶರಣನ ಹೃದಯದಿಂದ ಹೊರ ಹೊಮ್ಮಿ ಬಂದ ಜ್ಞಾನರತ್ನ. ಇದು ಅನುಪಮವಾದ ಕಾರಣ ಉಪಮಿಸದಂತಿದ್ದಿತ್ತು. ಈ ಕಲ್ಪವೃಕ್ಷದಿಂದ ವೇದ ವೇದಾಂತಗಳಿಗಸಾಧ್ಯವಾಗಿಹ ಅನುಪಮಲಿಂಗವರಿಯುವ ಭಾಗ್ಯ. ಇದಲ್ಲದೆ ಲಿಂಗವೆ ತಾನಾಗುವ ಭಾಗ್ಯ. ಮೇಲೆ ಅಚಲಾನಂದದಲ್ಲಿರುವ ಭಾಗ್ಯ. ಈ ತ್ರಿವಿಧ ಭಾಗ್ಯದಿಂದ ಮನವು ಪರಮ ನಿರ್ಲೇಪ, ಪ್ರವೃತ್ತಿರೂಪಮಾಗಿಹ ಪ್ರಪಂಚದಿಂದಲೂ ನಿರ್ಲೇಪ, ನಿವೃತ್ತರೂಪಮಾಗಿಹ ಪರಮಾರ್ಥದ ಶಬ್ದಾಡಂಬರದಿಂದಲೂ ನಿರ್ಲೇಪ ನಿಸ್ಸಂಗದ ಘನತ್ವನೀಯುವುದು.

ಶರಣರೂಪಿ ಜ್ಞಾನ ರತ್ನವಮಾಗಿಹ ಕಲ್ಪತರು ಚತುರ್ವಿಧ ಜ್ಞಾನಘನವನೀಯುವುದು. ಇಚ್ಛಿಸದೆ ಕೊಡುವುದು, ಲಿಂಗಾಂಗ ಸಮರಸ ಜ್ಞಾನನಿಧಿಯನು. ಕಲ್ಪಿಸದೆ ಕೊಡುವದು, ಅಕಲ್ಪಿತ ಘನದಿರುವಿನ ಅರುವೆಂಬ ವರ್ಮವನು. ಚಿಂತಿಸದೆ ಕೊಡುವುದು, ಅಚಿಂತ್ಯಾತ್ಮ ರಹಸ್ಯವನು. ಭಾವಿಸದೆ ಕೊಡುವುದು, ನಾನೀನೆಂಬುದಕ್ಕೂ ತೆರಹಿಲ್ಲದ ಘನದಿರುವನು. ಇದು ತನ್ನಿರುವ ಪ್ರಜ್ವಲಿಸುವ ಕಲ್ಪವೃಕ್ಷ, ತಾನೆ ತಾನಾಗಿಹ ಕಲ್ಪವೃಕ್ಷವು ಆಗಿಹುದು.

**– ವಿದ್ಯಾನಂದ ಶರಣರು ಡಬ್ಬೇರಮಡುವು**

**ವಚನ 1**

**ಹತ್ತು ಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು?**
**ಮುಟ್ಟುವ ತೆರನರಿಯದನ್ನಕ್ಕ? ಕಟ್ಟಿದಡೇನು, ಬಿಟ್ಟಡೇನು?**
**ಮನವು ಲಿಂಗದಲ್ಲಿ ಮುಟ್ಟದನ್ನಕ್ಕ?**
**ಮಾತಿನ ಮಾತಿನಲೆ ಒಲಿಸಿ ಮಹತ್ತಪ್ಪ**
**ಲಿಂಗವ ಕಂಡೆಹೆನೆಂಬ ಪಾತಕರ ಮೆಚ್ಚ**
**ನಮ್ಮ ಕೂಡಲ ಸಂಗಮದೇವ. ॥ 797 ॥**

**ತಾತ್ಪರ್ಯ:** ಹತ್ತು ಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು, ಮುಟ್ಟುವ ತೆರನರಿಯದನ್ನಕ್ಕ: ಬಸವಣ್ಣನವರು, ಅಯ್ಯ ಹತ್ತು ಸಾವಿರ ಗೀತವ ಹಾಡಿದರೇನು? ಮತ್ತು ಹಾಡುಗಳ ಶಬ್ದ ಶಬ್ದಾರ್ಥವ ಜನರೊಲಿಯುವಂತೆ ಹೇಳಿದರೆ ಫಲವೇನು? ಗೀತೆಗಳ ಹಾಡುವವ ತಾನಾರು? ಈ ಶಬ್ದ ಶಬ್ದಾರ್ಥಗಳ ತಿಳಿಸುವ ಮತಿಗೂ ತನಗೂ ಸಂಬಂಧವೇ? ಲೋಕದವರಿಗೂ ತನಗೂ ಸಂಬಂಧವೆ ಎಂಬುದನ್ನಾದರೂ ಅರಿತಿರುವನೆ?

ವೇದ ವೇಧಿಸಲರಿಯದೆ ಕೆಟ್ಟವು, ಶಾಸ್ತ್ರ ಸಾಧಿಸಲರಿಯದೆ ಕೆಟ್ಟಿತ್ತು ಎಂದು ಮಹಾನುಭಾವರೆ ಬಿತ್ತರಿಸಿರುವಲ್ಲಿ, ಈ ಗೀತೆ ತನ್ನ ತಿಳಿಯಬಹುದೆ? ಗೀತೆಯ ಹಾಡುವ ವಾಣಿಯಾದರೂ ತನ್ನ ತಿಳಿಯಬಹುದೆ? ಹಾಡನ್ನು ವಿವರಿಸುವ ಮತಿಯಾದರೂ ತನ್ನ ತಿಳಿಯಬಹುದೆ? ತಿಳಿಯದಿದ್ದಲ್ಲಿ ಗೀತೆಯ ಹಾಡಿ ಫಲವೇನು ಎಂದು ಬಸವರಸರು ಹೇಳಿದುದು.

ಕಟ್ಟಿದರೇನು ಬಿಟ್ಟರೇನು ಮನವು ಲಿಂಗದಲ್ಲಿ ಮುಟ್ಟದನ್ನಕ್ಕ: ಲಿಂಗವಂತರು ಪೂಜಾಲಿಂಗವ ಕಟ್ಟಿದರೇನು, ಬಿಟ್ಟರೇನು, ಮನವು ಲಿಂಗದಲ್ಲಿ ಮುಟ್ಟದನ್ನಕ್ಕ. ಅಯ್ಯಾ ಲಿಂಗ ಧರಿಸಿದ ಲಿಂಗವಂತರು ನೀವು ಪೂಜಾಲಿಂಗವ ಕಟ್ಟಿದವರು ಇರಬಹುದು, ಬಿಟ್ಟವರು ಇರಬಹುದು, ಇರಲಿ. ಕಟ್ಟಿದವರು ಲಿಂಗ ಏನಾಗಿ ಕಟ್ಟಿದರು, ಬಿಟ್ಟವರು ಲಿಂಗ ಏಕೆ ಬಿಟ್ಟರು ? ಏನಾಗಿ ಬಿಟ್ಟರು. ಲಿಂಗ ಕಟ್ಟಿದವರು ಲಿಂಗವಾಗಿ ಕಟ್ಟಿದರೊ? ಲಿಂಗ ಬೇರೆ, ತಾವು ಬೇರೆಂದು, ಭೇದ ಜ್ಞಾನಿಗಳಾಗಿ ಕಟ್ಟಿದರೊ? ಬಿಟ್ಟವರು, ಲಿಂಗವರಿತು ಬಿಟ್ಟರೊ ತಿಳಿಯದೆ ಬಿಟ್ಟರೊ?

ಮನವು ಲಿಂಗ ಮುಟ್ಟಿತೆ? ಲಿಂಗ ಮುಟ್ಟಿದ ಬಳಿಕ ಮನ ಸುಮನವಾಯಿತೆ? ತನ್ನ ಸಂಕಲ್ಪ ವಿಕಲ್ಪವ ಮರೆತು, ಅಕಲ್ಪಿತ ಘನವಾಯಿತೆ? ತಾನು ಮನವೆಂಬುದು ನಷ್ಟವಾಗಿ ಅಚಿಂತ್ಯತ್ವವು ಅಳವಟ್ಟಿತೆ! ಅಯ್ಯ ಮನವು ಅಚಿಂತ್ಯತ್ವದಲ್ಲಿ ಲೀಯವಾಗಬೇಕಾದರೆ ಶ್ರೀಗುರು ಕಾರುಣ್ಯ ಅವಶ್ಯವಾಗಿ ಬೇಕು. ಭಾವ ಪರಿಶುದ್ಧವಾಗಿರುವಲ್ಲಿ ಕಾರುಣ್ಯವೆಂಬ ಕರುಣಾಜಲವದು, ಲಿಂಗಾಂಗ ಸಮರಸ ಜ್ಞಾನ, ತತ್ವಮಸಿ ತನ್ನನ್ನಾಗಿ ಮಾಡುವ ಜ್ಞಾನಾಮೃತ. ಇದು ಗಗನದಂತೆ ಅಖಂಡವಾಗಿಹ ಜ್ಞಾನಾಮೃತ. ಅರುವಿನ ಅರುವು ಸಕಲಾತ್ಮರ ಸ್ವರೂಪ, ಇದು ಲಿಂಗ ಕಟ್ಟಿದ ಚಿನ್ಹ. ಇದು ಮನಸ್ಸಿಗೆ ಕರಗತವಾಗಬೇಕು. ಮನಸ್ಸು, ಲಿಂಗ ಮುಟ್ಟಬೇಕಾದರೆ, ವಾಕ್,

ಮನಸ್ಸಿಗೆ ಮೀರಬೇಕು. ಅಲ್ಲಿ ಶಬ್ದಕ್ಕಿಂಬಿಲ್ಲ ನೆನಹಿಗೂ ಇಂಬಿಲ್ಲ, ಭಾವಕ್ಕಿಂಬಿಲ್ಲವಾಗಿ ಗುರೂಪದೇಶವು ನಷ್ಟವಾಗಿರುವಲ್ಲಿ, ಲಿಂಗ ಮುಟ್ಟಿದ ಚಿನ್ಹವೆಂದು ತಿಳಿ. ಏಕೆಂದರೆ ಕಲ್ಪನೆಗೊಳಪಟ್ಟ ಮನ ಅಕಲ್ಪಿತ ಘನವ ಮುಟ್ಟಬಹುದೆ? ಚಿಂತನಕ್ಕೊಳಪಟ್ಟ ಮನ ಅಚಿಂತ್ಯಾತ್ಮನ ಮುಟ್ಟಬಹುದೆ? ಇದು ಕಾರಣ ಮನ ಲಿಂಗದಲ್ಲಿ ಮುಟ್ಟದನ್ನಕ್ಕರ ಎಂದು ಹೇಳಿರುವಲ್ಲಿ ಮನವು ತನ್ನ ಕಲ್ಪಿತವ ಮರೆತು ಅಕಲ್ಪಿತದಲ್ಲಿ ಲೀಯವಾಗುವ ತನಕ, ತನ್ನ ಚಿಂತನವ ಮರೆತು ಅಚಿಂತ್ಯಾತ್ಮನ ಲೀಯವಾಗುವ ತನಕ, ಮಾತಿನ ಮಾತಿನಲೆ ಒಲಿಸಿ, ಮಹತ್ತಪ್ಪ ಲಿಂಗವ ಕಂಡಿಹೆನೆಂಬುವ ಪಾತಕರ ಮೆಚ್ಚ ಕೂಡಲ ಸಂಗಮದೇವಾ.

ಬಹು ಪಂಡಿತರೆನ್ನುವ ಮಾತುಗಾರರು ಮಾತು ಕಲಿತು ಮಾತು ಮಾತಿನಿಂದಲೆ, ಲೋಕದ ಜನಗಳ ಒಲಿಸುತ್ತಾರೆ. ಸಭೆಯಲ್ಲಿಯೂ ಮಾತು ಮಾತಿನಿಂದಲೆ ಒಲಿಸಿ ಘನಗಂಭೀರ ಮಹಾಘನ ಲಿಂಗವ ಸಾಕ್ಷಾತ್ಕಾರ ಮಾಡಿಕೊಂಡಂತೆ ಲೌಕಿಕ ಜನರಿಗೆ ತೋರಿಸುವವರು ಪಾತಕರು ಎಂದು ಬಸವಣ್ಣನವರು ಹೇಳಿದುದು.

ಲಿಂಗ ಅಂಗ, ಅಂಗ ಲಿಂಗವೆಂದರಿತಲ್ಲಿಯೆ ಅಲ್ಲಿಯೆ ಕಾಣಿರೊ ಕೂಡಲ ಚೆನ್ನ ಸಂಗಯ್ಯ, ಅಲ್ಲಿಯೆ ಕಾಣಿರೋ ಎಂದು ಅಂಗವರಿತರೇನು? ಲಿಂಗವರಿತರೇನು, ಅಂಗವೆಂಬುದು ಲಿಂಗ, ಲಿಂಗವೆಂಬುದು ಅಂಗ. ಇದು ನಿರಂತರವಾಗಿರುವ ಮಂಗಳಮಯ ಪರಮಸತ್ಯ. ಇದು ತಾನಾರೆಂದರಿತವರ ಅಂಗವು ಅಹುದು, ಲಿಂಗವು ಅಹುದು ತನ್ನ ಸ್ವರೂಪವು ಅಹುದು, ಇದು ಅರಿತವರಾಗದೆ ಮಾತಿನ ಒಲುಮೆ ಇಲ್ಲಿ ನಿರುಪಯೋಗ.

ಶಬ್ದ ಮುಗ್ಧವಾಗಿಹ ಲಿಂಗ ಘನವು ಶಬ್ದಂಗಳಿಗೆ ಒಲಿಯುವದದೆಂತು? ಅರಿತೆ ಅರಿಯೆನೆಂಬುದಕ್ಕೂ ಮೀರಿದ ಘನಲಿಂಗವ ತಾ ಕಂಡುದು ಹೇಗೆ? ಮರವರುವಿಂಗೆ ಮೀರಿದುದನ್ನು ಕಂಡಿಹೆವೆನ್ನುವವರೆಲ್ಲರು ದೋಷ ದೃಷ್ಟಿಯುಳ್ಳವರು. ಇವರು ಪಾತಕರಾದುದರಿಂದ ಇವರನ್ನು ಮೆಚ್ಚ ಕೂಡಲಸಂಗಮದೇವ ಎಂದು ಬಸವರಾಜದೇವರು ಹೇಳಿದುದು.

**ವಚನ 2**

**ಗುರು ತೋರಿದ ಲಿಂಗವೆ ಮನಸ್ಥಲವಾಗಿರಲು**
**ಪವನ ಭೇದದಿಂದ ಅರಿದಿಹೆನೆಂದಡೆ ಅದೆದ್ರೋಹ,**
**ಈಡಾ ಪಿಂಗಳ ಸುಷುಮ್ನ ನಾಳವಿಡಿದು ಅರಿದಿಹನೆಂದಡೆ**
**ಕೂಡಲ ಸಂಗಮದೇವ ಮೂಗ ಕೊಯ್ಯದೆ ಮಾಣ್ಬನೆ.** ॥ 799 ॥

ತಾತ್ಪರ್ಯ: ಗುರು ತೋರಿದ ಲಿಂಗವೆ ಮನಸ್ಥಲವಾಗಿರಲು, ಪವನ ಭೇದದಿಂದ ಅರಿದಿಹೆನೆಂದಡೆ ಅದೆ ದ್ರೋಹ: ಕೆಲಬರು ಗುರುತೋರಿದ ಲಿಂಗವ ವಾಯುಬಂಧನವ ಮಾಡಿ ಕುಂಭಕದ್ವಾರಾ ಅರಿತಿರುವೆವು ಎಂದು ಹೇಳಿಕೊಳ್ಳುವ ಹಠಯೋಗಿಗಳಿಗೆ ಬಸವರಸರು ಅದು ದ್ರೋಹವೆಂದಿಹರು.

ಗುರು ತೋರಿದ ಲಿಂಗ ಅರುವಿನಿಂದ ಅರಿದಿಹೆನೆಂದಡೆ, ಅರುವು

ಮರಹಿಂಗೊಳಗಾಯಿತ್ತಾಗಿ ಆ ಅರುವಿನಿಂದ ಅರಿದಿಹೆನೆಂಬ ಅಜ್ಞಾನಿಯ ಮಾತ ಕೇಳಲಾಗದು. ಭಾವದಿಂದ ಭಾವಿಸಿಹೆನೆಂದಡೆ ಭಾವ ಭ್ರಾಂತಿಗೊಳಗಾಗಿತ್ತಾಗಿ, ಆ ಭಾವದಿಂದ ಭಾವಿಸಿಹೆನೆಂಬ ಭ್ರಮಿತನ ಮಾತ ಕೇಳಲಾಗದು. ಜ್ಞಾನದಿಂದ ಅರಿದಿಹೆನೆಂದಡೆ ಜ್ಞಾನ ಅಜ್ಞಾನಕ್ಕೊಳಗಾಯಿತ್ತಾಗಿ ಆ ಜ್ಞಾನದಿಂದ ಅರಿದಿಹೆನೆಂಬ ಅಜ್ಞಾನಿಯ ಮಾತ ಕೇಳಲಾಗದು. ಸದ್‌ಜ್ಞಾನ ಭರಿತ ಕೂಡಲಚೆನ್ನಸಂಗಾ ನಿಮ್ಮ ಶರಣ.

ಬಹುಲಿಂಗವಂತರಿಗೂ ಜಿಜ್ಞಾಸುಗಳಿಗೂ ಗುರುತೋರಿದ ಸಂಜ್ಞೆ(ಲಿಂಗ) ಯುತಾರ್ಥವರಿಯುದ್ದರಿಂದ, ಅದನ್ನು ಅರುವಿನಿಂದ ಅರಿಯುಹೋಗಿ ಮರಹಿಂಗೊಳಗಾದರಲ್ಲದೆ ಲಿಂಗವರಿಯಲಿಲ್ಲ. ಕೆಲಬರು ಭಾವದಿಂದ ಭಾವಿಸಿ, ಭ್ರಮಿತರಾದರಲ್ಲದೆ ಭಾವಕ್ಕಗಮ್ಯರಾಗಲಿಲ್ಲ. ಕೆಲಬರು ಜ್ಞಾನಕಾಂಡದಿಂದ ಅರಿಯಹೋಗಿ ಚಿದಹಮ್ಮು ಆದರಲ್ಲದೆ ಲಿಂಗದರುವುಳ್ಳವರಾಗಲಿಲ್ಲ. ತಾವೆ ಲಿಂಗವಾಗಲಿಲ್ಲ. ಇದು ಕಾರಣ ಆರು ಭರಿತಭಾವದವರು ಅವರು ನಿಸ್ಸೀಮರು. ಅರಿದರುಹಿಸಿ ಕೊಂಬುದಕ್ಕೂ ಮೀರಿದ ಘನವೆಂಬುದು, ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದವರು. ಅವರು ಸದ್ ಜ್ಞಾನ ಬರಿತರು. ಅವರೆ ಶರಣರು. ಅಪ್ರತಿಮ ಲಿಂಗವರಿತ ಲಿಂಗಸ್ವರೂಪರು, ಅವರಿಗೆ ಗುರು ತೋರಿದ ಲಿಂಗವೆ, ಮನದ ಸ್ಥಲವಾಗಿದೆ.

ಗುರು ತೋರಿದ ಲಿಂಗ ಆವುದು ಗೊತ್ತೆ? "ಯತಾ ವಾಚ್ಯ ನಿವರ್ತಂತೆ ಅಪ್ರಾಪ್ಯ ಮನಸಾ ಸಹ" ಎನ್ನುವಂತೆ ಆವುದು ವಾಣಿಗೂ ಮನಕ್ಕೂ ನಿಲುಕದ್ದಾಗಿರುವದೊ, ಅದುವೆ ಲಿಂಗ. ಅದು ವಾಙ್ಮನೋತೀತ ಲಿಂಗ, ಶಬ್ದಮುಗ್ಧ ಲಿಂಗ, ಅದುವೆ ಮನದ ಅಧಿಷ್ಠಾನ, ಲಿಂಗವೆಂದರೆ ಮನದ ಪೂರ್ಣ ವಿಶ್ರಾಂತಿ, ಪ್ರಶಾಂತ ನಿಲಯ, ಪರಮಾಮೃತವು ಜ್ಞಾನಾಮೃತವು. ಸ್ಥಲವೆಂದರೆ ಸುಖರೂಪಿ ಸುಖಸ್ಥಲ. ಸುಖದ ಸುಖವದು ಲಿಂಗ ಅಕ್ಷಯ ಸುಖ, ಸಚ್ಚಿದಾನಂದ ಅಚಿಂತ್ಯತ್ವ ಇದುವೆ ಸ್ಥಲ.

ಗುರು ತೋರಿದ ಲಿಂಗ, ಅದು ತನ್ನಿರುವಿನ ಅರುವು. ತಾನಾರೆಂಬ ತನ್ನ ಸಂಜ್ಞೆ, ಪರಾನಂದ, ಸಚ್ಚಿದಾನಂದ. ಇದು ಮರವರುವಿಗೆ ಮೀರಿದವರ ಸ್ಥಲ, ಎರಡೊಂದಾದವರ ಸ್ಥಲ, ಮಿಕ್ಕಿ ಮೀರಿನಿಂದ ನಿಲವು, ಸಯ ನಿಲವು, ಮನ ಮೇರೆದಪ್ಪಿದ ನಿಜ ನಿಲವು. ಇದು ಮನ ಸ್ಥಲ. ಇಲ್ಲಿ ಉಪಾಧಿಕ ಮನದ ಮುಕ್ತಾಯ, ಉಪಾಧಿ ರಹಿತ ಮನದ ಮುಕ್ತಾಯ, ಇದು ನಿಷ್ಪತ್ತಿ, ನಿರಾಳ ತಾನಾದುದು, ಮನಸ್ಥಲ. ಈ ಮನಸ್ಥಲ, ಮನದ ಮಾಪಿನಿಂದ ಅಳೆಯಲು ಹೋದವರಿಗದೆಂತು ಸಾಧ್ಯ.

ನೆನೆಯಲರಿಯೆ, ನಿರ್ಧರಿಸಲರಿಯೆ, ಭಾವಿಸಲರಿಯೆ, ಧ್ಯಾನಾತೀತ, ತಾನೆಯಾಯಿತ್ತಾಗಿ, ಎಂದು ಹೇಳಿದುದನ್ನು ಇಲ್ಲಿ ಸ್ಮರಿಸಿ ಕೊಳ್ಳಬೇಕಾಗಿದೆ. ಏಕೆಂದರೆ, ಗುರು ತೋರಿದ ಲಿಂಗ, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನ. ತಾನೆ ತಾನಾದ ಘನ, ಅಪ್ರಮಾಣಗಮ್ಯವ ಗುರು ತೋರಿದ ಕಾರುಣ್ಯದಿಂದ ನೋಡಲು, ಆಗ ಮನಸ್ಸಿಗೆ

ಅಕ್ಷಯಸುಖ ಅಚಿಂತ್ಯತ್ವವು. ಲಿಂಗ ಬೇರೆ ಲಿಂಗ ಬೇರೆಂಬ ಭೇದಜ್ಞಾನಿಗಳಿಗೂ ಅಸಾಧ್ಯ. ಲಿಂಗಾಂಗ ಸಮರಸ ಜ್ಞಾನದವರಿಗೆ ಸಾಧ್ಯ. ಇಲ್ಲಿ ಎರಡೆಂಬುದಿಲ್ಲ ಒಂದೆಂಬುದಿಲ್ಲ, ಅರಸುವುದಿಲ್ಲ, ಆಲಾಪಿಸುವುದಿಲ್ಲ, ಲಿಂಗವರಿತು ಲಿಂಗವಾದವರ ನಿಲವು. ಇದು ಮನಸ್ಥಲ, ಮನಕ್ಕೆ ಮೀರಿದ ಸ್ಥಲ. ಭಾವಕ್ಕಗಮ್ಯವಾದ ಸ್ಥಲ, ಗುರುತೋರಿದ ಲಿಂಗ, ವೇದ ವೇಧಿಸಲರಿಯದ ಲಿಂಗ, ಶಾಸ್ತ್ರ ಸಾಧಿಸಲರಿಯದ ಲಿಂಗ, ಆಗಮ ಪೂರೈಸದ ಲಿಂಗ, ಶೃತಿ ಸ್ಮೃತಿಗಳರಿಯದ ಲಿಂಗ.

ಇಂತಪ್ಪ ಘನಗಂಭೀರ ಮಹಾಘನ ಲಿಂಗವ ಪವನ ಭೇದದಿಂದ ಅರಿಯಬಹುದೆ? ರೇಚಕ ಪೂರಕ, ಕುಂಭಕಗಳ ಅಭ್ಯಾಸ ಮಾಡಿ ಕೇವಲ ಕುಂಭಕ ಯೋಗದಿಂದಲಾದರೂ ಅರಿಯಬಹುದೆ? ಈ ಹಠಯೋಗ ಮಾಡುವ ಅಭ್ಯಾಸಿಯು, ಬ್ರಹ್ಮರಂಧ್ರದಲ್ಲಿ ತನ್ನ ಶ್ವಾಸವನ್ನಿರಿಸಿ, ಆಯುಷ್ಯವ ಹೆಚ್ಚು ಬೆಳೆಸಿಕೊಳ್ಳಬಹುದು. ಆರು ಕುಂಭಕಯೋಗ ಚೆನ್ನಾಗಿ ಅಭ್ಯಾಸ ಮಾಡಿದವರಿಗಿದು ಸಾಧ್ಯವು. ಈ ಕುಂಭಕ ಸಾಧಿಸಿ ಸಹಸ್ರ ವರ್ಷ ಬಾಳಿದರೂ ತಾನಾರೆಂದು ಅರಿತನೆ? ಅಥವಾ ಈ ಕುಂಭಕ ಯೋಗವು ಆವುದು ತಾನು ಎಂಬುದು ತಿಳಿಯದೆ ಸುಷುಮ್ನ ನಾಳವಿಡಿದರೆ ಫಲವೇನು! ಕುಂಬಕವೆಂಬುದು ಒಂದು ನಿದ್ರಿತ ಪುರುಷನಿದ್ದಂತೆ. ತನ್ನಿಂದ ತಿಳಿಸಿಕೊಳ್ಳುವ ಅನಾತ್ಮ ಜಡ ತಾನು ಹೇಗಾಗುವನು. ಇದು ಕಾರಣ ಕುಂಭಕ ಯೋಗವ ಮಾಡಿ ತಮ್ಮ ತಾವರಿದೆವೆನ್ನುವವರು ಲಿಂಗವರಿದಿಹೆವೆನ್ನುವವರು. ಮರುವುಳ್ಳವರು, ಗುರುದ್ರೋಹಿಗಳು ಲಿಂಗ ದ್ರೋಹಿಗಳು ತಮ್ಮ ತಾವೆ ಹತ್ಯೆ ಮಾಡಿಕೊಂಡವರು. ಆತ್ಮ ಜ್ಞಾನ ವಿರಹಿತರು. ಇದಕ್ಕಾಗಿ ಈಡಾ, ಪಿಂಗಳ, ಸುಷುಮ್ನ ನಾಳದಿಂದ ಅಂದರೆ ಪೂರಕವೆಂಬುದು ಮೂಗಿನಿಂದ ಶ್ವಾಸವ ಏರಿಸುವದು. ರೇಚಕವೆಂಬುದು, ಮೂಗಿನಿಂದ ಶ್ವಾಸವ ಇಳಿಸುವದು. ಕುಂಭಕವೆಂಬುದು, ಶ್ವಾಸವ ನಿಲ್ಲಿಸುವುದು. ಇದು ಹಠಯೋಗಿಗಳಿಂದ ಸರಿಯಾಗಿ ಕಲಿತು ಅಭ್ಯಾಸ ಮಾಡಿದರೆ ಸರಳವಾಗಿ ಸಿದ್ಧಿಸುವದು. ಸ್ವತಃ ತಾವೆ ಮಾಡಲಿ, ಗ್ರಂಥಗಳ ನೋಡಿ ಮಾಡಲು ಹೋದಲ್ಲಿ ಶರೀರ ಅನಾರೋಗ್ಯವುಳ್ಳದ್ದಾಗುವುದು, ಬಲ್ಲಂತ ಯೋಗಿಗಳಿಂದ ತಿಳಿದು ಮಾಡುವದು ಹಿತಕರ. ಯೋಗಾಭ್ಯಾಸ ಮಾಡುವದರಿಂದ ಶರೀರಾರೋಗ್ಯವು ಸಿದ್ಧಿಸುವದು. ಇದಲ್ಲದೆ ಚಿತ್ತ ಸ್ಥಿರತೆಯುಂಟಾಗಿ ಮುಂದೆ ಲಿಂಗದ ರಹಸ್ಯವ ತಿಳಿಯಲು ಮನವು ಪರಿಶುದ್ಧವಾಗುವದು. ಆಗ ಶ್ರೀಗುರುವಿನಿಂದ ಲಿಂಗವರಿಯಲು ಅವರಿಂದ ಒಮ್ಮೆ ಯತಾರ್ಥ ಜ್ಞಾನ ಮಾಡಿ ಕೊಟ್ಟರೆ ಸಾಕು ಲಿಂಗದ ಘನತ್ವ ಸಹಜ ತನ್ನ ಹೃದಯದೋಳ್ ಮೂಡಿ, ತಾನೆ ಲಿಂಗವಾಗಿ ಪ್ರಜ್ವಲಿಸುವದು.

ಕೇವಲ ಹಠಯೋಗದಿಂದ ತನ್ನ ತಾನರಿಯಲು ಅಸಾಧ್ಯ. ತರ್ಕಿಗಳು ಈಡಾ, ಪಿಂಗಳ, ಸುಷುಮ್ನ ನಾಳವಿಡಿದು ಅರಿದಿಹೆನೆಂದಡೆ ಕೂಡಲ ಸಂಗಮದೇವ ಮೂಗ ಕೊಯ್ಯದೆ ಮಾಣ್ಬನೆ ಎಂದು ಬಸವರಾಜದೇವರು ಹೇಳಿಹರು. ಈಡಾ,ಪಿಂಗಳ, ಸುಷುಮ್ನನಾಳ ವಿಡಿಯುವ ಅಭ್ಯಾಸ ಮಾಡುವುದರಿಂದ ಶರೀರಾರೋಗ್ಯ, ಚಿತ್ತ ಸ್ಥಿರತೆಗೆ ಮಾತ್ರ ಸರಿಯಾದುದು. ಲಿಂಗವರಿಯಲು, ಶ್ರೀಗುರುವಿನಿಂದ ಲಭ್ಯವಾದ

ಲಿಂಗಾಂಗ ಸಮರಸ ಜ್ಞಾನವು ಮುಖ್ಯವು ಎಂದು ಹೇಳಿಹರು.

**ವಚನ 3**

**ಮಾಡುವರಿಲ್ಲ, ನೀ ಮಾಡದೆ ನಿಲ ಸಾಲೆ, ಬೇಡುವರಿಲ್ಲ, ನೀ ಬೇಡದೆ ನಿಲಸಾಲೆ,**
**ಕೂಡುವರಿಲ್ಲ ನೀ ಕೂಡದೆ ನಿಲಸಾಲೆ ಕೂಡಲಸಂಗಮದೇವಾ**
**ತಾನು ತಾನಾಗಿ ನೀ ನೋಡದೆ ನಿಲಸಾಲೆ. ॥ 846 ॥**

**ತಾತ್ಪರ್ಯ:** ಬಸವಣ್ಣನವರು, ಮಾಡುವರಿಲ್ಲ ನೀ ಮಾಡದೆ ನಿಲಸಾಲೆ ಎಂದು ಬಿತ್ತರಿಸಿದುದು ಎಷ್ಟು ಗಹನಾರ್ಥದಿಂದುಕ್ತವಾದುದು. ಓ ಕೂಡಲಸಂಗಮದೇವಾ, ನಿನ್ನಂತೆ ಎನ್ನವನು ಮಾಡುವರಿಲ್ಲ. ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗ ಮಾಡುವರಿಲ್ಲ, ಅಚಲಿತ ಲಿಂಗ ಮಾಡುವರಿಲ್ಲ, ಅಖಂಡಿತ ಲಿಂಗ ಮಾಡುವರಿಲ್ಲ, ಅಕಲ್ಪಿತ ಘನನ ಮಾಡುವರಿಲ್ಲ, ಅಚಿಂತ್ಯನ ಮಾಡುವರಿಲ್ಲ.

ಗುರುವರ್ಗವು ತ್ಯಾಗಿಗಳ ಮಾಡುವವರುಂಟು, ತಪಸ್ವಿಗಳ ಮಾಡುವವರುಂಟು, ಲಿಂಗಾರ್ಚಕರನ್ನಾಗಿ ಮಾಡುವವರುಂಟು. ಜಂಗಮಾರ್ಚಕರನ್ನಾಗಿ ಮಾಡುವವರು ಉಂಟು, ಧ್ಯಾನಿ ಮೌನಿಯನ್ನಾಗಿ ಮಾಡುವವರು ಉಂಟು. ಈ ಗುರುವರ್ಗವು ಸಿಕ್ಕುತ್ತದೆ, ಲಿಂಗ ಒಂದಾಗಿರ್ದ ಗುರುಘನ ಸಿಕ್ಕುವದು ವಿರಳ. ಲಿಂಗ ಒಂದಾಗಿರ್ದ ಜಂಗಮದೇವ ಸಿಕ್ಕುವದು ವಿರಳ.

ಓ ಗುರುಲಿಂಗವೆ, ನಿನ್ನಂತೆ ಎನ್ನವನು ಮಾಡುವರಿಲ್ಲ: ನೀನು ತ್ಯಾಗದ ತ್ಯಾಗಿ, ಪೂಜಕರ ಪೂಜ್ಯ ಲಿಂಗಾರ್ಚಕರ ಘನಲಿಂಗ, ಜಂಗಮಾರ್ಚಕರ ನಿರವಧಿ ಜಂಗಮ, ನಿಜೈಕ್ಯಜಂಗಮ, ನೀ ಮಾಡಿದರೆ ಸಾಧ್ಯ. ಇದು ಗುರು, ಲಿಂಗ, ಜಂಗಮ ಒಂದಾದವರಿಗೆ ಸಾಧ್ಯ. ತಾನೆ ತಾನಾದವರಿಂದ ಸಾಧ್ಯ. ಕೂಡಲ ಸಂಗಮದೇವಾ ಸಕಲ ನೀನೆ ನಿಃಕಳ ನೀನೆ ಆದುದರಿಂದ ನೀ ಮಾಡಿದರೆ ಸಾಧ್ಯ ಮಾಡದಿರೆ ಅಸಾಧ್ಯವು.

ಓ ಗುರು ಲಿಂಗವೆ! ಹೃದಯದಲ್ಲಿ ನ್ಯಸ್ತವಾಗಿಹ ಘನದಿರುವ ಪ್ರಜ್ವಲಿಸುವದು, ಇದಾರಿಗೆ ಸಾಧ್ಯ! ಈ ಘನಕೃಪೆಯ ಮಾಡುವರಿಲ್ಲ, ಅಖಂಡಿತ ಘನ ಪೂರ್ಣವಪ್ಪ ನನ್ನಿರುವುಳ್ಳ ಅರುವು ಮಾಡುವರಿಲ್ಲ, ಘನದಿರುವಿನ ಅರುವ ಮಾಡಿದಲ್ಲಿ ಅಂಗವೆಂಬುದಿಲ್ಲ ಲಿಂಗವೆಂಬುದಿಲ್ಲ. ಪೂಜಕನಿಲ್ಲ ಪೂಜ್ಯನಿಲ್ಲ, ಅಂಶ ಅಂಶಿ ಭಾವವಿಲ್ಲ ನಾನೆಂಬುದಿಲ್ಲ ನೀನೆಂಬುದಿಲ್ಲ, ಅಹುದಾದುದಿಲ್ಲ ಅಲ್ಲಾದುದಿಲ್ಲ, ನಾಶವೆಂಬುದಿಲ್ಲ ಅವಿನಾಶಿ ಎಂಬುದಿಲ್ಲ. ಸತ್ ಎಂಬುದಿಲ್ಲ ಅಸತ್ ಎಂಬುದಿಲ್ಲ ಚಿತ್ ಎಂಬುದಿಲ್ಲ, ಅಚಿತ್‌ವೆಂಬುದಿಲ್ಲ ಆನಂದವೆಂಬುದಿಲ್ಲ ನಿರಾನಂದವೆಂಬುದಿಲ್ಲ. ಇಲ್ಲ ಇಲ್ಲವೆಂಬುದು ಇಲ್ಲ ಮಾಡಿ ಸುಖದ ಸುಖಿಯನ್ನಾಗಿ ಮಾಡುವರುಂಟೆ? ಇದು ಕಾರಣ ನೀ ಮಾಡದೆ ನಿಲಸಾಲೆ ಎಂದು ಹೇಳಿಹರು. ನೀ ಮಾಡಿದಾಗ ಅದುವೆ ಆಗಿ ನನಗೆ ನಿಲ್ಲಲು ಸಾಧ್ಯವು ಎಂದುದು.

ಬೇಡುವರಿಲ್ಲ, ನೀ ಬೇಡದೆ ನಿಲಸಾಲೆ: ಪ್ರಭುವಿನಂತೆ ಬೇಡುವರಿಲ್ಲ, ಅಹಂಕಾರವ ಬೇಡುವರಿಲ್ಲ, ಮಮಕಾರ ಬೇಡುವರಿಲ್ಲ, ಅಹಂ ಎಂಬ ತನುವ ಬೇಡುವರಿಲ್ಲ, ಮಮವೆಂಬ ಮನವ ಬೇಡುವರಿಲ್ಲ. ಪ್ರಾಣವೆಂಬ ಧನವ ಬೇಡುವರಿಲ್ಲ,

ನಾಹಂ ಎಂಬ ವೈರಾಗ್ಯವ ಬೇಡುವರಿಲ್ಲ, ಸೋಹಂ, ಚಿದಹಂ ಎಂಬ ಅರುವಿನಹಂಕಾರ ಬೇಡುವರಿಲ್ಲ.

ಓ ಜಂಗಮ ಲಿಂಗವೆ, ಅಚಿಂತ್ಯನ ಮಾಡಲು, ತನು, ಮನ, ಧನ, ಬೇಡುವರಿಲ್ಲ, ಅಕಲ್ಪಿತನ ಮಾಡಲು ಮನವ ಬೇಡುವರಿಲ್ಲ. ನಿಶ್ಚಿಂತ ನಿರಾಳನ ಮಾಡಲು ಧನವ ಬೇಡುವರಿಲ್ಲ, ತ್ಯಾಗದ ತ್ಯಾಗ ಮಾಡಲು ಅಹಂಭಾವ ಬೇಡುವರಿಲ್ಲ.

ಓ ಜಂಗಮ ಲಿಂಗವೆ, ನಿನ್ನ ಕೂಡುವರಿಲ್ಲ, ನೀ ಕೂಡದೆ ನಿಲಸಾಲೆ: ಕೂಡಿ ಅಗಲುವುದನ್ನು ಕೂಡುವವರಿದ್ದಾರೆ. ಕೂಡಿ ಅಗಲುವ ಗುರು, ಲಿಂಗ, ಜಂಗಮರ ಕೂಡುವವರಿದ್ದಾರೆ. ಕೂಡದಗಲದ ಘನವ ಕೂಡುವರಿಲ್ಲ. ಗುರು ಶಿಷ್ಯರಾಗಿ ಕೂಡುವವರಿದ್ದಾರೆ. ಭಕ್ತ ಜಂಗಮರಾಗಿ ಕೂಡುವವರಿದ್ದಾರೆ. ತಾನೆ ಗುರು, ತಾನೆ ಶಿಷ್ಯ, ತಾನೆ ಭಕ್ತ, ತಾನೆ ಜಂಗಮವಾಗಿ ತಾನೆ ತನ್ನೊಳ ಕೂಡವರಿಲ್ಲ, ಭಾವಿಕರಾಗಿ ಲಿಂಗ ಜಂಗಮದಲ್ಲಿ ಕೂಡುವರುಂಟು. ಭಾವಕ್ಕಗಮ್ಯರಾಗಿ ಕೂಡುವರಿಲ್ಲ. ಎರಡಾಗಿ ಕೂಡುವರುಂಟು, ಎರಡೊಂದಾಗಿ ಕೂಡುವರಿಲ್ಲ, ಮರವಿನಲ್ಲಿ ಕೂಡುವರುಂಟು ಅರುವಿನಲ್ಲಿ ಕೂಡುವರಿಲ್ಲ, ಅರುವು ಅರುವು ಎಂದು ಕೂಡುವರುಂಟು, ಅರುವಿನ ಅರುವಾಗಿ ಕೂಡುವರಿಲ್ಲ, ನುಡಿಯಿಂದುಕ್ತರಾಗಿ ಕೂಡುವರುಂಟು, ನುಡಿಗೆಡೆಗೊಡದ ಘನವಾಗಿ ಕೂಡುವರಿಲ್ಲ. ಇದು ಕೂಡದಗಲದ ಘನವ ಕೂಡುವುದು, ಇದು ಕಾರಣ ಬಸವಣ್ಣನವರು ನೀ ಕೂಡದೆ ನಿಲಸಾಲೆ ಎಂದು ಹೇಳಿದ್ದಾರೆ. ನೀನೊಲಿದು ನೀನಾಗಿ ಕೂಡಿದರೆ ಕೂಡುವದು ಸಾಧ್ಯ. ತನ್ನಿಂದ ತನಗದು ಅಸಾಧ್ಯವು ಎಂದು ಹೇಳಿಹರು.

ತಾನೆ ತಾನಾಗಿ ನೋಡದೆ ನಿಲಸಾಲೆ: ಓ ಕೂಡಲಸಂಗಮದೇವಾ, ನಿನ್ನ ನಿಜ ನಿಲವು, ನಾನಾಗಿ ನೀನಾಗಿ ನಿಂತು ನೋಡಿದವರಿಗೆ ಸಾಧ್ಯವೆ? ಸೋಹಂ ಎಂದೆನ್ನುವ ಮತಿವಂತರಿಗೂ ಅಸಾಧ್ಯ. ಚಿದಾನಂದರೂಪ, ಶಿವೋಹಂ ಎಂಬ ಚಿದಹಮ್ಮುಳ್ಳವರಿಗೂ ಅಸಾಧ್ಯ. ಸಕಲವೂ ನೀನೆಂಬ ದಾಸೋಹಂ ಭಾವಿಗಳಿಗೂ ಅಸಾಧ್ಯವು ಗುರುವಿನ ಕೈಯಲ್ಲಿ ಸತ್ತು ಹುಟ್ಟಿ ನಾನೀನೆಂಬ ಸಂದಳಿದವರಿಗೆ ಸಾಧ್ಯವು. ತಾನಾರೆಂದು ತನ್ನಿಂದ ತನ್ನ ಅರಿತು ಅರಿವು ಸಯವಾಗಿ ಮರಹು ನಷ್ಟವಾಗಿ, ಭಾವಭ್ರಾಂತು ಇಲ್ಲವಾಗಿ ಮನ ಮೇರೆದಪ್ಪಿ ನಿರ್ವಾಣವಾದಲ್ಲಿ ತಾನೆ ತಾನಾಗಿ ತನ್ನ ನಿಂತು ನೋಡಿದರೆ ಸಾಧ್ಯವು. ಇದು ಹೆತ್ತರವು ಇಲ್ಲಿ ನಿರುಪಯೋಗ.

ತಾನೆ ತಾನಾಗಿ ನಿಂತುದು, ತನ್ನ ತಾನೆ ನೋಡಿದುದು, ತನ್ನ ನಿಜದಿರುವು ತನ್ನಿಂದ ತಾನೆ ನೋಡಿದುದು, ಇದು ತನ್ನ ಕೃಪೆ ತನಗಾದಲ್ಲಿ ಸಾಧ್ಯವು. ತಾನಿಲ್ಲದ ಮುನ್ನ ಗುರುವೆಲ್ಲಿಯದು, ತಾನಿಲ್ಲದ ಮುನ್ನ ಲಿಂಗ ಜಂಗಮ ವೆಲ್ಲಿಯವು, ತಾನಿಲ್ಲದ ಮುನ್ನ ಪಾದೋದಕ ಪ್ರಸಾದವೆಲ್ಲಿಯದು. ತಾನಿಲ್ಲದ ಮುನ್ನ ಸ್ವಯ ಪರವೆಲ್ಲಿಯವು? ಗುರುವೆಂದರಿದವನು ತಾನೆ. ಲಿಂಗ, ಜಂಗಮವೆಂದರಿದವನು ತಾನೆ. ಪಾದೋದಕ ಪ್ರಸಾದವರಿದವನು ತಾನೆ ಇವೆಲ್ಲವು ಹೆತ್ತರಿವು. ತಾನೆ ಸ್ವಯಂ ಜ್ಯೋತಿ ಕಲ್ಲೇಶ್ವರ ಎಂಬ ಮಹದರುವು ಅರಿದು ನೋಡುವುಡೆ ತಾನು ಮುನ್ನ, ತನ್ನಿಂದ ಸಕಲವು ಸಿದ್ಧವು. ತನ್ನಂ ಇವಾವು ಸಿದ್ಧಮಾಡವು. ತಾನೆ ನಿರಂತರ ಸ್ವತಃ ಸಿದ್ಧನಾದುದರಿಂದ

ಸ್ವಯಂಜ್ಯೋತಿ ತಾನಾದುದರಿಂದ ತನ್ನ ಕೃಪೆ ತನಗಾಗುವುದರಿಂದ ತಾನೆ ತಾನಾಗಿ ನಿಂತು ನೋಡುವದು ಸಾಧ್ಯವು ಎಂದು ಹೇಳಿಹರು.

**ವಚನ 4**
**ಅಹಂಕಾರ ಮನವ ನಿಂಬುಗೊಂಡಲ್ಲಿ,**
**ಲಿಂಗ ತಾನೆಲ್ಲಿ ಬಪ್ಪುದೊ?**
**ಅಹಂಕಾರಕ್ಕೆ ಎಡೆಗೊಡದೆ**
**ಲಿಂಗ ತನುವಾಗಿರಬೇಕು.**
**ಅಹಂಕಾರ ರಹಿತನಾದಲ್ಲಿ**
**ಸನ್ನಿಹಿತ ಕಾಣ ಕೂಡಲಸಂಗಮದೇವಾ. ॥ 801 ॥**

**ತಾತ್ಪರ್ಯ:** ಅಹಂಕಾರ ಮನವ ನಿಂಬುಗೊಂಡಲ್ಲಿ ಲಿಂಗ ತಾನೆಲ್ಲಿ ಬಪ್ಪುದೊ: ಮನದಲ್ಲಿ ಕರ್ತೃತ್ವ ಭೋಕ್ತೃತ್ವಕ್ಕೆ ಮುಖ್ಯತೆಯಾದಲ್ಲಿ ಲಿಂಗದರಿವು ಎಲ್ಲಿಯದು.

**ಶ್ಲೋಕ: ಮನೋ ವೈ ಗಗನಾಕಾರಂ, ಮನೊ ವೈ ಸರ್ವತೋಮುಖಂ।**
**ಮನೋತೀತಂ ಮನಃ ಸರ್ವಂ ನ ಮನಃ ಪರಮಾರ್ಥತಃ।**

ಮನಸ್ಸು ಗಗನದಂತೆ ಇದೆ. ಅದಕ್ಕೆ ಅಹಂಕಾರಕ್ಕಿಂಬಾಗುವುಡೆ ಸರ್ವತೋಮುಖವಾಗುವುದು. ಹಿಂದೆ ಹೋಗಿರುವದು ಮನಸ್ಸು, ಮನವೆ ಸರ್ವವು ಆಗಿದೆ, ಪರಮಾರ್ಥಿಕ ದೃಷ್ಟಿಯಿಂದ ನೋಡಿದರೆ ಮನಸ್ಸೇ ಇಲ್ಲ, ಇಲ್ಲದ ಮನ ಉಂಟಾದಲ್ಲಿ ಇದ್ದ ಲಿಂಗ ಲಿಂಗಜ್ಞಾನ ಲಿಂಗಸುಖ ಲಿಂಗ ತಾನೆಂಬ ಅರಿವು ಹೇಗೆ ನಿಶ್ಚಯಿಸುವದು?

ಈ ಮನವು ಅಹಂಕಾರಕ್ಕಿಂಬಾಗಿಯೆ ಕರ್ಮಕಾಂಡ, ಉಪಸನಾಕಾಂಡ, ಜ್ಞಾನಕಾಂಡ, ಸತ್ವ ರಜ ತಮ ಗುಣಂಗಳು, ತನು ತ್ರಯಾದಿಗಳು, ಮೂರು ಅವಸ್ಥೆ, ಮೂರು ಜೀವರು, ಪ್ರವೃತ್ತಿ ನಿವೃತ್ತಿ ಬಂಧ ಮೋಕ್ಷ ಪುಣ್ಯಪಾಪ. ಸತ್ಕರ್ಮ ದುಷ್ಕರ್ಮ ಅವಿವೇಕ ವಿವೇಕ ನಾಲ್ಕು ಯುಗಂಗಳು, ಸಂವತ್ಸರಾದಿಗಳು ಮಾಸ, ತಿಥಿ, ವಾರ, ಭೂತ, ಭವಿಷತ್, ವರ್ತಮಾನ, ಜೀವಾತ್ಮ, ಅಂತರಾತ್ಮ, ಪರಮಾತ್ಮ, ಇವೆಲ್ಲವು ಮನದ ಮುಖವೆ. ಪಿಂಡಾಂಡ, ಬ್ರಹ್ಮಾಂಡ, ಪಂಚಭೂತಗಳು, ಪಂಚ ತನ್ಮಾತ್ರ, ಪಂಚಕರ್ಮೇಂದ್ರಿ, ಪಂಚ ಜ್ಞಾನೇಂದ್ರಿ, ಪಂಚ ಪ್ರಾಣ, ಪಂಚ ಕರಣಂಗಳು, ಇವೆಲ್ಲವು ಮನದ ಮುಖವೆ.

ಪ್ರಪಂಚ ಸತ್ಯ ಮಿಥ್ಯೆ ಎನ್ನುವವರು ಕೋಟ್ಯಾನು ಕೋಟಿ, ಪರಮಾರ್ಥಸತ್ಯ ಮಿಥ್ಯೆ ಎನ್ನುವವರು ಕೋಟ್ಯಾನುಕೋಟಿ. ಸಮದೃಷ್ಟಿಯಲ್ಲಿ ನಿಂತು ತಮ್ಮ ತಾವರಿತವರನೊಬ್ಬರನು ಕಾಣೆ ಕೂಡಲಸಂಗಮದೇವಾ. ಮನದಲ್ಲಿ ಅಹಂಕಾರಕ್ಕಿಂಬಾಗಿಯೆ ಪ್ರಪಂಚ ಸತ್ಯ ಎನ್ನುವದಾಗಿದೆ, ಪ್ರಪಂಚ ಮಿಥ್ಯೆ ಎನ್ನುವದಾಗಿದೆ, ಪರಮಾರ್ಥ ಸತ್ಯ ಎನ್ನುವದಾಗಿದೆ, ಪರಮಾರ್ಥಮಿಥ್ಯೆ ಎನ್ನುವುದಾಗಿದೆ. ಈ ಸತ್ಯ ಮಿಥ್ಯೆಗಳ ದೃಷ್ಟಿ ಮರವು ಅರುವಿನಲ್ಲಿ, ಅವಿವೇಕ ವಿವೇಕದಲ್ಲಿರುವಾಗ ತನ್ನ ಸ್ವರೂಪ ಅನುಪಮಲಿಂಗ ಎನ್ನುವ ಅರಿವು ಹೇಗೆ ಬರಬೇಕು? ಅಥವಾ ಲಿಂಗವ ಇದ್ದಕ್ಕಿದ್ದಂತೆ

ತಿಳಿಯುವ ನೈಜ ತಿಳುವಳಿಕೆ ಹೇಗೆ ಉದಯಿಸಬೇಕು? ಇದು ಕಾರಣ ಬಸವರಸರು ಅಹಂಕಾರಕ್ಕೆಡೆಗೊಡದೆ ಲಿಂಗ ತನುವಾಗಿರಬೇಕು ಎಂದು ಹೇಳಿದ್ದಾರೆ.

ಆವ ಮಹಾಂತನು ಅಹಂಕಾರಕ್ಕವಕಾಶ ಕೊಡುವುದಿಲ್ಲ. ಅವರದು ಲಿಂಗ ತನುವಾಗಿಹುದು. ತತ್ವವೇತ್ತನ ತನು, ಲಿಂಗ ತನು, ಲಿಂಗದೃಷ್ಟಿ ಯಾಗಿರುವುದರಿಂದ ಅಲ್ಲಿ ಅಹಂಕ್ಕಾರಕ್ಕಿಂಬಿಲ್ಲವಾಗಿದೆ. ತತ್ತ್ವಜ್ಞಾನವದು ಮಾತಿನಿಂದುಕ್ತವಾದುದಲ್ಲ, ಅರುವರಿತವರ ಸ್ವರೂಪ, ಅರುವಿನ ಅರುವು ಸಚ್ಚಿದಾನಂದ, ನಿಶ್ಚಿಂತದ ನಿಜ ನಿವಾಸ ತಾನಾರೆಂದರಿತವರ ಇರುವಿನ ಅರವು ಇದು ಅಧಿಷ್ಟಾನದ ಜ್ಞಾನ, ಜ್ಞಾನ ಜ್ಞೇಯ ಒಂದಾದ ನಿಲವು ಇದು ತೆರಹಿಲ್ಲದ ಘನ ಅಖಂಡಿತ ಘನವಪ್ಪ ಪೂರ್ಣವು ಅರಿವುಡೆ ತಾನು.

ತತ್ವ ದೃಷ್ಟಿಯುಳ್ಳವರ ತನು, ಲಿಂಗ ತನು ಅಲ್ಲಿ ಅಹಂಕಾರಕ್ಕಿಂಬುಗೊಡದ್ದರಿಂದ ಉಪಾಧಿಕ ಮನ ನಷ್ಟ, ಉಪಾಧಿಕರಹಿತ ಮನ ನಷ್ಟವಾಗಿ ಸಮದೃಷ್ಟಿ, ಸಮಗೋಷ್ಠಿ ಸವೆಯದ ಸುಖವೆ ನೆಲೆಗೊಂಡು ಎಲ್ಲಿ ನೋಡಿದಡಲ್ಲಲ್ಲಿ ಲಿಂಗ ತನುವಾದುದರಿಂದ ನಿಸ್ಸೀಮವು ಅದ್ವಿತಿಯವು ಕೇವಲ ಅರುವು ಸ್ವತಃ ಸಿದ್ಧವಾಗಿ, ಅಖಂಡ ಬೆಳಗುಳ್ಳ ಮಹಾಬೆಳಗು ಪ್ರಜ್ವಲಿಸುವಲ್ಲಿ ಕಾಯ ನಾನೆಂಬುದಕ್ಕಿಂಬಿಲ್ಲ, ಈಶಾರ್ಪಣಕ್ಕಿಂಬಿಲ್ಲ, ಸಾಕ್ಷಿ ನಾನೆನ್ನುವದಕ್ಕಿಂಬಿಲ್ಲವಾದುದರಿಂದ ಅರಿಯಲಿಲ್ಲದ ಅರುವು ತಾನೆ ತಾನಾಗಿ ಬೆಳಗುವುದರಿಂದ ಲಿಂಗ ತನುವಾಗಿಹುದು.

ಅಹಂಕಾರ ರಹಿತನಾದಲ್ಲಿ ಸನ್ನಿಹಿತ ಕಾಣಾ ಕೂಡಲಸಂಗಮದೇವಾ: ಆವುದು ಅಹಂಕಾರ ರಹಿತವಾದ ಒಡಲಾಗಿದೆ. ಅಲ್ಲಿಯೆ ತನ್ನ ಸ್ವರೂಪ ಸ್ವತಃ ಸಿದ್ಧವಾಗಿ ಪ್ರಜ್ವಲಿಸುವ ಬೆಳಗಿನ ಮಹಾಬೆಳಗಾಗಿದೆ. ಇದುವೆ ಅಖಂಡಿತ ಘನವಪ್ಪ ತನ್ನಿರುವೆ ಅರುವಾಗಿಹ ಘನಕ್ಕೆ ಘನವು. ಇಲ್ಲಿ ಕಾರಣವು ಇಲ್ಲ, ಕಾರ್ಯವೂ ಇಲ್ಲ, ಅಹಂಕಾರ ರಹಿತನಾಗಿ, ಸನ್ನಿಹಿತವಾದ ತನ್ನ ಸ್ವರೂಪವು ಚಿಂತನೆಗೊಳಪಟ್ಟುದೆಂದು ಹೇಗೆ ಹೇಳುವದು? ಚಿಂತನೆಗೆ ಮೀರಿದುದು ಎಂದು ಹೇಗೆ ಹೇಳುವರು? ಅಚಿಂತ್ಯವು ನುಡಿಗೆಡೆಗೊಡದ ಘನ, ನಡೆಗೆಡೆಗೊಡದ ಘನದಲ್ಲಿ ಘನಕ್ಕೆ ಘನವಾಗಿದ್ದು ಶಬ್ದ ಮುಗ್ಧವಾದುದ ನೇನೆಂಬೆ? ಇದು ಅಹಂಕಾರ ರಹಿತರಾಗಿ ತನ್ನಂ ತಾನು ನೋಡುವುಡೆ ತನಗದು ವೇದ್ಯವು. ಇದು ಕಾರಣ ಅಹಂಕಾರ ರಹಿತರಾಗಲು ತತ್ವವೇತ್ತರಿಂದ ಸಾಧ್ಯ. ಅಕ್ರಿಯೆಯು ಕ್ರಿಯೆಯಿಂದ ಹೇಗೆ ಸಾಧ್ಯ. ಶ್ರವಣ, ಮನನ, ನಿಧಿಧ್ಯಾಸದ ಅಭಿಮಾನಿಗಳಿಗೂ ಅಸಾಧ್ಯ, ನೇರವಾಗಿ ತಾನಾರೆಂದು ತನ್ನಿಂದ ತನ್ನ ಅರಿತವರಿಗಿದು ಸಾಧ್ಯವೆಂದು ಬಸವರಸರು ಹೇಳಿದುದು.

**ವಚನ 5**

**ಮನದ ಕೊನೆಯ ಮೊನೆಯ ಮೇಲೆ**
**ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ,**
**ಆದಿವಿಡಿದು ಬಂದಾತನೆ ಭಕ್ತ.**
**ಅನಾದಿ ವಿಡಿದು ಬಂದಾತನೆ ಜಂಗಮ,**
**ಆದಿಗುರು, ಅನಾದಿ ಶಿಷ್ಯ.**
**ಈ ಉಭಯ ಕುಳ ಸ್ಥಳವ ಬಲ್ಲರೆ,**
**ಆತ ಲಿಂಗ ಸಂಬಂಧಿ ಕೂಡಲಸಂಗಮದೇವಾ. ॥ 803 ॥**

**ತಾತ್ಪರ್ಯ:** ಮನದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ: ಮನ ಆವುದು? ಮನದ ಕೊನೆ ಆವುದು? ಮನದ ಕೊನೆಯ ಮೊನೆ ಆವುದು? ಮನದ ಕೊನೆಯ ಮೊನೆಯ ಮೇಲೆ ಮನೆಯು ಆವುದು? ಆ ಮನೆಯ ಮಾಡಿಕೊಂಡಿಪ್ಪ ದಾಸೋಹಿ ಆರು?

ಮನ ಆವುದೆಂದಲ್ಲಿ, ಸಂಕಲ್ಪ ವಿಕಲ್ಪಕ್ಕೊಳಪಟ್ಟದು ಮನವೆನಿಸುವುದು. ಇಲ್ಲದುದ ಕಲ್ಪಿಸುವದೆ ಸಂಕಲ್ಪ. ಇದ್ದುದನರಿಯದಿಹುದು ವಿಕಲ್ಪ, ಇದು ಮನವೆಂದೆನಿಸುವದು. ಮನದ ಕೊನೆ ಆವುದು? ಇಲ್ಲದುದ ಕಲ್ಪಿಸುವ ಮನ ಯಾವಾಗ ನಷ್ಟವಾಗುವದು ಅದು ಮನದ ಕೊನೆ. ಎಲ್ಲಿಯವರೆಗೆ ಇದ್ದುದು ಅಂದು ಇದ್ದುದು ಇಂದು ಇದ್ದುದು, ಮುಂದೆ ಇದ್ದು ಎಂದೆಂದೂ ನಿರಂತರವಾಗಿದ್ದುದು ಅರಿಯುವದು ಆಗ ಇಲ್ಲದುದ ಕಲ್ಪಿಸುವ ಸಂಕಲ್ಪವಾಗುವದು ಅದು ಮನದ ಕೊನೆಯಾಗುವುದು.

ಮನದ ಕೊನೆಯ ಮೊನೆ ಆವುದೆಂದಲ್ಲಿ ಪ್ರವೃತ್ತಿ ಮನ ನಷ್ಟವಾಗಿ ನಿವೃತ್ತಿ ಮನವು ನಷ್ಟವಾಗಿ, ಆವುದು ಅಕಲ್ಪಿತ ಘನವಾಗಿದೆಯೊ, ಅದುವೆ ಮನದ ಕೊನೆಯ ಮೊನೆಯಾಗಿದೆ. ಅದು ಅಬಾಧಿತ ಮನ, ಸದ್‌ಜ್ಞಾನ ಭರಿತಮನ, ನಿಶ್ಚಿಂತ ಮನ, ಆ ಮನದ ಮೊನೆಯ ಮೇಲೆ ಮನೆ ಮಾಡಿಕೊಂಡಿಪ್ಪನೊಬ್ಬ ದಾಸೋಹಿ, ಮನದ ಕೊನೆಯ ಮೊನೆ ಎಂಬುದು ಪ್ರವೃತ್ತಿ, ನಿವೃತ್ತಿಗೆ ಮೀರಿದುದು, ಅದು ಅತೀತವು ಈ ಅತೀತವು ಈ ಅತೀತದ ಮೇಲೆ ಮನೆ ಮಾಡಿಕೊಂಡಿಪ್ಪನೊಬ್ಬ ದಾಸೋಹಿ. ಈ ಅಕಲ್ಪಿತ ಮನೆ, ಅಚಿಂತ್ಯ ಮನೆ ನಿಶ್ಚಿಂತವಾಗಿಹ ನಿರಾಳನ ಮನೆ, ಸತ್ಯಜ್ಞಾನಾನಂದವಾಗಿಹ ಮನೆ, ಅರುವಿನ ಮನೆ. ಈ ಮನೆಯಲ್ಲಿ ವಾಸಮಾಡಿಕೊಂಡಿಪ್ಪನೊಬ್ಬ ದಾಸೋಹಿ.

ಇದು ದಾಸೋಹಿಗಳ ಮನೆ, ಬಸವರಸರ ಮಹಾನುಭವದ ಮನೆ, ಶರಣ ಶರಣಿಯರ ಮನೆ ಅಖಂಡ ಮನೆ, ಭರಿತ ಭಾವದವರ ಮನೆಯಾದುದರಿಂದ ಬಸವಣ್ಣನವರು ಮರಳು ತಲೆ ಹುರುಳು ತಲೆ ನೀನೆ ದೇವಾ, ಹೆಂಗೂಸು ಗಂಡು ಗೂಸು ನೀನೆ ದೇವಾ ಎಮ್ಮಕ್ಕನ ಗಂಡ ನೀನೆ ದೇವಾ ಭ್ರಾಂತಳಿದು ಭಾವ ನೆಲೆಗೊಂಡಿತ್ತಾಗಿ ಕೂಡಲ ಸಂಗಮದೇವಾ.

ದಾಸೋಹಿ, ಜ್ಞಾನದಾಸೋಹಿ, ಸ್ವಾನುಭವ ದಾಸೋಹಿ, ಇದು ದೇವನ

ನಿಜನಿವಾಸದ ಮನೆ, ಸಕಳ ನಿಃಕಳ ದೇವನಾಗಿ ಕಂಡ ಮನೆ, ಪ್ರಕೃತಿ ಪುರುಷರೆಂದೆಣಿಸದ ಮನೆ, ಪುರುಷೋತ್ತಮನ ಮನೆ, ಇಲ್ಲಿ ವ್ಯಕ್ತನು ದೇವನೆ, ಅವ್ಯಕ್ತನು ದೇವನೆ. ಘಟ್ಟಿದುಪ್ಪವು ತುಪ್ಪವೆ, ತಿಳಿದುಪ್ಪವು ತುಪ್ಪವೆ. ಸಾವಯವ ಅದುವೆ, ನಿರವಯ ಅದುವೆ ಇದ್ದುದದುವೆ, ಇಲ್ಲದುದು ಇಲ್ಲವೆ ಇಲ್ಲವಾದುದರಿಂದ, ಇದ್ದ ಘನವು ನಿರಂತರವು ನಿಸ್ಸೀಮವು, ನಿಜಧಾಮವು, ಇಲ್ಲಿ ಭ್ರಾಂತಳಿದು ಭಾವ ನೆಲೆಗೊಂಡವರ ಮನೆ, ಕ್ಷರಾಕ್ಷರ ಕಾಣದವರ ಮನೆ, ಮರುವರುವಿಂಗೆ ಇಂಬುಗೊಡದವರ ಮನೆ, ಅಖಂಡೈಕರಸದ ಮನೆ, ಪೂರ್ಣಮಿದಃ ಪೂರ್ಣಮಿದಂ ದೃಷ್ಟಿಯವರ ಮನೆ, ಇಂತಪ್ಪ ಮನೆಯಲ್ಲಿ ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ, ಈತ ಮಹಾ ದಾಸೋಹಿ.

ಮಹಾ ದಾಸೋಹಿಗಳೆಂಬುದು, ಜ್ಞಾನದಾಸೋಹಿ, ಸುಜ್ಞಾನ ದಾಸೋಹಿ, ನಿಶ್ಚಿಂತ ದಾಸೋಹಿ, ಲಿಂಗ ಒಂದಾಗಿರ್ದ ಜಂಗಮ ದಾಸೋಹಿಗಳು ಶರಣರು ಶರಣೆಯರು. ಇವರುಗಳ ಎರಡೆಂಭತ್ತು ಕೋಟಿ ವಚನಂಗಳೆ ದಾಸೋಹದಲ್ಲಿ ಉಣಬಡಿಸಿದ ವಚನಾಮೃತ. ಜ್ಞಾನಾಮೃತ. ಪರಮಾಮೃತದ ದಾಸೋಹಿಗಳಲ್ಲಿ ಪ್ರಮುಖರೆಂದರೆ ಪ್ರಭುದೇವ, ಚೆನ್ನಬಸವರಾಜದೇವ, ಬಸವರಾಜದೇವ, ಮರುಳ ಶಂಕರದೇವ, ಸಿದ್ಧರಾಮೇಶ್ವರ, ಅಕ್ಕಮಹಾದೇವಿ, ನೀಲಾಂಬಿಕೆ, ಗಂಗಾಂಬಿಕೆ, ಮಹಾದೇವಮ್ಮ, ಲಕ್ಕಮ್ಮ, ಹಡಪದಪ್ಪಣ್ಣ, ಕಿನ್ನರಿಬೊಮ್ಮ ಯ್ಯ, ಮಡಿವಾಳ ಮಾಚಿದೇವ, ಲಿಂಗಮ್ಮ ಮುಕ್ತಾಯಕ್ಕ, ಮೋಳಿಗೆಯ ಮಾರಯ್ಯ, ಅಂಬಿಗರ ಚೌಡಯ್ಯ ಇನ್ನು ಅನೇಕ ಪ್ರಮುಖರಿರುವರು. ಅವರ ಹೆಸರು ವಚನ ಸಾಹಿತ್ಯದಲ್ಲಿ ನೋಡಿಕೊಳ್ಳಬಹುದು.

ಆದಿವಿಡಿದು ಬಂದಾತನೆ ಭಕ್ತ: ಕುರುಹು ವಿಡಿದು ಬಂದಾತ ಭಕ್ತ. ಇದು ಗುರು ಕಾರುಣ್ಯದ ಕುರುಹು. ನಿರೂಪದ ಕುರುಹು, ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವ ತಂದು ಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ, ಅನುಪಮ ಲಿಂಗವಿಡಿದು ಬಂದಾತ ಭಕ್ತ. ಪರಮ ಸತ್ಯವಿಡಿದು ಬಂದಾತ ಭಕ್ತ. ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಲಿಂಗವಿಡಿದು ಬಂದಾತ ಭಕ್ತ, ಅಚಲಿತವಿಡಿದು ಬಂದಾತ ಭಕ್ತ, ಮೂಲವಿಡಿದು ಬಂದಾತ ಭಕ್ತ, ಮೂಲವೆ ಆಗಿಹ ಭಕ್ತ.

ಭಕ್ತನಿಗೆ ಉತ್ಪತ್ತಿ ಸ್ಥಿತಿ ಇಲ್ಲವಾಗಿ, ಲಯವಿಲ್ಲ, ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿರ್ಪ ಗುಹೇಶ್ವರ. ನಿಮ್ಮ ಶರಣ ಕಲ್ಪಿತ ಪುರುಷನಾದಲ್ಲಿ ಅವನಿಗೆ ಉತ್ಪತ್ತಿ, ಸ್ಥಿತಿ, ಲಯ ಉಂಟು. ಶರಣ ಅಕಲ್ಪಿತ ಘನನಾದುದರಿಂದ ಮುನ್ನೆಲ್ಲಿಂದ ಬಂದ ಅಲ್ಲಿಗೆ ಹೋಗಿ ಅದುವೆ ಆಗಿಹ ಘನಕ್ಕೆ ಘನ. ಮುನ್ನ ಅಕಲ್ಪಿತ ಘನದಿಂದ ಬಂದು ಪುನಃ ತಾನಾರೆಂದು ಅರಿಯಹೋದುದೆ ಅಲ್ಲಿಗೆ ಹೋಗಿ ಅದುವೆ ಆಗಿಹ ಶರಣ. ಇದ್ದಕ್ಕಿದ್ದಂತಿದ್ದ ಮಹಾಘನ. ಈ ಮಹದರುವುಳ್ಳ ಮಹಾನುಭವಿಯೆ ಆದಿವಿಡಿದು ಬಂದಾತ ಭಕ್ತನೆಂದು ಹೇಳಿಹರು.

ಅನಾದಿವಿಡಿದು ಬಂದಾತ ಜಂಗಮ: ಅನಾಮಯವಾಗಿರುವ ನಿರ್ವಾಣವಿಡಿದು ಬಂದಾತ ಜಂಗಮ, ಶಬ್ದಮುಗ್ಧವಾದುದ ವಿಡಿದು ಬಂದಾತ

ಜಂಗಮ, ನಿಶಬ್ದವೇದ ವಿಡಿದು ಬಂದಾತ ಜಂಗಮ, ಅರುವಿನ ಅರುವಿಡಿದು ಬಂದಾತ ಜಂಗಮ. ಈ ಮಹಾಂತ ನಿರಾಲಂಬ ಜಂಗಮ, ನಿಸ್ಸೀಮ ಜಂಗಮ, ನಿರ್ನಾಮ ಜಂಗಮ, ನಿರ್ಲಿಖಿತ ಜಂಗಮನಾದುದರಿಂದ ನಿಜೈಕ್ಯ ಜಂಗಮ.

ಈ ಘನ ಮಹಿಮನಿಗೆ ಮೂಲ ಆವುದು ಅಮೂಲ ಆವುದು? ನಿಸ್ಸೀಮನಿಗೆ ಮೊದಲಾವುದು ಕೊನೆ ಆವುದು? ಆದಿ, ಮಧ್ಯ, ಅಂತ್ಯ ಕಾಣದ ಮಹಾಂತನಾದುದರಿಂದ ಅನಾದಿವಿಡಿದು ಬಂದಾತ ಜಂಗಮನೆಂದು ಹೇಳಿಹರು. ಈ ಸ್ವಮಹಿಮನು ಅಚಿಂತ್ಯವಿಡಿದು ಬಂದವನಾದುದರಿಂದ ಅರಿಯದರವು ವಿಡಿದು ಬಂದಾತ. ಅರಿಯದರುವೆ ತಾನಾಗಿಹ ಘನ, ಆವುವಾದನ್ನು ಅರಿಯಲಿಲ್ಲದ ಅರುವೆ ತನ್ನಿರುವು ಆಗಿಹ ಮಹಾಮಹಿಮನೆಂದು ಹೇಳಿದುದು.

ಆದಿ ಗುರು ಅನಾದಿ ಶಿಷ್ಯ, ಈ ಉಭಯ ಕುಳಸ್ಥಳವ ಬಲ್ಲರೆ ಆತ ಲಿಂಗಸಂಬಂಧಿ ಕಾಣಾ ಕೂಡಲ ಸಂಗಮದೇವಾ: ಲಿಂಗ ಸಂಬಂಧಿಗಳೆಂದರೆ, ಆದಿ ಗುರು, ಅನಾದಿ ಶಿಷ್ಯ. ಈ ಉಭಯದ ಕುಳಸ್ಥಳವರಿತವರು. ಆದಿಗುರು ಎಂದರೆ ಬೋಧವ ಕಾಣದವನು, ಅಬೋಧವ ಕಾಣದವನು, ಬೋಧಾ ಬೋಧಗಳ ಮಿಶ್ರವ ಕಾಣದವನು, ಕಾಣದುದ ಕಂಡ ಸಹಜ ಅಜ, ಅಚಿಂತ್ಯನಾದವನೆ ಆದಿ ಗುರು ಸಹಜ ಅಜ ಅಚಿಂತ್ಯತ್ವ ಒಂದನುವ ಮಾಡಿ ಕರುಣಿಸುವ ಕಾರುಣ್ಯಮಯನೆ ಆದಿಗುರು ಎಂಬ ಸಂಬೋಧವ ಮಾಡಿಹರು.

ಅನಾದಿ ಶಿಷ್ಯ, ಗುರು ಘನವ ತಿಳಿದು ಗುರುವಿಂಗೆ ಗುರುವಾದ ಸುಜ್ಞಾನವೆ ಅನಾದಿ ಶಿಷ್ಯನೆಂದು ಹೇಳಿದೆ. ಆನು ಮಾಡಲು ಗುರುವಾದನಲ್ಲದೆ, ಗುರು ಮಾಡಲು ಆನಾದೆನೆ? ಗುರು ಮಾಡಲು ಲಿಂಗವಾಯಿತ್ತಲ್ಲದೆ ಲಿಂಗಮಾಡಲು ಗುರುವಾದನೆ? ಈ ಉಭಯ ಕುಳಸ್ಥಳದರಿವು ಕೂಡಲಚೆನ್ನಸಂಗಮದೇವಾ ನಿಮ್ಮ ಶರಣಬಲ್ಲ.

ಅನಾದಿ ಶಿಷ್ಯನು ಮಾಡಿದಾಗ ಗುರುವಾಗಿಹನು. ಗುರುಘನನನ್ನು ಮಾಡಿದುದು ಅನಾದಿ ಶಿಷ್ಯ. ಈ ಪರಮ ಶಿಷ್ಯನನ್ನು ಆರು ಮಾಡಿರುವದಿಲ್ಲ. ಪೂರ್ವಿಕ ಗುರು, ಅಪೂರ್ವಿಕ ಶಿಷ್ಯ, ಅಪೂರ್ವಿಕ ಶಿಷ್ಯ ಮಾಡಿದಲ್ಲಿ, ಗುರು ಘನನು ಆದುದರಿಂದ ಪೂರ್ವಿಕ ಗುರು, ಕ್ರಿಯೆ ಗುರು, ಅಕ್ರಿಯೆ ಶಿಷ್ಯ, ಅಕ್ರಿಯೆ ಗುರು, ಕ್ರಿಯೆ ಲಿಂಗ, ಅಕ್ರಿಯೆಯೆ ಅನಾದಿ, ಕ್ರಿಯೆ ಆದಿ.

ಅನಾದಿ ಶಿಷ್ಯನೆಂಬುದು ಅದಿಷ್ಠಾನ, ಶಬ್ದ ಮುಗ್ಧ ಶಿಷ್ಯ. ನಿಃಶಬ್ದವೇದಿ ಗುರು ನಿಷ್ಕಲಲಿಂಗ ಆವುದು ಮುಂದು ಆವುದು ಹಿಂದು ಅನುಪಮದೋಳ್ ಉಪಮೆಗಿಂಬಿಲ್ಲ.

**ವಚನ 6**

**ಸ್ಥಾವರ ಜಂಗಮವೆಂಬುಭಯ ಪಕ್ಷ ಒಂದೆ,**
**ಆವ ಮುಖದಲ್ಲಿ ಬಂದರೂ ತೃಪ್ತಿ ಒಂದೆ**
**ಕೂಡಲ ಸಂಗಮದೇವರ ಆಪ್ಯಾಯನ ಒಂದೆ. ॥ 805 ॥**

**ತಾತ್ಪರ್ಯ:** ಸ್ಥಾವರ, ಜಂಗಮವೆಂಬುಭಯ ಪಕ್ಷ ಒಂದೆ, ಲಿಂಗವರಿಯದ ಅಂಗಬುದ್ಧಿಯವರಿಗೆ ಸ್ಥಾವರ ಬೇರೆ ಜಂಗಮ ಬೇರೆಂಬ ಭೇದಾಕಾರವಾಗಿ

ಕಾಣುವದು. ಒಂದು ಜಡ, ಮತ್ತೊಂದು ಚೇತನ, ಹೀಗೆ ದ್ವಿವಿಧ ದೃಷ್ಟಿಯಲ್ಲಿ ನೋಡುವ ಪಕ್ಷ ಭೇದಪಕ್ಷ. ಈ ಪಕ್ಷದವರು ಹೆಚ್ಚು ಜನ ಶಿಕ್ಕುವರು. ಇವರು ತಮ್ಮ ತಾವರಿಯದವರು, ಲಿಂಗವರಿಯದವರು, ಲಿಂಗವರಿತ ಲಿಂಗಾಂಗಿಗೆ ಸ್ಥಾವರ ತಾನೆ ಜಂಗಮವು ತಾನೆ. ಲಿಂಗವು ನೆಲಿಸಿ ಲಿಂಗವೆನಿಸಿತ್ತಯ್ಯ. ಚರಿಸಿ ಜಂಗಮವೆನಿಸಿತ್ತಯ್ಯ ಲಿಂಗ ಆವ ಮುಖದಲ್ಲಿ ಕಂಡರೂ ಲಿಂಗವೆ, ವ್ಯಕ್ತವಾಗಿ ಕಂಡರೂ ಅದುವೆ, ಅವ್ಯಕ್ತವಾಗಿ ಕಂಡರೂ ಅದುವೆ, ಅಂದು ಇಂದು ಎಂದೆಂದೂ ಇದ್ದುದು. ಇದು ಭೂತ, ಭವಿಷತ್, ವರ್ತಮಾನ, ಭಾವಿ ಕಾಲದಲ್ಲಿ ಇದ್ದುದು. ಇದು ಇಲ್ಲದ ಸಮಯದಲ್ಲಿ ಉದಯಾಸ್ತಗಳೆನ್ನದೆ ಇದ್ದುದು, ಇದು ಅಸ್ತಿ ಭಾತಿರೂಪದಿಂದ ನಿರಂತವಾಗಿದ್ದುದು. ಅರಿವುಡೆ ತಾನೆ, ತನ್ನ ದಿವ್ಯದೃಷ್ಟಿಗೆ ಅಹುದಾದುದಿಲ್ಲ, ಅಲ್ಲಾದುದಿಲ್ಲ.

ಗುರುವಿಂದಾಯಿತ್ತೆಂಬೆನೆ ಗುರುವಿಂದಾಗದು, ಲಿಂಗದಿಂದಾಯಿತ್ತೆಂಬೆನೆ ಲಿಂಗದಿಂದಾಗದು. ಜಂಗಮದಿಂದಾಯಿತ್ತೆಂಬೆನೆ ಜಂಗಮದಿಂದಾಗದು, ಪಾದೋದಕದಿಂದಾಯಿತ್ತೆಂಬೆನೆ ಪಾದೋದಕದಿಂದಾಗದು. ಪ್ರಸಾದದಿಂದಾಯಿತ್ತೆಂಬೆನೆ ಪ್ರಸಾದದಿಂದಾಗದು ತನ್ನಿಂದಹುದು ತನ್ನಿಂದ ಹೋಹುದು ಕಾಣಾ ಕೂಡಲಚೆನ್ನಸಂಗಮದೇವಾ.

ಲಿಂಗದೃಷ್ಟಿ, ನಿಸ್ಸೀಮ ದೃಷ್ಟಿ, ತಾನಾರೆಂದರಿತ ತನ್ನ ದೃಷ್ಟಿ. ಇದು ಗುರುವಿನಿಂದ ಬಂದುದಲ್ಲ ಲಿಂಗದಿಂದ ಬಂದುದಲ್ಲ ಜಂಗಮದಿಂದ ಬಂದುದಲ್ಲ. ಅನುಸಂದಾನದಿಂದ ಬಂದುದಲ್ಲ, ಎರವಲವಾಗಿ ಬಂದ ಜ್ಞಾನದಿಂದಲೂ ಅಲ್ಲ. ಇದು ಸ್ವಯಮೇವ ಜ್ಞಾನದಿಂದ ಅಹುದು. ಹೆತ್ತರಿವು ಎಂಬುದು ಇಲ್ಲವಾಗುವುಡೆ, ಸ್ಥಾವರ, ಜಂಗಮವೆಂಬುಭಯ ಪಕ್ಷ ಒಂದೆ.

ಆವ ಮುಖದಲ್ಲಿ ಬಂದರು ತೃಪ್ತಿ ಒಂದೆ. ಗುರು ಮುಖವಾದರೂ ತನ್ನ ಮುಖವೆ, ಲಿಂಗಮುಖವಾದರೂ ತನ್ನ ಮುಖವೆ, ಜಂಗಮ ಮುಖವಾದರೂ ತನ್ನ ಮುಖವೆ, ಪಾದೋದಕ ಮುಖ ಪ್ರಸಾದ ಮುಖವಾದರೂ ತನ್ನ ಮುಖವೆ, ತನ್ನದು ಪೂರ್ಣ ಮುಖ, ಪೂರ್ಣ ಮದಃ ಪೂರ್ಣಮಿದಂ ಮುಖ ಅಖಂಡಮುಖ ಪರಾನಂದ ರೂಪಿ ಪರಮಾಮೃತವಾದುದರಿಂದ ತೃಪ್ತರೂಪ ತೃಪ್ತಿ, ಇದು ಕಾರಣ ತೃಪ್ತಿ ಒಂದೆ ಎಂದು ಹೇಳಿದ್ದಾರೆ.

ತನ್ನದು ನಿರಂತರ ತೃಪ್ತಿರೂಪ ತೃಪ್ತಿ, ತಾನು ಮಂಗಳಮಯ, ತನಗೆ ತೋರುವುದೆಲ್ಲ ತಾನೇ ಸ್ಥಾವರವು ಮಂಗಳಮಯವು, ಜಂಗಮವು ಮಂಗಳಮಯವು. ಸತ್ತುದು ಮಂಗಳಮಯ, ಬದುಕಿದುದು ಮಂಗಳಮಯವಾದುದರಿಂದ ಆಪ್ಯಾಯನ ಒಂದೆ ಎಂದು ಹೇಳಿಹರು. ಸ್ಥಾವರವು ಲಿಂಗಪ್ರಸಾದ, ಜಂಗಮವು ಲಿಂಗಪ್ರಸಾದ ಪ್ರಸಾದವೆಂಬುದು ತೆರಹಿಲ್ಲದ ಜ್ಞಾನಪ್ರಸಾದ, ಜ್ಞಾನಾಮೃತ, ಅಖಂಡಿತವಾಗಿಹ ಘನವು ಜ್ಞಾನಾನಂದ, ಪರಮಾನಂದ, ಇದು ಪರಮಾಮೃತವಾದುದರಿಂದ ಕೂಡಲಸಂಗಮದೇವರ ಆಪ್ಯಾಯನ ಒಂದೆ ಎಂದು ಹೇಳಿಹರು.

ಎರಡೊಂದಾದವಂಗೆ ಅರ್ಪಿತವಿಲ್ಲ ಅರ್ಚನೆಯಿಲ್ಲ ಅವಧಾನವಿಲ್ಲ, ಶಬ್ದಕ್ಕೆ

ತೆರಹಿಲ್ಲ ಗುಹೇಶ್ವರ. ಎರಡೊಂದಾದವರು ಯಾರು? ಎರಡೊಂದಾಗದವರು ಯಾರು? ಎರಡೊಂದಾಗದವರು ಇವರು ದ್ವಿವಿಧ ದೃಷ್ಟಿಯುಳ್ಳವರು, ಭೇದ ಜ್ಞಾನಿಗಳು ಮರವುಳ್ಳವರು ಸ್ಥಾವರವ ತಿಳಿಯದವರು ಜಂಗಮವ ತಿಳಿಯದವರು, ಗುರುಗಳ ಕಾಣದವರು, ಅವರಿಂದ ಮಹಾವಾಕ್ಯ ಕೇಳದವರು ಅಂಗವ ತಿಳಿಯದವರು, ಲಿಂಗವ ತಿಳಿಯದವರು, ಜೀವನೆಂಬುದ ತಿಳಿಯದವರು, ಶಿವೆರೆಂಬುದ ತಿಳಯದವರು ಅವಿದ್ಯೆಯ ತಿಳಿಯದವರು, ವಿದ್ಯೆಯ ತಿಳಿಯದವರು, ತಾನಾರೆಂದು ತಿಳಿಯದವರು, ಇವರದು ಲಿಂಗಾಂಗ ಸಮರಸ ಜ್ಞಾನದಿಂದ ದೂರಾದ ದೃಷ್ಟಿ, ಇದುವೆ ಲೋಕದ ದೃಷ್ಟಿ, ಅಜ್ಞದೃಷ್ಟಿ, ಇಲ್ಲಿ ಸತ್ತುದು ನಿಶ್ಚಿಯ, ಬದುಕಿದುದು ನಿಶ್ಚಯ, ಹುಟ್ಟಿದುದು ನಿಶ್ಚಿಯವಾಗಿ ಅರುವಿನ ಅರುವು ದೂರಾಯಿತ್ತು, ಮಾಯಿಕ ಮುಖವೆ ಸಿದ್ಧವಾಯಿತ್ತು ಕೂಡಲ ಸಂಗಮದೇವರ ಆಪ್ಯಾಯನ ಕಾಣದಾಯಿತ್ತು.

ಎರಡೊಂದಾದವರು ಇವರು ಶರಣರು, ತಮ್ಮ ತಾವರಿತವರು ಲಿಂಗವರಿತವರು, ಸ್ಥಾವರ ಜಂಗಮ ಪಕ್ಷ ಒಂದೆ ಆಗಿ ತಿರುವು ಮುರುವು ಆಯಿತ್ತು. ಸ್ಥಾವರವಾವುದೊ? ಜಂಗಮವಾವುದೊ ಲಿಂಗವಾವುದೊ? ಗುರುವಾವುದೋ ಶಿಷ್ಯನಾವುದೊ ಭಕ್ತನಾರೋ ಜಂಗಮನಾರೋ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಘನವಂತ, ಎರಡೊಂದಾದ ನಿಲುವು, ಅಲ್ಲಿ ಅರ್ಪಿತವಿಲ್ಲ ಅರ್ಚನೆಯಿಲ್ಲ. ಅರುವು ಅರುವು ಎಂಬ ಎತ್ತರವಿಲ್ಲ, ಎಚ್ಚರದ ಎಚ್ಚರವಾದವಂಗೆ ಮರವಾವುದು ಅರುವು ಆವುದು? ಅರಿಯದರುವು ತಾನಾಗಿಹ ಮಹಾಂತನಲ್ಲಿ ಶಬ್ದಕ್ಕೆ ತೆರಹಿಲ್ಲವಾದ್ದರಿಂದ ಕೂಡಲ ಸಂಗಮದೇವರ ಆಪ್ಯಾಯನ ಒಂದೆ ಗುರು ಎಂದು ಹೇಳಿಹರು.

**ವಚನ 7**

**ಮನವಂಚನೆಯೆ ಅನ್ಯಲಿಂಗಾರ್ಚನೆ,**
**ಅದು ನಿಜವಲ್ಲ, ನಿಜವಲ್ಲ,**
**ಕೂಡಲಸಂಗಮದೇವಾ**
**ಮನದಂತರ್ಯಾಮಿ ತಾನಾಗಿ ॥ 811 ॥**

ತಾತ್ಪರ್ಯ: ಮನವಂಚನೆಯೆ ಅನ್ಯಲಿಂಗಾರ್ಚನೆ, ಅದು ನಿಜವಲ್ಲ. ನಿಜವಲ್ಲ. ಈ ವಂಚನ ಮನವೆ ಜಗವಾಗಿಹುದು. ಜಗದೊಡೆಯರ ಮಾಡಿಹುದು, ಜೀವರ ಕಲ್ಪಿಸಿದಿದುವೆ, ಶಿವನ ಕಲ್ಪಿಸಿದಿದುವೆ ಪರಮಾತ್ಮನ ಮಾಯಿಕ ಇದುವೆ.

ವಂಚನ ಮನ ಆವುದು ಗೊತ್ತೆ! ಇಲ್ಲದುದ ಕಲ್ಪಿಸುವ ಮನ, ಇಲ್ಲದುದುಂಟುಮಾಡುವ ಮನ ಇದ್ದುದನರಿಯದಿಹ ಮನ ಇದು ಇದ್ದಲಿಂಗವನರಿಯಲಿಲ್ಲ, ಇಲ್ಲದುದುಂಟು ಮಾಡದೆ ಬಿಡಲಿಲ್ಲ, ದಿಟವ ಮರೆಯಿಸಿ ಸಟೆಯ ಕಲ್ಪಿಸಿದ ಮನ, ಸಟೆಯ ದಿಟ ಮಾಡಿಹ ಮನ, ಇದುವೆ ಮನ ವಂಚನೆ ಇದರಿಂದ ಅನ್ಯಲಿಂಗಾರ್ಚನೆ. ಅರುವ ಅರಿಯ ಹೇಳಿ ಗುರುವ ಕುರುಹ ಕೈಯಲ್ಲಿ ಕೊಟ್ಟನಲ್ಲದೆ ಅರುವನ್ನೇ ಮರೆತು ಕುರುಹ ಪೂಜಿಸುವ ವಂಚನ ಮನ ಆವುದು

ಗೊತ್ತೆ! ಇದು ಇದ್ದ ಲಿಂಗವ ನರಿಯಲಿಲ್ಲ ಇಲ್ಲದುದುಂಟು ಮಾಡದೆ ಬಿಡಲಿಲ್ಲ. ದಿಟವ ಮರೆಯಿಸಿ ಸಟೆಯ ಕಲ್ಪಿಸಿದ ಮನ ಸಟೆಯೆ ದಿಟ ಮಾಡಿಹ ಮನ ಇದುವೆ ಮನವಂಚನ, ಇದರಿಂದ ಅನ್ಯಲಿಂಗಾರ್ಚನೆ.

ಅರುವ ಅರಿಯ ಹೇಳಿ ಗುರು ಕುರುಹ ಕೈಯಲ್ಲಿ ಕೊಟ್ಟನಲ್ಲದೆ ಅರುವನೆ ಮರೆತು ಕುರುಹ ಪೂಜಿಸುವ ನರ ಕುರಿಗಳನೇನೆಂಬೆ ಕೂಡಲಚೆನ್ನಸಂಗಮದೇವಾ. ಇದುವೆ ಮನ ವಂಚನೆ, ಗುರು ಆಜ್ಞೆಯ ಮರೆತ ವಂಚನೆ ಮನ, ಅರುವ ಅರಿಯ ಹೇಳಿ ಕುರುಹ ಕೈಯಲ್ಲಿ ಕೊಟ್ಟ ವೇದ ವೇದಾಂತಗಳಿಗಸಾಧ್ಯವಾಗಿಹ ಅನುಪಮಲಿಂಗ, ಈ ಘನ ಲಿಂಗವರಿಯದೆ ಕುರುಹ ಮಾಡಿತೆ? ಇದೆಂಥ ಕುರುಹ ಮನ, ನಿರೂಪವ ರೂಪ ಮಾಡಿತೆ? ನಿರವಯ ಅವಯವ ಮಾಡಿತೆ? ಅನುಪಮ ಲಿಂಗ ಇಷ್ಟಲಿಂಗವ ಮಾಡಿತೆ? ಪೂಜಾಲಿಂಗವ ಮಾಡಿತೆ? ನೆನಹಿಂಗೊಳಪಟ್ಟ ಲಿಂಗವ ಮಾಡಿತೆ? ಭಾವಕ್ಕೊಳಪಟ್ಟ ಲಿಂಗವ ಮಾಡಿ, ತಾನು ಅರ್ಚಿಸುವ ಮನವಾಯಿತೆ? ಅದನ್ನು ಪೂಜ್ಯನನ್ನು ಮಾಡಿ, ತಾನು ಪೂಜಿಸುವ ಪೂಜಕವಾಯಿತೆ? ಲಿಂಗಯ್ಯನನ್ನು ದೇವನ ಮಾಡಿ ತಾನು ಭಕ್ತನಾಯಿತೆ? ಅವನನ್ನು ಬೇಡಿದ ಫಲಪದಗಳನ್ನೀಯುವ ಸರ್ವಜ್ಞ, ಸರ್ವಶಕ್ತಿ, ಯುಕ್ತನಾದ ಸಮರ್ಥನ ಮಾಡಿ, ತಾನು ದೇವನಿಂದ ಅಷ್ಟೈಶ್ವರ್ಯಭೋಗ, ಬ್ರಹ್ಮ ಪದವಿ ವಿಷ್ಣು ಪದವಿ, ರುದ್ರಪದವಿಗಳ ಪಡೆಯಲು ವಂಚನ ಮನದ ಲಿಂಗಾರ್ಚನೆಂಬುದಾಯಿತೆ? ಈ ಲಿಂಗಾರ್ಚನೆಂಬ ವೀರಶೈವರ ದಿಟಲಿಂಗಾರ್ಚನೆಯಾಯಿತೇ? ಅರುವ ಅರಿಯ ಹೇಳಿದ ಅನುಪಮ ಲಿಂಗ ಪೂಜಾಲಿಂಗವಾಗಿ, ಲಿಂಗಾರ್ಚನೆಯೆ ದಿಟವಾಯಿತಲ್ಲ, ಇದೆಂಥ ವಂಚನ ಮನದಾಟ, ಬಹು ವೀರಶೈವರ ಹೃದಯದಲ್ಲಿ ಇದರ ಆಡಳಿತವೆ ಮುಂದುವರಿಯಿತಲ್ಲ. ಭಕ್ತರು ಇದರ ವಿಚಾರ ಮಾಡಲೊಲ್ಲರು, ಮಹೇಶ್ವರರಾದವರು ಇದರ ವಿಚಾರ ಮಾಡಲೊಲ್ಲರು, ಲಿಂಗಯ್ಯ ಪೂಜೆಗೆ ಒಳಪಟ್ಟನೆ?

ಆರು ಕೋಟಿ ಬ್ರಹ್ಮರು ಮಡಿವಲ್ಲಿ ನಾರಾಯಣಂಗೊಂದು ದಿನವಾಯಿತ್ತು. ನಾರಾಯಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು. ಹಲವು ರುದ್ರಾವತಾರವಳಿದಲ್ಲಿ ಕೂಡಲಸಂಗಮದೇವ ಏನೊಂದು ಅರಿಯದೆ ಇದ್ದನು.

ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗ ಕೂಡಲಚೆನ್ನಸಂಗಯ್ಯ ಏನೊಂದು ಅರಿಯದೆ ಇದ್ದ ಘನಲಿಂಗ ಕೊಡಕೊಳ್ಳವು ವ್ಯವಹಾರಿಕ ಲಿಂಗವಾಯಿತೆ? ವ್ಯವಹಾರಿಕ ಲಿಂಗ ಮಾಡಿದುದು ಮನವಂಚನೆ, ಈ ವಂಚನ ಮನವೆ ಅನುಪಮಲಿಂಗವ ಉಪಮೆಗೊಳಪಟ್ಟ ಲಿಂಗವ ಮಾಡಿತ್ತು. ಲಿಂಗರೂಪವ ಮಾಡಿತಲ್ಲದೆ ನಿರೂಪ ಮಾಡಲಿಲ್ಲ. ಲಿಂಗದ ತನುವ ಕಂಡಿತಲ್ಲದೆ ಸ್ವರೂಪವ ಕಾಣಲಿಲ್ಲ. ಆಚಾರವ ಕಂಡಿತಲ್ಲದೆ ವಿಚಾರವ ಕಾಣಲಿಲ್ಲ. ಸದ್ಗುರು ಕರುಣಿಸಿದ ಅನುಪಮ ಲಿಂಗ ಕರಕಮಲದಲ್ಲಿದ್ದರೂ ಆ ಲಿಂಗ ಘನವ ಕೂಡಲರಿಯದೆ ಕೆಟ್ಟಿತ್ತು. ಇದುವೆ ಮನವಂಚನೆ, ಇದು ಕಾರಣ ಇದರಿಂದಾದ ಪೂಜೆ ಎಲ್ಲ ಅನ್ಯಲಿಂಗಾರ್ಚನೆಯಾಯಿತ್ತು. ಈ ಅನ್ಯಲಿಂಗಾರ್ಚನೆಗೆ ಮಡಿ ನೀರು, ಭಸ್ಮ, ಧೂಪ, ದೀಪ, ನೈವೇದ್ಯ, ಪತ್ರಿ, ಪುಷ್ಪ ಮಂತ್ರಗಳು

ಪ್ರಧಾನವಾದವಲ್ಲದೆ ಮನದೊಳಿದ್ದ ವಂಚನೆ ಅಧಿಕವಾಯಿತಲ್ಲದೆ ವೇದವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವರಿಯಲಿಲ್ಲ. ಮನವು ಲಿಂಗದೊಳ್ ಸಮರಸವಾಗಲಿಲ್ಲ, ಅಕಲ್ಪಿತ ಘನವಾಗಲಿಲ್ಲ, ಮನವು ಎಲ್ಲಿಯುವರೆಗೆ ಸುಜ್ಞಾನದಿಂದುಕ್ತವಾಗುವುದಿಲ್ಲ ಅಲ್ಲಿಯವರೆಗೆ ಲಿಂಗದ ರಹಸ್ಯವ ತಿಳಿಯುವದಿಲ್ಲ. ಅಲ್ಲಿಯವರೆಗೆ ಮನ ವಂಚನೆಯುಳ್ಳದು. ಈ ಮನದಿಂದಾದುದು ಅನ್ಯಲಿಂಗಾರ್ಚನೆ ಎಂದು ತಿಳಿಯುವದು.

ಅನ್ಯ ಲಿಂಗಾರ್ಚನೆ ಮರುವಿನ ಲಿಂಗಾರ್ಚನೆ ಗುರು ಕಾರುಣ್ಯವ ಮರೆದ ಲಿಂಗಾರ್ಚನೆಯಾದುದರಿಂದ ಲಿಂಗವ ತಿಳಿಯದು, ಗುರು ಘನವ ತಿಳಿಯದು ವಂಚನ ಮನವೇನೆಂಬುದ ತಿಳಿಯದು ತಿಳಿಯದ್ದರಿಂದ ತಾನು ಬೇರೆ, ಜಗವು ಬೇರೆ, ಅಂಗವು ಬೇರೆ ಸ್ಥಾವರ ಬೇರೆ, ಪ್ರಕೃತಿ ಬೇರೆ, ಪುರುಷ ಬೇರೆ, ಅಜ್ಞಾನ ಬೇರೆ, ಜ್ಞಾನ ಬೇರೆ, ನಿತ್ಯ ಬೇರೆ, ಅನಿತ್ಯ ಬೇರೆ, ಸತ್ ಬೇರೆ, ಅಸತ್ ಬೇರೆ, ಚಿತ್ ಬೇರೆ, ಅಚಿತ್ ಬೇರೆ, ಆನಂದ ಬೇರೆ, ನಿರಾನಂದ ಬೇರೆ ಎಂಬ ವಿಭಾಗ ದೃಷ್ಟಿಯುಳ್ಳದ್ದು ಆಯಿತಲ್ಲದೆ ಲಿಂಗವರಿಯ ಹೋಗಲಿಲ್ಲ. ಲಿಂಗವರಿಯಹೋದಲ್ಲಿ ಮನವು ಲಿಂಗವಾಗಿಹುದುದಲ್ಲದೆ ಅನ್ಯವಲ್ಲ, ಅಧಿಷ್ಠಾನದಲ್ಲಿ ತೋರುವ ಕಲ್ಪಿತ ಅಧಿಷ್ಠಾನವಲ್ಲದೆ ಬೇರಲ್ಲ, ಅಧಿಷ್ಠಾನವದು ಇದ್ದಂತಿರುವ ನಿರಂತರವು.

ತಾನೆ ತನ್ನ ಅರಿಯುವುಡೆ ಲಿಂಗ ತಾನೆ, ಅಂಗ ತಾನೆ ಸ್ಥಾವರ ತಾನೆ ಜಂಗಮ ತಾನೆ. ಪುರುಷನನ್ನು ತಿಳಿವುಡೆ ಪ್ರಕೃತಿ ಇದೆಯಾ? ಅರುವು ತಿಳಿದಲ್ಲಿ ಮರವು ಇದೆಯಾ? ತಾನು ನಿತ್ಯ ತತ್ವ ತಿಳಿದಲ್ಲಿ ಅನಿತ್ಯ ಇದೆಯಾ? ಸತ್ ತಿಳಿದಲ್ಲಿ ಅಸತ್ಯ ಇದೆಯಾ, ಚೈತನ್ಯ ತಿಳಿದಲ್ಲಿ ಚೇತನವಿದೆಯಾ ಆನಂದ ತಿಳಿದಲ್ಲಿ ನಿರಾನಂದ ಇದೆಯಾ ಇಲ್ಲದ್ದು ಇಲ್ಲವೆ ಇಲ್ಲ. ಈ ಇಲ್ಲವೆಂಬುದು ಇಲ್ಲವಾಗುವಲ್ಲಿ ಇವು ಇದ್ದುದೆಂದು? ಇದ್ದ ವಸ್ತುವ ತಿಳಿಯದ್ದರಿಂದ ಇಲ್ಲದರ ತೋರಿಕೆ, ಇದ್ದ ನಿರಂತರವಾಗಿಹ ಮಂಗಳಮಯ ಪರಮಸತ್ ಸ್ವರೂಪ ತಾನೆಂಬುದು ತನ್ನಿಂದ ತನಗದು ಸಿದ್ಧವಾಗುವುಡೆ ಆಗ ಮನದ ವಂಚನೆ ಇಲ್ಲ. ಅನ್ಯ ಲಿಂಗಾರ್ಚನೆ ಇಲ್ಲ, ಆಗ ಲಿಂಗಾರ್ಚನೆ, ಸ್ವಯಮೇವ ಲಿಂಗಾರ್ಚನೆ. ಅಲ್ಲಿ ಲಿಂಗ ಬೇರೆ, ತಾನು ಬೇರೆ, ಮನವು ಬೇರೆ, ಅದು ಬೇರೆ ಇದು ಬೇರೆಂಬುದಿಲ್ಲ ಒಂದೆಂಬುದಿಲ್ಲ. ಅನುಪಮ ಲಿಂಗ ತಾನಾಗಿಹುದೆ ನಿಜವಾದ ಲಿಂಗಾರ್ಚನೆ.

ಲಿಂಗಪೂಜ್ಯ, ನಾನು ಪೂಜಕನೆಂದು ಮಾಡುವ, ನೆನೆಯುವ, ಭಾವಿಸುವ ಪೂಜೆಗಳೆಲ್ಲ ಮನದ ವಂಚನೆಯಿಂದಾದ ಅನ್ಯಲಿಂಗಾರ್ಚನೆ ಅದು ನಿಜವಲ್ಲ, ನಿಜವಲ್ಲ. ಲಿಂಗವು ನಿಜವಾದ ಲಿಂಗವಲ್ಲ ಪೂಜೆ ಮಾಡುವ ಭಕ್ತನು ನಿಜ ಭಕ್ತನಲ್ಲ.

ನಿಜವಾದ ಲಿಂಗಪೂಜೆಯದು, ಜ್ಞಾನ ಜ್ಞೇಯ ಒಂದಾದುದೆ ಪೂಜೆ. ಲಿಂಗವು ಶಬ್ಧಮುಗ್ಧ, ಅದನು ಪೂಜೆ ಮಾಡಲು ಬಂದ ಭಕ್ತ ಶಬ್ದಮುಗ್ಧನಾದುದೆ ಪೂಜೆ. ಲಿಂಗವು ಅಚಿಂತ್ಯವು ಅದನು ಚಿಂತಿಸಲು ಬಂದ ಮನವು ಚಿಂತನಕ್ಕೆ ಮೀರಿ ನಿಶ್ಚಿಂತವಾದುದೆ ಲಿಂಗಪೂಜೆ. ಕೂಡಲ ಸಂಗಮದೇವ ಮನದಂತರ್ಯಾಮಿ ತಾನಾಗಿ,

ಮನದರುವೆ ತಾನಾಗಿಹ ಅಂತರ್ಯಾಮಿ ಮನದ ಮೂಲವೆ ತಾನಾಗಿಹ ಅಂತರ್ಯಾಮಿ, ಈತ ಮನದೊಡೆಯ ಮನದೊಳಗಿಹ ಮನದೊಡೆಯ, ತನ್ನ ಒಡೆಯನ ರಹಸ್ಯವ ತಿಳಿಯದ್ದರಿಂದ ಸಂಕಲ್ಪ ವಿಕಲ್ಪಕ್ಕೊಳಪಟ್ಟು ಮನವೆನಿಸಿಕೊಂಡಿತ್ತು. ಮನದಂತರ್ಯಾಮಿಯ ತಿಳಿವುಡೆ, ತಾನೆ ಕೂಡಲಸಂಗಮದೇವ, ಆಗ ಮನವಲ್ಲ, ಮನದಂತರ್ಯಾಮಿ ತಾನೆ.

**ವಚನ 8**

**ಸುನಾದ ಬಿಂದು ಪ್ರಣವ ಮಂತ್ರ**
**ಅಗ್ರದ ಕೊನೆಯ ಲೈದುವುಡೆ,**
**ಸೋಹಂ, ಸೋಹಂ, ಎನ್ನುತ್ತಿದ್ದಿತ್ತು**
**ಕೋಹಂ ಎಂಬುದ ಕಳೆದು ಬ್ರಹ್ಮರಂಧ್ರದೊಳಗೆ**
**ಅಗಮ್ಯ ಕೂಡಲಸಂಗಮದೇವನಲ್ಲದೆ ಮತ್ತಾರು ಇಲ್ಲ. ॥ 815 ॥**

ತಾತ್ಪಯ: ಸುನಾದ ಬಿಂದು, ಪ್ರಣವ ಮಂತ್ರ ಅಗ್ರದ ಕೊನೆಯ ಲೈದುವುಡೆ ಸೋಹಂ ಸೋಹಂ ಎನುತಿದ್ದಿತ್ತು: ಬಸವರಾಜದೇವರ ದಿವ್ಯದೃಷ್ಟಿಗೆ, ಈ ನಾಮ ರೂಪಿ ದೇಹವೆ ಸುನಾದ ಬಿಂದು ಪ್ರಣವ ಮಂತ್ರವಾಗಿದೆಯಲ್ಲ. ಎಚ್ಚತ್ತು ನೋಡಿದರೆ? ಲಕ್ಷ್ಯ ಕೊಟ್ಟು ನೋಡಿರೆ? ಅರಿದು ನೋಡಿದರೆ ಸೋಹಂ ಸೋಹಂ ಎನ್ನುತ್ತಿರುವುದು ಈ ಲಿಂಗಾಂಗ. ಸಮರಸದರವು ತಿಳಿದಾದರೂ ಬಲ್ಲ ಮಹಾಪುರಷರಿಂದ ಕೇಳಿಯಾದರೂ ಕೋಹಂ ಎಂಬುದು ಮರೆಯಿರೊ ಎಂದು ದೇಹರೂಪಿ ದೇಗುಲದ ಘನತ್ವವ ವರ್ಣಿಸುತ್ತಿಹನು.

ಲೋಕದವರ ದೃಷ್ಟಿಗೆ, ಅಜ್ಞರ ದೃಷ್ಟಿಗೆ, ದೇಹರೂಪಿ ದೇಗುಲ ರೇತು ರಕ್ತದಿಂದುಕ್ತವಾದ ಕಾರ್ಮಿಕ ಬಿಂದುವಾದರೆ ಜಗಜ್ಯೋತಿ ಬಸವರಸರ ಘನ ದೃಷ್ಟಿಗೆ ಸುನಾದ ಬಿಂದು! ಆಹಹ ಲೋಕದೃಷ್ಟಿಗೂ ಮಹಾಂತನ ದೃಷ್ಟಿಗೂ ಎತ್ತಣದಿಂದೆತ್ತ, ಬೆಳಕೆತ್ತ ಕತ್ತಲೆ ಎತ್ತ, ಭ್ರಾಂತಿ ಎತ್ತ ಪರಬ್ರಹ್ಮವೆತ್ತ? ಕತ್ತಲೆ? ಬೆಳಕೆ! ಅಹುದು ಮರಣವುಳ್ಳವರು ಮರುಜೀವಣಿಯೆ, ಅಮರರೆ! ಬಸವೇಶಾ ಅಹುದು ನಿನ್ನ ಕರುಣಾಹೃದಯ ಸಕಲರಿಗೆ ಲೇಸನೆ ಬಯಸುವ ಕೂಡಲಸಂಗನ ಶರಣರ ಹೃದಯ, ಸುನಾದ ಬಿಂದು. ಸು ನಾದ ನಾದವು ಇದು ಸಕಲ ಜೀವರಿಗೆ ಲೇಸಾದ ನಾದ, ಈ ನಾದವಾವುದು? ಲಿಂಗಾಂಗ ಸಮರಸದರುವುಳ್ಳ ನಾದವೆ ಸುನಾದ. ಇದು ಜೀವ ಬ್ರಹ್ಮದೇಕತ್ವವುಳ್ಳ ಅರುವಿನ ನಾದ, ಇದುವೆ ಸುನಾದ. ಈ ಸುನಾದದಿಂದುಕ್ತವಾದುದು ಬಿಂದು, ಇದು ಅರುವಿನ ಬಿಂದು ಇದು ಬಿಂದುವಿನಲ್ಲಿ ಪ್ರಣವ ಮಂತ್ರ ಪ್ರಜ್ವಲಿಸುತ್ತಿಹುದು ನೋಡಿರೆ?

ಪ್ರಣವ ನುಚ್ಚರಿಸುವ ಪ್ರಮಾಣಿಕರೆಲ್ಲರು ಪ್ರಣವ ಮಂತ್ರದರ್ಥವ ತಿಳಿದು ನೋಡಿರೆ? ಪ್ರಣವ ಪ್ರಣವ ಭರ್ಗೋದೇವಸ್ಯ ಧೀಮಹಿ ಎಂದುದಾಗಿ ಪ್ರಣವದರ್ಥವು ತಾನೆ ಮಯವು. ಗುಹೇಶ್ವರಾ ಪ್ರಣವ ಮಂತ್ರ ಗುಣ ಮೂರ ಮುಟ್ಟದ ಮಂತ್ರ, ಗಣನೆಗೆ ಮೀರಿದ ಮಂತ್ರ. ಅದು ಜ್ಞಾನ ಸ್ವರೂಪಮಂತ್ರ ಅದು ನಾಹಂ ಎನ್ನದ

ಮಂತ್ರ ಕೋಹಂ ಎನ್ನದ ಮಂತ್ರ, ಸೋಹಂ ಎನ್ನದ ಮಂತ್ರ ಚಿದಹಂ ಎನ್ನದ ಮಂತ್ರ ನುಡಿಗೆಡೆಗೊಡದ ಘನದ ಮಂತ್ರ. ಅದು ವಿಮಲಜ್ಯೋತಿ, ತಾನೆ ತಾನಾದ ಜ್ಯೋತಿ ಅಖಂಡ ಜ್ಯೋತಿ, ಚಿಜ್ಯೋತಿ, ತಾನೆ ತಾನಾಗಿ ನಿಂತಿಹುದು. ಅರುವಾಗಿ ನೋಡುವುಡೆ ಹತ್ತಿರದಲ್ಲಿಯೆ ಅರುವು ಅರಿಯುವುಡೆ ಪ್ರಣವ ಮಂತ್ರದರ್ಥವು ತಾನೆ. ಸುಖದೇಕರಸ. ಇದು ತಿಳಿಯಲು ಹೋದವರು, ಅನಾಮಯವಾಗಿರುವ ನಿರ್ವಾಣವೆ ಅವರ ನಿಲುವು. ಇದು ಕಾರಣ ಸಕಲ ದೇಗುಲಗಳು ಸುನಾದ ಬಿಂದು, ಪ್ರಣವಮಂತ್ರವಾಗಿರುವುದರಿಂದ ಬಸವರಸರು, ಮಾಂಸಪಿಂಡವೆನಲಿಲ್ಲ. ಮಂತ್ರ ಪಿಂಡವೆಂದರು. ಪಂಚಭೂತವೆನಲಿಲ್ಲ ಪ್ರಸಾದ ಕಾಯವೆಂದರು, ವಾಯುಪ್ರಾಣಿ ಎನಲಿಲ್ಲ, ಲಿಂಗಪ್ರಾಣಿ ಎಂದರು .

ಜಗಭರಿತ ಶಿವನೆಂಬುದು ತಿಳಿದು, ಶರಣ ಲಿಂಗ ಭರಿತನಾದ, ಶರಣ ಭರಿತ ಲಿಂಗ ತತ್ವದರಿವು ಕಂಡಾದರೂ, ಮಾನವ ಕೋಹಂ ಎಂಬುದು ಮರೆಯಬೇಕು. ಮರವಿನಿಂದ ಮಾನವ ಕೋಹಂ ಎಂದ. ನಾನಾರೋ? ನನ್ನ ನಾನು ಅರಿಯೆ ಎಂಬುದೆ ಕೋಹಂ, ಜಗವೆಲ್ಲ ಕೋಹಂದರುವಿನಲ್ಲಿದೆ ಇದು ಮರುವಿನ ಅರುವು. ಲೋಕದಲ್ಲಿ ವ್ಯಾಪಿಸಿದ ಅರುವು, ಬಹು ಲೌಕಿಕರು ಇದಕ್ಕೊಪ್ಪಿ ಕೊಂಡವರು. ಇದು ವಿಜ್ಞಾನಯುಗ ಬಹು ಮುಂದುವರಿದ ಯುಗ. ಈ ಯುಗದ ಮತಿವಂತ ಮೇಧಾವಿಗಳು ಮಂಗಳಲೋಕವ ನೋಡಿದುದಲ್ಲದೆ ಇನ್ನು ನಾನಾಲೋಕಂಗಳ ನೋಡಲು ಪ್ರಯತ್ನ ನಡೆಸಿಹರು. ಆದರೆ ವಿಜ್ಞಾನದ ಮತಿವಂತ ಮೇಧಾವಿಗಳು ತಾನಾರು? ತಾನು ವಿಜ್ಞಾನಿಯೊ? ಅಥವಾ ಇದಕ್ಕಿಂತ ಮೀರಿದೆ ಘನವಂತನೋ? ಚಂದ್ರಲೋಕವೆ ಆಗಲಿ ಮಂಗಳಲೋಕವೆ ಆಗಲಿ ಇವುಗಳು ತನ್ನನ್ನು ನೋಡಿದವೆ? ತಾನೆ ಇವುಗಳನ್ನು ಕಾಣುತ್ತಿಹನಲ್ಲದೆ ಅವುಗಳು ತನ್ನಂ ಕಾಣವು ಎಂದಲ್ಲಿ ಚಂದ್ರಲೋಕ, ಮಂಗಳಲೋಕಂಗಳು ಶ್ರೇಷ್ಠವೊ? ತಾನು ಶ್ರೇಷ್ಠನೋ ಎಂಬುದು ತನ್ನಂ ಅರಿಯುವುಡೆ ತಾನೆ ಮಂಗಳಮಯವೆಂಬುದು ತನ್ನಿಂದ ಸಿದ್ಧವಾಗುವುಡೆ ವಿಜ್ಞಾನಕ್ಕೆ ಸುಜ್ಞಾನವು ಕೂಡುವುಡೆ ಈ ಮಾನವರೂಪಿ ಪುರುಷಾರ್ಥ ಜನ್ಮಕ್ಕೆ ಬಹು ಶ್ರೇಯಸ್ಕಾರವು.

ಬಸವರಸರು ಪರಮ ಪುರುಷಾರ್ಥದ ಪ್ರಥಮಾಚಾರ್ಯರು ಆದುದರಿಂದ, ಮಾನವ ಸೋಹಂ ಸೋಹಂ ಎಂಬುದ ಕೇಳಿ ಎಚ್ಚರವಾಗುವದಿಲ್ಲ. ಅಲ್ಲಿಯವರೆಗೆ ಬ್ರಹ್ಮರಂದ್ರದೊಳಗೆ ಅಗಮ್ಯ ಕೂಡಲಸಂಗಮದೇವನಲ್ಲದೆ ಮತ್ತಾರು ಇಲ್ಲವೆಂಬ ಮಹದರುವಿಗೆ ಸಂಜ್ಞೆಯ ಮಾಡಿಹರು.

ಸೋಹಂ ಎಂಬುದು ಎಚ್ಚರದ ಸಂಜ್ಞೆ, ಎಚ್ಚರಿಸದ ಸಂಜ್ಞೆ ಇವೆರಡು ಅಹುದು, ತನ್ನಿಂದ ತಾನೆ ತನ್ನೊಳಗೆ ಸೋಹಂ ಎಂಬುದು ಕೇಳಿ ಕೋಹಂ ಎಂಬುದ ಮರೆಯುವನು, ಅದು ಎಚ್ಚರದ ಸಂಜ್ಞೆ, ಬಲ್ಲ ಮಹಾಪುರುಷರಿಂದ ಸೋಹಂ ಮಂತ್ರದರ್ಥವ ಕೇಳಿ ಕೋಹಂ ಎಂಬುದು ಮರೆಯುವನು. ಆಗ ಅದು ಎಚ್ಚರಿಸದ ಸಂಜ್ಞೆ ಎನಿಸುವದು.

ಸೋಹಂ ಇದವೆ ಪ್ರಣವ ತಾನೆನ್ನುವ ಎಚ್ಚರ. ಇದು ಜೀವ ಬ್ರಹ್ಮರೇಕತ್ವದ

ಎಚ್ಚರ. ಸೋ ಎಂದರೆ ಅವನು ಹಂ ಎಂದರೆ ನಾನು. ಅವನು ನಾನೆ, ನಾನು ಅವನೆಂಬುದು ಏಕತ್ವದ ಎಚ್ಚರ. ಇದು ಆದಿ ಅನಾದಿಯಿಂದತ್ತತ್ತ ಮುನ್ನಲಾದ ಪರಶಿವನ ಎಚ್ಚರ, ಪರಶಿವ ಮುನ್ನ ಇದ್ದವನೆ ನಾನು, ಪೂರ್ಣಮದಃ ಪೂರ್ಣಮಿದಂ ಪೂರ್ವದಲ್ಲಿದ್ದುದು ಪೂರ್ಣವು ಈಗಿದ್ದುದು ಅದುವೆ, ಪೂರ್ಣವು ಅಪೂರ್ಣವಾಗುವದುಂಟೆ? ಖಂಡಾ ಖಂಡ ಸಂಯೋಗವಿಲ್ಲದ ಅಖಂಡಿತ ಘನವು, ಮತ್ತೊಂದು ಆಗಬಹುದೆ? ಬ್ರಹ್ಮರಂಧ್ರದೊಳಗೆ ಅಗಮ್ಯ ಕೂಡಲಸಂಗಮದೇವನಲ್ಲದೆ ಮತ್ತಾರು ಇಲ್ಲ. ಬ್ರಹ್ಮರಂಧ್ರವೆಂಬುದು ಅರುವಿನ ರಂಧ್ರ. ಅರುವಿನ ರಂಧ್ರವಿರುವದು ಮಸ್ತಕವದು, ಪುಸ್ತಕದಲ್ಲಿ ಪುಸ್ತಕವು ಜ್ಞಾನದ ಸಂಗ್ರಾಮ, ಅರುವಿನ ಸಂಗ್ರಹದ ಕೇಂದ್ರವು. ಪಿಂಡಾಂಡವೆಂಬ ಗುಹೆಯಲ್ಲಿ ಎಲ್ಲೆಲ್ಲೂ ಅರುವು ತುಂಬಿದರೂ ಅರುವಿನ ಘನತ್ವ ತಿಳಿಯಲು ಮಸ್ತಕ ಮುಖ್ಯವೆಂದಿಹರು. ಮಸ್ತಕವದು ಅರುವು ಅರುವೆಂಬುದು ತಲೆ, ಜ್ಞಾನಕ್ಕೂ ತಲೆ, ಬುದ್ಧಿಗೂ ತಲೆ ಎಂದು ಪರಿಗಣಿಸುವರು.

ಹಠಯೋಗಿ, ಕೇವಲ ಕುಂಭಕ ಅಭ್ಯಾಸ ಬಲದಿಂದ ತನ್ನ ಪ್ರಾಣ ಬ್ರಹ್ಮರಂಧ್ರದಲ್ಲಿಡುವದು ಕಲಿತನು. ಕಲಿತ ಮಾತ್ರಕ್ಕೆ ತಾನಾರೆಂಬ ಜ್ಞಾನವಾದರೆ ಒಳ್ಳೆಯದು. ಬ್ರಹ್ಮವೆಂಬುದೇನು ಎಂಬುದನ್ನಾದರೂ ತಿಳಿದನೇ? ತಿಳಿಯದೆ ಬ್ರಹ್ಮರಂಧ್ರದಲ್ಲಿಟ್ಟು ತನ್ನ ಶರೀರದ ಆಯುಷ್ಯ ಹೆಚ್ಚು ಮಾಡಿಕೊಂಡಿಹನಲ್ಲದೆ ಬ್ರಹ್ಮರಂಧ್ರವೆಂಬುದು ತಿಳಿಯಲಿಲ್ಲ. ಬ್ರಹ್ಮರಂಧ್ರವೆಂಬುದು ಅರುಸ್ವರೂಪ ಬ್ರಹ್ಮನ ತಿಳಿಯುವ ಪರಮಸ್ಥಾನ. ಅಲ್ಲಿಯೆ ಅರುವಿನ ಘನತ್ವ ತಿಳಿದು ಅರಿಯದರುವಾಗಿ ನಿಲ್ಲಬೇಕೆಂಬ ಬಯಕೆ ಇದ್ದರೆ ಅಡ್ಡಿ ಇಲ್ಲ. ಇರದಿದ್ದರೆ ಜಡದ ಅಭ್ಯಾಸ ಮಾಡಿದಂತಾಯಿತಲ್ಲದೆ ಪರಬ್ರಹ್ಮದ ಘನತ್ವವರಿಯಲಿಲ್ಲವೆಂದಲ್ಲಿ ಬಹು ಶ್ರಮವಹಿಸಿ ಅಣು ಲಾಭ ಪಡೆದಂತಾಗುವದು.

ಶ್ರೀಗುರು ಕರುಣಿಸಿದ ಒಂದನುವಿನಿಂದ ಬ್ರಹ್ಮರಂಧ್ರವೆಂಬ ಮಸ್ತಕದಲ್ಲಿ ಅರು ಸ್ವರೂಪನಾದ ಪರಬ್ರಹ್ಮವು ಅರಿವುಡೆ ಅಗಮ್ಯ ಕೂಡಲಸಂಗಮದೇವನಲ್ಲದೆ ಮತ್ತಾರು ಇಲ್ಲವೆಂಬುದು ಯತಾರ್ಥವು. ಇದು ಕಾರಣ ಬ್ರಹ್ಮರಂಧ್ರವೆಂಬುದು, ಗುರುಕೃಪೆಯಿಂದ ಲಭ್ಯವಾಗುವ ಅಮರ ರಂಧ್ರ ಅಮರ ಸ್ಥಾನ. ಇದು ಅರುವಿನ ಅರುವುಳ್ಳ ಗಮ್ಯಸ್ಥಾನ. ಇದು ವರಪುಣ್ಯವುಳ್ಳವರಿಗಿದು ಸಾಧ್ಯವು ಈ ಪರಮಸ್ಥಾನವು ಅರು ಸ್ವರೂಪರಾಗಿ ಅರುವ ತಿಳಿಯಹೋದವರಿಗೆ ತಿಳಿಯುವದು. ಆಗ ಅಗಮ್ಯ ಕೂಡಲ ಸಂಗಮದೇವನ ಹೊರ್ತು ಅನ್ಯ ಆವುದು ಇಲ್ಲವೆಂಬುದು ತನ್ನ ಅರುರೂಪ ಮಸ್ತಕದಲ್ಲಿ ತನ್ನಿಂದ ವಿದಿತವಾಗುವದೆಂದು ಹೇಳಿಹರು.

**ವಚನ 9**

**ಬೆಳಗಿನೊಳಗಣ ಬೆಳಗು ಮಹಾಬೆಳಗು,**
**ಶಿವ ಶಿವಾ ಪರಮಾಶ್ರಯವೆ ತಾನಾಗಿ**
**ಶತಪತ್ರ ಕಮಲ ಕರ್ಣಿಕಾ ಮಧ್ಯದಲ್ಲಿ**
**ಸ್ವತಃ ಸಿದ್ಧನಾಗಿರ್ಪ ನಮ್ಮ ಕೂಡಲಸಂಗಮದೇವ. ॥ 944 ॥**

**ತಾತ್ಪರ್ಯ:** ಬೆಳಗಿನೊಳಗಣ ಬೆಳಗು ಮಹಾ ಬೆಳಗು. ಶಿವ ಶಿವಾ ಪರಮಾಶ್ರಯವೆ ತಾನಾಗಿ: ಪರಮಾಶ್ರಯವೆ ತಾನಾಗಿಹ ಮಹಾ ಬೆಳಗು. ಬೆಳಗಿನೊಳಗಣ ಬೆಳಗು, ಇದಾವ ಬೆಳಗು? ಹಠಯೋಗಿ ತನ್ನ ಅಭ್ಯಾಸದೋಳ್ ಕಾಣುವ ಬೆಳಕಿನೊಳಗಣ ಬೆಳಕಿಗೆ ಬೆಳಗಿನೊಳಗಣ ಬೆಳಗು ಅನ್ನಬೇಕೆ? ಲಿಂಗಾರ್ಚಕರು ತಮ್ಮ ಪೂಜಾಲಿಂಗದಲ್ಲಿ ದೃಷ್ಟಿ ನೆಟ್ಟಾಗ ಅಲ್ಲಿ ಕಾಣುವ ಬೆಳಕಿಗೆ ಬೆಳಗಿನೊಳಗಣ ಬೆಳಗು ಅನ್ನಬೇಕೆ? ಇವುಗಳೆ ಮಹಾಬೆಳಗು ಆದಲ್ಲಿ, ಬೆಳಗಿನೊಳಗಣ ಬೆಳಗು ಮಹಾಬೆಳಗು. ಅದು ಉದಯಾಸ್ತಗಳೆನ್ನದ ಬೆಳಗುಳ್ಳ ಬೆಳಗು.

ಯೋಗಿಯು ತನ್ನ ಅಭ್ಯಾಸ ಸಮಯದಲ್ಲಿ ಮತ್ತು ಪೂಜಾಲಿಂಗ ಪೂಜಿಸುವ ಲಿಂಗಾರ್ಚಕರು ತಮ್ಮ ಪೂಜಾ ಸಮಯದಲ್ಲಿ ಲಿಂಗದಲ್ಲಿ ದೃಷ್ಟಿ ನಟ್ಟಾಗ ಕಾಣುವ ಬೆಳಕು ಇನ್ನುಳಿದ ಸಮಯದಲ್ಲಿ ಇಲ್ಲ. ಈ ಬೆಳಕು ತೋರಿ ಇಲ್ಲವಾಗುವ ಬೆಳಗು, ಇದು ಅಭ್ಯಾಸದ್ವಾರಾ ಪ್ರಾಪ್ತವಾದ ಬೆಳಗು, ಇದು ಉದಯಾಸ್ತದಿಂದುಕ್ತವಾಗಿರುವಲ್ಲಿ, ಇದು ಸಕಲಕ್ಕೂ ತಾನೆ ಪರಮಾಶ್ರಯವಾದುದು ಹೇಗಾಗುವದು, ಇದಲ್ಲದೆ

ಶತಪತ್ರ ಕಮಲ ಕರ್ಣಿಕಾಮಧ್ಯದಲ್ಲಿ ಸ್ವತಃ ಸಿದ್ಧನಾಗಿರ್ಪ ಕೂಡಲಸಂಗಮದೇವ: ಎಂದು ಹೇಳಿರುವಲ್ಲಿ, ಸ್ವತಃ ಸಿದ್ಧವಾದುದು ಆವುದು; ಅದು ಬೆಳಗಿನೊಳಗಣ ಬೆಳಗು; ಮಹಾಬೆಳಗು. ಶಿವಶಿವಾ ಪರಮಾಶ್ರಯವೆ ತಾನಾದ ಘನ. ಇದು ಎಲ್ಲವನ್ನು ಅರಿಯುವ ಅರುವೆಂಬುದಕ್ಕೂ ಮೀರಿ ಬೆಳಗುವ ಬೆಳಗಿನೊಳಗಣ ಬೆಳಗು ಚಂದ್ರ, ಸೂರ್ಯರು, ತಾರೆಗಳು ಇವುಗಳು ಬೆಳಗುವ ಬೆಳಕು. ಅಲ್ಲವೆ? ಈ ಬೆಳಕನ್ನು ಕಾಣುವ ಕಣ್ಣು ಬೆಳಗಿನೊಳಗಣ ಬೆಳಗು ಅನ್ನಬೇಕೆ! ಅನ್ನಲಾಗದು. ಏಕೆಂದರೆ ಇವು ಮಹಾಬೆಳಗು ಆಗಲಾರವು. ಇವು ಪರಮಾಶ್ರಯವೆ ತಾನಾದುದು ಹೇಗಾಗುವವು. ಶತಪತ್ರ ಕಮಲ ಕರ್ಣಿಕಾ ಮಧ್ಯದಲ್ಲಿ ಸ್ವತಃ ಸಿದ್ಧವಾದ ಕೂಡಲಸಂಗಮದೇವ ಹೇಗಾಗುವವು.

ಸ್ವತಃ ಸಿದ್ಧವಾದುದು ಆವುದೆಂದಲ್ಲಿ ಕಣ್ಣಿನ ಕಣ್ಣು ಆದುದು, ಘ್ರಾಣದ ಘ್ರಾಣವಾದುದು ಜಿಹ್ವೆಯ ಜಿಹ್ವೆ ಆದುದು. ತ್ವಕ್ಕಿನ ತ್ವಕ್ಕು ಆದುದು. ಶ್ರೋತ್ರವಿನ ಶ್ರೋತ್ರ ಆದುದು ಹೃದಯದ ಹೃದಯ ಆದುದು. ಇದು ಆಚಾರ ಲಿಂಗವು ಅಹುದು, ಗುರು ಲಿಂಗವು ಅಹುದು, ಶಿವಲಿಂಗವು ಅಹುದು, ಜಂಗಮ ಲಿಂಗವು ಅಹುದು, ಪ್ರಸಾದ ಲಿಂಗವು ಅಹುದು, ಮಹಾಲಿಂಗವು ಅಹುದು.

ಕಣ್ಣಿನ ಕಣ್ಣಾಗಿ ಬೆಳಗುವ ಬೆಳಗಿನೊಳಗಣ ಬೆಳಗು ಮಹಾಬೆಳಗು ಇದು ಶಿವಲಿಂಗ. ಶಿವಶಿವಾ ಇದನೇನೆಂಬೆ! ಕಂದದ ಬೆಳಗು, ಕುಂದದ ಬೆಳಗು. ಇದು ಹೊರಗೆನ್ನದೆ ಬೆಳಗುವ ಬೆಳಗು ಕತ್ತಲೆ ಬೆಳಕಿಗೂ ಬೆಳಗುವ ಬೆಳಗು ಸಕಲ ಬೆಳಕಿಗೆ ಆಶ್ರಯ ತಾನಾದುದು. ಸೂರ್ಯಚಂದ್ರರಿಗೂ ತಾನೆ ಆಶ್ರಯ. ಬಾಹ್ಯ ಚಕ್ಷುಗಳ ಅಂಧತ್ವ ಮಂದತ್ವ ಪಟುತ್ವಗಳಿಗೂ ತಾನೆ ಆಶ್ರಯ. ಇದುವೆ ಶತಪತ್ರ ಕಮಲ ಹೃದಯ ಕಮಲ ಕರ್ಣಿಕಾ ಮಧ್ಯದಲ್ಲಿ ಸ್ವತಃ ಸಿದ್ಧವಾದ ಘನವು.

ಘ್ರಾಣದ ಘ್ರಾಣವಾಗಿ ಬೆಳಗುವ ಬೆಳಗಿನೊಳಗಣ ಬೆಳಗು ಇದನೇನೆಂಬೆ?

ಇದು ಆಚಾರಲಿಂಗ ಆವಾವುದನ್ನು ತಟ್ಟದ ಮುಟ್ಟದ ಆಚಾರ ಲಿಂಗ. ಸುವಾಸನೆ ದುರ್ವಾಸನೆ ಮುಟ್ಟದ ಆಚಾರ ಲಿಂಗ ಇದರ ಆಚಾರ ಕೆಡದ ಆಚಾರ. ಅಕಳಂಕ ಆಚಾರ. ದುರ್ವಾಸನೆ ಸುವಾಸನೆ ಸಮವಾಗಿ ಕಂಡ ಬೆಳಗಿನೊಳಗಣ ಬೆಳಗು. ಇದು ದುರ್ವಾಸನೆ ಕಂಡು ಕುಗ್ಗಲಿಲ್ಲ. ಸುವಾಸನೆ ಕಂಡು ಉಬ್ಬಲಿಲ್ಲ. ಹಿಗ್ಗು ಕುಗ್ಗು ಕಾಣದ ನಿಷ್ಕಳಂಕಲಿಂಗ ಇದುವೆ ಮಹಾಬೆಳಗುಳ್ಳ ಲಿಂಗ ಇದುವೆ ಪರಮಾಶ್ರಯವೆ ತಾನಾಗಿ ಸ್ವತಃ ಸಿದ್ಧವಾದ ಲಿಂಗವು.

ಜಿಹ್ವೆಯ ಜಿಹ್ವೆಯು ಗುರುಲಿಂಗವು, ಇದು ಬೆಳಗಿನೊಳಗಣ ಬೆಳಗು, ಮಹಾಬೆಳಗು ಇದನೇನೆಂಬೆ ಇದು ಬೋಧಕನಾಗಲಿಲ್ಲ. ಬೋಧವಾಗಲಿಲ್ಲ ಅಬೋಧವ ಕಾಣಲಿಲ್ಲ. ಸಮಸ್ವರೂಪವಾಗಿ ಬೆಳಗುವ ಬೆಳಗು ನಿರಾವರಣ ನಿರಾಲಂಬವಾಗಿ ಬೆಳಗುವುದರಿಂದ ಇದು ಬೆಳಗಿನೊಳಗಣ ಬೆಳಗು ಮಹಾಬೆಳಗು, ಇದು ಬೋಧ ಅಬೋಧ ಬೋಧಾ ಬೋಧಕ್ಕೂ ಪರಮಾಶ್ರಯ ತಾನಾಗಿ, ಇದು ಶತಪತ್ರ ಕಮಲ ಕರ್ಣಿಕಾ ಮಧ್ಯದಲ್ಲಿ ಸ್ವತಃ ಸಿದ್ಧ ತಾನೆ. ತ್ವಕ್ಕಿನ ತ್ವಕ್ಕಾಗಿಹ ಜಂಗಮ ಲಿಂಗವೆ ಬೆಳಗಿನೊಳಗಣ ಬೆಳಗು. ಇದು ಶೀತವ ಕಾಣದು, ಉಷ್ಣವ ಕಾಣದು, ಮೃದು ಕಾಣದು, ಕಠಿಣವ ಕಾಣದು ಏನೊಂದು ಕಾಣದ ಘನ ಬೆಳಗಿನೊಳಗಣ ಬೆಳಗು ಮಹಾಬೆಳಗು. ಪರಮಾಶ್ರಯವೆ ತಾನಾಗಿ ಶತಪತ್ರ ಕಮಲ ಕರ್ಣಿಕಾ ಮಧ್ಯದಲ್ಲಿ ಸ್ವತಃ ಸಿದ್ಧ.

ಶ್ರೋತೃವಿನ ಶ್ರೋತೃ ಪ್ರಸಾದ ಲಿಂಗ ಇದು ಬೆಳಗಿನೊಳಗಣ ಬೆಳಗು ಇದು ಲೋಕದ ನುಡಿ ಕೇಳದ ಬೆಳಗು. ಅಲೌಕಿಕ ನುಡಿ ಹೇಳದ ಬೆಳಗು, ಪ್ರಪಂಚ ಸತ್ಯ ಮಿಥ್ಯವೆಂಬ ನುಡಿಗೂ ಪರಮಾರ್ಥ ಸತ್ಯ ಮಿಥ್ಯೆವೆಂಬ ನುಡಿಗೂ ಸಮವಾಗಿ ನಿರ್ವಿಕಾರವಾಗಿ ಬೆಳಗುವ ಬೆಳಗು. ಇದು ಬೆಳಗಿನೊಳಗಣ ಬೆಳಗು.

ಎಂಜಲ ಮಾತ ನುಡಿವ ರಂಜಕರೆಲ್ಲರೂ ಮಿಗೆ ಮಿಗೆ ಮೀಸಲ ತಾವೆತ್ತ ಬಲ್ಲರು? ಮೀಸಲು ಏಂಜಲಹುದೆ? ಎಂಜಲು ಮೀಸಲಹುದೆ? ಮಾತಿನ ಬಣವೆಯ ಮೇದ ಪಶುಪ್ರಾಣಿಯಂತೆ ಎಂಜಲಮಾತೆ ನುಡಿವುತ್ತಿಹರು. ಲಿಂಗ ಸಕೀಲ ಸಂಯೋಗ ವರ್ಮಸ್ಥಲವನವರೆತ್ತ ಬಲ್ಲರು ಕೂಡಲ ಚೆನ್ನಸಂಗಯ್ಯನಲ್ಲಿ ಶಬ್ದ ಸೂತಕಿಗಳೆಲ್ಲರೂ ರೌರವ ನರಕಿಗಳು.

ಪ್ರಸಾದ ಲಿಂಗವೆಂಬುದು ಲಿಂಗಸಕೀಲ ಸಂಯೋಗವರ್ಮಸ್ಥಲ ವರಿತವರ ಲಿಂಗ, ಮಾತಿನ ರಂಜಕರದಲ್ಲ, ಮಾತು ಮೌನವಾದವರ ಲಿಂಗ, ಮನ ಮೌನವಾದವರ ಲಿಂಗ, ನೆನಹು ನಿರ್ಣಯ ನಷ್ಟವಾದವರ ಲಿಂಗ, ಭಾವಕ್ಕಿಂಬಿಲ್ಲದ ಲಿಂಗ ಈ ಲಿಂಗವೆ ಬೆಳಗಿನೊಳಗಣ ಬೆಳಗು ಮಹಾಬೆಳಗು. ಪರಮಾಶ್ರಯವೆ ತಾನಾದ ಬೆಳಗು. ಇದುವೆ ಶತಪತ್ರ ಕಮಲ ಕರ್ಣಿಕಾ ಮಧ್ಯದಲ್ಲಿ ಸ್ವತಃ ಸಿದ್ಧವಾಗಿರ್ಪುದು.

ಹೃದಯದ ಹೃದಯವೆ ಮಹಾಲಿಂಗವಾದ ಬೆಳಗಿನೊಳಗಣ ಮಹಾಬೆಳಗು ಇದನೇನೆಂಬೆ ಪರಮಾಶ್ರಯವಾದುದನೇನೆಂಬೆ ಇದು ತೆರಹಿಲ್ಲದ ಘನ, ಕುರುಹಿಂಗೆ ಬಾರದ ಮುನ್ನ ತೋರಿದವರಾರೋ? ಮಹಾಘನ ಲಿಂಗೈಕ್ಯವನು ಆರೂಢಿಯ

ಕೂಟದಲ್ಲಿ ನಾನಾರುವ ಸಾಕ್ಷಿಯ ಕಾಣೆನು. ಬೇರು ನುಡಿಯಬಹುದೆ? ಪ್ರಾಣಲಿಂಗವನು ಅರುವು ಸ್ವಯವಾಗಿ ಮರಹು ನಷ್ಟವಾದರೆ ಗುಹೇಶ್ವರ ನಮ್ಮ ಶರಣನುಪಮಾತೀತ.

ಹೃದಯದ ಹೃದಯ ಮಹಾಲಿಂಗವಾಗಿಹ ಇದು ಅರುವಿನ ಅರುವು, ಇದುವೆ ಬೆಳಗಿನೊಳಗಣ ಬೆಳಗು. ಅರಿಯದರುವಾಗಿ ನಿಂತುದೆ ಮಹಾಬೆಳಗು. ಶಿವ ಶಿವಾ ಇದು ಸಕಲಕ್ಕೂ ಪರಮಾಶ್ರಯ ತಾನಾಗಿಹುದು ನೋಡಾ, ಇಲ್ಲಿ ಇಲ್ಲಾದುದಿಲ್ಲಾದುದು ಎಲ್ಲಿಪ್ಪುದು, ಇಲ್ಲಾದುದು ಇಲ್ಲಾದುದು ಎಂದಿಪ್ಪುದು. ಮಿಕ್ಕಿ ಮೀರಿನಿಂದ ನಿಲವು. ಇದು ಸ್ವತಃ ಸಿದ್ಧವಾಗಿರ್ಪ ಕೂಡಲಸಂಗಮದೇವನ ನಿಲವು. ಇದನ್ನು ಬೇರುಮಾಡಿ ನುಡಿಯಬಹುದೆ? ಬಾರದ್ದರಿಂದ ಅರಿವು ಸ್ವಯವಾಗಿ ಮರಹು ನಷ್ಟವಾದವರ ಇರವು ಸ್ವತಃ ಸಿದ್ಧ ಇರುವು ನೋಡಾ ಎಂದು ಹೇಳಿದುದು.

**ವಚನ 10**

**ತಮ ತಮಗೆಲ್ಲ ನೊಸಲ ಕಣ್ಣುಳ್ಳವರು,**
**ತಮ ತಮಗೆಲ್ಲ ನಂದಿ ವಾಹನರು**
**ತಮ ತಮಗೆಲ್ಲ ಖಟ್ವಾಂಗ ಕಪಾಲ ತ್ರಿಶೂಲಧರರು.**
**ದೇವನಾರು, ಭಕ್ತರಾರು ಹೇಳಿರಯ್ಯ.**
**ಕೂಡಲಸಂಗಮದೇವಯ್ಯ ನಿಮ್ಮ ಶರಣರು**
**ಸ್ವತಂತ್ರರು ಎನ್ನ ಬಚ್ಚಬರಿಯ ಬಸವನೆನಿಸಯ್ಯ. ॥ 818 ॥**

**ತಾತ್ಪರ್ಯ:** ತಮ ತಮಗೆಲ್ಲ ನೊಸಲ ಕಣ್ಣುಳ್ಳವರು ತಮ ತಮಗೆಲ್ಲ ನಂದಿ ವಾಹನರು. ತಮ ತಮಗೆಲ್ಲ ಖಟ್ವಾಂಗ ಕಪಾಲ ತ್ರಿಶೂಲಧರರು, ದೇವನಾರು ಭಕ್ತನಾರು ಹೇಳಿರಯ್ಯ: ಇದು ದೇವಗಣರು ರುದ್ರಗಣರು, ನಾರಾಯಣ ಗಣರು, ಪ್ರತಿಯೊಬ್ಬರು ನೊಸಲ ಕಣ್ಣುಳ್ಳವರು, ರುದ್ರಗಣವು ನೊಸಲ ಕಣ್ಣುಳ್ಳವರು, ನಾರಾಯಣ ಗಣರು ನೊಸಲ ಕಣ್ಣುಳ್ಳವರು. ದೇವಗಣವು ನೊಸಲ ಕಣ್ಣುಳ್ಳವರು, ಪ್ರತಿ ಓರ್ವರಿಗೂ ನಂದಿವಾಹನ, ಖಟ್ವಾಂಗ ಕಪಾಲಧರಿಸಿದವರು ತ್ರಿಶೂಲ ಧರಿಸಿದವರು. ಇವರು ದೇವರಲ್ಲವೆ? ಎಲ್ಲರೂ ಉರಿಗಣ್ಣುಳ್ಳವರು, ಮುದಿ ಎತ್ತನ್ನು ವಾಹನ ಮಾಡಿಕೊಂಡವರು. ಹುಲಿಯ ಚರ್ಮಹೊದ್ದವರು ಆದಿಶೇಷರನ್ನೆ ಆಭರಣವನ್ನಾಗಿ ಮಾಡಿಕೊಂಡವರು. ಡಮರುಗ, ತ್ರಿಶೂಲ ಧರಿಸಿದವರು, ಸಕಲ ದೇವರ ಉಡುಗೆ ತೊಡುಗೆ ತೊಟ್ಟವರಾದಲ್ಲಿ ಇವರುಗಳಲ್ಲಿ ದೇವರಾರು, ಭಕ್ತರಾರು ಹೇಳಿರಯ್ಯ.

ದೇವಗಣ, ರುದ್ರಗಣ ದೇವರೆಂದು ತಿಳಿದು, ಈ ದೇವನ ದರ್ಶನವ ಪಡೆದು, ಅಷ್ಟೈಶ್ವರ್ಯ ಭೋಗವ ಪಡಯಬೇಕೆಂಬುದಲ್ಲದೆ ಸಾಲೋಕ್ಯ ಸಾಮೀಪ್ಯಾದಿ ಪದವ ಪಡೆಯಲು, ಅನಂತಕಾಲ, ತಪವ ಮಾಡಿ ದರ್ಶನ ಪಡೆದು ಕೊನೆಗೆ ಬೇಡಿದ ವರ ಪಡೆದವರಲ್ಲಿ ನರರು ಉಂಟು ಸುರರು ಉಂಟು, ಅಸುರರು ಉಂಟು. ಮನು ಮುನಿಗಳು ಉಂಟು. ಅರ್ಚಕರು ಉಂಟು. ತಪಸ್ವಿ ಉಂಟು, ತ್ಯಾಗಿಗಳೂ ಉಂಟು, ಯೋಗಿಗಳು ಉಂಟು, ದಾಸರು ಉಂಟು, ಭಕ್ತರು ಉಂಟು, ಇವರು ದೇವಗಣ ರುದ್ರಗಣರ ಭಕ್ತರು ಆಗಿಹರು, ಈ ದೇವರು ಪರತಂತ್ರ ದೇವರಿಂದ ಪಡೆದ

ಫಲಪದಂಗಳು ಅನಿತ್ಯವು, ಪಡೆದ ಭಕ್ತನು ಪರತಂತ್ರನು.

ಕಾಮಿಸದಲ್ಲದೆ ಕೊಡದು ಕಾಮಧೇನು, ಕಲ್ಪಿಸದಲ್ಲದೆ ಕೂಡದು ಕಲ್ಪತರು, ಅದರಡಿಯಲ್ಲಿ ಕೊಡದು ಚಿಂತಾರತ್ನ, ಭಾವಿಸದಲ್ಲದೆ ಕೊಡನು ಶಿವನು. ಕಾಮಿಸದೆ, ಕಲ್ಪಿಸದೆ, ಚಿಂತಿಸದೆ ಭಾವಿಸದೆ ಕೊಡಬಲ್ಲರು ಕೂಡಲಚನ್ನಸಂಗಾ ನಿಮ್ಮ ಶರಣರು.

ಸ್ವರ್ಗಲೋಕದ ಕಾಮಧೇನುವಾಗಿದ್ದರೂ ಭಕ್ತರು ಕಾಮಿಸದಲ್ಲದೆ ಕೊಡದು, ಕಲ್ಪತರು ಅದರಡಿಯಲ್ಲಿ ಕೂತು ಭಕ್ತರು ಕಲ್ಪಿಸಿದಾಗ ಅದು ಕೊಡಬಲ್ಲದು. ಚಿಂತಾಮಣಿ ನಿಜ ಭಕ್ತರು ಚಿಂತಿಸಿದಾಗ ಕೊಡುವುದು, ಭಾವಿಸದಲ್ಲದೆ ಕೊಡನು ಶಿವನು, ಭಕ್ತರಿಗೆ ಬೇಡಿದಿಷ್ಟಾರ್ಥ ಕೊಡುವ ಶಿವನು. ಭಕ್ತನು ಭಾವಿಸಿದಾಗ ಕೊಡುವ ಶಿವನು. ಈ ಕೊಡ ಕೊಳ್ಳುವ ವ್ಯವಹಾರ. ಭಕ್ತನ ಅವಲಂಬನ ಮೇಲೆ ನಿಂತ ವ್ಯವಹಾರ ಮುಗ್ಧ ಭಾವಿಕ ಭಕ್ತ. ತನಗೆ ಪರಿಚಯವಿಲ್ಲದೆ ಅಹಿತವಾದುದನ್ನು ಹಿತವೆಂದು ಭಾವಿಸಿ ಅದನ್ನು ಕೇಳಿದರೂ ಕೊಡಬಲ್ಲ ಶಿವ. ಇವನಿಗೆ ಹಿತ ಚಿಂತಕನೆಂದು ಹೇಗೆ ತಿಳಿಯುವುದು.

ಸ್ವರ್ಗ ಪದವಿಗಾಗಿ ದೇವತಾ ದೈತ್ಯರು ಹೊಡದಾಡಿ ಸತ್ತರು. ದೇವನಾದವನು, ದೇವತೆಗಳಿಗಾಗಲಿ ದೈತ್ಯರಿಗಾಗಲಿ ಒಬ್ಬರಿಗಾದರೂ ಹೊಡೆದಾಡುವ ಮತ್ತು ಅನಿತ್ಯವಾಗಿಹ ಸ್ವರ್ಗಪದವಿ ಇಚ್ಛೆ ಮಾಡಬೇಡಿ. ಅಲ್ಲಿರುವ ಉತ್ತಮೋತ್ತಮ ಭೋಗ ವಸ್ತು ಬಯಸುವದು ಹಾನಿಕಾರಕವು. ಪೂರ್ವದಲ್ಲಿ ಎಷ್ಟೋ ಸುರಾಸುರರು ಮಡಿದು ಹೋಗಿಹರು. ನೀವು ಮಡಿದು ಹೋಗಬೇಡಿ, ಅಕ್ಷಯ ಪದವಿಯ ಬಯಸುವವರಾಗಿರಿ. ಅದು ನಿಮ್ಮಲ್ಲಿಯೆ ಇದೆ, ಅದು ಹೃದಯದ ನಿಜನಿವಾಸವಾಗಿದೆ. ಅದನ್ನು ಪಡೆಯಿರಿ, ಎಂದು ಹೇಳಿದವರು ಹಿತ ಚಿಂತಕರೊ? ಹೇಳದವರು ಹಿತಚಿಂತಕರೊ? ಹೊಡೆದಾಟಕ್ಕೆ ಹಚ್ಚುವವರು ದೇವರೊ? ಹೊಡೆದಾಟ ಬಿಡಿಸುವವರು ದೇವರೊ? ನಾವು ಅರುವಿನ ಜನ್ಮದಲ್ಲಿ ಬಂದ ಮೇಲೆ ಆರ ಭಕ್ತರಾಗಬೇಕು ವಿಚಾರ ಮಾಡಿರಿ.

ಕಾಮಿಸದೆ ಕಲ್ಪಿಸದೆ ಭಾವಿಸದೆ ಚಿಂತಿಸದೆ ಕೊಡಬಲ್ಲ ಕೂಡಲ ಚೆನ್ನಸಂಗಮ ದೇವನೆತ್ತ, ಕಾಮಿಸಿ ಉಗ್ರತಪವ ಮಾಡಿದ ಮೇಲೆ, ಅನಿತ್ಯ ಫಲಪದಂಗಳನೀವ ದೇವನೆತ್ತ? ಕಾಮಿಸದೆ, ನಿತ್ಯ ಪದವ ಕರುಣಿಸುವ ಕೂಡಲಚೆನ್ನ ಸಂಗಮ ಶರಣರೆತ್ತ, ಕಲ್ಪಿಸಿದ ಮೇಲೆ ಅನಿತ್ಯ ವಿಷಯಗಳ ಕೊಡುವ ಕಲ್ಪತರುವೆತ್ತ, ಕಲ್ಪಿಸದೆ ಕೊಡುವ ಸಮ್ಯಜ್ಞಾನವ ನೀವ ಶರಣರ ಕಲ್ಪತರುವೆತ್ತ, ಚಿಂತಿಸಿದಲ್ಲಿ ಕೊಟ್ಟರೂ ವಿಷಯಾಸಕ್ತಿ ಹೆಚ್ಚಿಸುವ ಚಿಂತಾಮಣಿ ಎತ್ತ, ಚಿಂತಿಸದೆ ಕೊಡುವ ಅಚಿಂತ್ಯ ಪದವುಳ್ಳ ಚಿಂತಾರತ್ನವೆತ್ತ, ಭಾವಿಸಿದಲ್ಲಿ ಕರಿಯನಿತ್ತು ಹಿರಿದಿಪ್ಪ ರಾಜ್ಯವ ನಿತ್ತು, ಬ್ರಹ್ಮಪದವಿ, ವಿಷ್ಣುಪದವಿ, ರುದ್ರಪದವಿಯ ಕೊಟ್ಟರೂ ಅನಿತ್ಯ ಪದವಲ್ಲದೆ ನಿತ್ಯವಾಗವು. ಭಾವಿಸದೆ ಕೊಡುವ ಭಾವಕ್ಕಗಮ್ಯವಾಗಿಹ ನಾನೀನೆಂಬುದಕ್ಕೂ ತೆರಹಿಲ್ಲದ ಘನ ಪದವನೀವ ಕೂಡಲಚೆನ್ನಸಂಗಯ್ಯನ ಶರಣರೆತ್ತ, ಇದು ಕಾರಣ ಆರನ್ನು ದೇವರೆಂದು ಭಾವಿಸಬೇಕು, ಆರ ಭಕ್ತರಾಗಬೇಕು, ಭಕ್ತರಾದ ಮೇಲೆ ದೇವ ತಾನು ಒಂದಾಗುವದು, ಸ್ವಾಮಿ ಸೇವಕರೆಂಬುದು ಸಮರಸವಾಗಬೇಕು, ಪೂಜ್ಯ ಪೂಜಕ ರೆರಡೊಂದಾಗಬೇಕು. ಅರ್ಚನೆ, ಅರ್ಪಿತ, ಅವಧಾನ ಕೆಟ್ಟು, ಶಬ್ದಕ್ಕೆ ತೆರಹಿಲ್ಲದಂತಾಗುವದು. ಇದು ನಿಜವಾದ

ಭಕ್ತಿ.

ಕೂಡಲಚೆನ್ನಸಂಗಯ್ಯನ ಶರಣರು ಬೇಡದೆ ಕೊಡುವ ಕಾಮಧೇನು, ಕಲ್ಪತರು, ಚಿಂತಾರತ್ನ. ಭಾವಿಸಿದಂತೆ ಕೊಡುವ ದೇವನು ಶರಣನಲ್ಲ, ಶರಣನು ಸ್ವಮಹಿಮೆಯಾಗಿಹ ಸ್ವತಂತ್ರ ಪದವಿಯ ಕೊಡುವನಲ್ಲದೆ ಪರತಂತ್ರವುಳ್ಳ ಅನಿತ್ಯ ಪದವಿಯ ಕೊಡುವವನಲ್ಲ. ಶರಣರ ಸ್ವಾತಂತ್ರ ಪದವಿಯುಳ್ಳ ಕಾಮಧೇನುವೆಂಬುದು ದಾಸೋಹಂಭಾವ ಲಿಂಗಾಂಗ ಸಮರಸ ಜ್ಞಾನವುಳ್ಳ ಕಲ್ಪತರು. ಚಿಂತಾರತ್ನವದು ಚಿಂತನ ಕೆಡಿಸಿ ನಿಶ್ಚಿಂತನ ಮಾಡುವ ಅಚಿಂತ್ಯಜ್ಞಾನ, ಇದರಿಂದ ಅಖಂಡಾ ನಂದವು ಪರಮಾನಂದವು, ಭಾವಕ್ಕಗಮ್ಯವಾಗಿಹ ಬೇಧಾಬೇಧ ವಿನಿರ್ಮುಕ್ತ ಶಿವನು, ಈ ಚತುರ್ವಿಧ ಅಕ್ಷಯ ಪದವಿಯ ನೀಯುವ ಸುಜ್ಞಾನವ ಬೇಡದೆ ಕೊಡವರು ಶರಣರು.

ದೇವರಾರು ಭಕ್ತರಾರು ಹೇಳಿರಯ್ಯ, ಕೂಡಲಸಂಗಮದೇವಯ್ಯ, ನಿಮ್ಮ ಶರಣರು ಸ್ವತಂತ್ರರು. ದೇವರಾರು? ದೇವನೆಂಬುದು ಆದಿ ಅನಾದಿಯಿಂದತ್ತತ್ತ ಮುನ್ನಲಾದ ಪರತತ್ವ ಪರಂಜ್ಯೋತಿ, ಸಚ್ಚಿದಾನಂದ ನಿತ್ಯ ಪರಿಪೂರ್ಣ ಅಖಂಡ, ಅಸಂಗ, ಅಕಲ್ಪಿತ ಏಕಮೇವಾದ್ವಿತೀಯ, ಅನಾಮಯವಾಗಿರುವ ನಿರ್ವಾಣ ಸಮಸ್ವರೂಪ ನಿರಂತರವಾಗಿಹ ಮಂಗಳಮಯ ಪರಮಸತ್. ಈ ಅಬಾಧಿತ ಘನವು ದೇವ ಭಕ್ತರಾರು? ಭಕ್ತರೆಂಬುದು ದೇವನರಿಯಹೋಗಿ ತಾನದುವೆ ಆದವನೆ ಭಕ್ತ. ಲಿಂಗವರಿತು ಲಿಂಗವಾದವನೆ ಭಕ್ತ. ಜ್ಞಾನ, ಜ್ಞೇಯ ಒಂದಾದುದೆ ಭಕ್ತ, ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯವಾಗಿರ್ಪಾತನೆ ಭಕ್ತ.

ಭವರಹಿತಂಗೆ ಭಕ್ತಿಯ ಮಾಡುವವರು ನೀವು ಕೇಳಿರಂಣಾ, ಭವ ಬಾಧೆಯೊಳಗೆ ನೀವಿರ್ದು ಅಭವನ ಭಕ್ತಿ ಮಾಡುವ ಪರಿ ಎಂತೊ?

ತಾನಭವನಲ್ಲದೆ ಸಹಜ ಭಕ್ತಿಯ ಮಾಡಬಾರದು. ಗುಹೇಶ್ವರಾ, ಭಕ್ತರಾದವರು ಭವರಹಿತರು. ಇವರ ಭವರಹಿತನಾದ ದೇವನಿಗೆ ಭಕ್ತಿ ಮಾಡುವವರು ತಾನಭವವಾದವರು ಭವ ಭಾಧೆಯೊಳಗಿದ್ದವರು ಅಭವನ ಭಕ್ತಿ ಮಾಡುವದು ಹೇಗೆ? ತಾನಭವವಾದವರೆಂದಲ್ಲಿ ಅಭವನ ಅರಿತವರೆ ಅಭವವಾದವರು. ಇವರೆ ಸಹಜ ಭಕ್ತರು ಎಂದು ಹೇಳಿಹರು.

ನಿಮ್ಮ ಶರಣರು ಸ್ವತಂತ್ರರು ತಾನಾರೆಂದು ತನ್ನಿಂದ ತನ್ನ ಅರಿತವರು ಶರಣರು ಅರುವರಿತವರೆ ಶರಣರು, ಅನುಪಮ ಲಿಂಗವರಿತು ಉಪಮಾತೀತ ವಾದವರೆ ಶರಣರು ನಿರ್ನಾಮ ಶರಣ, ನಿರವಧಿ ಶರಣ, ನಿರಾಲಂಬಿ ಶರಣ, ನಿಜೈಕ್ಯಶರಣ. ಇವರೆ ಸ್ವತಂತ್ರರು.

ಎನ್ನ ಬಚ್ಚ ಬರಿಯ ಬಸವನೆನಿಸಯ್ಯ ಅಹಹ! ಬಸವರಸರ ಇದೆಂಥ ನಿರಾಲಂಬ ಹೃದಯ ನಿರಾಂಡಬರವಾಗಿಹ ನಿರಹಂಭಾವದಲ್ಲಿ ಕರಿಗೊಂಡ ಹೃದಯ! ಎನ್ನ ಬಚ್ಚ ಬರಿಯ ಬಸವ ನೆನಿಸಯ್ಯ ಎಂದು ಸಂಗಯ್ಯನ ಪ್ರಾರ್ಥಿಸಿದುದು. ಎನ್ನ ಬಸವನೆನಿಸುವದು ಬೇಡ ದೇವಾ ಬರಿಯ ಬಸವ ನೆನಿಸುವದು ಬೇಡ ಬಚ್ಚ ಬರಿಯ ಬಸವ ನೆನಿಸಯ್ಯ ಎನ್ನ. ಎಂದು ಪ್ರಾರ್ಥಿಸಿದುದು. ಇದಕ್ಕನ್ನಬೇಕು ಲಿಂಗಾಂಗ

ಸಾಮರಸ್ಯ. ಕಾತುರವುಳ್ಳ ಹೃದಯ, ಅನುಪಮ ಲಿಂಗವರಿಯುವ ಕಾತುರದ ಹೃದಯ ಇದುವೆ ಅಖಂಡಿತ ಲಿಂಗವರಿದು ಅಖಂಡಾನಂದಮಯವಾಗಿರುವ ಹೃದಯ, ಅಚಲಾನಂದ ದೊಳ ಪ್ರಗಮ್ಯವಾಗಿಹ ನಿರ್ಲೇಪ ಹೃದಯ. ಈ ಹೃದಯ ದ್ವಿತೀಯ ಶಂಭುವೆನಿಸಿದ ಹೃದಯವಾದುದರಿಂದ ಎನ್ನ ಬಚ್ಚಬರಿಯ ಬಸವ ನೆನಿಸಯ್ಯ. ಅಭವ, ಬಸವ ಭವರಹಿತ ಬಸವ, ಅಭವನೆಂಬುದು ಸತ್ಯ ಜ್ಞಾನಾನಂದವದು ಅಭವ ಸತ್ಯ ಜ್ಞಾನಾನಂದವರಿಯಹೋಗಿ ಅನಾಮಯವಾಗಿಹ ನಿರ್ವಾಣನಾದುದು ಬಚ್ಚ ಬರಿಯ ಬಸವ, ನುಡಿಗೆಡೆಗೊಡದ ಘನದಲ್ಲಿ ಲೀಯವಾದುದು ಬಚ್ಚ ಬರಿಯ ಬಸವ ಬಸವನೆಂದೆನಿಸಯ್ಯ ಶಬ್ದಮುಗ್ಧನಾದುದೇನೆಂಬೆ, ಇದುವೆ ಎನ್ನ ಬಚ್ಚ ಬರಿಯ ಬಸವನೆನಿಸಯ್ಯ ಎಂದು ಬಸವ ರಾಜದೇವರು ಪ್ರಾರ್ಥಿಸಿಹರು.

**ವಚನ 11**

**ಉಳ್ಳವರು ಶಿವಾಲಯವ ಮಾಡುವರು**
**ನಾನೇನ ಮಾಡುವೆ ಬಡವನಯ್ಯ**
**ಎನ್ನ ಕಾಲೆ ಕಂಬ ದೇಹವೆ ದೇಗುಲ,**
**ಸಿರ ಹೊನ್ನ ಕಳಶವಯ್ಯ**
**ಕೂಡಲಸಂಗಮದೇವಯ್ಯ ಕೇಳಯ್ಯ**
**ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ. ॥ 820 ॥**

ತಾತ್ಪರ್ಯ: ಉಳ್ಳವರು ಶಿವಾಯಲಯವ ಮಾಡುವರು, ನಾನೇನ ಮಾಡುವೆ ಬಡವನಂಯ್ಯ, ಎನ್ನ ಕಾಲೆ ಕಂಬ, ಸಿರ ಹೊನ್ನ ಕಳಶವಂಯ್ಯಾ ಕೂಡಲಸಂಗಮದೇವಯ್ಯಾ ಕೇಳಯ್ಯಾ. ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಬಸವಣ್ಣನವರು ತಾನು ಬಡವನೆಂದು, ಶಿವಾಲಯ ಮಾಡುವರು ಉಳ್ಳವರೆಂದು. ಉಳ್ಳವರು ಮಾಡಿದ ಶಿವಾಲಯ ಅಳಿವಿನಿಂದುಕ್ತ ವಾದುದು. ಬಡವ ಮಾಡಿದ ದೇಗುಲ ಅಳಿಯದ ದೇಗುಲವೆಂದು ಹೇಳಿದುದು ಯತಾರ್ಥವು. ಇದು ಎಂಥ ನಿರಾಂಡಬರ ಹೃದಯ ಅಹುದು. ದಾಸೋಹ ಮೂರ್ತಿಯ ಹೃದಯ ತುಂಬಿ ತುಳುಕದ ಹೃದಯದಿಂದ ಬಂದ ಪ್ರಸಾದವಾಣಿ ನೋಡಿರಿ. ಉಳ್ಳವರು ಯಾರು ? ಬಡವರಾರು?ಅಳಿದು ಹೋಗುವ ಗುಡಿಯನ್ನು ಕಟ್ಟಿದವರು ಉಳ್ಳವರೊ? ಅಳಿಯದ ಗುಡಿಯನ್ನು ಕಟ್ಟಿದವರು ಬಡವರೊ? ನಾವೆ ಅರಿದರಿದು ನೋಡುವದು.

ಉಳ್ಳವರು ಶಿವಾಲಯವ ಮಾಡುವರು: ಕೃತಯುಗ, ತ್ರೇತಾಯುಗ, ದ್ವಾಪರ, ಕಲಿಯುಗ, ಈ ಯುಗ ಯುಗಗಳಿಂದಲೂ ಉಳ್ಳವರು ಶಿವಾಲಯ ಮಾಡಿದ್ದಾರೆ. ಶ್ರೀರಾಮದೇವರ ಕಾಲದಲ್ಲಿ ಅದಕ್ಕಿಂತ ಮುನ್ನವು ಕಟ್ಟಿಸಿದ ಗುಡಿಗಳುಂಟು, ರಾವಣನ ಕಾಲದಲ್ಲಿಯ ಗುಡಿಗಳು ಉಂಟು. ಇತ್ತ ತಪಸ್ವಿ, ತ್ಯಾಗಿಗಳಿಂದ ಯೋಗಿಗಳಿಂದ ರಚಿಸಿದ ಗುಡಿಗಳೂ ಉಂಟು. ಈಗ ಆ ಗುಡಿಗಳ ಸ್ಥಿತಿ ಏನಾಗಿದೆ. ಅವುಗಳು ಮೊದಲಿನ ಸ್ಥಿತಿಯಲ್ಲಿದ್ದಂತೆ ಇರುವವೊ? ಈಗೇನಾಗಿಹವು ಎಂಬುದನ್ನು ಪ್ರತ್ಯಕ್ಷ ಸಕಲರು ಕಾಣುತ್ತಾರೆ. ಉಳ್ಳವರು ಶಿವಾಲಯ ಮಾಡಿದ ಪರಿಸ್ಥಿತಿ ಸ್ವಲ್ಪ ವಿಚಾರಿಸುವ

ಉಳ್ಳವರಿಗೂ ಪರಿಶ್ರಮ. ಸೇವಾ ಮಾಡುವವರಿಗೂ ಪರಿಶ್ರಮ, ಪ್ರಜೆಗಳಿಗೂ ಪರಿಶ್ರಮ ಇದಲ್ಲದೆ ಉಳ್ಳವರು ಶಿವಾಲಯ ಮಾಡಬೇಕಾದರೆ ಹಣದ ವಿನಿಯೋಗವು ಆದಲ್ಲಿ ಶಿವಾಲಯ ತಯ್ಯಾರಾಗುವದು. ಈ ಶಿವಾಲಯದಲ್ಲಿ ಶಿವನಮೂರ್ತಿ ಮಾಡಿ ದೇವಾಲಯದಲ್ಲಿ ಸ್ಥಾಪಿಸಲು ಅದಕ್ಕಷ್ಟೆ ಹಣ ವಿನಿಯೋಗವಾಗುವದು. ಅಂತು ಒಂದು ದೇವಾಲಯ ನಿರ್ಮಾಣ ಮಾಡಲು ಹಣ, ಪ್ರವಾಹ ನೀರಿನಂತೆ ಖರ್ಚಾದಲ್ಲಿ, ಶಿವಾಲಯ ಸಿದ್ಧವಾಗುವದು. ಇಷ್ಟು ಪರಿಶ್ರಮ ವಹಿಸಿ ಶಿವಾಲಯ ಕಟ್ಟಿದರೂ ಶಿವನ ಮೂರ್ತಿ ಸ್ಥಾಪಿಸಿದರೂ ಅದು ಒಂದು ಕಾಲದಲ್ಲಿ ಅಳಿವಿನಿಂದುಕ್ತವಾದುದಾಯಿತಲ್ಲದೆ, ಅಮರ ಶಿವಾಲಯವಾಗಲಿಲ್ಲ, ಏಕೆಂದರೆ

ಕಲ್ಲದೇವರ ಮಾಡಿ ಕಲ್ಲ ಮನೆಯ ಮಾಡಿ, ಕಲ್ಲು ಕಲ್ಲಮೇಲೆ ಕಡೆದರೆ ದೇವರೆತ್ತ ಹೋದನೋ? ಗುಹೇಶ್ವರಾ, ನೀ ಕಲ್ಲಾದರೆ ನಾನೇನಪ್ಪೆನಯ್ಯ ಎಂದು ಪ್ರಭುದೇವ ಬಿತ್ತರಿಸಿದುದು ನೋಡಿದರೆ, ಉಳ್ಳವರು ಶಿವಾಲಯ ಮಾಡಿದುದು ಕಲ್ಲು. ಶಿವನಾಗಿ ನಿಂತ ಮೂರ್ತಿಯು ಕಲ್ಲು. ಆ ಕಲ್ಲಿಗೆ ಶಿವನೆಂದು ಪ್ರಾಣ ಪ್ರತಿಷ್ಠೆ ಮಾಡಲು ಬಂದ ಆಚಾರ್ಯರು ಗುರುವರರು ಶಿವನ ನಿರ್ಮಾಣ ಮಾಡಿದೆವು. ಇನ್ನು ಮೇಲೆ ಈ ಶಿವನು ಬೇಡಿದ ಇಷಾರ್ಥವನೀವನು, ನೀವು ಭಕ್ತಾದಿಗಳು, ಭಾವಪೂರ್ವಕವಾಗಿ ನಡೆದುಕೊಂಡಷ್ಟು ನಿಮ್ಮ ಗ್ರಾಮವೆ ಧನಧಾನ್ಯದಿಂದಲೂ ಸತಿ ಪುತ್ರಾದಿಗಳಿಂದಲೂ ಆವುದಕ್ಕೂ ಕಡಿಮೆ ಇಲ್ಲದೆ ಇವನು ಕೊಡುವನೆಂದು ಹೇಳಿದರು. ಗುಹೇಶ್ವರಾ ನೀ ಕಲ್ಲಾದರೆ ನಾನೇನಪ್ಪೆನಯ್ಯ ಎಂದು ಹೇಳಿಹರು.

ಬಡವ ಮಾಡಿದ ಗುಡಿ, ಅಳಿವಿಲ್ಲದ ಗುಡಿ, ಇದು ಸ್ವಾನುಭವದ ಗುಡಿ, ಈ ಗುಡಿ ವಡ್ಡರಿಂದ ನಿರ್ಮಾಣ ಮಾಡಲಿಲ್ಲ, ಭಕ್ತರ ಹಣ ಬೇಡಲಿಲ್ಲ, ಭಾವಿಕರ ಸಹಾಯವ ಬೇಡಲಿಲ್ಲ. ಇವರಾರ ಸಹಾಯವಿಲ್ಲದೆ, ಸ್ವಂತ ನಿರ್ಮಿಸಬೇಕೆಂಬ ಅಹಂಕಾರದಿಂದುಕ್ತ ಮಾಡಿದನೆ? ಇಲ್ಲ, ಬಡವ ಗುಡಿ ನಿರ್ಮಿಸಲು ಕರೆದರೆ ಉಳ್ಳವರು ಹೇಗೆ ಬರುವರು. ಬಡವನನ್ನೆ ಸೇರದವರು, ಬಡವನ ಕಾರ್ಯವ ಹೇಗೆ ಒಪ್ಪಿಕೊಳ್ಳವರು, ಇವರು ಹಣವುಳ್ಳವರು ಶಕ್ತಿ ಉಳ್ಳವರು, ಬಲವುಳ್ಳವರು, ಭಾವವುಳ್ಳವರು, ಬಡವನೆಂದರೆ ಹಣವಿಲ್ಲದವ ಶಕ್ತಿ ಇಲ್ಲದವ ಭಾವವಿರಹಿತ, ಉಳ್ಳವರು ಇಲ್ಲದವರನೆಂತು ಸೇರುವರು. ಇದು ಕಾರಣ ಬಸವರಸರು ತಾನೆ ಜಂಗಮಭಕ್ತನಾಗಿ ಸ್ವಾನುಭವದ ಮಂದಿರ ಸ್ಥಾಪಿಸಿ ಜಂಗಮ ಲಿಂಗವ ಸ್ಥಾಪಿಸಿ ಜಂಗಮಕ್ಕಳಿವಿಲ್ಲವೆಂದು ಕೂಡಲಸಂಗಮದೇವಾ ಕೇಳಯ್ಯ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲವೆಂದು ದೇವರ ಸಾಕ್ಷಿ ಮಾಡಿ ಹೇಳಿಕೊಂಡಿಹರು.

ಬಸವರಸರು ಜಂಗಮಕ್ಕಳಿವಲ್ಲವೆಂದು ಹೇಳಿದುದು ಗಮನಾರ್ಥದಿಂದುಕ್ತವಾದುದು. ಜಂಗಮವೆಂಬುದು ಒಂದು ವ್ಯಕ್ತಿಯಲ್ಲ, ಜಾತಿಗೆ ಸೇರಿದುದು ಅಲ್ಲ ನಿಸ್ಸೀಮವು. ಲಿಂಗ ಒಂದಾಗಿರ್ದ ಘನ ಜಂಗಮ, ಶುದ್ಧ ಶಿವೈಕ್ಯವು ಮಹಾಘನವು, ಈ ಅನುಪಮ ಮಹಾನುಭಾವಿ, ಜಂಗಮ ಭಕ್ತ ಬಸವಣ್ಣ ಶುದ್ಧ ಶಿವೈಕ್ಯವಾಗಿಹ ಗುಡಿ. ಇದು ಬಸವನ ಗುಡಿ, ಉಳ್ಳವರು ಶಿವಾಲಯ ಮಾಡುವರು. ಅಂಥ ಗುಡಿಯ ನಾನೇನ ಮಾಡುವೆನಯ್ಯ ಬಡವನು ಎಂದು ಹೇಳಿಹರು.

ಬಸವಣ್ಣನವರು ಗುರುವಿನ ಕೈಯಲಿ ಆನು ಸತ್ತು ಹುಟ್ಟಿದವರು. ಇದು ಕಾರಣ ದಾಸೋಹಂ ಭಾವಿಗಳು, ಈ ದಾಸೋಹಂಭಾವದಲ್ಲಿ ಎದ್ದುತೋರುವ ಚರಜಂಗಮದ ಘನಗುಡಿ. ಕಾಲೆ ಕಂಬ ದೇಹವೆ ದೇಗುಲ, ಶಿರವೆ ಹೊನ್ನ ಕಳಶ ಒಳಗೆ ಉಪಮಿಸಬಾರದ ಲಿಂಗವು ಪ್ರಜ್ವಲಿಸುತ್ತಿರುವದು ಇದನ್ನು ಬಾಹ್ಯದೃಷ್ಟಿಯಿಂದ ಉಪಮಿಸಲು ಹೋಗಬಾರದು ನೋಡಾ. ನಿರವಯದೇವನ ಅವಯವಕ್ಕೆ ತರಬಾರದು ನೋಡಾ, ನಿರ್ಜನಿತ ಬಸವ ದೇವ ಜನಿತಕ್ಕೆ ತರಬಾರದು ನೋಡಾ, ನಿರ್ಮಾಯನನ್ನು, ಚಾರಿತ್ರ್ಯ ಪುರುಷನ ಮಾಡಬಾರದು ನೋಡಾ. ಚಿನ್ಮಯದೇವನಿಗೆ, ಚಿದಂಗವೆ ಕಾಲ, ಚಿದ್ ಭಾವಮಯವಾಗಿಹ ದೇಗುಲ ಚಿದ್ರಸವುಳ್ಳ ಶಿರ, ಇದುವೆ ಹೊನ್ನಕಳಸವು, ನುಡಿಗೆಡೆಗೊಡದ ಘನಸುಖ ಜಂಗಮ ನಿಲವುಳ್ಳ ಗುಡಿಯಾದುದರಿಂದ ಜಂಗಮಕ್ಕಳಿವಿಲ್ಲವೆಂದು ಹೇಳಿಹರು.

**ವಚನ 12**

**ನಿನ್ನ ನಾನರಿಯದ ಮುನ್ನ ನೀನೆಲ್ಲಿದ್ದೆ,**
**ಎನ್ನೊಳಗಿದ್ದು ನಿನ್ನ ತೋರಲಿಕೆ**
**ನೀನೆ ರೂಪಾದೆ. ಇನ್ನು ಜಂಗಮವೆ**
**ಲಿಂಗವೆಂದು ನಂಬಿದೆ ಕೂಡಲಸಂಗಮದೇವಾ. ॥ 822 ॥**

ತಾತ್ಪರ್ಯ: ನಿನ್ನ ನಾನರಿಯದ ಮುನ್ನ ನೀನೆಲ್ಲಿದ್ದೆ, ಎನ್ನೊಳಗಿದ್ದು ನಿನ್ನ ತೋರಲಿಕ್ಕೆ ನೀನೆ ರೂಪಾದೆ ಇನ್ನು ಜಂಗಮವೆ ಲಿಂಗವೆಂದು ನಂಬಿದೆ, ನಿನ್ನ ಎಂಬುದು ನೀನು ಎಂಬುದು ಎರಡು ಒಂದೆ. ನಿನ್ನನ್ನು ನಾ ನರಿಯದ ಮುನ್ನ ನಿನ್ನನು ಎಂಬುದು ಏನೊಂದುಸರಲು ಎಡೆಗೊಡದ ಮಹಾ ಘನವು. ನಾನು ಎಂಬುದು ಕಲ್ಪಿತನು ಜೀವನು. ಕಲ್ಪಿತನಾಗಿ, ಜೀವನಾಗಿ, ನಾ ನರಿಯದ ಮುನ್ನ ಏನೊಂದುಸರಲು ಎಡೆಗೊಡದ ಮಹಾಘನವಾದ ನೀನು ಎಲ್ಲಿದ್ದೆ, ಎನ್ನೊಳಗಿದ್ದು ನಿನ್ನ ತೋರಲಿಕ್ಕೆ ನೀನೆ ರೂಪಾದೆಯಾ!

ಓ ಘನ ಗಂಭೀರ ಮಹಾಘನ ವೆ ಎನ್ನೊಳಗಿದ್ದು ನಿನ್ನ ತೋರಲಿಕ್ಕೆ ನೀನೆ ರೂಪಾದೆಯಾ! ಕರುಣಾಳುವೆ? ಎನ್ನಳಗಿದ್ದುದ ನಿನ್ನ ತಿಳಿಯಲು ನನ್ನಿಂದ ಅಸಾಧ್ಯವೆಂದು ನಿನ್ನ ತೋರಲು ನೀನೆ ರೂಪಾದೆಯಾ?

ಓಹೋ ನನ್ನಯ್ಯ ನೀನು ತೋರಬಾರದ ಘನ ಹೇಳಲೆಂದೇನೋ? ಹೇಳಬಾರದ ಘನ ನಿನ್ನ ತಿಳಿಯುವದದೆಂತು? ನಿನ್ನ ತಿಳಿಸಲು, ನೀನೆ ರೂಪಾದೆಯಾ, ನಿನ್ನ ದರ್ಶನವಿತ್ತಲು ನೀನೆ ರೂಪಾಗಿ ಬಂದೆಯಾ, ಅಹಹ ಭಕ್ತರ ಹೃದಯದೊಳ್ ಬೆಳಗಿನೊಳಗಣ ಬೆಳಗು. ಮಹಾಬೆಳಗೆ ನೀನಾಗಿದ್ದರೂ ನೀನು ರೂಪಾಗಿ ತೋರುವ ತನಕ ಅದೆಂತು ಸಾಧ್ಯ. ಅಯ್ಯ ನಿನ್ನ ತೋರಲಿಕ್ಕೆ ನೀನೆ ರೂಪಾದ ಘನವ ಅದೆಂತು ವರ್ಣಿಸುವದು.

ನಿರಾವರಣ, ನಿರ್ಜನಿತ, ನಿರ್ಲೇಪ, ನಿರ್ವಚನೀಯ ಉಪಮಿಸಲಿಲ್ಲ ನಿಲ್ಲೊ, ನಿರಾಳ, ನಿರ್ಮಾಯ, ನಿಸ್ಸಂಗಿ, ನಿರ್ಲಿಖಿತ, ನಿರವಯನ, ಅವಯವಕ್ಕೆ ತರಲಿಲ್ಲ,

ನಿಲ್ಲೊ ಸಿಮ್ಮಲಿಗೆಯ ಚೆನ್ನರಾಮನೆಂಬ ಜಂಗಮ ಲಿಂಗವನುಪಮಿಸಲಿಲ್ಲ ನಿಲ್ಲೊ. ಲಿಂಗ ಒಂದಾಗಿರ್ದ ಜಂಗಮವೆ, ನಿನ್ನ ತೋರಲಿಕ್ಕೆ ಬಂದ ರೂಪ, ಘನಕ್ಕೆ ಘನವಾದ ರೂಪ, ರೂಪವದು ನಿರೂಪ, ರೂಪ, ನಿರೂಪವಾಗಿರ್ದರೂಪ, ರೂಪವೆಂಬೆನೆ ನಿರೂಪ. ನಿರೂಪವದು ಅವರ್ಣೀಯವು, ಇದು ಘನಕ್ಕೆ ಘನವಾದುದು. ಇದನೆಂತು ವರ್ಣಿಸುವುದು.

ನಿರಾವರಣ, ನಿರ್ಜನಿತ ವಾದ ನಿನ್ನಿರವು ಉಪಮಿಸಲಳವಲ್ಲ. ಜನಿತವೆಂಬೆನೆ ನಿರ್ಜನಿತ, ನಿರ್ಜನಿತವದು ಹೇಳಲು ಬಾರದ ಘನವು, ನಿರಾವರಣವೆಂಬೆನೆ ನಿರ್ಲೇಪವು, ಇದು ಜಂಗಮ ಒಂದಾಗಿರ್ದಲಿಂಗ ಅನುಪಮವಾದುದರಿಂದ ಉಪಮಿಸಲಿಲ್ಲ ನಿಲ್ಲೊ! ತಂದೆಯಿಲ್ಲದ, ತಾಯಿ ಇಲ್ಲದ ಹೆಸರಿಲ್ಲದ, ಮರವರುವಿಗೆ ಮೀರಿದ ಘನಕ್ಕೆ ಆವುದರ ಹೊದಿಕೆ. ಬಂಧಮೋಕ್ಷ ಕಾಣದ ನಿರ್ದ್ವಂದ್ವನಿಗೆ ಆವುದರ ಗ್ರಹಣ ಆವುದರ ತ್ಯಾಗ. ಗಗನವು ಆವುದರ ಸ್ಪರ್ಶ. ಆವುದರ ಅಸ್ಪೃಶ್ಯ. ಅಖಂಡಿತ ಘನವಪ್ಪ ಪೂರ್ಣವು ತಾನಿರುವಲ್ಲಿ ಆವುದರ ಲೇಪನ? ಆವುದರ ಅಲೇಪನ? ಎಡೆಯಿಲ್ಲದ ಪರಿಪೂರ್ಣನೆಂಬುದಕ್ಕೂ ಮೀರಿ ಘನಕ್ಕೆ ಘನವೆ ತಾನಾಗಿರ್ದುದರಿಂದ ತಾನು ಏನೊಂದುಸರಲು ಎಡೆಗೊಡದಘನವಿರ್ದು ತಾನು ಅನಿರ್ವಚನೀಯನುಪಮಿಸಲಿಲ್ಲ ನಿಲ್ಲೊ.

ನಿರಾಳ ನಿರ್ಮಾಯ ನಿಸ್ಸಂಗಿ ನಿರ್ಲಿಖಿತ ನಿರವಯನ ಅವಯವಕ್ಕೆ ತರಲಿಲ್ಲ. ನಿಲ್ಲೊ ಓ ನನ್ನಯ್ಯ ಜಂಗಮ ಲಿಂಗವೆ, ನೀನು ಶುದ್ಧ, ಶಾಂತ, ನಿಶ್ಚಿಂತ, ನಿರ್ಭಯ, ಪರಬೊಮ್ಮ, ಪರಬ್ರಹ್ಮವೆಂಬುದಕ್ಕೂ ನಿಲುಕದವನು, ವಾಙ್ಮನೋತೀತನಾದುದರಿಂದ ನಿನ್ನ ನಿರ್ಲಿಖಿತದ ಘನವ ನೀನೆ ಬಲ್ಲೆ. ನೀನು ಶುದ್ಧಾ ಶುದ್ಧವೆಂಬುದಕ್ಕೂ ಸಮಸ್ವರೂಪವಾಗಿಹ ನಿನ್ನ ನಿಷ್ಕಳಂಕದ ಘನವ ನೀನೆ ಬಲ್ಲೆ, ಮರವರುವಿಗೆ ಮೀರಿದ ಘನವೆ ನಿನ್ನಿರುವು ಆಗಿರುವಲ್ಲಿ ನೀನು ಸದಾ ಪ್ರಶಾಂತನಿರುವಿ. ನಿನ್ನ ಪ್ರಶಾಂತದ ಘನವ ನೀನೆ ಬಲ್ಲೆ, ನೀನು ಚಿಂತನಗಳಿಗೆಡೆಗೊಡದ ಘನವಾದ್ದರಿಂದ ನಿಶ್ಚಿಂತವದು ನಿನ್ನಿರವು ನಿನ್ನ ನಿಶ್ಚಿಂತದ ಘನವ ನೀನೆ ಬಲ್ಲೆ. ನಿರೂಪ ನೀನಾಗಿರುವಲ್ಲಿ ನಿರ್ಭಯನು. ಆವ ಭಕ್ತರೆ ಆಗಲಿ, ಆರೆ ಆಗಲಿ ಅವರು ನಿನ್ನನ್ನು ರೂಪವಾಗಿ ಕಂಡರೂ ಇದ್ದಂತಿರುವೆ ಅರೂಪವಾಗಿ ಕಂಡರೂ ಇದ್ದಂತಿರುವೆ. ನಿರೂಪವಾಗಿ ಕಂಡರೂ ಇದ್ದಂತಿರುವೆ. ನಿನ್ನದು ನಿರಂತರ ಇದ್ದಂತಿರುವ ಘನವು ಅಚಿಂತ್ಯವಾದುದರಿಂದ ನಿರ್ಭಯನೆಂದು ಹೇಳಿಹರು.

ಆದಿ, ಅನಾದಿಯಿಂದತ್ತತ್ತ ಮುನ್ನಲಾದ ಪರತತ್ವ ನೀನಾದುದರಿಂದ ನಿರ್ಮಾಯ ನಿನ್ನದು. ಕುರುಹುಗಳಿಂದುಕ್ತವಾದುದು ನಿನ್ನ ಸ್ವರೂಪವಲ್ಲ. ಶಬ್ದದಿಂದ ಸೂಚಿಸುವ ಲಕ್ಷಣವು ನಿನ್ನದಲ್ಲ ಇದು ಕಾರಣ ನೀನು ನಿರ್ಮಾಯನಾದುದರಿಂದ ಲಿಂಗ ಒಂದಾಗಿರ್ದ ಜಂಗಮ. ನೀನು ನಿಸ್ಸಂಗಿ, ಕ್ಷರಾಕ್ಷರವೆಂಬುದಕ್ಕು ಮೀರಿದ ಘನ ನೀನಾಗಿರುವದರಿಂದ ನಿಸ್ಸಂಗಿ. ನಿನ್ನ ನ್ನು ರೂಪವುಳ್ಳವನನ್ನಾಗಿ ಕಂಡವರಿಗೂ ನಿಸ್ಸಂಗಿ ಅರೂಪವುಳ್ಳವನನ್ನಾಗಿ ಕಂಡರೂ ನಿಸ್ಸಂಗಿ. ನೀನು ನಾಶ, ಅವಿನಾಶಿ ಎನ್ನುವವರಿಗೂ

ನಿಸ್ಸಂಗಿ. ಪ್ರಕಾಶಕ ಪ್ರಕಾಶಿತ ಎಂಬುವವರಿಗೂ ನಿಸ್ಸಂಗಿ, ನೀನು ಸತ್ಯ ಅಸತ್, ಮಿಥ್ಯೆ ಎಂಬುವವರಿಗೂ ನಿಲುಕದವನಾದುದರಿಂದ ನಿಸ್ಸಂಗಿ, ಜಡ ಚೇತನವೆಂಬ ವಿಭಾಗ ದೃಷ್ಟಿಯುಳ್ಳವರಿಗೂ ನಿಲುಕದವನಾದುದರಿಂದ ನಿಸ್ಸಂಗಿ. ಅರಿತೆ ಅರಿಯೆನೆಂಬುವವರಿಗೂ ನಿಲುಕದವನಾದುದರಿಂದ ನೀನು ನಿಸ್ಸಂಗಿ. ನಿಸ್ಸಂಗವೆ ನಿನ್ನಯ ಇರವು ಆದುದರಿಂದ ಲಿಂಗ ಒಂದಾಗಿರ್ದ ಜಂಗಮನೆಂದು ಹೇಳಿಹರು.

ನಿರ್ಲಿಖಿತ ಜಂಗಮ, ಈ ಜಂಗಮ ಶುದ್ಧ ಶಿವೈಕ್ಯಜಂಗಮ, ಶಿವ ಶಿವ ಎನ್ನದವನು ಶಿವೈಕ್ಯನು ಜಂಗಮ, ಜಂಗಮ ಎನ್ನದವನು ಜಂಗಮ, ಶಬ್ದಮುಗ್ಧ ಜಂಗಮ, ಮೂಕನ ಮೌನವ ಅದೆಂತು ಬರೆವುದು. ಚಿಂತನೆಗೆಡೆಗೊಡದ ಘನದಿರುವೆ ತನ್ನಿರವು ಅರುವೆಂದವಂಗೆ ಅದೆಂತು ಬರೆವದು, ಗಗನದ ನಿಲವು ಅದೆಂತು ಬರೆವದು, ಲಿಂಗವರಿತು ಲಿಂಗವಾಗಿಹ ಜಂಗಮನ ನಿಲವು ಅದೆಂತು ಬರೆವುದು, ಅವಯವವುಳ್ಳವ ನುಡಿ ನಡೆ ಬರೆಯುವುದು ಸಹಜ. ನಿರವಯನ ನುಡಿ ನಿಃಶಬ್ದ ನಡೆ ನಿರ್ಗಮನ, ನಿಃಶಬ್ದ ಘನವು ನಿರ್ಲಿಖಿತವಾಗಿದೆ. ಇದು ಕಾರಣ ಲಿಂಗ ಒಂದಾಗಿರ್ದ ಜಂಗಮ ನಿರ್ಲಿಖಿತವು ನಿರವಯನನ್ನು ಅವಯವಕ್ಕೆ ತರಲಿಲ್ಲ. ನಿಲ್ಲೊ ಸಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗವು, ಜಂಗಮ ಲಿಂಗವನುಪಮಿಸಲಿಲ್ಲ, ನಿಲ್ಲೊ!

ಬಸವರಸರು ನಿನ್ನ ತೋರಲಿಕ್ಕೆ ನೀನೆ ರೂಪಾದುದು ಘಟಿತಾ ಘಟಿತವದು, ಅಸಾಧ್ಯವಾದುದು ಸಾಧ್ಯವಾದಂತೆ, ಏನೊಂದುಸರಲು ಬಾರದ ಘನ ನೀನಾದುದರಿಂದ ಇನ್ನು ಜಂಗಮವೆ ಲಿಂಗವೆಂದು ನಂಬಿದೆ ಕೂಡಲಸಂಗಮದೇವಾ ನಿಜವರಿತವನು. ನಿಜ, ನಿಜವೆನ್ನದವನು ಅವನೆ ನಿಜೈಕ್ಯ ಜಂಗಮ. ಅಂತಪ್ಪ ತತ್ವವರಿತ ಮಹಾಂತರನ್ನು ಬಸವಣ್ಣನವರು ಜಂಗಮವೆ ಲಿಂಗವೆಂದು ನಂಬಿದೆ ಕೂಡಲಸಂಗಮದೇವಾ ಎಂದು ದೇವನ ಸಾಕ್ಷಿ ಮಾಡಿ ಹೇಳಿಹರು.

**ವಚನ 13**

**ಗುರು ಮುನಿದರೆ ಒಂದು ದಿನ ತಾಳುವೆ,**
**ಲಿಂಗ ಮುನಿದರೆ ದಿನವರೆ ತಾಳುವೆ,**
**ಜಂಗಮ ಮುನಿದರೆ ಕ್ಷಣ ಮಾತ್ರ ತಾಳಿದೆನಾದಡೆ,**
**ಎನ್ನ ಪ್ರಾಣದ ಹೋಕು ಕೂಡಲಸಂಗಮದೇವಾ. ॥ 823 ॥**

**ತಾತ್ಪರ್ಯ:** ಗುರು ಮುನಿದರೆ ಒಂದು ದಿನ ತಾಳುವೆ: ಯುಗದ ಪರಿ ಬಹು ವಿಪರೀತವು, ಲೋಕದ ಹೃದಯಕ್ಕೂ ಮಹಾಂತರ ಹೃದಯಕ್ಕೂ ಬೆಳಕು ಕತ್ತಲೆಗಿರುವಷ್ಟು ವ್ಯತ್ಯಾಸವು. ಪ್ರಾಣ ಹೋಗುವದೆಂದಲ್ಲಿ ಬಹು ಜನರು ಗಾಬರಿಗೊಳ್ಳುವರು. ಭಯಭೀತರಾಗುವರು, ದುಃಖಿಸುವರು, ತತ್ವಕ್ಕಾಗಿ ತತ್ವ ತಿಳಿಯುವದರ ಸಲುವಾಗಿ, ತತ್ವಾನುಭವಕ್ಕಾಗಿ ಈ ಲೌಕಿಕರು ತಮ್ಮ ಶರೀರ ಆಯುಷ್ಯದ ಸದುಪಯೋಗ ಮಾಡುವರಾ? ತತ್ವ ತಿಳಿಯುವ ತವಕ ಆರಿಗಾದರೂ ಇದೆಯಾ? ತತ್ವ ತಿಳಿಸುವ ಗುರುಘನನು ಮುನಿಸುಗೊಂಡರೆ ತಮಗೆ ಭೀತಿ ಇದೆಯಾ? ದುಃಖವಾಗುತ್ತಿದೆಯಾ? ಇದು ಕಾರಣ ತಮ್ಮ ತನುಮನಧನಗಳು,

ಮೀಸಲವಾಗಿಟ್ಟವರೆಂದರೆ ಶರಣರು ಶರಣೆಯರು, ತತ್ವಾಭಿಮಾನಿಗಳು, ತತ್ತ್ವನಿಷ್ಠರು, ತತ್ತ್ವವೇತ್ತರು. ಸವೆಯದ ಸುಖಸ್ವರೂಪ ತಾವಾದವರು, ಅದರಲ್ಲಿ ಬಸವ ರಾಜದೇವರು, ಗುರುವಿಗಾಗಿ ತನುವ, ಲಿಂಗಕ್ಕಾಗಿ ಮನವ, ಜಂಗಮಕ್ಕಾಗಿ ಧನವ ಮುಡುಪಾಗಿಡುವದಲ್ಲದೆ, ಗುರು ಮುನಿದರೆ ಒಂದು ದಿನ ತಾಳುವೆ ಎಂದು ಹೇಳಿಹರು.

ಬಸವರಸರದು ಗುರುಮುನಿದರೆ ಒಂದು ದಿನ ತಾಳುವೆ; ಗುರುಗಳೆಂದರೆ ಆರು? ಈ ಗುರುಘನ ತತ್ವದೃಷ್ಟಿ ದಯಪಾಲಿಸುವ ಘನ. ತತ್ವದಿರುವಿನ ಅರುವು ಎಲ್ಲೆಲ್ಲೂ ಸಿದ್ಧಮಾಡುವ ಸ್ವಯಂ ತೇಜ, ಈ ಗುರು ಘನದ ಕಾರುಣ್ಯವನೇನೆಂಬೆ. ಅರಿದಿಹೆನೆಂದಡೆ ಅರುಹಿಂಗಸಾಧ್ಯ, ನೆನದಿಹೆನೆಂದಡೆ ನೆನಹಿಂಗಸಾಧ್ಯ, ಭಾವಿಸಿಹೆನೆಂದಡೆ ಭಾವಕ್ಕಸಾಧ್ಯ. ವಾಙ್ಮನಕ್ಕಗೋಚರವನರಿವ ಪರಿ ಎಂತಯ್ಯ ಗುರು ತೋರದನ್ನಕ್ಕರ. ಗುರು ಶಿಷ್ಯರ ಮಧ್ಯದಲ್ಲಿ ಸ್ವಯಂತೇಜ ಉದಯವಪ್ಪುದೆಂಬ ಶೃತಿ ಹುಸಿಯೆ? ಕೂಡಲಸಂಗಮದೇವಾ ನಿಮ್ಮ ಮಹಾನುಭಾವರ ಮಥನದಿಂದ ನಿಜವ ನೆಲೆಗೊಳಿಸಾ ಪ್ರಭುವೆ. ವಾಙ್ಮನೋತೀತವಾಗಿಹ ತತ್ವದಿರವು ಗುರು ತೋರಿಸದ ತನಕ ಅದೆಂತು ಸಾಧ್ಯ.

ಗುರು ಕೃಪೆಯಿಂದ ಲಭ್ಯವಾಗುವುಡೆ ಸ್ವಯಂ ಜ್ಯೋತಿ ತಾನೆ. ಆಗ ಉಪದೇಶಕ್ಕೂ ಮೀರಿದ ಘನ ತಾನೆ ಇರುವಲ್ಲಿ ಮರವಿಂಗೊಳಪಟ್ಟವನು ತಾನೆ ಎಂದು ಹೇಗೆ ತಿಳಿವುದು, ಆಗ ಈರ್ವರದು ಅರು ಹೃದಯವು ಅನಿಯಮದ ಬೆಡಗು, ಮರವರುವಿಂಗೆ ಮೀರಿದ ಘನತತ್ವ, ಇದನ್ನು ಅರಿಯುವ ಅರುವಿನಿಂದ ಅರಿಯಬಹುದೆ? ಅರುವಿಂಗರುವಾಗಿಹ ಘನವು ಅದಾವ ಜ್ಞಾನದಿಂದ ಅರಿವುದು? ಕ್ಷರಾಕ್ಷರ ವೆಂಬುದಕ್ಕೂ ಮೀರಿದ ಘನವ ಅದಾವ ನೆನಹುನಿಂದ ನೆನೆಯುವದು? ಕ್ಷರವೆಂದು ನೆನೆಯುವುದೆ? ಅಕ್ಷರವೆಂದು ನೆನೆಯುವುದೆ? ಮಾತುಮನಂಗಳಿಗೆ ಮೀರಿರುವದನ್ನು ಅದೆಂತು ನೆನೆಯುವುದು ಭಾವಕ್ಕಗಮ್ಯವಾದುದನ್ನು ಅದಾವ ಭಾವದಿಂದ ಭಾವಿಸುವದು, ಇದು ಕಾರಣ ಗುರು ಶಿಷ್ಯರ ಮಧ್ಯದಲ್ಲಿ ಸ್ವಯಂ ಜ್ಯೋತಿ ಉದಯವಪ್ಪುದೆಂಬ ಶೃತಿ ಹುಸಿಯೆ? ಇದು ಗುರುವಾಗದುದು, ಶಿಷ್ಯರಾಗದುದು, ಏನೊಂದಾಗದ ಜ್ಯೋತಿ, ಬೋಧವಾಗದ ಜ್ಯೋತಿ, ಅಬೋಧವಾಗದ ಜ್ಯೋತಿ, ಕಲ್ಪಿತಕ್ಕೆಡೆಗೊಡದ ಘನಜ್ಯೋತಿ, ಇದು ಎರವಲ ಜ್ಞಾನದಿಂದ ಬಂದ ಜ್ಯೋತಿಯಲ್ಲ, ಇದು ಆವಾವುದರಿಂದಲೂ ಬೆಳಗಿಸಿಕೊಳ್ಳದ ಜ್ಯೋತಿಯು, ಬೆಳಗುಳ್ಳ ಜ್ಯೋತಿಯಾದುದರಿಂದ ಸ್ವಯಂ ಜ್ಯೋತಿ ಎಂದು ಹೇಳಿಹರು.

ಗುರುವೆ ಇಹ ಪರ ಗುರುವೆ, ನಿರ್ಮಳಾಂಗೆ ಗುರುವೆ, ಶುದ್ಧಾತ್ಮನೆ ಕರುಣಾಕರನೆ, ನಿನ್ನಂತೆ ಎನ್ನವನು ಮಾಡಿದ ಪರಮಗುರುವೆ ನೀನು ಶ್ರೀ ಮಲ್ಲಿಕಾರ್ಜುನ. ಚಿತ್ ಸ್ವರೂಪವರಿತ ಚಿಜ್ಯೋತಿ ಗುರುಸ್ವರೂಪ, ಶಿಷ್ಯನು ಚಿಜ್ಯೋತಿಯೂ ಸ್ವಯಂ ಜ್ಯೋತಿ, ಇಹವು ಗುರುಸ್ವರೂಪ ಪರವು ಗುರುಸ್ವರೂಪ. ಎಲ್ಲೆಲ್ಲೂ ಗುರುಘನವೆ, ಇದು ಅರುಹೃದಯದಿಂದ ಹೊರಬುರವ ಮಹಾನುಭವ ಇದು ನಿಸ್ಸೀಮವು ಇಲ್ಲಿ ಭ್ರಮಾತ್ಮಕ ದೃಷ್ಟಿಗಿಂಬಿಲ್ಲವಾದ್ದರಿಂದ ಅಜ್ಞರ ದೃಷ್ಟಿಗೆ ತೋರುವ ಇಹವಿಲ್ಲ, ಪುಣ್ಯರುಗಳ

ದೃಷ್ಟಿಗೆ ತೋರುವ ಸ್ವರ್ಗವೂ ಇಲ್ಲ ಮರವಿನಿಂದುಕ್ತನಾದ ಶಿಷ್ಯನಿಲ್ಲ, ಅರುವಿನಿಂದುಕ್ತವಾದ ಗುರುವಿಲ್ಲ, ಅರುವಿಂಗರುವಾಗಿಹ ಘನವು ಇದ್ದಂತಿಹ ಸ್ವಯಂ ತೇಜವು, ಇದು ಗುರುಶಿಷ್ಯರ ಮಧ್ಯದಲ್ಲಿಹ ಉದಯವು ಸ್ವಯಂತೇಜ. ಈ ಸ್ವಯಂಜ್ಯೋತಿ ತನ್ನೊಳ ತನ್ನಿಂದ ಕಂಡುದು ಅದು ತಾನೆ ತಾನಾದ ನಿಲವು, ಈ ಪರಮ ನಿಲುವು ಕರುಣಿಸಿದ ಕರುಣಾಕರನ ಕರುಣೆಯು ವರ್ಣಿಸುವದದೆಂತು! ಇಂತಿಪ್ಪ ಗುರುಹೃದಯ ಎನ್ನವನು ತನ್ನಂತೆ ಮಾಡಿದ ಕರುಣಾಹೃದಯ, ಸಮ ದೃಷ್ಟಿಯನ್ನೆ ಸಿದ್ಧಮಾಡಿದ ಸ್ವತಃ ಸಿದ್ಧ ಇರುವಿನ ಅರುವೆ ಮಾಡಿದ ಕರುಣಾಕರ ಮುನಿದಲ್ಲಿ ಒಂದೆ ದಿನ ಬದುಕಿರಲು ಸಾಧ್ಯವು.

ಲಿಂಗ ಮುನಿದರೆ ದಿನವರೆ ತಾಳುವೆ: ಇದು ಅರಿಯದರುವುಳ್ಳ ಹೃದಯ, ಲಿಂಗವದು ಅರಿಯದರುವು ಆದುದರಿಂದ ಶಬ್ದಮುಗ್ಧ ಶೃತಿಗಗೋಚರವಾಗಿಹ ಲಿಂಗ, ಶೃತಿಯೆಂಬುದು ಲಿಂಗದ ಮುಂದೆ ಪ್ರಕಾಶವು ಪರ ಶೃತಿಯನ್ನೆ ಲಿಂಗವು ಬೆಳಗುವುದಲ್ಲದೆ ಲಿಂಗಕ್ಕೆ ಶೃತಿ ಬೆಳಗುವದಲ್ಲ, ಮರುವಿಂಗೆ ಶೃತಿಯು ಘನವಾಗಿಹುದು, ಅರುವಿಂಗೆ ಅರುವಾದುದರಿಂದ ಅದು ಆವಾವುದನ್ನು ಅರಿಯದರುವು ಇದು ಕಾರಣ ಶಬ್ದ ಮುಗ್ಧವೆಂದು ಹೇಳಿಹರು. ಲಿಂಗವದು ನುಡಿಗೆಡೆಗೊಡದ ಘನವು ಆದುದರಿಂದ ನಿರಾಲಂಬವು ನಿರವಧಿಯು, ನಿರಪೇಕ್ಷವು, ಭಾವಕ್ಕಿಂಬಿಲ್ಲ ಶಬ್ದ ಮೀಸಲು, ನುಡಿಗೆಡೆಯಿಲ್ಲ ಎಡೆಗೆ ಕಡೆಯಿಲ್ಲ, ಗುಹೇಶ್ವರಲಿಂಗ ವೇಧಿಸಲೊಡನೆ, ವೇದವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮಲಿಂಗವರಿಯ ಹೋಗಿ ತಾನು ಅದುವೆ ಆಗಿಹ ಘನವು. ಇದು ಲಿಂಗದ ರಹಸ್ಯವ ತಿಳಿಯಹೋಗಿ ಅದುವೆ ಆಗಿಹ ಘನದಿರವು. ಇಲ್ಲಿ ಭಾವಿಸುವದೆಲ್ಲ ಭ್ರಮೆ ಆಗಿದೆ. ಲಿಂಗ ಲಿಂಗ ಎಂಬುದೆ ಭ್ರಾಮಕವಾಗಿದೆ. ಏಕೆಂದರೆ ಭಾವಕ್ಕಗಮ್ಯವಾದುದನ್ನು ಭಾವಿಸುವದದೆಂತು, ಶೃತಿಗಗೋಚರವಾಗಿಹ ಘನಲಿಂಗವು ಅಲ್ಲಿ ಶಬ್ದದ ಬಳಕೆ ಹೇಗೆ ಸಾಧ್ಯ, ಏನೊಂದುಸರಲು ಎಡೆಗೊಡದ ಘನದಲ್ಲಿ, ಲಿಂಗ ಲಿಂಗ ಎಂಬುದಾಗಲಿ ಸಚ್ಚಿದಾನಂದ ಸಚ್ಚಿದಾನಂದವೆಂಬುದಾಗಲಿ, ಜಂಗಮ ಜಂಗಮ ಎಂದು ಉಸುರುವುದೆ ದೋಷವಾಗಿರುವಲ್ಲಿ ಶಬ್ದ ಮೀಸಲು ಎಂದು ಹೇಳಿಹರು. ಮೌನವೆಂಬ ಸಂಜ್ಞೆಗೆ ಮೀರಿ ತನ್ನ ನಿರಾಲಂಬವಾಗಿಹ ನಿರವಧಿಯ ಘನವು ನುಡಿಗೆ ಅವಕಾಶ ಕೊಡಬಹುದೆ?

ಗಗನವು ಶಬ್ದ ಮುಗ್ಧತ್ವ ಗಗನವಾದವಂಗೆ ಸಾಧ್ಯವು, ಹಾಗೆ ಲಿಂಗದ ನಿರಾಲಂಬತ್ವ ನಿರಪೇಕ್ಷತ್ವ ನಿರವಧಿಯ ನಿಸ್ಸೀಮತ್ವ ಲಿಂಗವರಿಯಹೋಗಿ ಲಿಂಗವೆ ತನ್ನಿರುವಿನ ಅರುವಾಗಿಹ ಘನಮಹಿಮಂಗೆ ಆರಂಭವಿಲ್ಲ, ಮುಕ್ತಾಯವಿಲ್ಲ. ಇಂತಪ್ಪ ನಿರಾಲಂಬ ನಿರಪೇಕ್ಷತ್ವ ನಿರವಧಿಯ ಅರುವುಳ್ಳ ಅರು ಹೃದಯ ಲಿಂಗ, ಇದು ಅಪ್ರತಿಮ ಲಿಂಗವರಿತು ಅದುವೆ ಆಗಿಹ ಲಿಂಗವು. ಈ ಲಿಂಗ ಹೃದಯ ಮುನಿದರೆ ದಿನವರೆ ತಾಳುವೆ ಅದಕ್ಕಿಂತ ಹೆಚ್ಚಿಗೆ ಈ ಶರೀರ ಬದುಕಿರಲು ಅಸಾಧ್ಯವು ಎಂದು ಹೇಳಿಹರು.

ಜಂಗಮ ಮುನಿದರೆ ಕ್ಷಣಮಾತ್ರ ತಾಳಿದೆನಾದರೆ ಎನ್ನ ಪ್ರಾಣದ ಹೋಕು

ಕೂಡಲಸಂಗಮದೇವಾ: ಜಂಗಮವದು, ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗವನುಪಮೆಗೆ ತಂದು ಎರಡೆನ್ನುಬಹುದೆ? ಶುದ್ಧ ಶಿವೈಕ್ಯ ಕೂಡಲ ಚೆನ್ನ ಸಂಗಮದೇವಾ ಜಂಗಮವೆಂದರೆ ಲಿಂಗ, ಲಿಂಗವೆಂದರೆ ಜಂಗಮ, ಈ ಲಿಂಗ ಜಂಗಮ ನಿಃಶಬ್ದವೇದಿ ನಿರಾಲಂಬ ನಿರಪೇಕ್ಷ ನಿರವಧಿ ಸ್ವಯಂತೇಜ, ಅರಿಯದರುವು, ಈ ಘನ ಮಹಿಮ ಆವಾವುದನ್ನು ಅರಿಯಲಿಲ್ಲದ ಅರವು, ತಾನೆ ತಾನಾದ ಘನವು ಈ ದೇವ ದೇವ. ಅಪ್ರಮಾಣ ಅಗಮ್ಯ. ಅಚಿಂತ್ಯ ಅಕಲ್ಪಿತ, ಅನಾಮಯ, ಅಪಾರ, ಅದ್ವಿತೀಯವೆಂಬುದು ಜಂಗಮ ನಿಲುವಿಂಗೆ ಇದೊಂದು ಪ್ರಮಾಣವೆ ಆಗಿರುವಲ್ಲಿ ಅದಾವ ಭಾಷೆಯ ತರುವದು, ಹೇಳಲು ಬಾರದ ಘನದಲ್ಲಿ ಹೇಳುವದೆಲ್ಲ ಔಪಚಾರಿಕವು ಎಂದೆನಿಸಿ ಜಂಗಮವೆಂಬುದು ಅನುಪಮ ಸುಖ, ಸುಖಿ ಸುಖಾನುಭವ . ಈ ತ್ರಿವಿಧದ ಸಂಗವು, ಸುಖರೂಪ ಹೃದಯು ಸುಖಿಯಾಗಿಹ ಹೃದಯು ಸುಖಾನುಭವವುಳ್ಳ ಹೃದಯ ಇದು ನಿರಾಲಂಬಿ ಸುಖ ನಿರಪೇಕ್ಷವಂತನು ಸುಖಿ, ನಿರವಧಿಯಾಗಿಹ ಹೃದಯ ಸುಖಾನುಭವವುಳ್ಳ ಹೃದಯ, ಈ ಅಕ್ಷಯ ಸುಖರೂಪ ಹೃದಯ ಜಂಗಮ ಹೃದಯ ಇಂತಪ್ಪ ಪರಮಾನಂದರೂಪಿ ಜಂಗಮ ಮುನಿದರೆ ನನ್ನ ಪ್ರಾಣ ಒಂದು ಕ್ಷಣ ಸಹ ಉಳಿಯದು ಎಂದು ಹೇಳಿಹರು.

**ವಚನ 14**

**ಜನ್ಮ ಜನ್ಮಕ್ಕೆ ಹೋಗಲಿಯದೆ ಸೋಹಂ ಎಂದೆನಿಸದೆ**
**ದಾಸೋಹಂ ಎಂದೆನಿಸಯ್ಯಾ**
**ಲಿಂಗ ಜಂಗಮದ ಪ್ರಸಾದದ ನಿಲವ**
**ತೋರಿ ಬದುಕಿಸಯ್ಯಾ,**

**ಕೂಡಲ ಚೆನ್ನ ಸಂಗಮ ದೇವಯ್ಯಾ ನಿಮ್ಮ ಧರ್ಮ. ॥ 833 ॥**

ತಾತ್ಪರ್ಯ: ಜನ್ಮ ಜನ್ಮಕ್ಕೆ ಹೋಗಲೀಯದೆ ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯ: ಜೀವಾತ್ಮನನ್ನು ಜನ್ಮ ಜನ್ಮಾಂತರಕ್ಕೀಡು ಮಾಡಿದುದು ಅಹಂಕಾರ, ಜೀವನಿಗೆ ತಾನಾರೆಂದು ತಿಳಿಯಲು ಪ್ರತಿಬಂಧಕವಾದುದು ಅಹಂಕಾರ. ಪಾಪದೋಷ, ಚಂಚಲದೋಷ, ಆವರಣ ದೋಷ ನಷ್ಟಮಾಡಲು ನಿರಹಂಭಾವವೆ ಮುಖ್ಯವು.

ನಿನ್ನ ನೊಲಿಸುವುಡೆ ನಿರಹಂಭಾವವೆ (ಮುಖ್ಯವು) ತೃಪ್ತಿ ಅನ್ಯ ಭಾವಂಗಳ ನೊಲ್ಲೆನಯ್ಯ. ಹೊನ್ನು, ಹೆಣ್ಣು, ಮಣ್ಣು, ಮುನ್ನವೆ ಸಟೆಮಾಡಿ ದಾಸೋಹದಲ್ಲಿ ಸುಖಿಯಾದೆ ಯನ್ನಯ್ಯ, ಕಪಿಲಸಿದ್ಧ ಮಲ್ಲಿಕಾರ್ಜುನ. ಸಿದ್ಧರಾಮ ಶಿವಯೋಗಿಗಳು ನಿನ್ನ ನೊಲಿಸುವುಡೆ ನಿರಹಂಭಾವವೆ ತೃಪ್ತಿ, ಅನ್ಯ ಭಾವಂಗಳ ನೊಲ್ಲೆನಯ್ಯಾ, ಎಂದು ಹೇಳಿದಾಗ ಎಲ್ಲಿಯವರೆಗೆ ಮಾನವ ಅಹಂಕಾರಿಯಾಗಿಹನು. ಅಲ್ಲಿಯವರೆಗೆ ಅತೃಪ್ತಿ. ಏಕೆಂದರೆ ಭ್ರಮಾತ್ಮ ಭಾವಿಯಲ್ಲಿ ನಾನಾ ಜನ್ಮಂಗಳ ಧರಿಸುವದು ಬಿಡದು, ಭಾವವೆ ಜನ್ಮಕ್ಕೆ ಈಡು, ನಿರ್ಭಾವವೆ ಜನ್ಮಕ್ಕೆ ಕಾಡು ಗಿಚ್ಚು. ಈ ಹೆಣ್ಣು ಹೊನ್ನು ಮಣ್ಣಿನ ಸತ್ಯತ್ವ ಬುದ್ಧಿಯೆ ಭ್ರಮಾತ್ಮನನ್ನಾಗಿ ಮಾಡಿಹುದು. ಹೆಣ್ಣಿಗಾಗಿ ಸತ್ತವರು ಕೋಟ್ಯಾನು ಕೋಟಿ

ಮಣ್ಣಿಗಾಗಿ ಸತ್ತವರು ಕೋಟ್ಯಾನು ಕೋಟಿ, ಹೊನ್ನಿಗಾಗಿ ಸತ್ತವರು ಕೋಟ್ಯಾನು ಕೋಟಿ, ನಿನಗಾಗಿ ದೇವಾ, ಸತ್ತವರನೊಬ್ಬರನು ಕಾಣೆ ಗುಹೇಶ್ವರಾ.

ಎಷ್ಟೋ ಜನ್ಮಗಳು, ಜೀವನು ಆಶೆ ಆಮಿಷಂಗಳ ವಾಸನಾನುಸಾರ ಧರಿಸುತ್ತಿಹನು. ಇಂದ್ರಿಯ ಜನ್ಯ ವಿಷಯ ಭೋಗೋಪ ಭೋಗ ಸುಖವೆ ನಿತ್ಯವಾಗಿ ನಾನಾ ಜನ್ಮಂಗಳ ಧರಿಸುವದು ಕಾರಣವಾಗಿದೆ. ಇದಕ್ಕೆ ಮೂಲ ಆಶ್ರಯ ತಾನಾರು? ತನ್ನ ತಾನರಿಯದ್ದರಿಂದ ತನಗೆ ದೇಹಭಾವ ಬಂದುದು. ಬ್ರಹ್ಮ ಒಂದೆ ಸತ್ಯವೆಂದು ತಿಳಿದು ಕೊಳ್ಳಲಾರದ ಪ್ರಮಾದದಿಂದ ಈ ದೇಹ ಬಂದಿದೆ. ಈ ದೇಹ ನೀರಿನ ಮೇಲಿರುವ ಗುರುಳೆ ಹುಟ್ಟಿ ಅಳಿಯುವಂತೆ. ಇದನ್ನು ಮಾನವ ತಿಳಿಯನು. ಮಹಾತ್ಮರು ಸರಿಯಾಗಿ ತಿಳಿದವರು.

ಅರಿಯದೆ ಜನನಿಯ ಜಠರದಲ್ಲಿ ಹುಟ್ಟಿದೆ, ನಾನಾ ಬಾರದ ಭವಂಗಳಲ್ಲಿ ಬಂದೆ, ಹುಟ್ಟಿದ್ದೆ ತಪ್ಪಾಯಿತು. ಎಲೆ ಲಿಂಗವೆ ಮುನ್ನ ಹುಟ್ಟಿದುದಕ್ಕೆ ಕೃಪೆ ಮಾಡು ಎಂದು ಪ್ರಾರ್ಥಿಸಿಹರು. ಜನ್ಮ ಜನ್ಮಕ್ಕೆ ಹೋಗಲೀಯದೆ ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯ. ಸೋಹಂ ಎಂಬುವದು ಅಂತರಂಗ ಮದ ನೋಡಯ್ಯ ಶಿವೋಹಂ ಎಂಬುದದು ಬಹಿರಂಗ ಮದ ನೋಡಯ್ಯ, ಈ ದ್ವಂದ್ವವನುಳಿದು ದಾಸೋಹಂ ಎಂದೆನಿಸಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ. ಮಾನವ ಭವಭವಂಗಳಲ್ಲಿ ಬಾರದಿರುವದೆಂದಲ್ಲಿ ದಾಸೋಹಂ ಭಾವವೆ ಮುಖ್ಯವು. ಶಿವೋಹಂ ಎಂಬುದು ಬಹಿರಂಗ ಮದ, ಸೋಹಂ ಎಂಬುದು ಅಂತರಂಗ ಮದ, ಇವು ದೇವನೊಲುಮೆಗೆ ಪ್ರತಿಬಂಧಕವು, ಇಲ್ಲಿ ನಿರಂತರ ತೃಪ್ತರೂಪ ತೃಪ್ತಿ ಇಲ್ಲ.

ದೇವನು ಒಲಿಯು ಬೇಕಾದರೆ ಈ ದ್ವಂದ್ವನಳಿದು ಪರಿಶುದ್ಧ ಹೃದಯವುಳ್ಳವನಾಗುವುದು. ಮನವು ಪರಿಶುದ್ಧ ವಾಗಬೇಕಾದರೆ ದಾಸೋಹಂ ಭಾವವೆ ಮುಖ್ಯವು. ದಾಸೋಹಂಭಾವದಲ್ಲಿ ಮನವು ತದ್ಗತವಾಗುವುದರಿಂದ ಅಲ್ಲಿ ಸಂಕಲ್ಪ ವಿಕಲ್ಪದ ಸುಳುಹಿನ ಸೂತಕವೆ ನಿರಸನವಾಗುವುದು, ಏಕೆಂದರೆ ಕೋಹಂ ಎಂಬುದು ನೀನೆ ಸೋಹಂ ಎಂಬುದು ನೀನೆ, ತತ್ವ ತೂರ್ಯಾರ್ಥವು ನೀನೆ ಸಕಳ ನಿಃಕಳ ನೀನೆಂಬ ಈ ಭರಿತ ಭಾವವುಳ್ಳದ್ದಾಗುವುಡೆ ದಾಸೋಹಂ ಭಾವವು ಪಂಡಿತ ನೀನೆ ಪಾಮರ ನೀನೆ, ಮರವು ನೀನೆ, ಅರವು ನೀನೆ, ಅವಿಚಾರ ನೀನೆ, ವಿಚಾರ ನೀನೆ, ಭಾವ ನೀನೆ, ಭಾವದೋಳ್ ಭರಿತನು ನೀನೆ, ಸಾಕಾರ ನಿರಾಕಾರ ನೀನೆ, ಸತ್ತುದು ನೀನೆ, ಬದುಕಿದುದು ನೀನೆ, ಎಂದೆನ್ನುವ ಭರಿತಭಾವ ದಾಸೋಹಂ ಇದುವೆ ಎಂದೆನಿಸಯ್ಯ.

ಲಿಂಗ ಜಂಗಮದ ಪ್ರಸಾದದ ನಿಲುವ ತೋರಿ ಬದುಕಿಸಯ್ಯ ಕೂಡಲಸಂಗಮದೇವಯ್ಯ ನಿಮ್ಮ ಧರ್ಮ: ಲಿಂಗ ಜಂಗಮ ಪ್ರಸಾದವದು ಮಾತುಮನಂಗಳಿಗೆ ಮೀರಿದ ಪ್ರಸಾದ, ಮತಿಗತಿಗೆ ಮೀರಿದ ಪ್ರಸಾದ ನೆನಹಿಂಗೆ ಮೀರಿದ ಪ್ರಸಾದ, ಅಚಿಂತ್ಯ ಪ್ರಸಾದ, ಪ್ರಸಾದವೆಂಬುದು ತೆರಹಿಲ್ಲದ ಘನ, ಪರಮಜ್ಞಾನ ಪರಮಾಮೃತವು ಸಚ್ಚಿದಾನಂದ ನಿತ್ಯಪರಿಪೂರ್ಣವು ತಾನೆ ಅರಿವುಡೆ ತಾನೆ ಲಿಂಗ, ತಾನೆ ಜಂಗಮ ತಾನೆ ಪ್ರಸಾದ ಇಂತಪ್ಪ ಯತಾರ್ಥ ನಿಲವು ತೋರಿ ಬದುಕಿಸಯ್ಯ

ನಿಮ್ಮ ಧರ್ಮ.

ಲಿಂಗ ಜಂಗಮದ ಪ್ರಸಾದ ಕಲ್ಪಿತ, ಕಲ್ಪನೆಗೆ ನಿಲುಕದ ಅಕಲ್ಪಿತ ಘನವು ಇದನೆಂತು ಕಲ್ಪಿಸುವದು, ತೋರ ಬಾರದ ಘನ ಹೇಳಲೆಂದೇನೊ? ಹೇಳಬಾರದ ಘನ ತೋರಲೆಂದೇನೋ? ಸರಸಂದಾನದ ಪರಿಯಲ್ಲ, ಗುಹೇಶ್ವರನೆಂಬುದು ಕಲ್ಪಿತವಲ್ಲ ನೋಡಾ.

ಲಿಂಗ ಜಂಗಮ ಪ್ರಸಾದ ತೋರಬಾರದ ಘನವೆಂಬ ಸಂಜ್ಞೆಯ ತೋರಿಸಿದಂತೆ ಹೇಳಬಾರದ ಘನವೆಂಬ ಸಂಜ್ಞೆಯ ಹೇಳಿದಂತೆ ಅದು ಧ್ಯಾನಾತೀತ, ಭಾವಾತೀತ, ತಾನೆಯಾಯಿತ್ತಾಗಿ, ನುಡಿಗಳಿಗೆ ಎಡೆಗೊಡದಂತಿದ್ದುದೆ, ವಾಣಿ ನಿರ್ವಾಣಿಯಾದುದೆ ಲಿಂಗ ಜಂಗಮ ಪ್ರಸಾದ ನಿಲುವ ತೋರಿಸಿದಂತೆ, ರೂಪ ಅರೂಪ ಕೆಡಿಸಿದುದೆ ಲಿಂಗ ಜಂಗಮದ ಪ್ರಸಾದದ ನಿಲುವು ತೋರಿಸಿದಂತೆ. ಇದು ಭಕ್ತನ ಕರಕಮಲದಲ್ಲಿ ಬೆಳಗುವ ಬೆಳಗಿನ ಬೆಳಗು ಮಹಾಬೆಳಗು. ಇದು ಮೂಕನ ಬೋಧ, ಮೂಕನ ನಿಲುವು, ಮೂಕನೆಂದರೆ ಲಿಂಗ ಜಂಗಮ ತಾನಾದ ನಿಲವು. ಅದು ಪ್ರಸಾದ. ಮೂಕನೆಂದರೆ ನಿಃಶಬ್ದ ಬ್ರಹ್ಮ, ಭಕ್ತನ ಕರಕಮಲದಲ್ಲಿ ಬೆಳಗುವ ಬೆಳಗಿನ ಬೆಳಗು, ನಿಃಶಬ್ದ ಬ್ರಹ್ಮ ಇವ ಜಗಭರಿತ ದೇವ. ಜಗವ ಹೊದ್ದನೆನ್ನದೇವ ಎಂದು ಹೇಳಿರುವಲ್ಲಿ ಇದು ಲಿಂಗ ಜಂಗಮದ ಪ್ರಸಾದದ ನಿಲವು ಮನಮೇರೆದಪ್ಪಿದ ನಿಲವು ಇದು ಅರುವಿನರುವು ತೋರಿ ಬದುಕಿಸಯ್ಯ, ನಿಮ್ಮ ಧರ್ಮ.

ಅರುವಿನ ಅರುವೆಂಬುದು ನಿಷ್ಪತ್ತಿ, ನಿರಾಳ, ನಿಶ್ಚಿಂತದ ನಿಜಧಾಮ, ಇದು ಅರುವರಿತವರ ಲಿಂಗ ಜಂಗಮದ ಪ್ರಸಾದದ ನಿಲವು. ಈ ಘನವಂತ ಕರುಣೆಯ ಕರುಣಿಸಿದಲ್ಲಿ ಭಕ್ತ ಬದುಕುತ್ತಾನೆ. ಇವನು ಅಕಲ್ಪಿತ ಘನನಾಗುತ್ತಾನೆ. ನಿಷ್ಪತ್ತಿ ನಿರಾಳದರವು ತನ್ನಿಂದತನಗೆ ವೇದ್ಯವಾಗುವದೆ ಲಿಂಗ ಜಂಗಮದ ಪ್ರಸಾದದ ನಿಲವ ತೋರಿ ಬದುಕಿಸಿದುದು ಇದು ಕೂಡಲ ಸಂಗಯ್ಯ ನಿಮ್ಮ ಧರ್ಮವು.

**ವಚನ 15**

**ಅಯ್ಯ, ನೀನೆಂದರೆ ಎಂಬೆನು,**
**ನಿನ್ನ ಹಂಗೇನು ಹರಿಯೆನು,**
**ನಿನ್ನ ಮುಖದಲ್ಲಿ ಒಂದಗುಳು ಸವೆದು**
**ನಿನ್ನ ಪ್ರಸಾದ ಕೊಂಡೆನ್ನ ಭವಕ್ಕೆ ಬೀಜವಾಯಿತ್ತು.**
**ಜಂಗಮವೆ ಲಿಂಗವೆಂದು ಒಕ್ಕುದ ಕೊಂಡರೆ**
**ಎನ್ನ ಭವಂ ನಾಸ್ತಿಯಾಯಿತ್ತು ಕೂಡಲಸಂಗಮದೇವಾ. ॥ 840 ॥**

ತಾತ್ಪರ್ಯ: ಅಯ್ಯ ನೀನೆಂದರೆ ಎಂಬೆನು, ಅಯ್ಯಾ ಎಲೆ ಲಿಂಗವೆ ನಿನ್ನ ಪರಿ ಇಂತುಂಟು ನಿರ್ಬಿಡೆಯಾಗಿ ಇದ್ದಕ್ಕಿದ್ದಂತೆ ಹೇಳಲು ಅದಾರಿಗೆ ಭೀತಿ, ಓ ಪೂಜಾಲಿಂಗವೆ! ನಿನ್ನ ಮುಖ ಲಿಂಗಾಂಗ ಸಮರಸ ಜ್ಞಾನ ವಿಲ್ಲದವರ ದೃಷ್ಟಿಯಲ್ಲಿ ನೀನೊಂದು ಪೀಟಗ ಅದಕ್ಕೆ ಕಂತೆಯು ಮುಚ್ಚಿದ ನಿನ್ನ ಮುಖ ನಿನಗೆ ಗೋಲಾಕಾರವೆಂದು ತಿಳಿದುಕೊಂಡವರು ಬಹುಜನ. ಇವರು ಗುರು ಕೃಪೆಯಿಲ್ಲದವರು.

ಇವರುಗಳ ಕರ ಕಮಲದಲ್ಲಿ ನೀನೊಂದು ಸಾಮಾನ್ಯಲಿಂಗವಾಗಿ ಪೂಜಿಸಿಕೊಳ್ಳುವ ಪೂಜಾಲಿಂಗವೆಂದು ಅಂಗದ ಮೇಲೆ ನಿನ್ನನ್ನು ಹಾಕಿ ಕೊಂಡಿಹರು. ಇದು ಅರ್ಚಕರ ಲಿಂಗ, ಲಿಂಗವಂತರ ಲಿಂಗ, ಭಾವುಕ ಲಿಂಗವಂತರಿಗೆ ಲಿಂಗದರಿವು ಇಲ್ಲ. ಅರುವಿಲ್ಲದ ಲಿಂಗ ಅದೇತರ ಲಿಂಗ, ಲಿಂಗದರಿವು ಇಲ್ಲದೆ ಧರಿಸುವದಾದರೂ ಅದೇತರ ಧರಿಸುವದು. ಇದು ಕಾರಣ ಲಿಂಗದರಿವು ಇಲ್ಲದುದರಿಂದ ಲಿಂಗವು ಜಡ, ಜ್ಞಾನವಿಲ್ಲದೆ ಲಿಂಗ, ಲಿಂಗ, ಅನ್ನುವದು ಸಾಮಾನ್ಯಭಾವ. ಇವರಿಗೆ ಲಿಂಗದ ವಿಶೇಷ ಜ್ಞಾನವಿಲ್ಲದುದರಿಂದ ಭಾವುಕರಾಗಿ, ಲಿಂಗಕ್ಕೆ ನೈವೇದ್ಯವ ಮಾಡುವರು, ಮಾಡಿದರೂ ಅದು ಒಂದಗುಳು ಸೇವಿಸದು. ಈ ಲಿಂಗವಂತರಿಗೆ ಲಿಂಗವು ನೈವೇದ್ಯವ ಏಕೆ ಸೇವಿಸದು ಎಂಬ ಪರಿಜ್ಞಾನವಿಲ್ಲದವರು.

ಲಿಂಗವದು ಅಪ್ರತಿಮ ಲಿಂಗ, ಅಪ್ರಮಾಣ ಲಿಂಗ, ಅಚಲಿತ ಲಿಂಗ, ಅಖಂಡಿತಲಿಂಗ, ನಿರೂಪಲಿಂಗ, ಅಚಿಂತ್ಯ ಲಿಂಗ, ಕಲ್ಪಿತಕ್ಕೆಡೆಗೊಡದ ಲಿಂಗವಾದುದರಿಂದ ಸಚ್ಚಿದಾನಂದವದು ನಿತ್ಯ ತೃಪ್ತರೂಪ ತೃಪ್ತಿಯುಳ್ಳ ಲಿಂಗವಾದುದರಿಂದ ಇವರು ಉಣಿಸಿದರೂ ಊಟ ಮಾಡದು. ಈ ಅನುಪಮ ಲಿಂಗದ ಜ್ಞಾನ ಜಂಗಮ ಮುಖದಿಂದ ಲಭ್ಯವಾಗುವದಲ್ಲದೆ ಸಾಮಾನ್ಯ ವೀರಶೈವರಿಂದ, ವೇದ, ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮಲಿಂಗದ ಯತಾರ್ಥಜ್ಞಾನ ದೊರೆಯುವದಾದರೂ ಅದೆಂತು ಸಾಧ್ಯ. ಇದಲ್ಲದೆ ಈ ಭಾವುಕರು ಲಿಂಗಕ್ಕೆ ಎಡೆಮಾಡಿದ ನೈವೇದ್ಯವೆ ಪ್ರಸಾದವೆಂದು ತಿಳಿದ ಎಷ್ಟೋ ಭಕ್ತರು ಲಿಂಗಾರ್ಚಕರು. ಇದು ಪ್ರಸಾದ ಲಿಂಗಪ್ರಸಾದವೆಂದು ಸೇವಿಸುತ್ತಾರೆ. ಈ ಪ್ರಸಾದವ ಸೇವಿಸಿ ಅದೆಷ್ಟು ಲಿಂಗಾರ್ಚರಿಗೆ ಲಿಂಗದ ಯತಾರ್ಥ ಜ್ಞಾನವಾಗಿದೆ, ಜ್ಞಾನವಾಗದಿದ್ದಲ್ಲಿ ಪ್ರಸಾದವ ಸೇವಿಸಿ, ಜನನ ಮರಣಗಳಿಗೆ ಕಾರಣರಾಗಿರುವರಲ್ಲದೆ ಭಾವ ವಿರಹಿತರಾಗಲಿಲ್ಲ.

ಎಲೆ ಲಿಂಗವೆ ನಿನಗರ್ಪಿಸಿದ ನೈವೇದ್ಯ (ಪ್ರಸಾದವ) ಕೊಂಡು ಭವಕ್ಕೆ ಗುರಿಯಾದರಲ್ಲದೆ ಹುಟ್ಟು ಸಾವುಗಳ ಬಿಡುಗಡೆಯಾಗಲಿಲ್ಲ. ಇದು ಕಾರಣ ಜಂಗಮವೆ ಲಿಂಗವೆಂದು ಒಕ್ಕುದಕೊಂಡರೆ ಎನ್ನ ಭವಂ ನಾಸ್ತಿಯಾಯಿತ್ತು. ಕೂಡಲಸಂಗಮದೇವಾ.

ಜಂಗಮವೆ ಲಿಂಗವೆಂದು ಒಕ್ಕುದು, ನಿರಾವರಣವೆಂದು ಒಕ್ಕುದು, ನಿರ್ಜನಿತ, ನಿರ್ಲೇಪ, ನಿಸ್ಸಂಗ, ನಿಃಕಪಟ, ನಿರ್ವಚನೀಯ, ನಿರ್ಲಿಖಿತವೆಂಬ ಬೆಳೆಯ ಕೊಂಡು ಎನ್ನ ಭವ ನಾಸ್ತಿಯಾಯಿತ್ತು.

ಜಂಗಮವೆ ಲಿಂಗವಾದ ಬೆಳೆ, ಇದು ನಿರಾವರಣ ಪ್ರಸಾದ ರೂಪಿ ಬೆಳೆ, ಇದು ಮರುವರುವಿಗೆ ಮೀರಿದ ಪ್ರಸಾದ. ಕೇವಲ ಅರುವು ಇಲ್ಲಿ ಅರಿಸಿಕೊಳ್ಳುವ ಅನಾತ್ಮವಿಲ್ಲ. ಅರಿಯುವ ದೃಕ್ ಎಂಬುದಿಲ್ಲ.

ಇದು ಅರಿದರುಹಿಸಿಕೊಂಬುದಕ್ಕೂ ಮೀರಿದ ಘನವೆ ನಿರಾವರಣಪ್ರಸಾದ ಇದು ಮರವು ಅರುವು ಕಾಣದ ಪ್ರಸಾದ, ಸಮಪ್ರಸಾದ, ಅದ್ವಿತೀಯ ಪ್ರಸಾದ, ತನುಭಾವ ವಿರಹಿತ ಪ್ರಸಾದ ಜಂಗಮ ಪ್ರಸಾದವದು ನಿರ್ಜನಿತ ಪ್ರಸಾದ, ಉದಯಾಸ್ತವಿಲ್ಲದ

ಪ್ರಸಾದ, ನಿರಂತರ ಮಂಗಳಮಯ ಪರಮಸತ್ ಸ್ವರೂಪವೆ ತನ್ನಿರುವೆ ಅರುವೆಂದರಿದುದು ನಿರ್ಜನಿತ ಪ್ರಸಾದ. ಈ ಒಕ್ಕುದ ಕೊಂಡೆನ್ನಭವಂ ನಾಸ್ತಿಯಾಯಿತ್ತು.

ನಿರ್ಲೇಪ ಪ್ರಸಾದ ಪಿಂಡಾಂಡ ಬ್ರಹ್ಮಾಂಡ ದೊಳಗಿದ್ದರೂ ಪಿಂಡಾಂಡ ಬ್ರಹ್ಮಾಂಡವೆನ್ನದೆ, ನಿಸ್ಸಂಗವಾಗಿರುವದರಿಂದ ನಿರ್ಲೇಪ ಪ್ರಸಾದ, ಗುಣದೊಳಗಿದ್ದರೂ ಗುಣವ ಹೊದ್ದದೆ ಗುಣಕ್ಕತೀತ ವಾದುದರಿಂದ ನಿರ್ಲೇಪ ಪ್ರಸಾದವು ಈ ನಿರ್ಲೇಪ ಪ್ರಸಾದಕೊಂಡೆನ್ನ ಭವಂನಾಸ್ತಿಯಾಯಿತ್ತು.

ನಿಃಕಪಟ ಪ್ರಸಾದ ನಿರ್ವಚನೀಯ ಪ್ರಸಾದವದು ತನು ವಿರಹಿತ ಪ್ರಸಾದ ಮನವಿರಹಿತ ಪ್ರಸಾದ ಭಾವವಿರಹಿತ ಪ್ರಸಾದ, ಅಹಂಕಾರ ವಿರಹಿತ ಪ್ರಸಾದ ನಾನೀನೆಂಬ ಸಂದಳಿದ ಪ್ರಸಾದ ನಿಃಕಪಟ ಪ್ರಸಾದ, ನುಡಿಗೆಡೆಗೊಡದ ಘನದನುವಿನ ಪ್ರಸಾದವಾದುದರಿಂದ ನಿರ್ವಚನೀಯ ಪ್ರಸಾದ ಶೃತಿಗೆ ಮೀರಿದ ಪ್ರಸಾದ. ಈ ಪ್ರಸಾದದ ಘನವು ಅಕಥನೀಯವಾದುದರಿಂದ ನಿರ್ವಚನೀಯ ಪ್ರಸಾದವೆಂದು ಹೇಳಿಹರು.

ನಿರ್ಮಾಯ ಪ್ರಸಾದ ನಾಮ ರೂಪಂಗಳ ಕಾಣದ ಪ್ರಸಾದ, ಕುರುಹು ಕೂನಗಳಿಂದತ್ತತ್ತ, ಮಾತು ಮನಂಗಳಿಂದತ್ತತ್ತ, ಚಿಂತಿಸುವರೆ, ಚಿಂತನದಿಂದತ್ತತ್ತ, ಭಾವಕ್ಕಗಮ್ಯವಾದುದರಿಂದ ನಿರ್ಮಾಯ ಪ್ರಸಾದವೆಂದು ಹೇಳಿಹರು.

ನಿರ್ಲಿಖಿತ ಪ್ರಸಾದ ಮೂಕನ ಮೌನವು ಅದು ಲಿಖಿತಕ್ಕೊಳಪಡಬಹುದೆ? ಅರಿತವರು ನಿಃಶಬ್ದ ಬ್ರಹ್ಮವು ಅದು ಮೂಕ ಆ ಘನವಂತನ ಶಬ್ದಮುಗ್ಧತ್ವವದು ಮೌನವು ಆದುದರಿಂದ ನಿರ್ಲಿಖಿತವುಳ್ಳಪ್ರಸಾದ. ಈ ಪರಮಜ್ಞಾನರೂಪ ಪರಮಾಮೃತವು ಜಂಗಮವೆ ಲಿಂಗವೆಂದು ಒಕ್ಕುದ ಕೊಂಡೆನ್ನ ಭವಂನಾಸ್ತಿಯಾಯಿತ್ತು ಕೂಡಲಸಂಗಮದೇವಾ.

ಈ ಪರಾತ್ಪರ ಜ್ಞಾನವ ಕೊಂಡು ಎನ್ನ ಹುಟ್ಟು ಸಾವು ಇಲ್ಲವಾದವು. ತ್ರಿವಿಧ ತಾಪವು ಇಲ್ಲವಾದವು. ಮಲತ್ರಯಂಗಳ ಭಾವವು ನಿರಸನವಾಗಿ ಭಾವಕ್ಕಗಮ್ಯವಾದ ಜಂಗಮ ಒಂದಾಗಿರ್ದ ಲಿಂಗದಿರುವೆ ಎನ್ನ ಅರುವೆಂಬುದು ಸಿದ್ಧವಾಯಿತ್ತು. ಆಗ ನನ್ನ ಪೂರ್ವಾಶ್ರಯ ಕಂಡರೆ ನಿಮಗೆ ದ್ರೋಹ ನೋಡಾ. ಇದು ಕಾರಣ ಇಲ್ಲದ ಭವ ಇಲ್ಲ. ಈ ಇಲ್ಲೆಂಬುದು ಇಲ್ಲವಾಗಿ ತೆರಹಿಲ್ಲದ ಘನ ಜಂಗಮ ಲಿಂಗವೆ ಪ್ರಜ್ವಲಿಸುತ್ತಿಹುದು.

**ವಚನ 16**

**ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ,**
**ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ,**
**ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ.**
**ಮನ ತುಂಬಿದ ಬಳಿಕ ನೆನೆಯಲಿಲ್ಲ,**
**ಮಹಾಂತ ಕೂಡಲಸಂಗಮದೇವಾ. ॥ 852 ॥**

**ತಾತ್ಪರ್ಯ:** ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ: ಈ ಕಣ್ಗಳು ತುಂಬಿದ ಕಣ್ಗಳು, ತುಳಕದ ಕಣ್ಗಳು ಅಖಂಡಿತ ಘನಲಿಂಗ ನೋಡ ಹೋಗಿ ತಾವು

ಅಖಂಡಾನಂದ ಮಯವಾದ ಕಣ್ಣುಗಳು, ಇಲ್ಲಿ ಸ್ಥಾವರ, ಜಂಗಮವೆಂಬುದಕ್ಕಿಂಬಿಲ್ಲ, ಉಭಯ ಒಂದಾದ ನಿಲವು ನಿಸ್ಸೀಮ ನಿಲವು, ನಿಜ ನಿಲವು, ಅಪ್ರತಿಮ ಲಿಂಗವರಿತು ಅಚಲಾನಂದದೊಳಿದ್ದ ಅಗಮ್ಯ ನಿಲವು. ಇಲ್ಲಿ ನೋಡುವ ನೋಟವಿಲ್ಲ, ಕಾಣಿಸುವ ರೂಪವಿಲ್ಲ, ರೂಪವೆ ನಿರೂಪವಾದ ನಿಲವು. ನೋಡದ ನೋಟ, ಅನಿಮಿಷ ನೋಟ, ಇದು ತುಂಬಿದ ನೋಟ, ಕಣ್ಣಿನ ಕಣ್ಣಾದ ನೋಟ. ಇದು ಕಂದದು ಕುಂದದು ಏನೊಂದಾಗದು ಅಂದು ಇಂದು ಎಂದೆಂದೂ ಇದ್ದಂತಿರುವ ನಿರಂತರ ಮಂಗಳಮಯ ತಾನಾದ ಕಣ್ಣು. ಈ ಕಣ್ಣು ತನ್ನ ಹೊರ್ತು ಅನ್ಯವ ಕಾಣದ ಕಣ್ಣು. ಅಪ್ರತಿಮ ಕಣ್ಣು ಪ್ರತಿಮೆಯ ಕಾಣವುದುಂಟೆ? ಇಲ್ಲಿ ಕಾರ್ಯಬ್ರಹ್ಮನಿಲ್ಲ ಕಾರಣ ಬ್ರಹ್ಮನಿಲ್ಲ ಕಲ್ಪಿತನಿಲ್ಲ, ಕಲ್ಪನೆ ಇಲ್ಲ, ಭಾವ ಭ್ರಾಂತಿ ಮುನ್ನಿಲ್ಲ, ಅರಿತುದಿಲ್ಲ, ಅರಿಯದುದಿಲ್ಲ, ಇಲ್ಲಾದುದು ಇಲ್ಲಾದುದು, ಎಲ್ಲಿಪ್ಪುದೊ! ಇದ್ದಘನವು ಬೆಳಗಿನೊಳಗಣ ಬೆಳಗು ಮಹಾ ಬೆಳಗು ನಿರಂತರ ಬೆಳಗು ಇದು ಸಹಜ. ಅಜ. ಅಚಿಂತ್ಯ ಘನ ತಾವಾದ ಕಣ್ಣಗಳು. ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣ ಮುದುಚ್ಯತೆ ಎಂಬುದು ಸ್ವತಃ ಸಿದ್ಧವಾಗಿ ಕಣ್ಣಗಳು ತುಂಬಿದ ಬಳಿಕ ನೋಡಲಿಲ್ಲವೆಂದು ಹೇಳಿಹರು.

ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ: ಕೇಳುವ ಕಿವಿಗಳು ತುಂಬಿದ ತತ್ವೋಪದೇಶ ಕೇಳದ್ದರಿಂದ ಇವುಗಳು ಅತೃಪ್ತಿ. ಅದಕ್ಕಾಗಿ ಕಿವಿಗಳಿಗೆ ಕೇಳುವ ಹಂಬಲ. ಎಲ್ಲಿಯವರೆಗೆ ಹಂಬಲವದು ಅತೃಪ್ತಿ ಸೂಚನೆ, ಹಸಿವು ನೀಗದ ಸೂಚನೆ. ಹಸಿವುನೀಗಿದ ಸೂಚನೆ ಅದು ತೃಪ್ತಿಸೂಚನೆ. ಹಸುವಿನಲ್ಲಿ ಎರಡು ವಿಧ. ಒಂದು ವೈಶ್ವಾನರನ ತೃಪ್ತಿ, ಮತ್ತೊಂದು ಕಲ್ಪಿತ ಪುರುಷನ ತೃಪ್ತಿ. ಕಲ್ಪಿತ ಪುರುಷನ ತೃಪ್ತಿಯಾಗಬೇಕಾದಲ್ಲಿ ಅಕಲ್ಪಿತ ಘನ ತಾನಾದಾಗ ತೃಪ್ತಿ, ಗುಹೇಶ್ವರ ಲಿಂಗವರಿತಾಗ ತೃಪ್ತಿ.

ಅಕಲ್ಪಿತ ತಾನಾದ ಕಿವಿ, ತುಂಬಿದ ಕಿವಿ, ಇವು ಶ್ರೋತ್ರುವಿನ ಶ್ರೋತ್ರ, ಅಂಧತ್ವ ಮಂದತ್ವ ಪಣುತ್ವ ಕಾಣದ ಕಿವಿ. ಈ ಕಿವಿ ಕಿವುಡರಿಗೂ ಉಂಟು. ಕಿವಿಯುಳ್ಳವನಿಗೂ ಉಂಟು. ಈ ಘನ ಕಿವಿ ಪ್ರಪಂಚ ಪಾರಮಾರ್ಥ ಶಬ್ದ ಸುಶಬ್ದ ಎರಡೊಂದ ಮಾಡಿದ ಕಿವಿ, ನಿಶಬ್ದ ಘನ ದನುವುಳ್ಳ ಕಿವಿ, ತೃಪ್ತರೂಪ ತೃಪ್ತಿ ಕಿವಿ, ಮೂಕನ ಕಿವಿ, ನಿಃಶಬ್ದ ಪ್ರೇಮದ ಕಿವಿ. ಮಾತು ಮನಂಗಳ ಮೀರಿದ ಕಿವಿ, ಸುಖ, ಸುಖಿ, ಸುಖಾನುಭವವುಳ್ಳ ಕಿವಿ ಸುಖ, ಇದು ತುಂಬಿದ ಕಿವಿ, ಸುಖಾನುಭವವುಳ್ಳ ಕಿವಿ, ಸುಖಿಯೆ ತಾನಾದ ಕಿವಿ, ಸುಖ ಸುಖಿಸುವ ಕಿವಿ, ಇದು ತುಂಬಿದ ಕಿವಿ, ಪ್ರಪಂಚದ ಪ್ರವೃತ್ತಿ ಕೇಳದ ಕಿವಿ. ಪರಮಾರ್ಥದ ನಿವೃತ್ತಿಯ ಕೇಳದ ಕಿವಿಯಾದುದರಿಂದ ಶಬ್ದ ಸುಶಬ್ದ ಕೇಳದ ಕಿವಿಯಾದುದರಿಂದ ಇವೆರಡು ಮೀರಿ ನಿಂತ ನಿಲವು ತುಂಬಿದ ಕಿವಿಯಾದುದರಿಂದ ಕೇಳಲಿಲ್ಲವೆಂದು ಹೇಳಿಹರು.

ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ: ಕೈಗಳು! ಇವು ತುಂಬಿದ ಕೈಗಳು, ಲಿಂಗವರಿತ ಘನಾಂಗನ ಕೈಗಳು, ಚಿದಂಗನ ಕೈಗಳು, ಲಿಂಗ ಅಂಗ ಒಂದಾದ ಕೈಗಳು, ಅಖಂಡ ಲಿಂಗವರಿತ ಕೈಗಳು, ಚಿದಂಗನ ಕೈಗಳು, ಲಿಂಗ, ಅಂಗ, ಒಂದಾದ

ಕೈಗಳು, ಅಖಂಡಲಿಂಗವರಿತು ಅಖಂಡವಾಗಿಹ ಕೈಗಳು. ಅಖಂಡ ಭಾವರೂಪಿ ಕೈಯಲ್ಲಿ ಅಖಂಡ ಲಿಂಗವೆ ಪ್ರಜ್ವಲಿಸುವಲ್ಲಿ ಅದು ಚಿನ್ಮಯಾಂಗನ ಅಂಗ, ಅಲ್ಲಿ ಕೈಯ ಬೇರೆ, ಲಿಂಗ ಬೇರೆಂಬ ಭಿನ್ನ ಭಾವಕ್ಕಿಂಬುಂಟೆ? ಭಾವಕ್ಕಗಮ್ಯವಾಗಿಹ ನಿಲವು, ತುಂಬಿತುಳಕದ ನಿಲವು ಲಿಂಗವರಿತ ಲಿಂಗಾಂಗಿಯ ಅವಯವಕ್ಕೆ ತರಬಹುದೆ?

ನಿರ್ದೇಹಿಯ ದೇಹವ ಕಾಣಬಹುದೆ? ನಿರ್ದೇಹಿ ಎಂಬುದು ದೇಹ ಗುಣಂಗಳಳಿದು ಲಿಂಗದೇಹಿಯಾದ ಮಹಾಂತ. ಭಾವ ಬ್ರಹ್ಮವಾದ ಮಹಾಂತ. ದೇಹವೆ ಲಿಂಗವಾಗಿಹ ಘನಾಂಗ, ಅಲ್ಲಿ ಬಹಿರಂಗ, ಅಂತರಂಗವೆಂಬುಭಯ ನಷ್ಟವಾದುದರಿಂದ ನಿಸ್ಸೀಮ. ಸರ್ವಾಂಗ ಲಿಂಗಿ, ಪೂಜ್ಯ ಪೂಜಕವೆಂಬ ಭಾವವಿದ್ದಲ್ಲಿ ಅರ್ಚನೆ ಉಂಟು ಭಾವಕ್ಕಗಮ್ಯನಾಗಿಹ ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಶರಣಂಗೆ ಕೈಗಳು ಲಿಂಗ. ತಾನು ಲಿಂಗ. ಸಕಳವು ಲಿಂಗ. ನಿಃಕಳವು ಲಿಂಗ. ಇದು ನಾನೀನೆಂಬ ಸಂದಳಿದು ತೆರಹಿಲ್ಲದ ಘನವೆ ತನ್ನಿರವು ಆದುದರಿಂದ ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲವೆಂದು ಹೇಳಿಹರು.

ಮನ ತುಂಬಿದ ಬಳಿಕ ನೆನೆಯಲಿಲ್ಲ: ಆವಲ್ಲಿ ಮನ ಬೇರೆ ಲಿಂಗ ಬೇರೆಂಬ ಭಿನ್ನಜ್ಞಾನವುಂಟು. ಅಲ್ಲಿ ನೆನೆಯುವ ಮನ ಉಂಟು. ಎಲ್ಲಿಯವರೆಗೆ ತುಂಬಿದ ಮನವಾಗುವುದಿಲ್ಲ. ಅದು ನೆನೆಯುವ ಮನವಾಗಿರುತ್ತದೆ.

ತುಂಬದ ಮನ ಆವುದು?

ಸಂಕಲ್ಪ ವಿಕಲ್ಪಕ್ಕೊಳಪಟ್ಟ ಮನ ತುಂಬದ ಮನ, ಇದು ಇಲ್ಲದ್ದನ್ನು ಕಲಿಸುವ ಮನ. ಇದ್ದುದ ಅರಿಯದಿಹ ಮನ, ಭ್ರಾಂತಿಮನ, ನಾಮರೂಪವ ಒಪ್ಪಿಕೊಂಡ ಮನ, ಈ ಮನ ಅವಿವೇಕ ವಿವೇಕದಿಂದೊಡಗೂಡಿ ಪ್ರಪಂಚ ಸತ್ಯ ಮಾಡುತ್ತದೆ ಮತ್ತು ಮಿಥ್ಯೆವು ಮಾಡುತ್ತದೆ. ಇದಲ್ಲದೆ ಗುರು ಶಾಸ್ತ್ರಗಳಿಗೊಪ್ಪಿ ಪರಮಾರ್ಥ ಸತ್ಯವು ಮಾಡುತ್ತದೆ. ಪುನಃ ಮಿಥ್ಯೆಯು ಮಾಡುತ್ತದೆ. ಇದು ತೃಪ್ತಿರೂಪ ತೃಪ್ತಿಯಾಗದ್ದರಿಂದ ಅಖಂಡ ಸುಖದ ಸುಖಿಯಾಗದ್ದರಿಂದ, ತುಂಬದ ಮನವೆಂದು ಹೇಳಿಹರು.

ತುಂಬಿದ ಮನವಿದು, ಅಖಂಡಿತ ವರಿತು, ಅಖಂಡಘನವಪ್ಪ ಪರಿಪೂರ್ಣ ತನ್ನಿರುವಿನ ಅರುವೆಂದರಿದುದರಿಂದ ತುಂಬಿದ ಮನವಾಗಿಹುದು. ಇದು ಕಾರಣ ಸಹಜ, ಅಜ ಅಚಿಂತ್ಯ ಸ್ವರೂಪವು ತನ್ನಿಂದ ತನಗದು ಸಿದ್ಧವಾಗಿ ಸಹಜ. ಅಜವೆಂಬುದೊಂದೆ ಸಿದ್ಧವಾಗುವುಡೆ ಆಗ ತುಂಬಿದ ಮನವಾಗಿ ಅಚಿಂತ್ಯತ್ವ ತನ್ನಿರುವಾಗುವುದು. ಆಗ ನಿಶ್ಚಿಂತ ನಿರಾಳ ತಾನೆ ಎಂಬುದು ತನ್ನಿಂದ ತನಗದು ನಿಶ್ಚಿಯವಾಗಿರುವಲ್ಲಿ ಆರ ನೆನೆಯುವುದು. ಆರಾಗಿ ನೆನೆಯುವದು. ಈ ಮಹದರುವಿನಿಂದುಕ್ತವಾದುದರಿಂದ ಮನ ತುಂಬಿದ ಬಳಿಕ ನೆನೆಯಲಿಲ್ಲವೆಂದು ಹೇಳಿಹರು.

**ವಚನ 17**

**ಅರಸು ಮುನಿದರೆ ನಾಡೊಳಗಿರಬಾರದು,**

**ಗಂಡ ಮುನಿದರೆ, ಹೆಂಡತಿ ಇರಬಾರದಯ್ಯ**
**ಕೂಡಲ ಸಂಗಮದೇವಯ್ಯ ಜಂಗಮ**
**ಮುನಿದರೆ ನಾನೆಂತು ಬದುಕಲಾರೆ. ॥ 824 ॥**

**ತಾತ್ಪರ್ಯ:** ಅರಸು ಮುನಿದರೆ ನಾಡೊಳಗಿರಬಾರದು, ಗಂಡ ಮುನಿದರೆ ಹೆಂಡತಿಯಾಗಿರಬಾರದಯ್ಯಾ: ಅರಸು ಮುನಿದರೆ ಆ ಪ್ರಜೆ, ರೈತನನ್ನು, ತನ್ನ ನಾಡ್ಮೊಳಗಿರಬಾರದೆಂದು ಹದ್ದು ಪಾರ ಮಾಡುವನು. ಅರಸು ಮುನಿದ ಪ್ರಜೆಯನ್ನು ಆ ನಾಡಿನೊಳಗಿರಿಸಗೊಡರು. ಕಂಡರೆ ಕಡುತರ ಕಷ್ಟವ ಕೊಡುವರು ಇದುಕಾರಣ ಅರಸು ಮುನಿದರೆ ನಾಡೊಳಗಿರಬಾರದೆಂದು ಹೇಳಿಹರು.

ಗಂಡ ಮುನಿದರೆ ಹೆಂಡತಿಯಾಗಿರಬಾರದಯ್ಯ, ಗಂಡ ಹೆಂಡತಿ ಸೇರದೆ ಹೋದರೆ ಆಕೆಯು ಹೆಂಡತಿಯಾಗಿರುವದು ಕರಕಷ್ಟ ಕೂಡಲಸಂಗಮದೇವಯ್ಯಾ, ಜಂಗಮ ಮುನಿದರೆ ನಾನೆಂತು ಬದಕುವೆ, ಜಂಗಮ ಮುನಿಯುವದೆಂದರೆ, ಪರಾತ್ಪರ ಪರವಸ್ತು ಮುನಿದಂತೆ, ಅನುಪಮ ಲಿಂಗಘನವೆ ಮುನಿದಂತೆ, ಘನಗಂಭೀರ ಮಹಾಘನ ಲಿಂಗ ಮುನಿದಾಗ ಭಕ್ತನು ಬದುಕುವದೆಂತು? ಭಕ್ತನು ಜೀವದಿಂದ ವುಳಿಯಬಹುದೆ? ಭಕ್ತನ ಜೀವ ಜಂಗಮವಿರುವಾಗ ಜಂಗಮದೇವ ಮುನಿದಾಗ ಭಕ್ತನು ಬದುಕುವದದೆಂತು?

ಅರಸು ಆರು? ಪುರುಷಾರ್ಥ ಜ್ಞಾನಿಗಳ ಅರಸು, ಬ್ರಹ್ಮಜ್ಞಾನಿಯೆ ಅರಸು ಬ್ರಹ್ಮವೇತ್ತನೆ ಅರಸು. ಲಿಂಗವರಿತ ಲಿಂಗಜ್ಞಾನಿಯೆ ಅರಸು. ಲಿಂಗಾನಂದದಲ್ಲಿರುವವನೆ ಅರಸು. ಪುರುಷಾರ್ಥ ಜ್ಞಾನಿಯೆ ಸುಖಿ, ಸ್ವತಂತ್ರ ತಾನಾರೆಂದರಿತು ತನ್ನ ಸ್ವರೂಪ ಸುಖದಲ್ಲಿದ್ದವನೆ ಅರಸು. ಈ ಅರಸನು ಸ್ವಾತಂತ್ರದ ಸಾಮ್ರಾಜ್ಯನು.

ಅರಸು ಮುನಿದರೆ ನಾಡೊಳಗಿರಬಾರದು, ಸ್ವಾತ್ಮಾನಂದದ ಸಾಮ್ರಾಜ್ಯದ ಸಾಮ್ರಾಟನು ಮುನಿದರೆ ನಾಡೊಳಗಿರಬಾರದು. ಈ ಸಾಮ್ರಾಟನ ಮುನಿಸು, ಪಿಂಡವೆಂಬ ನಾಡೊಳಗಿರುವ ಜೀವನಿಗೆ ಭವಭವಂಗಳಲ್ಲಿ ಭವಯಾತನೆ ತಪ್ಪದು. ಬ್ರಹ್ಮಾಂಡದಲ್ಲಿರುವ ಭಾವ ಭ್ರಮಿತರಿಗೂ ಭವಯಾತನೆ ತಪ್ಪದು.

ಕೆರೆ ಹಳ್ಳ ಭಾವಿ ಮೈದೆಗದರೆ ಗುಳ್ಳೆ ಗೊರಚೆ ಕಾಣಬಹುದು. ವಾರಿಧಿ ಮೈದೆಗದರೆ ರತ್ನಂಗಳು ಕಾಣಬಹುದು. ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು. ಶರಣರು ದಯಾಮಯರಾಗಿ ಕಳಕಳಿಯಿಂದ ಲಿಂಗಾಂಗ ಸಮರಸ ಜ್ಞಾನ ಮನ ಬಿಚ್ಚಿ ಜಿಜ್ಞಾಸುವೃಂದಕ್ಕೂ ಭಕ್ತರಿಗೂ ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗದರಿವು ತಿಳಿಯುವಂತೆ ತಿಳಿಸಿದಾಗ ತಿಳಿಯುತ್ತದೆ, ಅವರಿಗೆ ಆಗ ಲಿಂಗಜ್ಞಾನವಾಗಿ ಲಿಂಗ ತಾನೆಂಬರಿವು ಸಿದ್ಧವಾಗುವುದು. ಇದಲ್ಲದೆ ತಾನಾರೆಂಬ ತನ್ನ ಯತಾರ್ಥ ಸ್ವರೂಪ ಜ್ಞಾನವು ಸಹಜವು. ಇಲ್ಲದಿದ್ದರೆ ತಮ್ಮ ತಿಳಿಯದೆ ಅಜ್ಞರಾಗಿ ಜ್ಞಾನವಾನ್ ಜನ್ಮ ಅರುವಿನ ಜನ್ಮದಲ್ಲಿ ಬಂದರೂ ಪಿಂಡವೆಂಬ ನಾಡನ್ನು ತಿಳಿಯನು. ಪಿಂಡದೊಳಗಿಹ ಸ್ವಯಂಪ್ರಕಾಶದ ಘನವ ತಿಳಿಯದೆ

ತ್ರಿವಿಧ ತಾಪದಿಂದ ಬಳಲುವದೆ ಶಾಶ್ವತವಾಗುದರಿಂದ ಈ ಪಿಂಡವೆಂಬ ನಾಡೊಳಗಿರಬಾರದು ಎಂದು ಹೇಳಿಹರು.

ಗಂಡ ಮುನಿದರೆ ಹೆಂಡತಿಯಾಗಿರಬಾರಯ್ಯಾ. ಗಂಡ ಆರು? ಹೆಂಡತಿ ಆರು? ಲಿಂಗವೆ ಪತಿ, ಶರಣನೆ ಸತಿ, ಪತಿ ಎಂದರೆ ಅಕಲ್ಪಿತ ಘನ, ಅಪ್ರಮಾಣ ಘನ, ಅಚಿಂತ್ಯಾತ್ಮನೆ ಗಂಡ, ಈ ಗಂಡ ಕಲ್ಪಿತಕ್ಕೊಳಪಟ್ಟ ಹೆಂಡತಿಯನ್ನು ಸೇರನು, ಚಿಂತೆಯಿಂದುಕ್ತಳಾದವಳನ್ನು ಸೇರನು ಇದು ಕಾರಣ ಸತಿಯೆ ಅಕಲ್ಪಿತಳಾಗಬೇಕು.

ಭವರಹಿತಂಗೆ ಭಕ್ತಿ ಮಾಡುವವರು ನೀವು ಕೇಳಿರಣ್ಣಾ ಭವಬಾಧೆಯೊಳಗೆ ನೀವಿರ್ದು ಅಭವನ ಭಕ್ತಿಯ ಮಾಡುವ ಪರಿ ಇನ್ನೆಂತೋ? ತಾನಭವನಲ್ಲದೆ ಸಹಜ ಭಕ್ತಿಯ ಮಾಡಬಾರದು, ಅಭವನಲ್ಲಿ ಸಮರಸವಾಗಬೇಕಾದರೆ ತನಗೆ ಅಭವನ ಜ್ಞಾನವಾಗಬೇಕು. ಲಿಂಗವು ಅಭವ, ಭವರಹಿತ ಶರಣನೆಂಬ ಸತಿ ಅಭವ ಭವರಹಿತರು.

ಗಂಡ ಭವರಹಿತನಾಗಿ ಹೆಂಡತಿ ಭವದಿಂದುಕ್ತಳಾದರೆ ಗಂಡ ಹೇಗೆ ಸೇರುವನು? ಗುರು ಕೊಟ್ಟ ಜ್ಞಾನ ಅಭವವಾಗಿದೆ ಎಂದಲ್ಲಿ ಶಿಷ್ಯರ ಬುದ್ಧಿ ಭವ ಬಾಧೆಯಲ್ಲಿದ್ದುದು ಆಗಬೇಕೆ? ಭವರಹಿತ ಬುದ್ಧಿ, ಅದು ಲಿಂಗವರಿತು ಲಿಂಗವಾಗಿಹ ಬುದ್ಧಿ, ಕಲ್ಪಿತವ ಕಾಣದ ಬುದ್ಧಿ, ಸಹಜ ಅಜ ಅಚಿಂತ್ಯವೆ ತಾನಾಗಿಹ ಬುದ್ಧಿ ಇದುವೆ ಉಪಮಿಸದ ಬುದ್ಧಿ.

ವಿಜ್ಞಾನ ಯುಗದಲ್ಲಿ ಅನುಪಮವುವಾಗಿಹ ಲಿಂಗದರುವಿಗೆ ಮಹತ್ವಮಾಡುವವರು ವಿರಳ. ಅಂಗವೆಂಬ ಗಂಡ ಮುನಿದರೆ ಲಿಂಗವೆಂಬ ಹೆಂಡತಿಗೆ ಸರಿಯಾಗಿರಲು ಅಸಾಧ್ಯ. ಇದು ಕಾರಣ ಇವರೀರ್ವರಲ್ಲಿ ಸಮರತಿ ಇಲ್ಲ ಸಮಸುಖವಿಲ್ಲ. ಸುಖದ ಸುಖವೆ ದೂರಾಗಿ, ವಿಷಮಸುಖದ ಪ್ರಬಲವು ಹೆಚ್ಚಾಗಿ, ವಿಷಯಸುಖವದು ವಿಷ ಸದೃಶವು, ಇದು ಅನಿತ್ಯವು ಎಂದರಿಯದೆ ಅನಾತ್ಮ ಸುಖವೆ ಆತ್ಮ ಸುಖವೆಂದು ಅದರ ಪ್ರೀತಿ ಅಧಿಕಾಧಿಕವಾದುದರಿಂದ, ಅಂಗವೆಂಬ ದೇಹ ಭಾವರೂಪಿ ಸತಿಯನ್ನು ಲಿಂಗವರಿತ ಗುರುಲಿಂಗವೆಂಬ ಗಂಡ ಮುನಿದುದಕ್ಕಾಗಿ ಹೆಂಡತಿಯಾಗಿರಬಾರದೆಂದು ಹೇಳಿಹರು.

ಕೂಡಲಸಂಗಮದೇವಯ್ಯ ಜಂಗಮ ಮುನಿದರೆ ನಾನೆಂತು ಬದುಕುವೆ: ಓ ಸಂಗಮದೇವಾ ಜಂಗಮರೂಪಿ ಲಿಂಗ ನೀನು, ಮಾತಾಡುವ ಲಿಂಗ ನೀನು, ಅನುಪಮ ಲಿಂಗ ಉಳಿಮುಟ್ಟದಲಿಂಗ ಅಳಿಯದ ಉಳಿಯದ ಮಾತು ಮನಂಗಳಿಗೆ ಮೀರಿದ ಲಿಂಗ ನೀನು. ನುಡಿದು ನಿಃಶಬ್ದ ಘನವಾಗಿರುವ ನಡೆದು ನಿಗರ್ಮನಿಯಾಗಿರುವ ಘನ ನೀನು, ಸ್ವಸುಖವೆ ತಾನಾಗಿಹ ಲಿಂಗ ನೀನು, ನೀ ಮುನಿದರೆ ಭಕ್ತನು ಬದಕುವುದದೆಂತು! ಓ ದೇವ ದೇವ ನಿನ್ನ ಮಾತೆಂಬುದು ಜ್ಯೋತಿರ್ಲಿಂಗ. ನಾನು ಮಾತಾಡದಿದ್ದರೆ ನಾನು ಜ್ಯೋತಿರ್ಲಿಂಗವಾಗುವದು ಹೇಗೆ? ಓ ಜಂಗಮ ಲಿಂಗವೆ ನಿನ್ನ ಮುನಿಸು ನನ್ನ ಅಖಂಡ ಸುಖಕ್ಕೆ ಹಾನಿ, ನುಡಿಗೆಡೆಗೊಡದ ಘನದಿರುವಿಂಗೆ ಹಾನಿ, ನಿನ್ನ ಮುನಿಸು, ನನ್ನ ನಿರಂತರ ಮಂಗಳಮಯ ಪದಕ್ಕೆ ಹಾನಿ. ಅಚಿಂತ್ಯತ್ವಕ್ಕೆ ಹಾನಿ, ನನ್ನ ಅಚಿಂತ್ಯತ್ವದಿಂದ ದೂರಾಗಿ ಇರುವದೆಂದರೆ, ನಾನು

ಬುದುಕಿರುವದಾದರೂ ಹೇಗೆ? ಜೀವಿಸುವದಾದರೂ ಹೇಗೆ? ಸಕಲಕ್ಕೂ ಶ್ರೇಷ್ಠ ಕೇಡುಳ್ಳ ಮುನಿಸು ಎಂಬುದು ಜಂಗಮ ಮುನಿಸು, ಓ ಲಿಂಗ ಒಂದಾಗಿರ್ದ ಜಂಗಮವೆ! ಹಸುಗೂಸಿನ ಮೇಲೆ ನಿನ್ನ ಮುನಿಸೆ? ತಾಯಿ ಮುನಿಸುಗೊಂಡರೆ ಕೂಸು ಉಳಿಯುವ ಬಗೆಹೇಗೆ? ಜಂಗಮವೆಂಬ ತಾಯಿ ಭಕ್ತನೆಂಬ ಹಸುಗೂಸಿನ ಮೇಲೆ ಮುನಿಸುಗೊಂಡರೆ ಅದು ಬದಕುವುದು ಹೇಗೆ? ಇದು ಕಾರಣ ಬಸವರಸರು ಜಂಗಮ ಮುನಿದರೆ ನಾನೆಂತು ಬದಕುವೆ ಎಂದು ಹೇಳಿಹರು.

**ವಚನ 18**

**ಅಡಿಗಡಿಗೆ ಸ್ಥಾನ ನಿಧಿ,**
**ಅಡಿಗಡಿಗೆ ದಿವ್ಯ ಕ್ಷೇತ್ರ**
**ಅಡಿಗಡಿಗೆಯೂ ನಿಧಿಯು ನಿಧಾನ ನೋಡಾ,**
**ಆತನ, ಇರುವೆ ವಾರಣಾಸಿ, ಅವಿಮುಕ್ತ ಕ್ಷೇತ್ರ**
**ಕೂಡಲಸಂಗನ ಶರಣ ಸ್ವತಂತ್ರನಾಗಿ. ॥ 853 ॥**

ತಾತ್ಪರ್ಯ: ಶರಣರದು ಅಡಿಗಡಿಗೆ ಸ್ಥಾನ ನಿಧಿ. ಅಡಿಗಡಿಗೆ ದಿವ್ಯ ಕ್ಷೇತ್ರ, ಆ ಮಹಾಂತನದು ಅಡಿಗಡಿಗೆಯೂ ನಿಧಿಯು ನಿಧಾನ ನೋಡಾ. ಆತನ ಇರುವೆ ವಾರಣಾಸಿ, ಅವಿಮುಕ್ತ ಕ್ಷೇತ್ರ. ಶರಣರೆಂದರೆ ಅನುಪಮರು. ಲಿಂಗವರಿತು ಲಿಂಗವೆ ತಾವಾದವರು. ಅರುವರಿತು ಶಬ್ದಮುಗ್ಧ ಸುಖಿಗಳು, ಲಿಂಗ ಮುಂತಾಗಿ ನಡೆವನು ಶರಣ, ಲಿಂಗ ಮುಂತಾಗಿ ನುಡಿವನು ಶರಣ, ಲಿಂಗ ಮುಂತಾಗಿ ರುಚಿಸುವನು ಶರಣ. ಲಿಂಗ ಮುಂತಾಗಿ ನೋಡುವನು ಶರಣ, ಲಿಂಗ ಮುಂತಾಗಿ ಸಂಗ ಮಾಡುವನು ಶರಣ. ಲಿಂಗ ಮುಂತಾಗಿ ತೃಪ್ತಿ ನೈದುವನು ಶರಣ. ಲಿಂಗ ಕಾಯ ಶರಣ, ಶರಣಕಾಯ ಲಿಂಗ ಇದು ಕಾರಣ, ಕೂಡಲಚೆನ್ನಸಂಗಯ್ಯ ನಿಮ್ಮ ಶರಣ ಸರ್ವಾಂಗ ಲಿಂಗಿ.

ಶರಣನ ಕಾಯ ಲಿಂಗ. ಲಿಂಗ ಕಾಯ ಶರಣ. ಈ ಮಹಾಂತ ಸರ್ವಾಂಗ ಲಿಂಗಿ, ಸರ್ವಾಂಗ ಲಿಂಗಿಯಾದ ಶರಣ ಅಡಿಗಡಿಗೆ ಸ್ಥಾನ ನಿಧಿ, ಲಿಂಗ ಮುಂತಾಗಿ ನಡೆಯುವ ಶರಣ. ನುಡಿಯುವ ಶರಣ, ನೋಡುವ ಶರಣ, ಅಪ್ರಮಾಣಗಮ್ಯನೆ ಇರುವ. ಅದೆಂತುಸುರುವದು. ಈ ಮಹಾಂತನ ಪ್ರತಿ ಹೆಜ್ಜೆಯೂ ಸಚ್ಚಿದಾನಂದದ ಹೆಜ್ಜೆ, ಸುಖದ ಹೆಜ್ಜೆ, ಸುಖದ ಸುಖಿಯಾಗಿಹ ಹೆಜ್ಜೆ, ಪರಮಾನಂದ ಹೆಜ್ಜೆ. ಹೆಜ್ಜೆ ಹೆಜ್ಜೆಗೂ ಲಿಂಗದಲ್ಲಿ ತನ್ಮಯ ಲಿಂಗದಲ್ಲಿ ನಿಬ್ಬೆರಗು, ನಿಂತರೂ ಲಿಂಗದಲ್ಲಿ ನಿಂತ ನಿಲವು ಲಿಂಗವಾಗಿ ನಿಂತ ನಿಲುವು. ಈ ಮಹಾಂತನ ನಿಲುವು ಕಾಲಿಲ್ಲದೆ ಕಣ್ಣಿಲ್ಲದೆ ನಡೆಯುವ ನೋಡುವ ನಿಲುವು. ಶಬ್ದಮುಗ್ಧ ನಿಲವು. ಚೈತನ್ಯವರಿತು, ನುಡಿಗೆಡೆಗೊಡದ ಘನವಾಗಿ ನಿಂತ ನಿಲವು ಅಹಹ, ನುಡಿಗೊಳಗಾಗದ ನುಡಿ, ಇದನೆಂತು ವರ್ಣಿಸುವದು, ನೋಡಿ ನೋಡದ ನೋಟದ ಘನವ ಇದನಾರಯ್ಯ ವರ್ಣಿಸುವದು.

ಶರಣ ಸಂಚಾರ ಅಪ್ರತಿಮ ಲಿಂಗವ ಕೂಡಿ ಅಚಲಾನಂದದೊಳಿಪ್ಪಗಮ್ಯನ ಸಂಚಾರ ಕೂಡಲಚೆನ್ನಸಂಗಯ್ಯ ಸಚ್ಚಿದಾನಂದ ಸಂಚಾರ ನುಡಿ, ಸಚ್ಚಿದಾನಂದ ನಡೆ ಸಚ್ಚಿದಾನಂದ ಮಾತು ಮನಂಗಳು ಸಚ್ಚಿದಾನಂದವೆ ಆದುದರಿಂದ ಅಡಿಗಡಿಗೆ

ಸ್ಥಾನ ನಿಧಿ.

ಅಡಿಗಡಿಗೆ ದಿವ್ಯ ಕ್ಷೇತ್ರ, ಈ ಘನವಂತನ ಹೆಜ್ಜೆ ಹೆಜ್ಜೆಯಲ್ಲಿಯೂ ದಿವ್ಯ ಕ್ಷೇತ್ರ. ಘನವನರಿದಿಹ ಘನವಂತನ ಪಾದ ಘನಕ್ಕೆ ಘನವಾಗಿಹ ಮಹಾಪಾದ. ಈ ಮಹಾಪಾದ ಸಂಚರಿಸಿದ ಸ್ಥಾನ ಅದು ದಿವ್ಯ ಕ್ಷೇತ್ರ. ಶರಣನೆಲ್ಲಿ ಹೋಗುವನು ಅಲ್ಲಿಯೆ ಗಣ ತಿಂಥಿಣಿ ಅಲ್ಲಿ ಪ್ರಮಥರ ಸಂಗಮ ಲಿಂಗಾಂಗ ಸಮರಸ ಜ್ಞಾನಿಗಳ ಸಂಗಮ. ಅಲ್ಲಿ ಸಮಗೋಷ್ಠಿ. ಇದು ಉಪಮಿಸದ ಗೋಷ್ಠಿ ಲಿಂಗೈಕ್ಯ ಗೋಷ್ಠಿ ನಡೆಯುವದರಿಂದ ಅದು ದಿವ್ಯ ಕ್ಷೇತ್ರವೆಂದಿಹರು.

ಅಡಿಗಡಿಗೆಯೂ ನಿಧಿಯೂ ನಿಧಾನ ನೋಡಾ, ಶರಣನ ಸಮಗೋಷ್ಠಿ ಅದು ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಲಿಂಗ ಗೋಷ್ಠಿ ನಡೆಯುವಲ್ಲಿ ನಿಧಿಯೂ ಇದೆ. ನಿಧಾನವು ಇದೆ. ಅನ್ನಪೂರ್ಣೆಯು ಇದ್ದರೆ ಅರ್ಥಸಂಪತ್ತು ಇದೆ. ಏಕೆಂದರೆ ದಾಸೋಹ ಭಾವವುಳ್ಳ ಪ್ರಮಥರು ಇರುವರು, ಸಮಗೋಷ್ಠಿಯುಳ್ಳ ಶರಣರು ಉಂಟು. ಶಬ್ದಮುಗ್ಧ ಸುಖಿಗಳಾದ ಲಿಂಗೈಕ್ಯರು ಉಂಟು. ಅವರ ಯೋಗ ಕ್ಷೇಮಕ್ಕಾಗಿ ಬೇಡದೆ ಕೊಡುವ ಕಾಮಧೇನು ನಿಂತಿದೆ, ಕಲ್ಪಿಸದೆ ಕೊಡುವ ಕಲ್ಪತರು ನಿಂತಿದೆ ಚಿಂತಿಸದೆ ಕೊಡುವ ಚಿಂತಾರತ್ನವು ಇದೆ. ಭಾವಿಸದೆ ಕೊಡುವ ಭಾವಕ್ಕಗಮ್ಯನು ಸಕಲರ ಹೃದಯದಲ್ಲಿ ಬೆಳಗುವ ಬೆಳಗು, ಮಹಾಬೆಳಗು, ಆಗಿ ನಿಂತಿರುವದರಿಂದ ಅಲ್ಲಿ ಸವೆಯದ ನಿಧಿ ಅಕ್ಷಯ ನಿಧಿಯು ಆಗಿಹ ನಿಧಾನವು ನೋಡಾ ಎಂದಿಹರು.

ಆತನ ಇರುವೆ ವಾರಣಾಸಿ, ಅಮಿಮುಕ್ತ ಕ್ಷೇತ್ರ, ಶರಣ ಸ್ವಾನುಭಾವವೆಂಬ ಸಮ್ಯಜ್ಞಾನವ ನುಂಡ ಜ್ಞಾನಾನಂದ. ಆತನು ತೃಪ್ತರೂಪ ತೃಪ್ತ. ಇದು ಕಾರಣ ಲಿಂಗಮುಂತಾಗಿ ರುಚಿಸುವ ಶರಣ. ಲಿಂಗ ಮುಂತಾಗಿ ತೃಪ್ತಿ ನೈದುವ ಶರಣ, ಶರಣ ಕಾಯಲಿಂಗ, ಲಿಂಗಕಾಯವದು, ಸಚ್ಚಿದಾನಂದ ಶರಣನ ಆನಂದ, ನಿಜಾನಂದ, ಶರಣನ ಸಂಗ ನಿಜಸಂಗ, ತನ್ನ ಸಂಗ, ಲಿಂಗ ಭೋಗೋಪ ಬೋಗದ ಸಂಗ, ಸರ್ವಾಂಗಿ ಲಿಂಗಿ, ಸರ್ವಾಂಗಿ ಲಿಂಗಿಯ ಇರವು ವಾರಣಾಸಿ. ಅವಿಮುಕ್ತ ಕ್ಷೇತ್ರ ವಾರಣಾಸಿ ಅದು ಕಾಶಿ ನಿವಾಸ. ಕೇವಲ ಸುಖದ ನಿವಾಸ. ಲಿಂಗದಲ್ಲಿ ಲೀಯವಾದ ನಿವಾಸ ನೋಡುವ ನೋಟ ನೀವೆಂದರಿದೆ ಕೇಳುವ ಶ್ರೋತ್ರ ನೀವೆಂದರಿದೆ, ಮೂಸಿಸುವ ನಾಸಿಕ ನೀವೆಂದರಿದೆ, ಮುಟ್ಟುವ ಸ್ಪರ್ಶನ ನೀವೆಂದರಿದೆ, ರುಚಿಸುವ ಜಿಂಹ್ವೆ ನೀವೆಂದರಿದೆ, ಎನ್ನ ಕರಣಂಗಳೆಲ್ಲವು ನಿಮ್ಮ ಕಿರಣಂಗಳಾಗಿ ಕೂಡಲಚೆನ್ನ ಸಂಗಯ್ಯ ನೀವು ಕೂರ್ತುಕರುಣಿಸಿದ ಮಹಾಪ್ರಸಾದಕ್ಕೆ ಮಹಾಪ್ರಸಾದವೆ ಆದೆನು.

ಶರಣರ ಇರವು ಲಿಂಗೈಕ್ಯದ ಇರವು. ಆದುದರಿಂದ ಶರಣನ ನೋಟ, ಲಿಂಗ ನೋಟ, ನೋಡದ ನೋಟ, ಆವಾವುದನ್ನು ಕಾಣದ ನೋಟ, ತನ್ನ ಕಂಡ ನೋಟ, ನಾನೀನೆಂಬ ಸಂದಳಿದ ನೋಟ, ಸಕಲವು ಸಚ್ಚಿದಾನಂದವಾಗಿಹ ನೋಟ, ಪೂರ್ಣ ನೋಟ, ಕಾಣಿಸುವ ಸ್ಥಾವರ, ಜಂಗಮವು ಸಚ್ಚಿದಾನಂದ ಕಾಣುವ ಕಣ್ಣು ಸಚ್ಚಿದಾನಂದ ಲಿಂಗ ಲಿಂಗವಾಗಿ ನೋಡುವ ನೋಟ, ನೀವೆಂದರಿದ ನೋಟ, ನೀವು ಕರುಣಿಸಿದ

ನೋಟ, ನಿಸ್ಸೀಮ ನೋಟ, ನಿಜವರಿತ ನಿಬ್ಬೆರಗುಳ್ಳ ನೋಟ, ಕೇಳುವ ಶ್ರೋತ್ರವು, ಸಚ್ಚಿದಾನಂದ ಮೂಸಿಸುವ ನಾಸಿಕವು, ಸಚ್ಚಿದಾನಂದ ಮುಟ್ಟುವ ತ್ವಕ್ಕೇಂದ್ರಿ, ಸಚ್ಚಿದಾನಂದ ರುಚಿಸುವ ಜಿಹ್ವೆಂಯು, ಸಚ್ಚಿದಾನಂದ ನಿಮ್ಮ ಕರಣಂಗಳೆಲ್ಲವು ನಿಮ್ಮ ಕಿರಣಂಗಳಾಗಿರುವದರಿಂದ ತೆರಹಿಲ್ಲದ ನುಡಿ ತೆರಹಿಲ್ಲದ ನಡೆ ತೆರಹಿಲ್ಲದ ಸ್ವಾನುಭಾವ ತೆರಹಿಲ್ಲದ ಸಮ್ಯಜ್ಞಾನವಾದುದರಿಂದ ನೀವು ಕೂತು ಕರುಣಿಸಿದ ಮಹಾಪ್ರಸಾದ ಇದನರಿತು, ತಾನೆ ತೆರಹಿಲ್ಲದಭವ, ತೆರಹಿಲ್ಲದ ಜ್ಞಾನಾನಂದ ಅನಾಮಯವಾಗಿರುವ ನಿರ್ವಾಣವಾದುದರಿಂದ ಆತನ ಇರುವೆ ವಾರಣಾಸಿ, ಅದುವೆ ಅವಿಮುಕ್ತ ಕ್ಷೇತ್ರ. ಸೀಮಾತೀತ ಕ್ಷೇತ್ರ ಅಖಂಡಾನಂದ ಮಯವಾಗಿಹ ಕ್ಷೇತ್ರ ಅದು ಕ್ಷರಾಕ್ಷರ ಮೀರಿದ ಘನಾನಂದ ಕ್ಷೇತ್ರವಿದು ಅವಿಮುಕ್ತ ಕ್ಷೇತ್ರವು.

ಕೂಡಲಸಂಗಮದೇವಾ ನಿಮ್ಮ ಶರಣ ಸ್ವತಂತ್ರನಾಗಿ ಶರಣ, ಅರುವಿಂಗರುವಾಗಿಹ ಘನವಂತ ಗುರುವಿಡಿದ ಅರುವು ಈತನದಲ್ಲ, ಲಿಂಗವಿಡಿದ ಅರುವು ಈತನದಲ್ಲ, ತನ್ನಿಂದ ತಾನರಿದ ಅರುವುಳ್ಳವನಾದುದರಿಂದ ನಿಮ್ಮ ಶರಣ ಸ್ವತಂತ್ರನೆಂದು ಹೇಳಿಹರು.

**ವಚನ 19**

**ಘಟ ಸಂಸ್ಕಾರದಲ್ಲಿ ಪಟಲ ಹರಿವುದೆ**
**ಜೀವ ಸಂಸ್ಕಾರವಿಲ್ಲದನ್ನಕ್ಕ? ಭವವೆಂತು ಹರಿವುದು,**
**ಅಂಗಭವಿ ಲಿಂಗಭವಿಯ ಕಳೆದುಳಿದಲ್ಲದೆ**
**ಕೂಡಲಚೆನ್ನಸಂಗನ ಹೊದ್ದಬಾರದು. ॥ 340 ॥**

ತಾತ್ಪರ್ಯ: ಘಟಸಂಸ್ಕಾರದಲ್ಲಿ ಪಟಲ ಹರಿವುದೆ: ಗುರು ಸಾಂಪ್ರದಾಯವಂತನು ಬಹು ಜನ ಇರಬಹುದು, ಅವರುಗಳಲ್ಲಿ ಘಟಸಂಸ್ಕಾರದವರೆ ಹೆಚ್ಚು ಇದ್ದಾರೆ. ಇವರಿಗೆ ಅಂಗಾಂಗಗಳ ಆವಾವಸ್ಥಾನದಲ್ಲಿ ವಿಭೂತಿ, ಗಂಧ, ಕುಂಕುಮ, ಎಲ್ಲಿ ಧರಿಸಬೇಕು. ಲಿಂಗ ಆವಲ್ಲಿ ಧರಿಸುವದು, ಲಿಂಗ ಪೂಜೆ ಹೇಗೆ ಮಾಡುವದು, ಎನ್ನುವ ವಿಧಿ ವಿಧಾನ ಸರಿಯಾಗಿ ತಿಳಿದ ಸಂಸ್ಕಾರವಂತರು ಸಿಕ್ಕುತ್ತಾರೆ. ವಿಧಿ ವಿಧಾನಕ್ಕನುಸರಿಸಿ ಮಾಡುವ ಆಚಾರವಂತರು ಸಿಕ್ಕುವರು. ನಿಯಮಾಚಾರವುಳ್ಳ ನಿಷ್ಠಾವಂತರು ಲಿಂಗಾರ್ಚಕರು ಶಿಕ್ಕುವರು. ಈ ನಿಯಮಾಚಾರದಿಂದ ಪಟಲ ಹರಿವುದೆ? ಪ್ರಾರಬ್ಧರೂಪಿ ಪಟಲ ಹರಿವುದೆ? ಭವಬಂಧನ ರೂಪಿ ಪಟಲ ಹರಿವುದೆ? ಇಲ್ಲದ ಮರವು ಇಲ್ಲವಾಗುವುದೆ? ಇಲ್ಲದ ತನು ಇಂದ್ರಿಯಂಗಳು, ಪ್ರಾಣಾದಿಗಳು, ಕರಣಂಗಳು ಇಲ್ಲವಾಗಿರುವವೆ? ಇಲ್ಲದವು ಇಲ್ಲವಾಗದಿದ್ದಲ್ಲಿ ಜೀವನು ಜನನ ಮರಣದಿಂದ ಬಿಡುಗಡೆಯಾಗುವದದೆಂತು! ಇದು ಕಾರಣ ಚೆನ್ನಬಸವರಾಜ ದೇವರು ಘಟಸಂಸ್ಕಾರದಲ್ಲಿ ಪಟಲ ಹರಿವುದೆ? ಎಂದು ಎಚ್ಚರಿಸಿಹರು, ಜೀವಸಂಸ್ಕಾರವಿಲ್ಲದನ್ನಕ್ಕರ; ಜೀವ ಸಂಸ್ಕಾರವಿಲ್ಲದಿದ್ದರೆ ಪಟಲ ಹರಿವುದೆ? ಜೀವ ಸಂಸ್ಕಾರವೆಂಬುದು ಅಂಗದುದಯ ಲಿಂಗದ ಸುಖ, ಲಿಂಗದುದಯ ಅಂಗದ ಸುಖ, ಎರಡಿಲ್ಲದ ಘನವನೇನೆಂಬೆನಯ್ಯ ಮಿಕ್ಕಿ ಮೀರಿನಿಂದ ನಿಲವ ನೇನೆಂಬೆನಯ್ಯ ಕೂಡಲ

ಚೆನ್ನಸಂಗನ ಶರಣರನೇನೆಂಬೆನು.

ಜೀವ ಸಂಸ್ಕಾರವೆಂಬುದು, ತಾನಾರೆಂಬ ತನ್ನ ಸ್ವರೂಪದುದಯ, ಅರುವಿನ ಉದಯವೆ ಚಿದಂಗದುದಯ, ಈ ಅರುವಿನ ಉದಯವೆ ಲಿಂಗದ ಸುಖ, ಈ ಸುಖವೆ ಸ್ವಯಸುಖವು. ಇದು ಚಿದಂಗದ ಸುಖ, ಇಲ್ಲಿ ಅಂಗನು ಕೀಳೆಂಬುದಿಲ್ಲ, ಲಿಂಗ ಶ್ರೇಷ್ಠವೆಂಬುದಿಲ್ಲ, ಅಂಗ ಜೀವನಾಗಿರುವದಿಲ್ಲ, ಲಿಂಗ ಪರಮನಾಗಿರುವುದಿಲ್ಲ, ಅಂಗನಿಗೆ ಅಂಗನೆಂಬುದಿಲ್ಲ, ಲಿಂಗನಿಗೆ ಲಿಂಗನೆಂಬುದಿಲ್ಲ, ಅಂಗವದು ಲಿಂಗ, ಲಿಂಗವದು ಅಂಗ, ಅಂಗವು ನಿರಂತರವಾಗಿರುವ ಮಂಗಳಮಯ ಸಚ್ಚಿದ್ಘನವು ಲಿಂಗವು ನಿರಂತರವಾಗಿರುವ ಮಂಗಳಮಯ ಸಚ್ಚಿದ್ಘನವು. ಸಚ್ಚಿದ್ಘನವೆ ಅಂಗ ಲಿಂಗವಾಗಿ ಕಂಡರೂ ಅದುವೆ, ಇದು ನಿಸ್ಸೀಮ ಅರುವರಿತವರ ಇರವು ತಾನಾರೆಂಬ ತನ್ನ ತಾನರಿತ ಇರವು. ಈ ಇರವು ಎರಡಿಲ್ಲದ ಘನ ಮಿಕ್ಕಿ ಮೀರಿದ ನಿಲವು ಏನೆಂಬೇನೆಂಬೆನಯ್ಯ ಈ ಮಿಕ್ಕಿ ಮೀರಿನಿಂದ ನಿಲುವಿನ ಸಂಸ್ಕಾರವಾಗದನ್ನಕ್ಕರ ಭವವೆಂತು ಹರಿವುದು.

ಭವ ಹರಿಯಬೇಕಾದಲ್ಲಿ ಮಿಕ್ಕಿ ಮೀರಿನಿಂದ ನಿಲುವಿನ ಸಂಸ್ಕಾರವಾಗಬೇಕು. ಆಗ ಅಂಗ ಭವಿ ಎಂಬುದು ಹೋಗುವದು, ಲಿಂಗ ಭವಿ ಎಂಬುದು ಹೋಗುವುದು, ಎಲ್ಲಿಯವರೆಗೆ ಶಬ್ದ ಸೂತಕಿಯಾಗಿಹನು ಮಿಗೆ ಮಿಗೆ ಮೀಸಲವಾಗಿಹ ಘನವೇನು ಬಲ್ಲನು. ಅಂಗವು ಸಚ್ಚಿದಾನಂದ ಲಿಂಗವು ಸಚ್ಚಿದಾನಂದ ಇವೆರಡು ಒಂದೆ ಎಂಬುದು ಸೂತಕ. ಈ ಶಬ್ದಸೂತಕದ ಪರಿಹಾರ ಮಿಕ್ಕಿ ಮೀರಿನಿಂದ ನಿಲುವಿನಿಂದ ! ಶೃತಿಗೆ ಮೀರಿ ನಿಂತ ನಿಲುವಿನಿಂದ ಧ್ಯಾನ ಧ್ಯಾತೃವೆಂಬುದಕ್ಕೂ ಮೀರಿ ನಿಂತ ನಿಲವು ಜ್ಞಾತೃ ಜ್ಞಾನವೆಂಬುದಕ್ಕೂ ಮೀರಿ ನಿಂತ ನಿಲವು ಶಬ್ದ ಸಂದಣಿಯ ಹಂಗು ಹರಿದ ನಿಲವು, ಇದು ಮನ ಮೇರೆದಪ್ಪಿದ ನೆಲೆಯಿಲ್ಲದ ನಿಲುವುಳ್ಳ ಅನುಪಮ ಶರಣನ ಸ್ವಾನುಭವವುಳ್ಳ, ಜ್ಞಾನಾಮೃತ ರೂಪಿ ಸಂಸ್ಕಾರ ಜೀವನಿಗೆ ಆಗುವುಡೆ ಸಂಚಿತ ಆಗಾಮಿ ಪ್ರಾರಬ್ದವೆಂಬ ತ್ರಿವಿಧ ಕರ್ಮರೂಪಿ ಪಟಲವೆ ಹರಿವುದು, ಇಲ್ಲದಿದ್ರೆ ಭವವೆಂತು ಹರಿವುದು.

ಅಂಗಭವಿ, ಲಿಂಗಭವಿಯು ಕಳೆದುಳಿದಲ್ಲದೆ ಕೂಡಲ ಚೆನ್ನಸಂಗನ ಹೊದ್ದಬಾರದು ಕೂಡಲ ಚೆನ್ನ ಸಂಗನೆಂದರೆ ತೆರಹಿಲ್ಲದ ಘನ, ಶಬ್ದ ಸಂದಣಿಗೆ ನಿಲುಕದ ನಿಲುವು ಇದು ತನಗೆ ವೇದ್ಯವಾಗಬೇಕಾದಲ್ಲಿ ಅಂಗಭವಿ, ಲಿಂಗಭವಿ ಎಂಬುದು ನಷ್ಟವಾಗಬೇಕು. ಕಥನಕ್ಕೆ ನಿಲುಕದ ನಿಲುವು ತನ್ನಿಂದ ತನಗೆ ವೇದ್ಯವಾಗುವುಡೆ ಅಂಗಭವಿ ಲಿಂಗಭವಿ ಕಳೆದುಳಿದ ನಿಲವು ಇದುವೆ ಮಿಕ್ಕಿ ಮೀರಿನಿಂದ ನಿಲವು ಇದುವೆ ಕೂಡಲಚೆನ್ನಸಂಗಯ್ಯ ತಾನಾದ ನಿಲವು.

**ವಚನ 20**

**ಆಸನ ಬದ್ಧರು ಸುಮ್ಮನಿರರು, ಭಸ್ಮವ ಹೋಸಿ ಸ್ವರವ ಹಿಡಿವರು ಸಾಯದಿಪ್ಪರೆ?**
**ಸತ್ಯವನೆ ಮರೆದು ಅಸತ್ಯವನೆ ಹಿಡಿದು**
**ಸತ್ತು ಹೋದರು ಗುಹೇಶ್ವರಾ. ॥ 224 ॥**

**ತಾತ್ಪರ್ಯ:** ಆಸನ ಬದ್ಧರು ಸುಮ್ಮನಿರರು ಭಸ್ಮವ ಪೂಸಿ, ಸ್ವರವ ಹಿಡವರು

ಸಾಯದಿಪ್ಪರೆ: ಕಾಲ ಕರ್ಮ ಪ್ರಳಯಂಗಳಾಗಿ ಸಾಯದಿಪ್ಪರೆ? ಹಠಹೋಗಿಗಳು, ಪ್ರಾಣಾಯಾಮ ಮಾಡುವವರು, ಅವರು ಸುಮ್ಮನಿರರು. ಆಸನ ಹಾಕುವದರಲ್ಲಿಯು ಸರಿಯಾದ ಅನುಭವಿಗಳು ತಳ ಆಸನಗಳಲ್ಲಿ ಸರಿಯಾದ ಪರಿಣಿತರು. ಧೌತಿ ಕಪಾಲಭಾತಿ, ತ್ರಾಟಕ ನೌಲಿ, ಭಸ್ತಿ, ನೇತಿ ಎಂಬ ಷಟ್ ಕ್ರಿಯೆಂಗಳ ಮಾಡಿ ಶರೀರ ಆರೋಗ್ಯದಿಂದಿಡುವ ಸಾಧಕರು ಮೇಲೆ ಪ್ರಾಣಾಯಾಮಕ್ಕಾಗಿ ಉಪಯೋಗಿಸುವ ಪದ್ಮಾಸನ, ಸಿದ್ಧಾಸನ, ಸುಖಾಸನವ ಹಾಕಿ ಪ್ರಾಣಾಯಾಮದಿಂದ ಕೇವಲ ಕುಂಭಕ ಯೋಗ ಬಲಿಸಿ, ಬ್ರಹ್ಮರಂಧ್ರದಲ್ಲಿ ತಮ್ಮ ಪ್ರಾಣವನ್ನಿಟ್ಟು ಲಂಬಿಕಾಯೋಗ ಬಲದಿಂದ ಸಹಸ್ರಾರು ವರ್ಷಗಳವರೆಗೂ ತಮ್ಮ ಪ್ರಾಣವ ಉಳಿಸಿಕೊಳ್ಳುವರು.

ಇದಲ್ಲದೆ ಹಠಯೋಗಬಲದಿಂದ ರೋಮೇಶ ಮುನಿ ಯುಗಪರಿಯಂತರ ಇದ್ದನೆಂದು ಮತ್ತು ಚಾಂಗದೇವನು 1200 ವರ್ಷಗಳವರೆಗೆ ಇದ್ದರೆಂದು ಗ್ರಂಥಗಳಿಂದ ತಿಳಿದು ಬರುತ್ತದೆ. ಇವರು ಆಸನಬದ್ಧರು, ಸುಮ್ಮನಿರರು. ಇದಲ್ಲದೆ ಪ್ರಾಣವನ್ನು ಶುದ್ಧೀಕರಿಸುವದರ ಸಲುವಾಗಿ ರೇಚಕ ಪೂರಕ ಕಪಾಲಭಾತಿ ಎಂಬ ಕ್ರಿಯೆಯ ಮಾಡಿ ಪ್ರಾಣವ ಶುದ್ಧ ಗೊಳಿಸುವರು, ನಂತರ ಭಸ್ಮಧಾರಣ ಮಾಡಿಕೊಂಡು ಗುರು ತೋರಿಸಿದ ಕ್ರಮಾನುಸಾರ ಪ್ರಾಣಾಯಾಮ ಮಾಡುವರು. ಈ ಪ್ರಾಣಾಯಾಮ ಕ್ರಿಯೆ ಹೀಗೆ ಇದೆ. ಪೂರಕ ರೇಚಕ ಕುಂಭಕದೊಂದಿಗೆ ಈ ಅಭ್ಯಾಸ ನಡೆಯುವದು. ಪೂರಕವೆಂದರೆ ಶ್ವಾಸವ ಏರಿಸುವದು ರೇಚಕವೆಂದರೆ ಶ್ವಾಸವನ್ನು ನಿಧಾನವಾಗಿ ಬಿಡುವದು, ಕುಂಭಕವದು ಶ್ವಾಸವನ್ನು ತಡೆದು ನಿಲ್ಲಿಸುವದು. 4 ಮಾತ್ರೆ ಪೂರಕವಾದರೆ 8 ಮಾತ್ರೆ ರೇಚಕ ಮಾಡುವರು. 16 ಮಾತ್ರೆ ಕುಂಭಕ ಮಾಡುವದು. ಮೊದಲು ಪೂರಕವ ಮಾಡುವದು ನಂತರ ಕುಂಭಕ ಮಾಡುವದು. ಆಮೇಲೆ ನಿಧಾನವಾಗಿ ರೇಚಕ ಮಾಡುವದು ಈ ಕ್ರಮದಿಂದ ಮಾತ್ರೆಗಳ ಗಣನೆ ಹೆಚ್ಚುತ್ತ ಹೆಚ್ಚುತ್ತ ಹೋದರೆ, ಮುಂದೆ ಕೇವಲ ಕುಂಭಕ ಮಾಡುವದು ಸಾಧ್ಯವು. ಇದು ಗುರುತೋರಿಸಿದ ಕ್ರಮದಂತೆ ಅಭ್ಯಾಸಮಾಡಿದರೆ ಯೋಗದಲ್ಲಿ ಪೂರ್ಣತೆ ಹೊಂದುವನು. ಆಗ ಪ್ರಾಣವನ್ನು ಬ್ರಹ್ಮರಂಧ್ರದಲ್ಲಿರಿಸಲು ಸಾಧ್ಯ. ಸ್ವತಃ ಮಾಡಿದರೆ ಅಪಾಯಕರ.

ಪ್ರಾಣಾಯಾಮ ಅಭ್ಯಾಸ ಬಲದಿಂದ ನಾವು ಸಹಸ್ರಾರು ವರ್ಷಗಳವರೆಗೆ ಜೀವ ಉಳಿಸಿಕೊಂಡು ತ್ರಿಕಾಲಗಳ ಎಚ್ಚರವಿಲ್ಲದೆ ಕೇವಲ ಕುಂಭಕ ಯೋಗದಲ್ಲಿದ್ದರೂ ಏಂದಾದರೊಂದುದಿನ ಈ ಶರೀರ ಮರಣವಾಗಲೇಬೇಕು. ಹಿಂದಿನ ಹಠಯೋಗಿಗಳೆಷ್ಟೊ ಮಡಿದು ಹೋಗಿಹರು ಇದು ಕಾರಣ ಪ್ರಭುದೇವ ಹಠಯೋಗಿಗಳು ಸಾಯದಿಪ್ಪರೆ? ಎಂದು ಎಚ್ಚರಿಸಿಹನು ಇದಲ್ಲದೆ ಯೋಗಿಗಳು ಸತ್ಯವನ್ನೇ ಮರೆತಿದ್ದಾರೆ ಅಸತ್ಯವನ್ನೆ ಹಿಡಿದಿದ್ದಾರೆ.

ಯೋಗಿಗಳು ಮರೆತ ಸತ್ಯವಾವುದು? ಹಿಡಿದ ಅಸತ್ಯವಾವುದು? ಯೋಗಿಗಳು ಹಿಡಿದ ಅಸತ್ಯವೆಂದರೆ ಪ್ರಾಣ, ಇಂದ್ರಿಯಂಗಳನ್ನು ಹಿಡಿದರು, ಪ್ರಾಣಾಯಾಮ ಅಭ್ಯಾಸದಿಂದ ಪ್ರತಿದಿನ 21600 ಸಲ ಶ್ವಾಸೋಚ್ಛ್ವಾಸ ಸಂಚರಿಸುವ ಪ್ರಾಣವನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡು ತಮ್ಮ ಮಾತ್ರೆಗಳ ಗತಿಯಲ್ಲಿ ಸಂಚರಿಸುವಂತೆ

ಮಾಡಿದರು. ಇದು ಕಾರಣ ಅಸತ್ಯವ ಹಿಡಿದರು ಎಂದು ಹೇಳಿಹರು.

ಸತ್ಯವ ಮರೆತುದು ಆವುದು? ಸತ್ಯವನ್ನು ಮಾತಿನ ಮೂಲಕ ವಿವರಿಸುವದಕ್ಕೂ ಆಗುವುದಿಲ್ಲ. ವಿವರಿಸದೆ ಇರುವದಕ್ಕೂ ಆಗುವುದಿಲ್ಲ. ಅದನ್ನು ತಿಳಿದಿದೆ ಎಂತಲೂ ಹೇಳುವದಕ್ಕೂ ಆಗುವುದಿಲ್ಲ. ತಿಳಿದಿಲ್ಲವೆಂತಲೂ ಹೇಳುವುದಕ್ಕೂ ಆಗುವುದಿಲ್ಲ. ನಿರಂತರವಾಗಿರುವ ಸರ್ವಮಂಗಳ ತತ್ವ ಒಂದೆ ಸತ್ಯವಾದರೆ, ವಿಷಯ ಇಂದ್ರಿಯ ಬುದ್ಧಿ ಮನಸ್ಸು ಇವುಗಳೆಲ್ಲ.

ಸತ್ಯವನ್ನು ಮರೆತವರೆಂದರೆ ತಾನಾರೆಂದು ತನ್ನ ತಾ ಅರಿಯದವರು. ಅರಿವುಡೆ ತಾನೆ ನಿರಂತರವಾಗಿರುವ ಮಂಗಳಮಯ ತತ್ವ ತನ್ನ ಹೊರ್ತು ಅನ್ಯವಾವುದು ಇಲ್ಲ. ಅಂಥ ತನ್ನ ಸ್ವರೂಪ ಇದ್ದುದು. ಇಲ್ಲದ ಶಬ್ದ ಸ್ಪರ್ಶ ರೂಪ, ರಸ, ಗಂಧ, ಈ ಪಂಚ ವಿಷಯಂಗಳು, ಪಂಚಜ್ಞಾನೇಂದ್ರಿ ಪಂಚ ಕರ್ಮೇಂದ್ರಿಯಂಗಳು ಮನ ಬುದ್ಧಿ ಚಿತ್ತಾ ಅಹಂಕಾರಾದಿಗಳು ಇವು ಇಲ್ಲದವು. ಪಿಂಡಾಂಡ ಬ್ರಹ್ಮಾಂಡ ಇಲ್ಲದವು ಇಲ್ಲದ ಅನಾತ್ಮದಿಂದ ಇದ್ದ ತನ್ನ ಸ್ವರೂಪ ತಿಳಿಯುವುದು ಹೇಗೆ? ಇದ್ದ ತನ್ನ ಸ್ವರೂಪವನ್ನು ಇಲ್ಲದ ಅನಾತ್ಮದಿಂದ ವಿವರಿಸುವದದೆಂತು?

ಇಲ್ಲದ ವಾಣಿಯ ಶುಭಾಶುಭಂಗಳು ಇಲ್ಲದ ಕಾಯದ ಶುಭಾಶುಭಂಗಳು ಇಲ್ಲದ ಮನದ ಶುಭಾಶುಭಂಗಳೂ ಇದ್ದ ತನ್ನ ಸ್ವರೂಪಕ್ಕಿಲ್ಲ ಮಾಡುವದೆ ವಿವರಿಸದೆ ಇರುವುದಕ್ಕೂ ಆಗುವುದಿಲ್ಲವೆಂದು ಹೇಳಿದಂತೆ. ಉಪಮಾತೀತ ವಸ್ತು ಅದನ್ನು ತಿಳಿದಿಲ್ಲವೆಂದರೂ ತಪ್ಪೆ, ತಿಳಿದಿದೆ ಎಂದರೂ ತಪ್ಪೆ, ಏಕೆಂದರೆ ತಾನಾರೆಂದು ತನ್ನ ತಿಳಿಯಲು, ವಿಷಯ ಇಂದ್ರಿಯ ಬುದ್ಧಿ ಮನಸ್ಸು ಇವುಗಳ ಸಹಾಯದಿಂದ ಅರಿತೆನೆನ್ನವುದು ತಪ್ಪು. ಇವುಗಳು ಇಲ್ಲದವುಗಳು ಇಲ್ಲವಾದ್ದರಿಂದ ಇದ್ದವನನ್ನು ಇಲ್ಲದವುಗಳಿಂದ ತಿಳಿದುದು ಹೇಗೆ? ತಾನು ನಿರಂತರನೆಂಬುದು ತನ್ನಿಂದ ತನಗೆ ವೇದ್ಯವಾಗುವುಡೆ, ಆಗ ಸತ್ಯವ ಹಿಡಿದವರು ಇವರೆ ಶರಣರು. ಇವರೆ ಸಾಯದಿಪ್ಪರು ಉಳಿದವರೆಲ್ಲ ಅಸತ್ಯವ ಹಿಡಿದವರು; ಭವಕ್ಕೊಳಪಟ್ಟವರೆಂದು ಹೇಳಿದೆ.

**ವಚನ 21**

**ಅಂಗ ಲಿಂಗ, ಲಿಂಗ ಅಂಗವೆಂದರಿದ ಬಳಿಕ ಅಲ್ಲಿಯೆ ಕಾಣಿರೊ!**
**ಬೇರೆ ತೋರಲಿಲ್ಲ, ಉಂಟೆಂದರಸಲಿಲ್ಲ, ಅಲ್ಲಿಯೇ ಕಾಣಿರೊ!**
**ಕೂಡಲ ಚೆನ್ನ ಸಂಗಯ್ಯ ಲಿಂಗ ನಿರಂತರವಲ್ಲಿಯೆ ಕಾಣಿರೊ. ॥ 484 ॥**

**ತಾತ್ಪರ್ಯ:** ಅಂಗ ಲಿಂಗ, ಲಿಂಗ ಅಂಗವೆಂದರಿದ ಬಳಿಕ ಅಲ್ಲಿಯೆ ಕಾಣಿರೊ: ಅಂಗ ಲಿಂಗವೆಂದರೆ ತಾನು ತಾನೆ ತನ್ನ ಅರಿದ ಬಳಿಕ ಕೂಡಲಚೆನ್ನಸಂಗಯ್ಯ, ತಾನೆ. ಲಿಂಗ ನಿರಂತರ ತಾನೆ ಅಂಗ ಲಿಂಗವೆಂಬಿವು ಎರಡಾಗಿ ಕಂಡರೂ ಅರಿವುಡೆ ತಾನೆ. ತಾನೆ ಅಂಗ, ತಾನೆ ಲಿಂಗ. ಭಕ್ತನ ಕರ ಕಮಲದಲ್ಲಿ ಪ್ರಕಾಶಿಸುವ ಸಚ್ಚಿದ್ಘನನು ತಾನೆ. ಭಕ್ತನ ಹೃದಯ ಕಮಲದಲ್ಲಿ ಪ್ರಕಾಶಿಸುವ ಸಚ್ಚಿದ್ಘನನು ತಾನೆ, ಸ್ಥಾವರ ತಾನೆ. ಜಂಗಮವು ತಾನೆ. ಇಲ್ಲಿ ಒಳಗಾವದು ಹೊರಗಾವದು? ಇದು ಅರಿತವರ ದೃಷ್ಟಿಗೆ ಸಹಜವು ಅಜವು ನಿರಂತರವು ಆಗಿದೆ.

ನಿರಂತರವಾಗಿಹ ಮಂಗಳಮಯ ಸಚ್ಚಿದ್ಘನವು ಇದಕ್ಕೆ ದಿನ ರಾತ್ರಿ ಎಂಬ ಭೇದವಿಲ್ಲ ಇದು ಉದಯಾಸ್ತಗಳಿಲ್ಲದೆ ನಿರಂತರ ವಾಗಿರುವ ಮಂಗಳಮಯವು, ಅರಿವುಡೆ ತಾನೆ, ಅಂಗ ಲಿಂಗ, ಲಿಂಗ ಅಂಗವೆಂದರಿದ ಬಳಿಕ ಅಲ್ಲಿಯೆ ಕಾಣಿರೊ ಕೂಡಲ ಚೆನ್ನ ಸಂಗಯ್ಯ ನಿರಂತರವಲ್ಲಿಯೆ ಕಾಣಿರೆ! ಅಂಗ ಲಿಂಗ, ಅಂಗ ಲಿಂಗವೆಂದರಿಯುವದು ಹೇಗೆ? ಅಂಗ ಲಿಂಗಗಳ ಅರಿಯಬೇಕಾದರೆ ಅಂಗ ಬೇರೆ, ಲಿಂಗ ಬೇರೆಂದು ತಿಳಿದವರಿಗೆ ಲಿಂಗ ನಿರಂತರವಾಗಿರುವ ಘನತ್ವ ಗೊತ್ತಾಗದು. ಅಂಗ ಲಿಂಗವೊಂದೆ ಎಂದು ಭಾವಿಸುವ ಭಾವಿಕರಿಗೂ ತಿಳಿಯದು. ಏಕೆಂದರೆ ಅಂಗವೆಂಬ ಸಂಜ್ಞೆಯಾಗಲಿ, ಲಿಂಗವೆಂಬ ಸಂಜ್ಞೆಯಾಗಲಿ ಇವು ಬೇರಲ್ಲ ತಾನೆ. ಅಂಗವೆಂದರೂ ತಾನೆ, ಲಿಂಗವೆಂದರೂ ತಾನೆ, ತಾನು ನಿರಂತರವಾಗಿ ಅರಿಯುವವನಾಗಿದ್ದಾನೆ. ತಾನು ಸ್ವತಂತ್ರ, ಅರಿಯಬಹುದು ಅರಿಯದರುವಾಗಿಯೂ ಇರಬಹುದು. ಸಕಲವನ್ನು ಅರಿಯುವ ಅರುಸ್ವರೂಪ ಆದುದು, ಅರಿಯದ ಅರುವು ಆಗಿಹ ಲಿಂಗ ತಾನೆ, ಅಖಂಡಿತ ಘನನು ತಾನೆ.

ಪಿಂಡಾಂಡ ಬ್ರಹ್ಮಾಂಡ ತನ್ನಿಂದಲೆ ಸಿದ್ಧವಾಗುವವು, ಅವಿದ್ಯೆ ದುಪಾಧಿಯುಳ್ಳ ಜೀವನು ತನ್ನಿಂದಲೆ ಸಿದ್ಧವಾಗುವವು. ಮಾಯೆ ಉಪಾಧಿಯುಳ್ಳ ಈಶ್ವರನಾಗಲಿ ತನ್ನಿಂದ ಸಿದ್ಧವಾಗುವವು. ತ್ವಂಪದವಾಗಲಿ ತತ್ವಪದವಾಗಲಿ, ತ್ವಂಪದ ಸಾಕ್ಷಿಯಾಗಲಿ, ತತ್ವಪದ ಸಾಕ್ಷಿಯಾಗಲಿ, ಅಸಿ ಪದವಾಗಲಿ, ಅಸಿಪದ ಸಾಕ್ಷಿಯಾಗಲಿ, ತಟಸ್ಥ ಲಕ್ಷಣವಾಗಲಿ, ಸ್ವರೂಪ ಲಕ್ಷಣವಾಗಲಿ, ಭಾಗ ತ್ಯಾಗ ಲಕ್ಷಣವಾಗಲಿ, ಸಕಲವು ನನ್ನಿಂದ ಸಿದ್ಧವಾಗುವವು. ನನ್ನನ್ನು ಇವಾವು ಸಿದ್ಧ ಮಾಡಲರಿಯವು. ನನ್ನ ಸ್ವತಃ ಸಿದ್ಧ ಇರುವಿಕೆಯು ನಿರಂತರವಾಗಿರುವ ಮಂಗಳಮಯ ತತ್ವ ಇದ್ದಕ್ಕಿದ್ದಂತೆ ಇದೆ. ಇದು ಮಾತು ಮನಂಗಳಿಂದತ್ತತ್ತ ಆದಿ ಅನಾದಿಯಿಂದತ್ತತ್ತ ನಿರಂತರವಾಗಿರುವ ತಾನು, ತನಗೆ ಆದಿ ಆವುದು ಕೊನೆ ಆವುದು? ನಿತ್ಯ ನಿರತಿಶಯಾನಂದಕ್ಕೆ ಇಚ್ಛೆ ಆವುದು? ಅನಿಚ್ಛೆ ಗಮನಾಗಮನವೆಲ್ಲಿ? ಸಾರವಾದದ್ದಾವದು ಅಸಾರವಾದದ್ದಾವುದು? ನಿರಂತರವಾಗಿರುವ ತಾನೊಂದೆ ಸತ್ಯ. ತನ್ನ ಹೊರ್ತು ಅನ್ಯ ತತ್ವಗಳಿಲ್ಲವೆಂದಲ್ಲಿ ಭೇದವೆಂಬುದಿಲ್ಲ ಅಬೇಧವೆಂಬುದಿಲ್ಲ.

ಪ್ರಕಾಶಕವೆಂಬುದಿಲ್ಲ ಪ್ರಕಾಶಿತವೆಂಬುದಿಲ್ಲ ವೆಂದಲ್ಲಿ ಜಾಗ್ರತ ಸ್ವಪ್ನ ಸುಷುಪ್ತಿಗಳು ಹೇಗೆ ಇರಬಲ್ಲವು? ಇವುಗಳೆ ಇಲ್ಲವೆಂದಲ್ಲಿ ತುರೀಯವಾದರೂ ಹೇಗೆ ಇರಬಲ್ಲದು. ನಿರಂತರವಾಗಿರುವ ಸಚ್ಚಿದ್ಘನ ತಾನೊಂದೆ ಸತ್ಯವಾಗಿರುವಲ್ಲಿ ಬದುಕಿದುದು ಇಲ್ಲ ಮರಣವಾದುದು ಇಲ್ಲ. ಕಲ್ಪಿತವಾದ ದೇವತೆಗಳೂ ಇಲ್ಲ. ಅವರ ಲೋಕಂಗಳೂ ಇಲ್ಲ. ಇಲ್ಲವೆಂಬುದು ಇಲ್ಲವಾಗಿರುವಲ್ಲಿ ಅಲ್ಲಿ ಕರ್ಮ ಹೇಗೆ ಹೇಳುವುದು ಅಕರ್ಮ ಹೇಗೆ ಹೇಳುವದು. ನಿರಂತರವಾಗಿಹ ತತ್ವಕ್ಕೆ ಪುರುಷನೆಂದು ಹೇಗೆ ಹೇಳುವದು. ಅಪುರುಷನೆಂದು ಹೇಗೆ ಹೇಳುವದು.

ನಿರಂತರವಾಗಿರುವ ಮಂಗಳಮಯ ತಾನೊಂದೆ ಸತ್ಯವಾದಲ್ಲಿ ಸೃಷ್ಟಿಲಯವಾಗಿಲ್ಲವೆಂದು ಹೇಗೆ ಹೇಳುವದು, ಲಯವಾಗಿದೆ ಎಂದು ಹೇಗೆ

ಹೇಳುವುದು. ಇವೆರಡು ಅಸತ್ಯ, ಪರತತ್ವ ಒಂದೆ ಸತ್ಯವಾಗಿರುವಲ್ಲಿ ಅದು ನಾಶವಾಗುವದು, ನಾಶವಾಗುವದಿಲ್ಲ ಎಂದು ಹೇಗೆ ಹೇಳುವದು. ಅದು ಅನುಪಮ, ಉಪಮೆಗೆ ಮೀರಿದುದು ಎಂದು ಹೇಗೆ ಹೇಳುವಿ. ಅದು ಮಿಕ್ಕಿ ಮೀರಿನಿಂದ ನಿಲವು ಅಲ್ಲಿ ವರ್ಣಂಗಳಿಲ್ಲ ಆಶ್ರಮಗಳಿಲ್ಲ, ಇಲ್ಲ ಇಲ್ಲವೆಂಬುದು ಇಲ್ಲವಾಗಿರುವಾಗ ಅದು ಕಾರಣವೂ ಆಗಿಲ್ಲ. ಕರ್ತೃವೂ ಆಗಿಲ್ಲ. ಎಲ್ಲವೂ ಮೀರಿದ ಘನವೆ ನಿರಂತರ ಪದ. ಕೂಡಲ ಚೆನ್ನ ಸಂಗಯ್ಯ ತಾನಾದ ಪದ, ಅಂಗ ಲಿಂಗ ತಾನಾದ ಪದ ಅಲ್ಲಿ ನಷ್ಟವಾಗದ ಬುದ್ಧಿ, ನಷ್ಟವಾದ ಬುದ್ಧಿ ಇದೆಯಾ? ಇಲ್ಲಾದುದು ಇಲ್ಲಾದುದು ಎಂದಿಪ್ಪುದು, ಇಲ್ಲಾದದು ಇಲ್ಲಾದುದು ಎಲ್ಲಿಪ್ಪುದು ನಿರಂತರವಾಗಿರುವ ಪರತತ್ವ, ಮಿಕ್ಕಿ ಮೀರಿ ನಿಂತ ನಿಲವು, ಅದುವೆ ತನ್ನ ತಾನರಿತ ನಿಲವು ಅಂಗ ಲಿಂಗ ಲಿಂಗ ಅಂಗವೆಂದರಿದ ನಿಲವು ಎಂದು ಹೇಳಿಹರು.

**ವಚನ 22**

**ಅರಿದರಿದು ಅರುವು ಬರುದೊರೆವೋಯಿತ್ತು.**
**ಕುರುಹು ತೋರಿದಡಿಂತು ನಂಬರು.**
**ತೆರಹಿಲ್ಲದ ಘನವ ನೆನೆದು**
**ಗುರು ಶರಣೆಂಬುದಲ್ಲದೆ ಮರಹು ಬಂದಿಹುದೆಂದು**
**ಗುರು ಕುರುಹ ತೋರಿದನಲ್ಲದೆ**
**ಅರಿಯಬಲ್ಲಡೆ ಗುಹೇಶ್ವರ ಲಿಂಗವು, ಹೃದಯದಲ್ಲೈದಾನೆ. ॥ 185 ॥**

ತಾತ್ಪರ್ಯ: ಅರಿದರಿದು ಅರುವು ಬರುದೋರೆವೋಯಿತ್ತು: ಪ್ರಭುದೇವ, ಅರಿದರಿದು ನೋಡು, ಅರುವು ಅದು ಬಚ್ಚಬರಿಯ ಅರಿವು ಎಂಬುದು ನಿಂತು ಹೋಗಿದೆ. ನಿರುಪಯೋಗವಾಗಿದೆ. ಅಲ್ಲಿ ಅರಿಸಿಕೊಳ್ಳುವ ಅನಾತ್ಮವಿಲ್ಲ. ಅರಿಯುವ ದೃಕ್ ಇಲ್ಲ, ಸದ್ಯದಲ್ಲಿ ವೇದಾಂತಿಗಳು ಉಂಟು ಸಿದ್ಧಾಂತಿಗಳು ಉಂಟು. ಇವರುಗಳಲ್ಲಿ ಪುರುಷಾರ್ಥ ಜ್ಞಾನಿಗಳು ಬಹಳ; ಪರಮ ಪುರುಷಾರ್ಥದವರು ಸಿಕ್ಕುವದು ವಿರಳ. ಇವರುಗಳು ಉಪಮೆಯುಳ್ಳವರು ಪ್ರಭುದೇವ ಕಥನಕ್ಕೆ ಮೀರಿದ ಘನ. ವೇದಾಂತಿಗಳಲ್ಲಿ ಅನಾತ್ಮವ ತಿಳಿಯಹೋದವರು ಉಂಟು. ಅರಿಯುವ ದೃಕ್ ಸ್ವರೂಪ ತಿಳಿಯ ಹೋದವರು ಉಂಟು. ಅರಿದರುಹಿಸಿಕೊಂಬುದಕ್ಕೆ ಮೀರಿದ ಘನವ ತಿಳಿಯ ಹೋದವರು ವಿರಳ.

ಪ್ರಭುದೇವ ಅರಿಸಿಕೊಳ್ಳುವ ಅನಾತ್ಮ ಕಾಣಲಿಲ್ಲ. ಅರಿಯುವ ದೃಕ್ ತಾ ಎನಲಿಲ್ಲ. ಇವೆರಡಕ್ಕೂ ಮೀರಿದ ಘನವರಿತು ತೆರಹಿಲ್ಲದ ಘನವೆ ತಾನಾದ. ಎಲ್ಲಿಯವರೆಗೆ ತೆರಹಿಲ್ಲದ ಘನವ ತಾನೆಂಬುದು ತನ್ನಿಂದ ತನಗೆ ವಿದಿತವಾಗುವದಿಲ್ಲ. ಅಲ್ಲಿಯವರೆಗೆ ಗುರು ತೋರಿದ ಕುರುಹ ತಿಳಿಯರು. ತಿಳಿಯದ್ದರಿಂದ ಕುರುಹುವೆಂಬುದು ಗುರುಕಾರುಣ್ಯ, ಅದು ಅನುಪಮ ವೆಂದು ತಿಳಿಯರು, ತಿಳಿಯದ್ದರಿಂದ ಅದು ಅನುಪಮ ವೆಂದು ಹೇಗೆ ನೆಂಬುವರು. ಅವರ್ಣೀಯವೆಂದು ಹೇಗೆ ನಂಬುವರು? ಶೃತಿಗೆ ಮೀರಿದ ಮೌನ ಮುದ್ರೆ ಎಂದು ನಂಬರು. ನಂಬದುದಕ್ಕೆ ಕಾರಣವಾವುದೆಂದಲ್ಲಿ,

ಅರುವ ಅರಿಯದುದೆ ಕಾರಣ.

ಅರಿದರಿದ ಅರುವು ಅದು ಸಹಜ ಸ್ವಭಾವ. ಎಲ್ಲವನ್ನು ಅರಿದರಿದ ಅರುವು ಅದನ್ನು ಅರಿಯುವದು ಮತ್ತೊಂದುಂಟೆ? ಅದರ ಸಮಾನವಾದದ್ದಾದರೂ ಉಂಟೆ? ಇರುವುದು ಒಂದೆ ಅಖಂಡಿತ ಘನವಪ್ಪ ಪೂರ್ಣ ಅರಿವು. ಅದು ಅರಿಯಬಹದು, ಅರಿಯದಿರಬಹದು, ಅದು ಸ್ವತಂತ್ರವು ಅರಿದರಿದ ಅರುವು ಬರುದೊರೆವೋಯಿತ್ತು ಎಂದು ಪ್ರಭುದೇವ ಹೇಳಿದಾಗ ಇಲ್ಲಿ ನಾಮವಿಲ್ಲ, ಅನಾಮವಿಲ್ಲ. ನಾನು ತಾನು ಮುನ್ನವೆ ಇಲ್ಲ. ಈ ಉಭಯ ನಾಮವಾವ ಸೀಮೆ ಯೊಳಗು ಇಲ್ಲ. ಒಡಲು ಇಲ್ಲ, ನೆಳಲು ಇಲ್ಲ, ಏನೆಂಬುದೇನು ತಾನು ಮುನ್ನಿಲ್ಲ. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ನಾನು ಇಲ್ಲ, ನೀನು ಇಲ್ಲ. ಈ ಅರಿದರಿದ ಅರುವಿಂಗೆ ಏನನ್ನಬೇಕು. ಇದು ಅಕಥನೀಯ ನಿಲವು. ನಾಮ ಅನಾಮವೆಂಬುದಕ್ಕೂ ನಿಲುಕದ ತೆರಹಿಲ್ಲದ ಘನ. ಸುಖಸ್ವರೂಪ ಸುಖದ ಸುಖ, ಏನನ್ನ ಬೇಕು ನಿಷ್ಪತ್ತಿ ನಿಲುವುಳ್ಳ ಪರಮಶಾಂತವು ಪೂರ್ಣಾನಂದ ಏನನ್ನಬೇಕು? ಇಂತಪ್ಪ ಘನಸುಖ ಸ್ವಸುಖ, ಈ ಸ್ವಸುಖವ ನೆನೆನೆನೆದು ಗುರು ಶರಣೆಂಬುದು. ಗುರು ಘನ, ತೆರಹಿಲ್ಲದ ಘನ, ಇದು ಮರವರುವು ಕಾಣದ ಘನ, ಇಲ್ಲಿ ಗುರುವೆಂಬುದು ಶಿಷ್ಯನೆಂದಲ್ಲಿಯೆ ಹೋಯಿತ್ತು. ಶಿಷ್ಯನೆಂಬುದು ಗುರುವೆಂದಲ್ಲಿಯೆ ಹೋಯಿತ್ತು. ಅನಿಯಮದ ಬೆಡಗ ಸೀಮಾತೀತ ನಿಲವು ಈ ಗುರುಘನ. ಸೀಮೆ ಸಾಯುಜ್ಯವೆ ಮೀರಿದಾತ ಗುರುಘನ, ನಾಮ ನಿರ್ನಾಮವಾದಾತ ಗುರು ಘನ ಸ್ವಪ್ರತಿಭೆ ತಾನಾದ ಗುರು ಘನ. ಕ್ಷರಾಕ್ಷರ ಮೀರಿದ ಘನ ಅಭೇದ್ಯಗುರು ಘನ, ಈ ಗುರು ಘನಕ್ಕೆ ಶರಣೆಂದುದು.

ಮರಹು ಬಂದಿದೆ ಎಂದು ಶ್ರೀಗುರು ಕುರುಹ ತೋರಿದನಲ್ಲದೆ ಅರಿಯಬಲ್ಲಡೆ ಗುಹೇಶ್ವರ ಲಿಂಗವು ಹೃದಯದಲ್ಲೈದಾನೆ. ಆರಿಗೆ ಅರಿದರಿದ ಅರುವಿನ ಮರಹು ಆಗಿದೆ ಅವರಿಗೆ ಕುರುಹ ತೋರಿದ. ಈ ಗುರು ತೋರಿದ ಕುರುಹು ನೋಡುವವರ ನೋಟಕ್ಕೆ ಮೀರಿದ ಕುರುಹು, ನೆನೆಯುವವರ ಮನಕ್ಕೆ ನಿಲುಕದ ಕುರುಹು, ಅರಿಯುವ ಅರುವಿಂಗೂ ಮೀರಿದ ಕುರುಹು, ಇದು ಪೂಜೆಗೂ ನಿಲುಕದ ಕುರುಹು, ಅನುಸಂದಾನಕ್ಕೂ ನಿಲುಕದ ಕುರುಹು, ಭ್ರಾಂತರನ್ನು ನಿಭ್ರಾಂತರನ್ನಾಗಿ ಮಾಡುವ ಕುರುಹು, ಚಿಂತಕರ ನಿಶ್ಚಿಂತೆ ಮಾಡುವ ಕುರುಹು, ಇದು ಅಚಿಂತ್ಯದ ಕುರುಹು, ಇದು ಗುರು ಕಾರುಣ್ಯದ ಕುರುಹು. ಅರಿಯುಬಲ್ಲಡೆ, ಗುಹೇಶ್ವರ ಲಿಂಗ ಹೃದಯದಲ್ಲೈದಾನೆ.

ಗುರು ತೋರಿದ ಕುರುಹು ಜಗಭರಿತ ದೇವ, ಜಗವ ಹೊದ್ದದ ದೇವ, ದೇಹದೊಳಗಿದ್ದರೂ ದೇಹವ ಹೊದ್ದದ ದೇವ, ಕಾಲದೊಳಗಿದ್ದರೂ ಕಾಲವ ಹೊದ್ದದ ದೇವ, ವಸ್ತುವಿನೊಳಗಿದ್ದರೂ ವಸ್ತುವ ಹೊದ್ದದ ದೇವ. ನಿರಾಲಂಬ ನಾಗಿಹ ದೇವ, ನಿರಂತರನಾಗಿಹ ದೇವ, ಈ ದೇವನೆ ಲಿಂಗ ಘನ, ಈ ಘನಲಿಂಗವರಿಯ ಹೋದವರು ವಿರಳ. ಆರು ಅರಿಯ ಹೋಗಿಹರು, ಅವರು ಗುಹೇಶ್ವರ ಲಿಂಗ ಹೃದಯದಲ್ಲೈದಾನೆ ಎಂದು ಹೇಳಿಹರು. ಅವರೆ ತೆರಹಿಲ್ಲದ ಘನವ ಕಂಡವರು ತನ್ನ ತಾ ಕಂಡವರು

ಅವರೆ ಗುರು ಘನಕ್ಕೆ ಶರಣೆಂದರು. ಅವರಿಗೆ ಗುಹೇಶ್ವರ ಲಿಂಗ ತಮ್ಮ ಹೃದಯದಲ್ಲಿ ಇದ್ದುದು ಸಹಜವಾಗಿದೆ. ಅರಿಯದವರಿಗೆ ದುರ್ಲಭವಾಗಿದೆ. ದುರ್ಲಭವಾದುದಕ್ಕೆ ಕಾರಣವಾವುದೆಂದಲ್ಲಿ ಅರಿದರಿದ ಅರುವು ಇದು ಲಿಂಗವೆಂದು ಅರಿದರಿದ ಅರುವೆ ತಾವಾಗಿ ಆ ಲಿಂಗ ನೋಡಲಿಲ್ಲ, ಅಥವಾ ಲಿಂಗದ ಘನವಾದರೂ ಅರಿಯಲಿಲ್ಲ. ಶೃತಿಗೆ ಮೀರಿ ನಿಂತು ನೋಡಲಿಲ್ಲ, ನಿಃಶಬ್ದ ಬ್ರಹ್ಮವಾಗಿ ಲಿಂಗದ ಘನವರಿಯದ್ದರಿಂದ ಅರಿದರಿದ ಅರುವು ಇದು ತನ್ನಿರವು; ತಾನೆಂಬುದು ಗೊತ್ತಾಗಲಿಲ್ಲ. ಆರು ಅರುವ ಅರಿವರು ಅವರು ತೆರಹಿಲ್ಲದ ಘನವ ತಮ್ಮ ಹೃದಯದಲ್ಲೆ ಕಂಡರು ಅವರೆ ಗುರು ಘನಕ್ಕೆ ಶರಣೆಂದರು.

**ವಚನ 23**

**ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು,**
**ಹೊದ್ದಿಯೂ ಹೊದ್ದದಿರ್ದ ಭೇದವನು,**
**ಲಿಂಗದೊಳಗೆ ಶರಣ ಸಂದಿರ್ದ ಭೇದವನು,**
**ಲೋಕದ ಸಂದೇಹಿಗಳೆತ್ತ ಬಲ್ಲರಯ್ಯ ರಾಮನಾಥ.**

**ತಾತ್ಪರ್ಯ:** ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು ಹೊದ್ದಿಯೂ ಹೊದ್ದದಿರ್ದ ಭೇದವನು ಲೋಕದ ಸಂದೇಹಿಗಳೆತ್ತ ಬಲ್ಲರಯ್ಯಾ: ಬಿಂದು? ಇದಾವ ಬಿಂದು, ಈಶ್ವರನಿಂದ ರಚಿತವಾದ ಬಿಂದು ತೋರಿ ಅಡಗುವ ಬಿಂದು ನಾಶವುಳ್ಳ ಬಿಂದು ಇದು ನೀರ ಗುರುಳೆಯಂತಿರುವ ಬಿಂದು. ಈ ಬಿಂದುವಿನೋಳ್ ಸೋಹಂ ಎಂಬ ನಾದ ಹೊಂದಿರ್ದ ಭೇದವನು. ಇದು ಹೊದ್ದಿಯೂ ಹೊದ್ದದಿರ್ದ ಭೇದವನು. ಸೋಹಂ ನಾದ ಇದು ಮೂಲ ಇರುವುಳ್ಳ ಅರುವಿನ ನಾದ. ಸಕಲ ಶರೀರ ರೂಪಿ ಬಿಂದುವಿನೋಳ್ ನಿರಂತರ ನಾದ ಮಾಡುವ ಪ್ರಣವ ರೂಪಿ ನಾದ. ಇದು ಪ್ರತಿದಿನ 21600 ಸಲ ನಾದ ಮಾಡುವ ಸೋಹಂ ನಾದ ಇದು ಶರೀರರೂಪಿ ಬಿಂದುವಿನೊಳಗೆ ಹೊದ್ದಿಯೂ ಹೊದ್ದದಿರ್ದ ಭೇದ ಲೋಕದ ಸಂದೇಹಿಗಳೆತ್ತ ಬಲ್ಲರು.

ಈ ಸೋಹಂ ನಾದವೆಂಬುದು ಶ್ವಾಸೋಚ್ಛ್ವಾಸ. ಸಕಲ ಶರೀರಗಳಲ್ಲಿರುವ ಶ್ವಾಸೋಚ್ಛ್ವಾಸ ಇದನ್ನು ಲಕ್ಷ್ಯ ಗೊಟ್ಟು ಸೂಕ್ಷ್ಮ ದೃಷ್ಟಿಯಿಂದ ನೋಡಿದರೆ ಪ್ರತಿಯೊಂದು ಶ್ವಾಸೋಚ್ಛ್ವಾಸದಲ್ಲಿ ಒಳಗೆ ಎಳೆದು ಕೊಳ್ಳುವ ಶ್ವಾಸದಲ್ಲಿ ಸ ಕಾರದಂತಹ ಧ್ವನಿಯು ಕೇಳಿಬರುತ್ತದೆ. ಹೊರಗೆ ಬಿಡುವ ನಿಃ ಶ್ವಾಸದಲ್ಲಿ ಹ ಕಾರ ದಂತಹ ಧ್ವನಿಯು ಕೇಳಿಬರುತ್ತದೆ. ಈ ಸಕಾರ ಹಕಾರ ಇವುಗಳನ್ನು ಹೆಚ್ಚು ಏಕಾಗ್ರ ದೃಷ್ಟಿಯಿಂದ ನಿರೀಕ್ಷಿಸಿದರೆ ಒಳಗೆ ಎಳೆದು ಕೊಳ್ಳುವ ವಾಯುವಿನಲ್ಲಿ ಸೊ ಎಂಬ ಧ್ವನಿಯು, ತುಟಿಯನ್ನು ಮುಚ್ಚಿ ಹೊರಗೆ ಬಿಡುವ ವಾಯುವಿನಲ್ಲಿ ಹಂ ಎಂಬ ಧ್ವನಿಯು ಕೇಳಿ ಬರುತ್ತದೆ. ಈ ಎರಡರ ಧ್ವನಿಗಳು ಕೂಡಿ ಸೋಹಂ ಎಂಬ ಮಂತ್ರವು ಸಿದ್ಧವಾಗುವದು. ಸೋ ಅಂದರೆ ಅವನು ಹಂ ಎಂದರೆ ನಾನು. ಅಂದರೆ ಅವನು ನಾನಿದ್ದೇನೆ ಎಂಬುದಾಗಿ ಆಗುವದು.

ಈಶ್ವರನು ಪ್ರತಿಯೊಂದು ಪ್ರಾಣಿಯಲ್ಲಿ ಅವನೆ ನಾನಿದ್ದೇನೆ ಎಂಬ ಜಪವನ್ನು

ಸ್ವಾಭಾವಿಕವಾಗಿ ಇಟ್ಟಿರುತ್ತಾನೆ. ಅವನು ಅಂದರೆ ಪರಮಾತ್ಮನು ನಾನಿದ್ದೇನೆ ಎಂಬುದಾಗಿ ಅದರ ತಾತ್ಪರ್ಯವಿರುತ್ತದೆ. ಈಶ್ವರ ದತ್ತವಾದ ಈ ವಾಕ್ಯವು ವೇದದೊಳಗಿನ ಅಹಂಬ್ರಹ್ಮಾಸ್ಮಿ ಎಂಬ ಮಹಾವಾಕ್ಯದ ಪರ್ಯಾಯ ವಾಕ್ಯವೆ ಇರುತ್ತದೆ. ಇದಕ್ಕೆ ಅಪೌರುಷೇಯ ನಾದವೆಂದು ಹೇಳಿದರೆ ತಪ್ಪಾಗಲಾರದು. ಮತ್ತು ಶಾಸ್ತ್ರದಲ್ಲಿ ಇದಕ್ಕೆ ಅಜಪಗಾಯತ್ರಿ ಎಂದೆನ್ನುತ್ತಾರೆ.

ಇಂತಹ ಶ್ರೇಷ್ಠ ರಹಸ್ಯ ಮಂತ್ರವನ್ನು ಈಶ್ವರನು ಮನುಷ್ಯನಿಗೆ ಕೊಟ್ಟಿದ್ದರೂ ಗುರುದೇವ ಹೇಳದ ಹೊರ್ತು ಇವನಿಗೆ ತಿಳಿಯುವದಿಲ್ಲ. ಅದಕ್ಕಾಗಿ ಈ ಲೋಕವೆಂಬ ಅಜ್ಞಾನಿ ಜಗತ್ತು ಸೋಹಂನಾದ ತಾನೆ ಪರಮಾತ್ಮನೆಂಬ ಮಹಾವಾಕ್ಯ ಹೊಂದಿದ್ದರೂ ಅದನ್ನು ಲೋಕವು ನೋಡದು.

ಯಾವ ಗುರು ಭಕ್ತನು ಈ ಮಹಾವಾಕ್ಯ ರೂಪಿ ಅಹಂಬ್ರಹ್ಮಾಸ್ಮಿ ಎಂಬ ರಹಸ್ಯವನ್ನು ನೋಡುವನು ಅವನು ನಾಶವುಳ್ಳ ಸ್ಥಾವರ ಜಂಗಮ ಜಗತ್ತು ಹೊದ್ದನು. ಏಕೆಂದರೆ ನಿರಾಲಂಬನಾಗಿ ನಿಸ್ಸಂಗನಾಗಿ ತನ್ನ ಪಿಂಡವೆಂಬ ಪಿಂಡಾಂಡದಲ್ಲಿಯೂ ಬ್ರ ಹ್ಮಾಂಡವೆಂಬ ಜಗತ್ತಿನಲ್ಲಿಯೂ ಇದ್ದರೂ ನಿಸ್ಸಂಗನಾಗಿರುತ್ತಾನೆ. ಈ ಘನತ್ವ ಲೋಕದವರೆತ್ತ ತಿಳಿಯುವರು.

ಲಿಂಗದೊಳಗೆ ಶರಣ ಸಂದಿರ್ದ ಭೇದವನು ಲೋಕದ ಸಂದೇಹಿಗಳೆತ್ತ ಬಲ್ಲರು, ಶರಣ, ಲಿಂಗ ಒಂದಾಗಿರ್ದ ಶರಣ, ಶರಣನೆಂದರೆ ಲಿಂಗ, ಲಿಂಗವೆಂದರೆ ಶರಣ, ಆತ್ಮನ ನಿಜವನರಿದು ಪರಮಾತ್ಮ ತಾನೆಂದರಿದ ಶರಣ. ಪರತತ್ವ ನಿಜಸಂಯುಕ್ತರ ಆನು ನೀನೆನ್ನದಿಹ ಅಪ್ರಮಾಣ ಅಗಮ್ಯರು. ನಿಃಶಬ್ದವೇದಿಗಳು ಮಹದರುವುಳ್ಳ ಮಹಾನುಭವಿ ಮಹಾಂತ, ಲಿಂಗವರಿತು ಲಿಂಗವೆ ತಾನಾದ ಲಿಂಗೈಕ್ಯ ಲಿಂಗಸಂಗಿ ಸರ್ವಾಂಗ ಲಿಂಗಿ, ಲಿಂಗವರಿತ ಘನಾಂಗಿ ಅರಿದರಿದ ಅರುಸ್ವರೂಪ ಅರಿಯದರುವು. ಈ ಅರಿಯದರುವೆ ತಾನಾಗಿರ್ದ ಶರಣ ಘನಕ್ಕೆ ಘನ. ಅರುವಿನ ಅರುವು ಸುಖದ ಸುಖಿ, ಅಖಂಡ ಸುಖಿ, ಈ ಮಹಾಂತ ಲಿಂಗ ಒಂದಾಗಿರ್ದ ಶರಣ. ಈ ರಹಸ್ಯವನ್ನು ಲೋಕದ ಸಂದೇಹಿಗಳು ಅದೆಂತು ತಿಳಿವರು. ಇದು ಕಾರಣ ಲಿಂಗದೊಳಗೆ ಸಂದಿರ್ದ ಭೇದವನು ಸಂಶಯದಿಂದುಕ್ತರಾದ ಲೋಕದವರು ಹೇಗೆ ತಿಳಿವರು ಎಂದು ದೇವರದಾಸಿಮಯ್ಯ ಶರಣರು ಹೇಳಿಹರು.

**ವಚನ 24**

**ಜ್ಞಾನದ ಗಮನದ ಸಹಜ ಉದಯದಲ್ಲಿ ಏನೆಂದರಿಯೆನು;**
**ಲಿಂಗದ ಬೆಳಗು ಒಳಕೊಂಡುದಾಗಿ ಏನೆಂದರಿಯನು;**
**ಕೂಡಲಸಂಗನ ಧ್ಯಾನದಿಂದ ನಾನೇನೆಂದರಿಯೆನು. ॥ 850 ॥**

**ತಾತ್ಪರ್ಯ:** ಜ್ಞಾನದ ಗಮನದ ಕೂಡಲಸಂಗನ ಧ್ಯಾನದಿಂದ ಏನೆಂದರಿಯೆನು. ಜ್ಞಾನದ ಗಮನ, ಇದು ನನ್ನ ಕಡೆ ಗಮನ. ಇದು ವೇದ ಕೃಪೆ, ಈಶ್ವರ ಕೃಪೆ, ಗುರುಕೃಪೆ, ಅಂತಃಕರಣ ಕೃಪೆ. ಈ ನಾಲ್ವರ ಕೃಪೆಯಿಂದಾದುದು ಅಹುದು. ಅರಿವುಡೆ ಮಿಕ್ಕಿ ಮೀರಿನಿಂದ ನಿಲುವುಳ್ಳ ಜ್ಞಾನದ ಗಮನ ಇದಾರಿಂದಾದುದು ಎನಬೇಕು. ಇದಾರು

ನಿರ್ಣಯಿಸುವದು? ಇದು ತರ್ಕದಿಂದುಂಟಾದುದಲ್ಲ ಶ್ರವಣದಿಂದುಕ್ತವಾದುದಲ್ಲ ಮನನ ನಿಧಿಧ್ಯಾಸಗಳಿಂದುಕ್ತವಾದುದಲ್ಲ. ಷಟ್ ಸಮಾಧಿಯಿಂದುಕ್ತವಾದ ಯೋಗವೂ ಅಲ್ಲ, ಗುರೂಪದೇಶವೂ ಅಲ್ಲ ಆವಾವುದಕ್ಕೂ ಇಂಬುಕೊಡದ ಜ್ಞಾನದ ಗಮನ, ನನ್ನೊಳ ನನ್ನಿಂದ ನನಗೆ ಜ್ಞಾನೋದಯ ಅಹಹ. ಈ ಜ್ಞಾನದ ಗಮನ ಉಪಮಿಸದ ಗಮನ, ಇದು ನುಡಿಗೆಡೆಗೊಡದ ಗಮನ, ನಡೆಗೆಡೆಗೊಡದ ಗಮನ ಓಹೋ, ಇದು ಸಹಜ ಉದಯ ಸಹಜ ಸ್ಥಿತಿ. ಓಹೋ, ಇದಾರ ಇರವು ಏನೆಂದುಪಮಿಸುವದು.

ಗುರುವಿಂದಾಯಿತ್ತೆಂಬೆನೆ ಗುರುವಿಂದಾಗದು, ಲಿಂಗದಿಂದಾಯಿತ್ತೆಂಬೆನೆ ಲಿಂಗದಿಂದಾಗದು. ಜಂಗಮದಿಂದಾಯಿತ್ತೆಂಬೆನೆ ಜಂಗಮದಿಂದಾಗದು, ಪಾದೋದಕದಿಂದಾಯಿತ್ತೆಂಬೆನೆ, ಪಾದೋದಕದಿಂದಾಗದು, ಪ್ರಸಾದ ದಿಂದಾಯಿತ್ತೆಂಬೆನೆ? ಪ್ರಸಾದದಿಂದಾಗದು, ತನ್ನಿಂದ ಅಹುದು, ತನ್ನಿಂದ ಹೋಹುದು. ಕಾಣಾ ಕೂಡಲ ಚೆನ್ನ ಸಂಗಾ. ಲಿಂಗವರಿತ ಲಿಂಗಜ್ಞಾನ, ಇದು ಸಹಜ ಜ್ಞಾನ, ಇದು ತನ್ನಿಂದ ತನಗೆ ಪ್ರಕಟವಾದ ಜ್ಞಾನ. ತನ್ನೊಳ ಉದಯಿಸಿದ ಜ್ಞಾನ, ಇದು ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಇವುಗಳಿಂದ ಬಂದ ಹೆತ್ತರಿವು ಅಲ್ಲ. ತನ್ನಿಂದ ತನಗೆ ತನ್ನೊಳ ಉದಯಿಸಿದ ಸಹಜ ಜ್ಞಾನ. ಇದು ಅರುವೆಂಬುದರ ಅರುವು, ಲಿಂಗವೆಂಬುದರ ಲಿಂಗ ಜಂಗಮವೆಂಬುದರ ಜಂಗಮ, ಪ್ರಸಾದ ವೆಂಬುದರ ಪ್ರಸಾದವಾದುದರಿಂದ ಇದು ಹೆತ್ತರಿವು ಅಲ್ಲ, ಸ್ವತಃ ಸಿದ್ಧವಾದ ತನ್ನಲ್ಲಿದ್ದ ಅರುವು ಈ ಅರಿಯದರುವುಳ್ಳ ಜ್ಞಾನದ ಗಮನ, ತನ್ನಿಂದ ತನಗೆ ಸಹಜ ಉದಯವಾದುದು. ಮಿಕ್ಕಿ ಮೀರಿನಿಂತ ನಿಲುವು, ಮನ ಮೇರೆದಪ್ಪಿದ ನಿಲವು ಅಂತಿಂತೆನಬಾರದು, ಇದು ಕಾರಣ ಏನೆಂದರಿಯೆನು ಎಂದು ಹೇಳಿಹರು.

ಲಿಂಗದ ಬೆಳಗು ಒಳಕೊಂಡುದಾಗಿ ಏನೊಂದರಿಯೆನು ಲಿಂಗದ ಬೆಳಗು, ಸ್ವಯಂ ಬೆಳಗು ಇದು ಬೆಳಗಿನ ಬೆಳಗು, ಮಹಾಬೆಳಗು, ಇದನ್ನು ಒಪ್ಪಿಕೊಂಡ ಅಂಗ ಅನುಪಮ ನೋಡಾ, ಆಗ ಏನೊಂದುಸರಲು ಎಡೆಗೊಡದ ಉಪಾಧಿತ ಮನ ಉಪಾಧಿರಹಿತ ಲಿಂಗವರಿತು ತಾನೆ ಲಿಂಗವಾದ ಬೆಳಗು.

ಉಪಾಧಿಮನ ಉಪಾಧಿರಹಿತ ಮನ ನಿಂದಲ್ಲಿ ನಿರ್ವಾತವಾಯಿತ್ತು. ಲಿಂಗೋದ್ಭವ ಪ್ರಜ್ವಲಿಸುತ್ತಿತ್ತು. ಗುಹೇಶ್ವರ ಲಿಂಗ ತಾನಾಗಿ, ಪ್ರಭುದೇವರ ಮಹಾಪ್ರಸಾದವದು. ಇದು ಲಿಂಗದ ಬೆಳಗು ಪ್ರವೃತ್ತಿ ನಿವೃತ್ತಿ ಮನ ಇಲ್ಲವಾಗಿ ಇಲ್ಲವೆಂಬುದು ಇಲ್ಲವಾಗಿ ನಿಂದಲ್ಲಿ ನಿರ್ವಾತವಾಯಿತ್ತು. ಆಗ ಲಿಂಗದ ಬೆಳಗು ಈ ಲಿಂಗದ ಬೆಳಗೆ ಲಿಂಗೋದ್ಭವ ಪ್ರಜ್ವಲಿಸುವ ಘನವು ಅಲ್ಲಿ ಅರಿಯುವರಾರು. ಅರಿಸಿಕೊಳ್ಳುವದಾವುದು? ಗುಹೇಶ್ವರ ಲಿಂಗವೆ ತಾನಾಗಿ ಬೆಳಗುವ ಬೆಳಗು ತನ್ನಿಂದ ತಾನೆ ತಾನಾಗಿ ಸಿದ್ಧವಾದುದು. ಏನೊಂದರಿಯೆನು ಇದು ಉಪಮಿಸಲು ಬಾರದ್ದರಿಂದ ಏನೊಂದರಿಯೆನು ಎಂದು ಹೇಳಿಹರು.

ಕೂಡಲಸಂಗಮದೇವ ಧ್ಯಾನದಿಂದ ನಾನೇನೆಂದರಿಯೆನು, ನೆನೆಯಲರಿಯೆ, ನಿರ್ಧರಿಸಲರಿಯೆ ಮನವಿಲ್ಲಾಗಿ ಭಾವಿಸಲರಿಯೆ, ಬೆರಸಲರಿಯೆ, ಭಾವ

ನಿರ್ಭಾವವಾಯಿತ್ತಾಗಿ ಧ್ಯಾನ ಮೌನವ ನರಿಯೆ, ಕೂಡಲಸಂಗನ ಧ್ಯಾನವೆಂಬುದು, ಧ್ಯಾನಾತೀತ ಧ್ಯಾನ, ಓಹೋ ಧ್ಯಾನಾತೀತ ಧ್ಯಾನ ಅದೆಂತು ಮಾಡುವದು, ಇದು ಬಸವರಸರ ಧ್ಯಾನ, ಇದು ಅತೀತನ ಧ್ಯಾನ, ಅತೀತನ ಧ್ಯಾನ ಅತೀತನಾಗಿಯೆ ಮಾಡುವದು.

ನೆನೆಯಲರಿಯೆನೆನ್ನುವದೆ ನೆನೆಸಿದಂತೆ. ನಿರ್ಧರಿಸಲರಿಯೆ ನೆನ್ನುವದೆ ನಿರ್ಧರಿಸಿದಂತೆ. ಮನವಿಲ್ಲವಾಗುವದೆ ಲಿಂಗದರ್ಶನ. ಕೂಡಲಸಂಗಯ್ಯನ ದರ್ಶನ, ತನ್ನ ದರ್ಶನ. ಭಾವಕ್ಕಗಮ್ಯನ ಭಾವಿಸುವದದೆಂತು, ಅಕಲ್ಪಿತ ಘನನಲ್ಲಿ ಜೀವಾತ್ಮನೆಂಬುದಿಲ್ಲ. ಅಂತರಾತ್ಮನೆಂಬುದಿಲ್ಲ, ಪರಮಾತ್ಮನೆಂಬುದಿಲ್ಲ, ಆವಲ್ಲಿ ಮನಸ್ಸಿದೆ ಅಲ್ಲಿಯೆ ಕಲ್ಪಿತ ತ್ರಿವಿಧಾತ್ಮರುಂಟು, ಅಕಲ್ಪಿತವಾಗಿಹ ಕೂಡಲಸಂಗಮದೇವ ನೆನದಿಹೆನೆಂದಡೆ ನೆನಹಿಂಗಸಾಧ್ಯವೆಂದು ಮನವು ನೆನಹುಮಾಡದಿಹುದೆ ನಿಜವಾದ ನೆನಹು, ಅರಿದಿಹೆನೆಂದಡೆ ಅರುಹಿಂಗೆ ಅಸಾಧ್ಯವೆಂದು ಬುದ್ದಿಯು ಮರವರುವುಗಳಿಂದ ನಿರ್ಧರಿಸುವದು ಬಿಟ್ಟುದೆ ಅರಿಯದರುವು. ಭಾವಿಸಿಹೆನೆಂದಡೆ ಭಾವಕ್ಕಸಾಧ್ಯವೆಂದು ಭಾವಿಸದಿಹುದೆ, ಭಾವಕ್ಕಗಮ್ಯನು ಆದಂತೆ. ಇಲ್ಲಿ ಅಂಗದುದಯ ಲಿಂಗ ಸುಖ ಲಿಂಗದುದಯ ಅಂಗಸುಖ. ಎರಡಿಲ್ಲದ ಘನವ ನೇನೆಂಬೆನು.. ಲಿಂಗ ಅಂಗವೆಂಬವು ಎರಡಿಲ್ಲದ ಘನವನೇನೆಂಬೆನು, ಇದು ಮಿಕ್ಕಿ ಮೀರಿನಿಂದ ನಿಲುವುಳ್ಳ ಸುಖ, ಸುಖದ ಸುಖ, ಇದು ಸೀಮಾತೀತ ಧ್ಯಾನಾತೀತ. ಧ್ಯಾನಾತೀತದ ಧ್ಯಾನ, ಏನೆಂದುಪಮಿಸುವದು, ಇದು ಕಾರಣ ಬಸವಣ್ಣನವರು ಕೂಡಲಸಂಗಯ್ಯನ ಧ್ಯಾನದಿಂದ ನಾನೇನೆಂದರಿಯೆನು ಎಂದು ಹೇಳಿಹರು.

**ವಚನ 25**

**ಎಳ್ಳಿಂಗೆ ಪರಿಮಳವ ಕಟ್ಟಿದಲ್ಲದೆ ಎಣ್ಣೆಗೆ ಪರಿಮಳ ಘಟಿಸದು,**
**ದೇಹಕ್ಕೆ ಇಷ್ಟಲಿಂಗ ಸ್ಥಾಪಿಸದಲ್ಲದೆ ಪ್ರಾಣಲಿಂಗ ಸಂಬಂಧವಾಗದು.**
**ಇದು ಕಾರಣ ನಮ್ಮ ಗುಹೇಶ್ವರ ಲಿಂಗದಲ್ಲಿ ಇಷ್ಟಲಿಂಗ**
**ಸಂಬಂಧಿಯಾದಲ್ಲದೆ ಪ್ರಾಣಲಿಂಗ ಸಂಬಂದವಾಗದು.**

ತಾತ್ಪರ್ಯ: ಎಳ್ಳಿಂಗೆ ಪರಿಮಳವ ಕಟ್ಟಿದಲ್ಲದೆ ಎಣ್ಣೆಗೆ ಪರಿಮಳ ಘಟಿಸದು. ಎಣ್ಣೆ ಆಗಲು ಎಳ್ಳು ಅವಶ್ಯ. ಎಳ್ಳು ಆಗಲು ಪರಿಮಳ ಅವಶ್ಯ. ಪರಿಮಳವಾಗದ ವಿನಃ ಎಳ್ಳು ಆಗದು. ಎಳ್ಳು ಆಗದ ವಿನಃ ಎಣ್ಣೆ ಆಗದು, ಎಣ್ಣೆಗೆ ಪರಿಮಳದ ಅವಶ್ಯಕತೆ ವಿರುವುದೆ? ದೇಹಕ್ಕೆ ಇಷ್ಟಲಿಂಗ ಸ್ಥಾಪಿಸಿದಲ್ಲದೆ ಪ್ರಾಣಲಿಂಗ ಸಂಬಂಧವಾಗದು.

ವಿಜ್ಞಾನ ಅದೆಷ್ಟೊ ಭಕ್ತರುಗಳು ಇಷ್ಟಲಿಂಗ (ಪೂಜಾಲಿಂಗ) ದೇಹಕ್ಕೆ ಧಾರಣಮಾಡಿಕೊಂಡಿಹರು. ಇದಲ್ಲದೆ ದಿನೆ ದಿನೆ ಪೂಜಾಲಿಂಗ ಧಾರಣ ಮಾಡಿಕೊಳ್ಳುತ್ತಿದ್ದಾರೆ. ಇನ್ನು ಮಾಡಿಕೊಳ್ಳುವವರಿದ್ದಾರೆ. ಪೂಜಾಲಿಂಗ ದೇಹಕ್ಕೆ ಧಾರಣ ಮಾಡಿಕೊಳ್ಳವುದು ಒಂದು ಮಹಾತ್ಕಾರ್ಯ. ಇದರಿಂದ ಸಾಮಾನ್ಯವಾಗಿ ಲಿಂಗ ಲಿಂಗ ಎನ್ನುವ ಪ್ರೇಮ ಲಿಂಗಭಾವ ಲಿಂಗಭಕ್ತಿ ಭಕ್ತರುಗಳಲ್ಲಿ ಉದಯವಾಗುತ್ತದೆ ಒಳ್ಳೆಯದು.

ಇಷ್ಟಲಿಂಗವೆಂದರೆ ಗುರು ಕರುಣಿಸಿದ ಲಿಂಗ. ಇದು ಮನದ ಅಧಿಷ್ಠಾನ ಮೂರ್ತಿ ಪ್ರವೃತ್ತಿ ಮನ ನಿವೃತ್ತಿ ಮನ ಇವೆರಡರ ಅಧಿಷ್ಠಾನ ಮೂರ್ತಿ. ಸ್ವಯಲಿಂಗ ಸುಖಸ್ವರೂಪ ಸತ್ಯಜ್ಞಾನಾನಂದ. ಇದು ಪರಾನಂದ ವಾಙ್ಮನೋತೀತ ಶಬ್ದ ಮುಗ್ಧ. ಇದು ಗುರು ಕಾರುಣ್ಯದ ಲಿಂಗ ಅಪ್ರಮಾಣ ಅಗಮ್ಯ ಅವರ್ಣೀಯವು.

ಅವರ್ಣೀಯವಾಗಿಹ ಲಿಂಗ ವೇದ ವೇದಾಂತಗಳಿಗಸಾಧ್ಯವಾಗಿಹ ಅನುಪಮಲಿಂಗ. ಈ ಘನಲಿಂಗವ ಅದೆಷ್ಟು ಭಕ್ತರು ತಿಳಿಯಹೋದರು? ಇಷ್ಟಲಿಂಗವೆ ಪೂಜಾಲಿಗವೆಂದು ಪೂಜಿಸುವವರನಂತರುಂಟು ಜಂಗವು ಪೂಜಿಸುವವರನಂತರುಂಟು. ತನ್ನ ತಾನರಿದು ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಕೂಡುವವರೊಬ್ಬರೂ ಇಲ್ಲವಯ್ಯಾ.

ಗುರುಘನನು ಭಕ್ತರಿಗೆ ಇಷ್ಟಲಿಂಗ ಕರುಣಿಸಿದುದು ಏಕೆ? ಲಿಂಗಪೂಜಿಸಲು ಕೊಟ್ಟನೆ? ಅರಿಯಲು ಕೊಟ್ಟನೆ? ತನ್ನ ತಾನರಿಯಲು ನಿರೂಪವ ಕೊಟ್ಟ, ಅದನ್ನು ತಿಳಿಯದೆ ಪೂಜಾಲಿಂಗವಾಗಿ ಕಂಡುದು ಭಕ್ತರ ಮರವು, ಗುರು ಕರುಣಿಸಿದ ಲಿಂಗ, ಮಾನವ ಕೋಟಿಗೆ ಇಷ್ಟವಾದರೂ ಇಷ್ಟಲಿಂಗವೆಂಬುದು ಸಚ್ಚಿದಾನಂದ ಪರಮಾನಂದ, ಇದಾರಿಗೆ ಬೇಡಾಗಿದೆ, ಪರಮಾನಂದ ಸಕಲರಿಗೆ ಇಷ್ಟವಾದುದು. ಇದು ಕಾರಣ ಲಿಂಗ ಸಕಲರದು. ಇದ ಅವರ್ಣೀಯ ಲಿಂಗ ಲಿಂಗಕ್ಕೆ ಕಡೆಯಿಲ್ಲ, ಲಿಂಗಕ್ಕೆ ಎಡೆಯಿಲ್ಲ. ಲಿಂಗದೊಳಗೆ ಜಗವಿಹುದು ಲಿಂಗ ಬಿಟ್ಟು ಹಿಂಗಿದವರಾರು ಹೇಳಾ ಸರ್ವಜ್ಞ, ಅಖಂಡವಾಗಿಹಲಿಂಗ, ಒಳಹೊರಗೆನ್ನದೆ ಭರಿತವಾಗಿಹ ಲಿಂಗ, ಇದು ಉದಯಾಸ್ತವೆನ್ನದೆ ಬೆಳಗುಳ್ಳ ಬೆಳಗು, ಸರ್ವರ ಸ್ವರೂಪ ಸಹಜಾನಂದ ಇದನ್ನು ಆರು ಅರಿಯಹೋಗುವರು ಅವರಿಗೆ ಪ್ರಾಣಲಿಂಗ ಸಂಬಂಧವಾಗುವದು.

ಇಷ್ಟಲಿಂಗ ದೇಹಕ್ಕೆ ಧಾರಣಮಾಡಿ ಪೂಜಿಸಿದ ಮಾತ್ರಕ್ಕೆ ಲಿಂಗವರಿತರೆ? ಲಿಂಗ ತಾನೆಂದು ತಿಳಿದರೆ! ಲಿಂಗವೆಂಬುದು ನಿರಂತರವಾಗಿರುವ ಸರ್ವಮಂಗಳಮಯ ತತ್ವವೆಂಬುದು ಅರಿತರೆ? ಅದು ತಾನೆಂದು ತಿಳಿದಿಹರೆ? ಅದುವೆ ವಿಶ್ವವು ಎಂದು ತಿಳಿದಿಹರೆ? ತಿಳಿಯದಿದ್ದಲ್ಲಿ ಪೂಜಿಸಿ ಫಲವೇನು, ಇದು ಕಾರಣ ಪತ್ರಿನೇಮದರೊಂದು ಕೋಟಿ, ಲಿಂಗಾರ್ಚನೆಯ ನೇಮದವರೊಂದು ಕೋಟಿ, ಜಂಗಮತೃಪ್ತಿಯ ನೇಮದವರೊಂದು ಕೋಟಿ, ತನ್ನ ತಾ ತಿಳಿಯುವ ನೇಮದವರೆ ವೀರಶೈವಾಗ್ರಗಣ್ಯರು ಕಪಿಲ ಸಿದ್ಧಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಪೂಜಾಲಿಂಗ ಪೂಜಿಸುವದು ವೀರಶೈವರಿಗೆ ಅಷ್ಟು ಶ್ರೇಷ್ಠವಾದುದಲ್ಲ. ತನ್ನ ತಾ ತಿಳಿಯುವದೆ ಮುಖ್ಯವು. ಅದೆ ಪ್ರಕಾರ ಪ್ರಭುದೇವ ನಮ್ಮ ಗುಹೇಶ್ವರ ಲಿಂಗದಲ್ಲಿ ಇಷ್ಟಲಿಂಗ ಸಂಬಂಧ ವಾದಲ್ಲದೆ ಪ್ರಾಣಲಿಂಗ ಸಂಬಂಧವಾಗದು ಎಂದು ಹೇಳಿದ್ದನ್ನು ವಿವರಿಸಿ ನೋಡುವಾ.

ಗುಹೇಶ್ವರಲಿಂಗದಲ್ಲಿ ಇಷ್ಟಲಿಂಗಸಂಬಂಧವಾದಲ್ಲದೆ ಪ್ರಾಣಲಿಂಗ ಸಂಬಂಧವಾಗದು ಎಂದು ಹೇಳಿದಲ್ಲಿ ಗುಹೇಶ್ವರಲಿಂಗದಲ್ಲಿ ಇಷ್ಟಲಿಂಗ ಸಂಬಂಧವಾದವರು ಎಷ್ಟು ಜನ ಶಿಕ್ಕುವರು. ಗುಹೇಶ್ವರಲಿಂಗದಲ್ಲಿ ಇಷ್ಟ ಲಿಂಗ

ಸಂಬಂಧವಾದ ಘನವನೇನೆಂಬೆ ಇಷ್ಟಲಿಂಗ ಸಂಬಂಧವಾದ ದೃಷ್ಟಿ ಅನಿಮಿಷ ದೃಷ್ಟಿ. ಇದು ಅಪ್ರತಿಮ ಲಿಂಗವರಿತು ಅಚಲಾನಂದ ದೊಳಿದ್ದ ಸಂಬಂಧ. ಇದು ಲಿಂಗವರಿತು ಲಿಂಗದಲ್ಲಿ ಲೀಯವಾದ ಸಂಬಂಧ, ತಾನಾರೆಂದರಿತ ತನ್ನ ಸಂಬಂಧ ಸುಖದ ಸಂಬಂಧ. ಅರಿಯದರುವಿನ ಸಂಬಂಧ, ಮನಮೇರೆದಪ್ಪಿದ ಸಂಬಂಧ, ಲಿಂಗವರಿತು ಅಕಲ್ಪಿತ ಘನವೆ ತಾನಾದ ಸಂಬಂಧ ಸಚ್ಚಿದಾನಂದ ಸಂಬಂಧ. ಈ ಸಂಬಂಧ ಪ್ರಾಣಲಿಂಗ ಸಂಬಂಧ. ಇದು ಮಿಕ್ಕಿ ಮೀರಿನಿಂದ ನಿಲುವುಳ್ಳ ಸಂಬಂಧ ಇದು ಅನಿಮಿಷದೇವನ ಸಂಬಂಧ ಲಿಂಗವೇ ತಾನಾದ ಸಂಬಂಧವೆ ಪ್ರಾಣ ಲಿಂಗ ಸಂಬಂಧವೆಂದು ಹೇಳಿಹರು.

ಇಷ್ಟಲಿಂಗ ಸ್ಥಾಪಿಸಿ ಕೊಂಡವರು ಅನಿಮಿಷ ದೇವನಂತೆ ಲಿಂಗವರಿತು ಲಿಂಗದಲ್ಲಿ ಲೀಯವಾಗಿ ಅನಿಮಿಷ ದೃಷ್ಟಿಯುಳ್ಳವರಾಗಿರುವರೆ? ಲಿಂಗವರಿಯ ಹೋಗಿ ಲಿಂಗ ತಾನು ಒಂದಾಗಿರುವರಾ? ಅರಿಯದಿದ್ದ ಮೇಲೆ ಇಷ್ಟಲಿಂಗ ಸಂಬಂಧಿಗಳೆಂದು ಹೇಗೆನ್ನಬೇಕು, ಗುರು ಕರುಣಿಸಿದ ಲಿಂಗದ ಘನವರಿಯದಿದ್ದಮೇಲೆ ಇವರು ಅನಿಷ್ಟ ಕಾರಕವಾಗಿಹ ದೇಹಭಾವ, ದೇಹಗುಣದಿಂದ ದೂರಾಗಿರುವರಾ? ದೂರಾಗದಿದ್ದಲ್ಲಿ ಇವರಿಗೆ ಪ್ರಾರಬ್ಧರೂಪಿ ಪಟಲ ಹರಿವುದೆ? ಇಲ್ಲವೆಂದಲ್ಲಿ ಪೂಜಾಲಿಂಗವ ಹಾಕಿಕೊಂಡು ಪೂಜಿಸುವ ಮಾತ್ರದಲ್ಲಿ, ಲಿಂಗ, ಲಿಂಗ ಎನ್ನುವ ಬಾವುಕರು ಆಗಿರುವರಲ್ಲದೆ ವೀರಶೈವರಾಗಲಿಲ್ಲ. ವೀರಶೈವರೆಂದಲ್ಲಿ ತನ್ನ ತಾನರಿತರವರೆ ವೀರಶೈವ ಅಗ್ರಗಣ್ಯರು ಎಂದು ಹೇಳಿಹರು. ಆರು ಗುರುಕೊಟ್ಟ ಕುರುಹ (ಇಷ್ಟಲಿಂಗಿ) ಅರಿಯಹೋಗಿರುವದಿಲ್ಲ, ಅವರಿಗೆ ಪೂಜಾಲಿಂಗ ಸಂಬಂಧ ವಾಗಿಹುದಲ್ಲದೆ ಇಷ್ಟಲಿಂಗ, ಅನುಪಮ ಲಿಂಗ, ಅಖಂಡಿತ ಲಿಂಗ, ಅಚಲಿತ ಲಿಂಗ, ಸಂಬಂಧವಾಗಿರುವದಿಲ್ಲ, ಇದು ಸಂಬಂಧವಾಗದ್ದರಿಂದ ಪ್ರಾಣಲಿಂಗವು ಸಂಬಂಧವಾಗದು ಎಂದು ಹೇಳಿಹರು.

**ವಚನ 26**

**ಅರುವಿನ ತೃಪ್ತಿಗೆ ಅನುಭಾವವೆ ಆಶ್ರಯ,**
**ಲಿಂಗಾನುಭವದಿಂದ ನಿಮ್ಮ ಕಂಡೆನ್ನ**
**ಮರದೆ ಕೂಡಲಸಂಗಮದೇವಾ.**

**ತಾತ್ಪರ್ಯ:** ಅರುವಿನ ತೃಪ್ತಿಗೆ ಅನುಭಾವವೆ ಆಶ್ರಯ: ಬಸವಣ್ಣನವರು ಅರುವಿನ ತೃಪ್ತಿಗೆ ಅನುಭಾವವೇ ಆಶ್ರಯವೆಂದು ಬಿತ್ತರಿಸಿರುವುದು ನೋಡುವುಡೆ, ಅನುಭಾವವೆ ಈ ಮಾನವರೂಪಿ ಅರುವಿನ ಜನ್ಮಕ್ಕೆ ಮುಖ್ಯವು. ಅನುಭಾವವೆ ಪ್ರಧಾನವು. ಅರುವಿನ ತೃಪ್ತಿಯಾಗಲು ಅನುಭಾವವಿಲ್ಲದೆ ಅಸಾಧ್ಯವು. ಅನುಭಾವ ಸಲುವಾಗಿ ಶಿವಾನುಭವವೆಂಬ ಶಿವಶರಣರ ಕೂಟ. ಶರಣರು ತಮ್ಮ ತಮ್ಮ ಸ್ವಯಾನುಭವ ವಿಮರ್ಶಿಸಲು, ಈ ಕೂಟದಲ್ಲಿ ಸೇರಿ ಅರುವಿನ ತೃಪ್ತಿಗೆ ಅನುಭಾವವೆಂಬ ತಮ್ಮ ಸ್ವಾನುಭವದಿಂದ ಕೂಡಿದ ಎರಡೆಂಭತ್ತು ಕೋಟಿ ವಚನಂಗಳು ಶಿವಾನುಭವದಲ್ಲಿ ಸಕಲರ ಅರುವಿನ ತೃಪ್ತಿಗೆ ತಾಳ ಓಲೆಯಲ್ಲಿ ಬರೆದು ಕೊಟ್ಟಿಹರು. ಅವುಗಳಲ್ಲಿ ಕೆಲವು

ಅರುವಿನ ಘನತ್ವವ ಹೇಳಿಹರು. ಅರುವಿನ ತೃಪ್ತಿಯಾಗಲು ಶಿವಶರಣರು ವಚನ ರೂಪದಲ್ಲಿ ತೋರಿದ ಅನುವಿನ ಪ್ರಕಾರ ತಿಳಿಯಹೋದಲ್ಲಿ ಮಾನವ ತೃಪ್ತನಾಗಲು ನಿಃಸಂದೇಹವು.

ಅರುವಿನ ತೃಪ್ತಿಗೆ ಹೊನ್ನು, ಹೆಣ್ಣು, ಮಣ್ಣು, ಮುಖ್ಯವಲ್ಲ, ಸತಿ ಸುತಾದಿಗಳು ಮುಖ್ಯವಲ್ಲ, ಇಷ್ಟಮಿತ್ರರು ಮುಖ್ಯವಲ್ಲ, ತೋರಿ ಇಲ್ಲವಾಗುವ ಮಾಯಿಕ ತತ್ವ ಮುಖ್ಯವಲ್ಲ, ಇವುಗಳಿಂದ ಅರುವಿನ ತೃಪ್ತಿ ಇಲ್ಲ, ದೇವತೆಗಳು ದೈತ್ಯರು ಮಾಯಿಕ ಪದದಿಂದ ತೃಪ್ತರಾದರೆ? ಮನು ತಮ್ಮ ತಪಸ್ಸಿನಿಂದ ತೃಪ್ತರಾದರೆ? ಅಣಿಮಾದಿ ಸಿದ್ಧಿಪುರುಷರು ತಮ್ಮ ಸಿದ್ಯಾದಿಗಳಿಂದ ಅಚಿಂತ್ಯಪದ ಕಂಡರೆ? ಕಾಣದ್ದರಿಂದ ದೇವತೆಗಳೆ ಆಗಲಿ, ದೈತ್ಯರೆ ಆಗಲಿ ಆರೆ ಆಗಲಿ ಶ್ರೀಗುರು ಘನವನ್ನಾಶ್ರಯಿಸಿಸಿ, ಅವರು ಅರುವಿನ ಘನತ್ವ ತಮ್ಮಲ್ಲಿ ಕಂಡುಕೊಂಡಾಗ ನಿರಂಕುಶ ತೃಪ್ತರೂಪ ತೃಪ್ತಿಹೊಂದಿ ಅಚಿಂತ್ಯರಾಗಿಹರು, ಇದು ಕಾರಣ ಬಸವರಸರು ಅರುವಿನ ತೃಪ್ತಿಗೆ ಅನುಭಾವವೆ ಆಶ್ರಯವೆಂದು ತಮ್ಮ ತಮ್ಮ ಸ್ವಾನುಭವದ ವಿಮರ್ಶೆಗೆ ಶೂನ್ಯಸಂಪಾದನೆಯನ್ನು ಸ್ಥಾಪಿಸಿ ಅದರಲ್ಲಿ ಪ್ರಭುದೇವನನ್ನು ಪ್ರಧಾನ ಅಧಿಪತಿಯನ್ನಾಗಿ ಮಾಡಿ, ಅರುವಿನ ತೃಪ್ತಿಗೆ ಮುಖ್ಯವಾದುದು ಷಟ್‌ಸ್ಥಲವೆಂದು ಸ್ವಾನುಭವದ ಸಚ್ಚಿದ್ಘನವನ್ನೆ ಲಿಂಗ , ಜಂಗಮ, ಪ್ರಸಾದ ರೂಪದಲ್ಲಿ ಹೆಣೆದು ಸಕಲ ಜೀವರುಗಳಿಗೂ ಯುಗ ಯುಗದಲ್ಲಿ ದೇದೀಪ್ಯಮಾನವಾಗಿ ಬೆಳಗಿ, ಸಕಲರು ಅರುವಿನ ತೃಪ್ತಿ ಮಾಡಿಕೊಳ್ಳಲು ವಚನ ಸಾಹಿತ್ಯ ಮುಖ್ಯ ರಾಜಮಾರ್ಗವಾಗಲಿ ಎಂಬ ಸದುದ್ದೇಶವ ನಿಟ್ಟು ಕೊಂಡು ಸಕಲ ಜೀವರಿಗೆ ಲೇಸನೆ ಬಯಸುವ ನಮ್ಮ ಕೂಡಲಸಂಗನ ಶರಣರೆ ಕುಲಜರು ಎಂದು ಬಿತ್ತರಿಸಿದಂತೆ, ಸಕಲ ಜೀವರಿಗೆ ಲೇಸನೆ ಬಯಸುವ ಸಾಹಿತ್ಯ ಶರಣಸಾಹಿತ್ಯ, ವಚನ ಸಾಹಿತ್ಯವು. ಅದರಲ್ಲಿ ಪ್ರಧಾನ ಗ್ರಂಥವೆಂದರೆ ಶೂನ್ಯಸಂಪಾದನೆ. ಇದರಲ್ಲಿ ಅರುವಿನ ತೃಪ್ತಿಯ ಅನುಭಾವವೆ ತುಂಬಿದೆ. ಇದು ಪ್ರಭುದೇವರ ಸಂವಾದ ರೂಪದಲ್ಲಿದೆ.

ಅರುವಿನ ತೃಪ್ತಿಗೆ ಅನುಭಾವವೆ ಆಶ್ರಯ: ಇದು ಅರುವಿನಿಂದ ತೃಪ್ತಿಯಾದವರ ಅನುಭಾವ. ಇದಾರ ಅನುಭಾವ, ಪರತತ್ವ ನಿಜ ಸಂಯುಕ್ತರ, ಆನು ನೀನೆನ್ನದಿಹ ಶಬ್ದ ಸುಖಿಗಳ ತೋರಾ ಎನಗೆ ಎಲೆ ಲಿಂಗವೆ ಲಿಂಗೈಕ್ಯರ ಲಿಂಗ ಸುಖಿಗಳ ಲಿಂಗಗೂಡಾಗಿಪ್ಪವರ ಲಿಂಗಾಭಿಮಾನಿಗಳ ತೋರಾ ಎನಗೆ. ಅಹೋ ರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲ ಸಂಗಮದೇವಾ.

ಬಸವರಸರ ಬಯಕೆಯ ಅನುಭಾವವಾವುದು? ಆರು ಅರುವಿನ ತೃಪ್ತಿಯ ತೃಪ್ತಿಯಂತಹ. ಅವರ ಅನುಭಾವ ಪರತತ್ವದ ಅನುಭಾವ, ಅಚಿಂತ್ಯಾತ್ಮನ ಭಾವ, ಚಿಂತನಕ್ಕೆ ನಿಲುಕದ ಅನುಭಾವ. ಇಲ್ಲಿಯ ಸುಖ ನಿಶ್ಚಿಂತ ಸುಖ. ಇದುವೆ ಅರುವಿನ ತೃಪ್ತಿ. ಈ ತೃಪ್ತಿರೂಪ ತೃಪ್ತಾತ್ಮರಲ್ಲಿ ಆನೆಂಬುದಿಲ್ಲ, ನೀನೆಂಬುದಿಲ್ಲ ಈ ಮಹಾಸುಖಿಗಳು ಸುಖಸ್ವರೂಪದ ಸುಖಿಗಳು, ನಿರ್ವಾಣದ ನಿಲುವುಳ್ಳವರು, ಶಬ್ದ ಮೀರಿದ ಸಯ ಸುಖಿಗಳು, ಸ್ವಯಂಜ್ಯೋತಿ ತಾನೆ ಆದುದರಿಂದ ಇವರು ಅರುವಿನ ತೃಪ್ತಾತ್ಮರು, ಅರುವು, ಅರುವು ಎಂದು ಅರಸುವವರಲ್ಲಾ, ಅರಿಯದರುವೆ ತಾವಾಗಿ ತಮ್ಮ

ತಾವರಿತವರ ಅರಸರು. ಕಾಣಬಾರದ ಘನವ ಕಂಡವರು ಇವರ ದಿವ್ಯ ದೃಷ್ಟಿಯಲ್ಲಿ ಸುಮ್ಮನೆ ಹೇಳುವುದಕ್ಕಾದರೂ ನಾಮರೂಪಂಗಳಿಲ್ಲ, ತನಗಿಂತ ಭಿನ್ನ ವಸ್ತುವೂ ಕಾಣದು, ಅಭಿನ್ ವಸ್ತುವೂ ಕಾಣದು. ತಾನೆಂಬುದು ಅರುವು ಅರುವಿನ ಸ್ವಮಹಿಮೆಯ ಮಹಿಮರಾಗಿ ತೃಪ್ತರೂಪ ತೃಪ್ತರಾದ ನಿರಂಕುಶ ಮಹಾಂತರು.

ಲಿಂಗಾನುಭಾವದಿಂದ ನಿಮ್ಮ ಕಂಡೆನ್ನ ಮರದೆ ಕೂಡಲಸಂಗಮದೇವಾ ಎಂದು ಬಸವಣ್ಣನವರು ಹೇಳಿಹರು. ಲಿಂಗಾನುಭವಿಗಳೆಂದರೆ, ತಾನಾರೆಂದರಿತ ತನ್ನಿರುವಿನ ಅರುವುಳ್ಳವರು, ಶಬ್ದಮುಗ್ಧರು, ಸ್ವಯಾನಂದರು ಸ್ವತಂತ್ರರು, ಅಲ್ಲಿ ಮರವೆಂಬುದಿಲ್ಲ, ಅರುವೆಂಬುದಿಲ್ಲ ತಾನೆಂಬುದಿಲ್ಲ, ಅನ್ಯವೆಂಬುದಿಲ್ಲ, ಇಹವೆಂಬುದಿಲ್ಲ, ಪರವೆಂಬುದಿಲ್ಲ, ಲಿಂಗವರಿತು ಲಿಂಗವೆ ತಾವಾದ ಕಲ್ಪಿತವಲ್ಲದ ಘನವು ಅಕಲ್ಪಿತ ಘನವೆಂಬುದು ಅನುಪಮ ಚಿನ್ಹ , ಶೃತಿಗೆ ಮೀರಿದ ಚಿನ್ಹ, ನಿಷ್ಪತ್ತಿ ನಿರಾಳ ಚಿನ್ಹ, ಇಂತಪ್ಪ ಮಹಾನುಭಾವವೆ, ಲಿಂಗಾನುಭವ ಲಿಂಗಾನುಭವವೆಂಬುದು, ಅಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗ, ನಿಮ್ಮ ಕಂಡೆನ್ನ ಮರದೆ. ಅನುಪಮರಾಗಿಹ, ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಲಿಂಗವಾಗಿಹ ನಿಮ್ಮ ಕಂಡು ನಾನು ಭಕ್ತನೆಂಬುದು ಮರದೆ ಎಂದು ಹೇಳಿಹರು.

**ವಚನ 27**

**ಶರಣ ಲಿಂಗದಲ್ಲಿ ಕೂಡಲು ಮಹಾಪಥವಯ್ಯ**
**ದೃಢ ದೃಢಾಂಗ ಮಧ್ಯಸ್ಥನಾಗಿ ಕೂಡಲ**
**ಸಂಗಮದೇವರ ನಾಮವತಿ ಸುಖವೆಂದುದು.**

ತಾತ್ಪರ್ಯ: ಶರಣ ಲಿಂಗದಲ್ಲಿ ಕೂಡಲು ಮಹಾಪಥವಯ್ಯ: ಬಸವರಸರ ಪಥ ಮಹಾಪಥವಯ್ಯ. ಶಿವ ಪಥ ಅರಿವುಡೆ ಗುರು ಪಥವೆ ಮೊದಲು ಅಂದಿದ್ದ ದೇವರ, ದೇವ. ಇಲ್ಲಿ ಶರಣ ಲಿಂಗದಲ್ಲಿ ಕೂಡಲು ಮಹಾಪಥವಯ್ಯ ಎಂದು ಬಿತ್ತರಿಸಿದುದು ಬಹು ಗಹನಾರ್ಥವು ಮತ್ತು ಘನಕ್ಕೆ ಘನವಾದ ಪಥವಿದು.

ಶರಣ ಲಿಂಗದಲ್ಲಿ ಕೂಡಿದುದರಿಂದ ಈತನ ಮಹಾಪಥಕ್ಕೆ ಪ್ರತಿಯಿಲ್ಲ. ಪ್ರವಾಹರೂಪ ಗಂಗೆಯು ಸಮುದ್ರನಾಥನಲ್ಲಿ ಸೇರುವುಡೆ ಅದಕ್ಕೆ ಪ್ರತಿ ಉಂಟೆ? ಅಪ್ರತಿಮ ಲಿಂಗದಲ್ಲಿ ಶರಣ ಕೂಡುವದರಿಂದ ಅಪ್ರತಿಮ ಪಥವು. ಲಿಂಗವೆಂಬುದು ವಾಙ್ಮನೋತೀತ ಅಪ್ರಮಾಣ ಅಗಮ್ಯ ಅಕಲ್ಪಿತ ಅಚಿಂತ್ಯ ಬೆಳಗುವ ಜ್ಯೋತಿ, ನೀನದನರಸುವಲ್ಲಿ ನಿನ್ನಿಂದತ್ತತ್ತ, ಅರಿವುಡೆ ತಾನೆ ಅರಿದರುವು ತನ್ನಿರವು ಆದ ಮಹಾಂತ. ಶರಣ ಲಿಂಗದಲ್ಲಿ ಕೂಡಿದ ಪಥ ಮಹಾಪಥ. ಶರಣ ಲಿಂಗದಲ್ಲಿ ಕೂಡಿ ಕಲ್ಪಿತಕ್ಕೆ ನಿಲುಕದ ಘನನಾದುದರಿಂದ ಶರಣನ ಪಥ ಮಹಾಪಥವಯ್ಯ ಶರಣ ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗವ ಕೂಡಿ ಅಚಿಂತ್ಯಾತ್ಮ ತಾನಾದುದರಿಂದ ಮಹಾಪಥ. ಲಿಂಗವರಿತು ಲಿಂಗವೆ ತಾನೆ ತಾನಾದುದರಿಂದ ಬೆಳಗುವ ಜ್ಯೋತಿ, ಸ್ವಯಂ ಜ್ಯೋತಿ. ಇದು ಕಾರಣ ಶರಣನ ಪಥ ಅನುಪಮ ಪಥ.

ಶರಣ ಲಿಂಗದಲ್ಲಿ ಕೂಡಿ ಸಕಲ ಪಥಗಳಿಗೆ ಸಮಸ್ವರೂಪನಾಗಿಹನು. ಬೆಳಗುವ

ಜ್ಯೋತಿ ಚಿಜ್ಯೋತಿಯಾದುದರಿಂದ ನುಡಿಗೆಡೆಗೊಡದ ಘನನಾದ್ದರಿಂದ ದ್ವೈತ ಪಥದವನಾಗಲಿಲ್ಲ. ವಿಶಿಷ್ಟಾದ್ವೈತದ ಪಥದವನಾಗಲಿಲ್ಲ. ಶಕ್ತಿವಿಶಿಷ್ಟಾದ್ವೈತದ ಪಥದವನಾಗಲಿಲ್ಲ. ಅದ್ವೈತದ ಪಥದವನಾಗಲಿಲ್ಲ, ಸಮಸ್ವರೂಪನಾಗಿಹ ಘನವಂತನ ಪಥ ಮಹಾಪಥ ನೋಡಾ.

ಶರಣ ಲಿಂಗವರಿತು ಲಿಂಗವೆ ತಾನಾದ ಘನಮಹಿಮ, ಅರಸ ಹೋಗಲಿಲ್ಲ. ಅರ್ಚಿಸ ಹೋಗಲಿಲ್ಲ. ತನಗಿಂತ ಲಿಂಗ ಅನ್ಯವೆನಲಿಲ್ಲ, ಒಂದೆನಲಿಲ್ಲ, ಶಬ್ದಮುಗ್ಧನಾಗಿಹ ಘನ ಮಹಿಮನ ಪಥ, ಉಪಮಿಸಲು ಎಡೆಗೊಡದ ಪಥವಾದ್ದರಿಂದ ಮಹಾಪಥವೆಂದಿಹರು.

ಎಲ್ಲಿಯವರೆಗೆ ಮಾನವ ಗುರು ಕರುಣೆಯಿಂದ ಅಪ್ರಮಾಣಗಮ್ಯವಾಗಿಹ ಅಚಿಂತ್ಯಲಿಂಗವರಿಯುವದಿಲ್ಲ. ಅಲ್ಲಿಯವರೆಗೆ ಇವನದೊಂದು ಪಕ್ಷ, ಅದು ಸೀಮಿತವಾದದು. ಸೀಮಿತದಿಂದುಕ್ತನಾದವನು ಅಜಾತನಾಗಲಾರ, ಗುಣಾತೀತನಾಗಲಾರ. ಇವನು ಭಾವಕ್ಕೊಳಪಟ್ಟ ಭ್ರಮಿತನು; ಭ್ರಮಿತನ ಪಕ್ಷ ಸೀಮಿತ ಪಕ್ಷವು.

ಶರಣನ ಹೃದಯದಲ್ಲಿ ಪ್ರಜ್ವಲಿಸುವ ಲಿಂಗ ಭಕ್ತರಾದವರು, ಪೂಜಾಲಿಂಗ ಪೂಜಿಸುವವರು, ಈ ಘನ ಲಿಂಗದಲ್ಲಿ ಕೂಡುವುದಿಲ್ಲ, ಕೂಡದ್ದರಿಂದ ಕೂಡದಗಲದ ಘನಪಥದವನಾಗುವುದಿಲ್ಲ, ಶರಣನ ಪಥ ಕೂಡದಗಲದ ಪಥ, ಲಿಂಗವರಿತು ಲಿಂಗವಾಗಿಹ ಪಥ ಇದು ಮಹಾಪಥ. ಈ ಮಹಾಪಥವುಳ್ಳವರೆಲ್ಲ ಮಹಾತ್ಮರು ಅಜಾತವಂತರು ಅಯೋನಿಜ ಸಂಭವರು.

ದೃಢ ದೃಢಾಂಗ ಮಧ್ಯಸ್ಥನಾಗಿ ಕೂಡಲಸಂಗಮದೇವ ನಾಮಮತ ಸುಖವೆಂದದು, ಅಪ್ರತಿಮ ಲಿಂಗದಲ್ಲಿ ಕೂಡಿದ ಘನವಂತ ಆವಾವುದಕ್ಕೂ ಅಂಟದ ಮಧ್ಯಸ್ಥ, ಆ ಘನವಂತನ ಮಧ್ಯಸ್ಥಿಕೆ ದೃಢ ದೃಢಾಂಗ ನೋಡಾ, ಶರಣನ ಮಧ್ಯಸ್ಥಿಕೆ, ಸ್ಥಾವರ ಜಂಗಮ, ಜಂಗವೆಂಬ ಜಗತ್ತಿನೊಳಗೆ ಗಗನವು ಹೇಗೆ ಆವಾವುದಕು ತಟ್ಟದೆ ಮುಟ್ಟದೆ ಹೇಗೆ ಸಂಗ ರಹಿತವಾಗಿದೆ. ಹಾಗೆ ಶರಣನ ಮಧ್ಯಸ್ಥಿಕೆ ಸತ್, ಅಸತ್, ಎಂಬುದರ ಮಧ್ಯಸ್ಥ, ಚಿತ್, ಅಚಿತ್, ಎಂಬುದರ ಮಧ್ಯಸ್ಥ, ಆನಂದ ನಿರಾನಂದ ಎಂಬುದರ ಮಧ್ಯಸ್ಥ ನಿತ್ಯಾನಿತ್ಯವೆಂಬುದರ ಮಧ್ಯಸ್ಥ, ಪೂರ್ಣ ಅಪೂರ್ಣ ಎಂಬುದರ ಮಧ್ಯಸ್ಥ ಮರವು ಅರುವು ಎಂಬುದರ ಮಧ್ಯಸ್ಥ ಅರಿತೆ ಅರಿಯೆ ಎಂಬುದರ ಮಧ್ಯಸ್ಥ, ಈ ಮಹಾಂತನ ಮಧ್ಯಸ್ಥಿಕೆ ಏನೊಂದುಸರಲು ಎಡೆಗೊಡದ ಮಧ್ಯಸ್ಥಿಕೆ, ಶಬ್ದಮುಗ್ಧ ಮಧ್ಯಸ್ಥಿಕೆ, ನಿಶ್ಪತ್ತಿ ನಿರಾಳ ತಾನೇ ಆದ ಮಧ್ಯಸ್ಥಿಕೆ ಶರಣನ ಮಧ್ಯಸ್ಥಿಕೆ ಅದೃಢ ಮಧ್ಯಸ್ಥಿಕೆಯಲ್ಲ ಕೆಲವು ಸಮಯ ಶೃತಿಗೊಳಪಟ್ಟ ಮಧ್ಯಸ್ಥಿಕೆಯು ಅಲ್ಲ. ಇದು ಶೃತಿಗೆ ಮೀರಿದ ಘನಕ್ಕೆ ಘನವಾದ ಮಧ್ಯಸ್ಥಿಕೆ.

ಆರದು ದೃಢ ಅದೃಢದಿಂದುಕ್ತವಾಗಿದೆ. ಅದು ದೃಢದೃಢಾಂಗ ಮಧ್ಯಸ್ಥಿಕೆಯಾಗದು, ನೆನಹು ನಿರ್ಣಯದಿಂದುಕ್ತವಾಗಿದೆ, ಭಾವಕ್ಕೊಳಪಟ್ಟಿದೆ, ಅದು ದೃಢ ಅದೃಢದಿಂದುಕ್ತವಾಗಿದೆ. ಆರು ಅಪ್ರಮಾಣ ಅಗಮ್ಯ ಅನುಪಮವೆ ತನ್ನಿರುವಿನ

ಅರುವಾಗಿಪ್ಪುದು ಅವರು ದೃಢ ದೃಢಾಂಗ ಮಧ್ಯಸ್ಥನಾಗಿ ಕೂಡಲ ಸಂಗಮದೇವನ ನಾಮ ಅತಿ ಸುಖವೆಂದುದು.

ಕೂಡಲಸಂಗಮದೇವನ ನಾಮವತಿ ಸುಖವೆಂದುದು: ಅತಿಸುಖದ ನಾಮ ಕೂಡಲಸಂಗಮದೇವನ ನಾಮ. ಏಕೆಂದರೆ ಸುಖ ಸ್ವರೂಪ ಕೂಡಲಸಂಗಮದೇವ ಅವನ ನಾಮವು ಸುಖ ಸ್ವರೂಪ ಬೆಲ್ಲ ಸಕ್ಕರೆ ಸಿಹಿ, ಮೂರೊಂದಾಗಿ ಕಂಡರೂ ಎರಡು ವ್ಯಕ್ತರೂಪ ಇನ್ನೊಂದು ಅವ್ಯಕ್ತ ರೂಪು ಆದರೂ ಮೂಲವಸ್ತು ಒಂದೆ. ಆರು ಮೂಲವ ಕಂಡಿಹರು ಅವರ ದೃಷ್ಟಿಗೆ ಒಂದೆ. ಹಾಗೆ ಕ್ಷರಾಕ್ಷರವೆಂಬುದಕ್ಕೂ ಘನವ ತಳಿದಿಹರು. ಅವರಿಗೆ ಕೂಡಲ ಸಂಗಮದೇವ ನಾಮವತಿ ಸುಖವು. ಏಕೆಂದರೆ ಅಪಾರ ನಿಲವು. ಅಪಾರದೃಷ್ಟಿ, ಎಲ್ಲೆಲ್ಲೂ ಅತಿಸುಖದ ದರ್ಶನ. ಕೂಡಲಸಂಗಯ್ಯ ಅಪಾರ. ಅವನ ನಾಮ ಅಪಾರ. ಅವನನ್ನು ಕಾಣ ಹೋದ ಬಸವರಸ ಅಪಾರ. ಆ ಮಹಾಂತನ ಸ್ವಾನುಭಾವ ಪ್ರಸಾದವು ಅಪಾರವು. ಅದನ್ನು ತಿಳಿಯಬಂದ ಭಕ್ತ ಅಪಾರ. ಈ ಅಪಾರತ್ವವು, ಕೂಡಲಸಂಗಮದೇವಯ್ಯ, ಅದು ನಿನ್ನರವು ನಿನ್ನ ನಾಮ ಕೂಡಲಸಂಗಮದೇವ ಸುಖಸ್ವರೂಪವೆಂದು ಸುಖವರಿತು ಸುಖದ ಸುಖಿಯಾದುದು ಸುಖದೇಕ ಸುಖವುಳ್ಳವನಾದುದರಿಂದ ಕೂಡಲಸಂಗಮದೇವನ ನಾಮ ಅತಿ ಸುಖವೆಂದುದು.

**ವಚನ 28**

**ಆಹ್ವಾನಿಸುವಲ್ಲಿ ಪ್ರಾಣಲಿಂಗವಿಲ್ಲ,**
**ವಿಸರ್ಜಿಸುವಲ್ಲಿ ಲಿಂಗವಂತರಿಸಿತ್ತು.**
**ಇದು ಕಾರಣ ಆಹ್ವಾನಿಸುವವನಲ್ಲ,**
**ವಿಸರ್ಜಿಸುವವನಲ್ಲ, ಶರಣನ**
**ಪರಿ ಬೇರೆ. ಲಿಂಗ ಭೋಗೋಪ ಭೋಗವಲ್ಲದೆ**
**ಅನರ್ಪಿತವ ಭೋಗಿಸುವವನಲ್ಲ,**
**ಆಗಲೂ ಪ್ರಾಣಲಿಂಗ ಸಂಬಂಧದೊಳಿಪ್ಪನು.**
**ಇದು ಕಾರಣ ಕೂಡಲ ಚೆನ್ನ ಸಂಗಯ್ಯಾ**
**ನಿಮ್ಮ ಶರಣಂಗೆ ನಮೋ ನಮೋ ಎಂಬೆನು. ॥ 435 ॥**

**ತಾತ್ಪರ್ಯ:** ಆಹ್ವಾನಿಸುವಲ್ಲಿ ಪ್ರಾಣಲಿಂಗವಲ್ಲ, ವಿಸರ್ಜಿಸುವಲ್ಲಿ ಲಿಂಗವಂತನಲ್ಲ ಇದು ಕಾರಣ ಆಹ್ವಾನಿಸುವನಲ್ಲ, ವಿಸರ್ಜಿಸುವವನಲ್ಲ, ಶರಣನ ಪರಿ ಬೇರೆ: ಶರಣನ ಲಿಂಗಾರ್ಚನೆಗೂ ಲಿಂಗಾರ್ಚಕರ ಲಿಂಗಪೂಜೆಗೂ ಅಂತರ ಮಹದಂತರ, ಪೂಜಾಲಿಂಗವ ಪೂಜಿಸುವಲ್ಲಿ ಆಹ್ವಾನಿಸುವದು ಇದೆ. ವಿಸರ್ಜಿಸುವದು ಇದೆ, ಈ ಲಿಂಗಾರ್ಚಕರು ಲಿಂಗಯ್ಯನನ್ನು ಪ್ರಥಮ ತಮ್ಮ ಕರಕಮಲದಲ್ಲಿ ಆಹ್ವಾನಿಸಿಕೊಂಡು ಪೂಜಿಸುತ್ತಾರೆ. ಪೂಜೆ ಮುಗಿದ ನಂತರ ಲಿಂಗಯ್ಯನನ್ನು ಕರಕಮಲದಿಂದ ವಿಸರ್ಜಿಸಿ ಲಿಂಗ ಸೆಜ್ಜೆಯಲ್ಲಿ ಇಟ್ಟುಕೊಳ್ಳುತ್ತಾರೆ.

ಪೂಜಾಲಿಂಗವ ಪೂಜಿಸುವ ಲಿಂಗವಂತರು ಬಹುಜನ ಶಿಕ್ಕುತ್ತಾರೆ.

ಜಂಗಮದೇವಯ್ಯಗಳು ಶಿಕ್ಕುತ್ತಾರೆ. ಗುರು ಪುಂಗವರು ಶಿಕ್ಕುತ್ತಾರೆ. ಅನಿಮಿಷ ದೇವನಂಥ ಲಿಂಗಾರ್ಚಕರು ಶಿಕ್ಕುತ್ತಾರೆಯೇ? ಲಿಂಗ ಒಂದಾಗಿರ್ದ ಜಂಗಮ ಘನಕ್ಕೆ ಘನ ಈ ಮಹಾಂತನ ಲಿಂಗಾರ್ಚನೆಯಲ್ಲಿ ಆಹ್ವಾನ ವಿಸರ್ಜನೆ ಇದೆಯೇ? ಲಿಂಗವರಿತ ಲಿಂಗಾಂಗಿ ಈ ಮಹಾಂತ ಪೂಜಾಲಿಂಗ ಅದನೆಂತು ಆಹ್ವಾನಿಸುವನು. ಅದನೆಂತು ವಿಸರ್ಜಿಸುವನು.

ಎಲ್ಲಿಯವರೆಗೆ ಲಿಂಗವರಿಯುವದಿಲ್ಲ, ಅಲ್ಲಿಯವರೆಗೆ ಲಿಂಗಾಂಗಿಯಾಗುವುದಿಲ್ಲ. ಲಿಂಗಾಂಗಿ ಆಗದ್ದರಿಂದ ಈ ಅರ್ಚಕನು ಆಹ್ವಾನಿಸುವವನಾಗಿದ್ದಾನೆ. ವಿಸರ್ಜಿಸುವವನಾಗಿದ್ದಾನೆ. ಅದಕ್ಕಾಗಿ ಚೆನ್ನಬಸವರಾಜ ದೇವರು ಶರಣನ ಪರಿಬೇರೆ ಎಂದು ಹೇಳಿದರು.

ಶರಣನ ರೀತಿ ಬೆರೆ ಲಿಂಗಾರ್ಚರ ರೀತಿ ಬೇರೆ, ಶರಣ ಗುರು ಕರುಣಿಸಿದ ಲಿಂಗದಲ್ಲಿಯೆ ಘನವ ಕಂಡ, ಅನುವ ಕಂಡ, ಆಯತ ಕಂಡ ಸ್ವಾಯತ ಕಂಡ ಸನ್ನಿಹಿತ ಸುಖವ ಕಂಡ. ಅರಿದರಿದು ಮರಹ ಮರದ. ಇದು ಕಾರಣ ಶರಣನ ಪರಿಬೇರೆ. ಲಿಂಗಾರ್ಚಕರು, ಪೂಜಾಲಿಂಗದಲ್ಲಿ ಘನವ ಕಾಣಲಿಲ್ಲ. ಅನುವ ಕಾಣಲಿಲ್ಲ. ಆಯತ, ಸ್ವಾಯತ, ಸನ್ನಿಹಿತ ಕಾಣಲಿಲ್ಲ, ಕಾಣದಿದ್ದಲ್ಲಿ ಲಿಂಗವರಿಯ ಹೋಗಲಿಲ್ಲ, ಅರಿಯದಿರುವಲ್ಲಿ ಅರಿದರಿದು ಮರಹ ಮರೆಯುವದದೆಂತು? ಅದಕ್ಕಾಗಿ ಪೂಜಾಲಿಂಗವು ಆಹ್ವಾನಿಸುವ ವಿಸರ್ಜಿಸುವ ಲಿಂಗವಾಯಿತಲ್ಲದೆ ಶರಣರ ಲಿಂಗವಾಗಲಿಲ್ಲ.

ಶರಣರ ಲಿಂಗ ಅಪ್ರತಿಮ ಲಿಂಗ ಅಪ್ರಮಾಣ ಅಗಮ್ಯನಾಗಿಹ ವಾಙ್ಮನೋತೀತಲಿಂಗ ಬೆಳಗಿನ ಬೆಳಗುಳ್ಳಲಿಂಗ. ಅಖಂಡಿತ ಘನವಪ್ಪ ಪೂರ್ಣಲಿಂಗ. ಅರಿವುಡೆ ತಾನೆ ಆದ ಶರಣ. ತನ್ನನ್ನು ತಾನು ಆರಾದರೂ ಆಹ್ವಾನಿಸುವರೆ? ತಾನಿದ್ದು ತನ್ನನ್ನು ತಾನು ಆರಾದರೂ ವಿಸರ್ಜಿಸುವರೆ? ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಶರಣ ಲಿಂಗ ಆಹ್ವಾನಿಸುವನೆ? ವಿಸರ್ಜಿಸುವವನೆ? ಇಲ್ಲ. ಇದು ಕಾರಣ ಶರಣನ ಪರಿ ಬೇರೆ ಎಂದು ಷಟ್ ಸ್ಥಲ ಚಕ್ರವರ್ತಿ ಚೆನ್ನಬಸವರಾಜ ದೇವರು ಹೇಳಿದುದು.

ಲಿಂಗ ಭೋಗೋಪ ಭೋಗವಲ್ಲದೆ ಅನರ್ಪಿತ ಭೋಗಿಸುವನನಲ್ಲ: ಏಕೆಂದರೆ ಶರಣ ಸುಖ, ಸುಖಿ ಸುಖಾನುಭವವುಳ್ಳ ಮಹಾಂತ. ಈ ಮಹಾಂತ ಲಿಂಗ ಭೋಗೋಪಭೋಗಿ ಅಖಂಡಿತ ಘನ ಪೂರ್ಣವಪ್ಪ, ತನ್ನರುವಿನ ಅರುವಾಗಿಹ ಲಿಂಗ. ಅರುವರಿತು ಅರಿಯದರುವಾಗಿಹ ಘನವಂತ, ಲಿಂಗವರಿತು ಲಿಂಗವೆ ತಾನಾಗಿದ್ದ ಪರಮಸುಖಿ. ಆ ಸುಖದ ಸುಖಿಯಾಗಿಹ ಲಿಂಗ ಕಿರಣಂಗಳು ಇದನ್ನು ಬೇರು ಮಾಡಿ ಅಮಳ್ಳೈಕವ ಮಾಡಿದ ಘನವ ಶರಣನೆ ಬಲ್ಲನಲ್ಲದೆ ಅಂಗಭೋಗೋಪ ಭೋಗಿಗಳೆಂತು ಬಲ್ಲರು! ಮೂರೊಂದಾಗಿರ್ದ ಮಹಾಂತನೆ ಲಿಂಗ ಭೋಗೋಪಭೋಗಿ.

ಅಂತರಂಗ ಸನ್ನಿಹಿತ, ಬಹಿರಂಗ ನಿಶ್ಚಿಂತ ಅಯ್ಯ ತನು ತನ್ನ ಸುಖ. ಮನ ಪರಮಸುಖ. ಇದನಾರಯ್ಯ ವರ್ಣಿಸುವದು? ತನುವೆ ನಿರ್ವಿಕಾರಸುಖ, ಮನವೆ

ಸುಖದೇಕರಸವುಳ್ಳ ಘನಸುಖ, ಅಕ್ಷಯ ಸುಖ. ಇದು ಅಂತರಂಗದಲ್ಲಿ ಅವಿರಳ ಜ್ಞಾನ, ತನ್ನಿಂದ ತನಗೆ ಸಂಬಂಧವಾದ ಜ್ಞಾನ. ಇದು ಉದಯಾಸ್ತವಿಲ್ಲದ ಬೆಳಗುವ ಜ್ಞಾನ. ಎರವಲವಾಗಿ ಬಂದ ಜ್ಞಾನವಲ್ಲ ಹೆತ್ತರಿವು ಅಲ್ಲ, ಸ್ವಯಮೇವ ಅರಿವು. ಈ ಅರಿವು ಕರಿಗೊಂಡ ಬಳಿಕ, ಅಂಗ ಇಂದ್ರಿಯಂಗಳು ಇಲ್ಲ, ಪ್ರಾಣಾದಿಗಳಿಲ್ಲ ಕರಣಂಗಳಿಲ್ಲ ಇವುಗಳೆ ಇಲ್ಲವಾದಲ್ಲಿ ಇವುಗಳ ಭೋಗಿಸುವ ಪಂಚವಿಷಯಂಗಳಿಲ್ಲ. ಕಲ್ಪಿತನೆಲ್ಲಿ? ಇಲ್ಲಾದುದು ಇಲ್ಲಾದುದು ಎಲ್ಲಿಪ್ಪುದು ಇದು ಕಾರಣ ಶರಣ ಅನರ್ಪಿತ ಭೋಗಿಸುವನಲ್ಲ, ಆಗಳೂ ಪ್ರಾಣಲಿಂಗ ಸಂಬಂಧದೊಳಿಪ್ಪನು. ಇದು ಕಾರಣ ಕೂಡಲಚೆನ್ನಸಂಗಯ್ಯ ನಿಮ್ಮ ಶರಣಂಗೆ ನಮೋ ನಮೋ ಎಂಬೆನು.

ನಿರಂತರ ಪ್ರಾಣಲಿಂಗ ಸಂಬಂಧದೊಳಿಪ್ಪ ಶರಣ, ಪರಿಪೂರ್ಣ ಶಿವ ನೆಂದರಿದ ಶರಣ, ಅಗಣಿತ ಅಕ್ಷರೇಶ್ವರ ತಾನೆಂದರಿದ ಶರಣ, ಪ್ರಣವ ಪ್ರಭೆಯ ಮೇಲಣ ಪರಂಜ್ಯೋತಿ ತಾನೆಂದರಿದ ಶರಣ ಇದು ಕಾರಣ ಆಗಳೂ ಪ್ರಾಣಲಿಂಗ ಸಂಬಂಧದೊಳಿಪ್ಪ ನಿಮ್ಮ ಶರಣಂಗೆ ನಮೋ ನಮೋ ಎಂದು ಹೇಳಿಹರು.

**ವಚನ 29**

**ನಿಷ್ಠೆಯುಳ್ಳಾತಂಗೆ ನಿತ್ಯ ನೇಮದ ಹಂಗೇಕೆ?**
**ಸತ್ಯವುಳ್ಳಾತಂಗೆ ತತ್ವ ವಿಚಾರದ ಹಂಗೇಕೆ?**
**ಅರುವುಳ್ಳಾತಂಗೆ ಅಗ್ಘವಣಿಯ ಹಂಗೇಕೆ?**
**ಮನಶುದ್ಧವುಳ್ಳಾತಂಗೆ ಮಂತ್ರದ ಹಂಗೇಕೆ?**
**ಭಾವಶುದ್ಧವುಳ್ಳಾತಂಗೆ ಹೂವಿನ ಹಂಗೇಕೆ?**
**ಕೂಡಲಚೆನ್ನಸಂಗಯ್ಯಾ, ನಿಮ್ಮ ನರಿದಾತಂಗೆ ನಿಮ್ಮ ಹಂಗೇಕೆ? ॥ 410 ॥**

ತಾತ್ಪರ್ಯ: ನಿಷ್ಠೆಯಳ್ಳಾತಂಗೆ ನಿತ್ಯ ನಿಯಮದ ಹಂಗೇಕೆ: ನಿಷ್ಠೆಯುಳ್ಳವ? ಆರ ನಿಷ್ಠೆಯುಳ್ಳವನಾಗುವದು, ಪೂರ್ಣನು ನಿಷ್ಠೆಯುಳ್ಳವನಾಗಿರುವದು. ಗುರುಘನನ ನಿಷ್ಠೆಯುಳ್ಳವನಾಗಿರುವದು. ಲಿಂಗ ಜಂಗಮದ ನಿಷ್ಠೆಯುಳ್ಳವನಾಗಿರುವದು. ಗುರು, ಲಿಂಗ, ಜಂಗಮದ ನಿಷ್ಠೆಯುಳ್ಳಾತಂಗೆ ನಿತ್ಯ ನೇಮದ ಹಂಗಿಲ್ಲ.

ಲೋಕವೆಲ್ಲ ನಿತ್ಯನೇಮಕ್ಕೊಳಪಟ್ಟುದು. ಇತ್ತ ಗುರು, ಲಿಂಗ, ಜಂಗಮ ನಿಷ್ಠೆಯುಳ್ಳವರಾಗಿರುವರು. ಇದೆಂಥ ವಿಚಿತ್ರ ನಿತ್ಯ ನೇಮದ ಹಂಗಿನವರು! ಗುರುಘನ ತಿಳಿಯರು. ಆ ಮಹಾಂತನ ಬೋಧವ ತಿಳಿಯದವರು, ಲಿಂಗವ ತಿಳಿಯದವರು, ಜಂಗಮವ ತಿಳಿಯದವರು, ನೀತಿ ನೇಮವಂತರೆಲ್ಲ ಗುರು ಘನದ ಚಾರಿತ್ರ ಕಂಡವರು, ಲಿಂಗವ ಶಿಲೆಯಾಗಿ ಕಂಡವರು. ಜಂಗಮನನ್ನು ಜಾತಿಗೊಳಪಡಿಸಿ ನೋಡಿದವರು. ಇವರುಗಳೆಲ್ಲ ದೀಪವ ಕೈಯಲ್ಲಿ ಹಿಡಿದು ಕತ್ತಲೆಯ ನರಸಿದವರು. ಪರುಷವ ಕೈಯಲ್ಲಿ ಹಿಡಿದು ಕೂಲಿಯನರಿಸಿದವರು.

ಗುರುನಿಷ್ಠೆ ಸಾಮಾನ್ಯನಿಷ್ಠೆಯೇ? ಗುರುಭಕ್ತಿಯಲ್ಲಿ ಭಾವ ಬಲಿದುದೆ ಬ್ರಹ್ಮಜಾನ ಗುರುಭಕ್ತಿಯಲ್ಲಿ ಭಾವನಿಂದುದು ಸಹಜ ಸ್ಥಿತಿ, ಗುರು ಘನನಲ್ಲಿ ನಿಷ್ಠೆ ಬಂದವ ಬ್ರಹ್ಮ ಜ್ಞಾನಿ,ಸಹಜ ಸ್ಥಿತಿಯುಳ್ಳ ಸಹಜಾನಂದ. ಈ ಜ್ಞಾನಿ ಭಕ್ತಿ ನಿತ್ಯ ನಿಯಮ

ಮಾಡುವದುಂಟೆ? ಲಿಂಗ ನಿಷ್ಠೆ ಸಚ್ಚಿದಾನಂದ ನಿಷ್ಠೆ, ಅಖಂಡಿತ ಘನಪೂರ್ಣವಪ್ಪ ತನ್ನಿರುವಿನ ಅರುವಾಗಿಹ ನಿಷ್ಠೆ, ತನ್ನ ನಿಷ್ಠೆ, ತಾನಾರೆಂದರಿತ ನಿಷ್ಠೆ, ನಿಜನಿಷ್ಠೆಯುಳ್ಳ ನಿಜಾನಂದ ನಿಜವರಿತ ನಿರ್ಮಲಜ್ಞಾನಿಗಾದರೂ ನಿತ್ಯ ನಿಯಮವುಂಟೆ?

ಜಂಗಮ ನಿಷ್ಠೆಯಿಂದ ಬಸವರಸರು ಸ್ವಯಂ ಲಿಂಗವಾದ ಜಂಗಮನಿಷ್ಠೆ ಲಿಂಗ ಒಂದಾಗಿರ್ದ ಜಂಗಮ ಈ ಘನ ಜಂಗಮನಿಷ್ಠೆ , ಪರಾತ್ಪರ ನಿಷ್ಠೆ, ಮೂರೊಂದಾದ ನಿಷ್ಠೆ, ಸಯ ನಿಷ್ಠೆಯುಳ್ಳ ಭಕ್ತ, ಜ್ಞಾನ ಜ್ಞೇಯ ಒಂದಾದ ಭಕ್ತ, ಈ ಭಕ್ತನಿಗಾದರೂ ನಿತ್ಯ ನಿಯಮಗಳು ಕಾಣುವುದುಂಟೆ?

ಸತ್ಯವುಳ್ಳಾತಂಗೆ ತತ್ವ ವಿಚಾರದ ಹಂಗೇಕೆ? ಸತ್ಯವುಳ್ಳವರು ಯಾರು? ಪಂಚಪಾಂಡವರು ಸತ್ಯಹರಿಶ್ಚಂದ್ರ ನಳ ಮಹಾರಾಜ, ದ್ರೌಪದಿ, ಸೀತಾ, ತಾರಾ ಇವರು ಸತ್ಯವುಳ್ಳವರೆನಬೇಕೆ? ಸತ್ಯ ತಿಳಿದವರು. ಸತ್ಯವುಳ್ಳವರು ನಿತ್ಯ ಅನಿತ್ಯ ತಿಳಿದವರು ಸತ್ಯರು ಮರವರುವಿಂಗೆ ಮೀರಿದ ಘನರು ಸತ್ಯರು. ತಾವಾರೆಂದು ತಿಳಿದವರು ಸತ್ಯರು, ಸತ್ಯವೆಂದರೆ ನಿರಂತರವಾಗಿರುವ ಮಂಗಳಮಯ ಪರಮಸತ್ಯ. ಅರಿವುಡೆ ತಾನೆ. ಆರಿಗೆ ತತ್ವ ವಿಚಾರ ಸತ್ಯವಾಗಿದೆ ಅದು ತನ್ನ ತಾನರಿತ ಲಕ್ಷಣವಲ್ಲ ಅವನು ಸತ್ಯವುಳ್ಳವನಲ್ಲ, ಬೋಧವು ಆರಿಗೆ ಸತ್ಯವಾಗಿದೆ ಅವರು ತತ್ವ ವಿಚಾರದ ಹಂಗಿನಲ್ಲಿದ್ದವರು. ಆರಿಗೆ ತಾನಾರೆಂಬ ತನ್ನ ಸ್ವರೂಪ ಸತ್ಯವಾಗಿದೆ ಈ ಘನಮಹಿಮನ ದಿವ್ಯದೃಷ್ಟಿಗೆ ತತ್ವವಿಚಾರ ಕಲ್ಪಿತವಾಗಿದೆ. ಅವನು ತತ್ವವಿಚಾರವಲ್ಲ ತತ್ವವಿಚಾರಕ್ಕೆ ಬೆಳಗುವ ಜ್ಯೋತಿ ತಾನಾಗಿರುವುದರಿಂದ ಸತ್ಯವುಳ್ಳವರು ತತ್ವವಿಚಾರದ ಹಂಗಿಲ್ಲದವರು.

ಅರುವುಳ್ಳಾತಂಗೆ ಅಗ್ಘವಣಿಯ ಹಂಗೇಕೆ: ಅರುವು ಎಂದರೆ ತನ್ನೊಳಗಣ ಅರಿವು, ಈ ಅರುವು ಅರಿತ ಘನವಂತ ತನಗಿಂತನ್ಯವ ಕಾಣದ ಘನವಂತ ಅರುವರಿತು ಅರುವೆ ತಾನಾದ ಘನವಂತ ಸಚ್ಚಿದಾನಂದ ತಾನೆ ಪರಬ್ರಹ್ಮ ತಾನೆ ತನ್ನ ಹೊರ್ತು ಅನ್ಯ ಭಾವಂಗಳ ನೆನೆಯದ ಅನ್ಯದೇವತೆಗಳ ಕಲ್ಪಿಸದ ಅಕಲ್ಪಿತ ಅಚಿಂತ್ಯನೆ ತಾನಾಗಿರುವುದರಿಂದ ತನ್ನೊಳ್ ತಾನಿದ್ದ ಘನಕ್ಕೆ ಘನ ಆ ಮಹಾಂತಂಗೆ ಮಡಿನೀರು ಏಕೆ? ಪೂಜಾ ನೀರು ಏಕೆ?

ಮಡಿನೀರು, ಪೂಜಾನೀರು, ಮೀಸಲ ನೀರಿನ ಪ್ರೇಮಿಗಳೆಲ್ಲ ಲಿಂಗದೇವನನ್ನು ತಮ್ಮ ಸ್ವರೂಪಕ್ಕಿಂತ ಬೇರಾಗಿ ತಿಳಿದವರು. ಗುರು ಜಂಗಮರನ್ನು ಬೇರಾಗಿ ತಿಳಿದವರು ಇವರು ಭೇದಜ್ಞಾನಿಗಳು, ಇವರ ಅಜ್ಞಾನ ದೃಷ್ಟಿಗೆ ಲಿಂಗವು ಶಿಲೆಯಾಗಿದೆ ಜಂಗಮವು ಜಾತಿಗೊಳಪಟ್ಟಿದೆ. ಗುರುವು ಚರಿತ್ರೆ ಪುರುಷನಾಗಿಹನು, ಇದು ಕಾರಣ ಇವರುಗಳಿಗೆ ಅಗ್ಘವಣಿ ಅವಶ್ಯವಾಗಿದೆ.

ಮನ ಶುದ್ಧವುಳ್ಳವಂಗೆ ಮಂತ್ರದ ಹಂಗೇಕೆ? ಮನ ಶುದ್ಧವುಳ್ಳವರು ಮಂತ್ರ ಸ್ವರೂಪರೆ ಇರುವಲ್ಲಿ ಅವರಿಗೆ ಮಂತ್ರದ ಹಂಗೇಕೆ? ಆರು ಮಂತ್ರ ಬೇರೆ ತಾನು ಬೇರೆಂಬ ಭಾವುಕರಿಗೆ ಮಂತ್ರವು ಹಿರಿದಾಗಿ ತಾನು ಕಿರಿದಾಗಿರುವೆ ನೆಂಬುವವರೆಲ್ಲ ಮಂತ್ರದ ಹಂಗುಳ್ಳವರಾಗಿಹರು ಅವರು ಜಪ ತಪದ ಅನುಷ್ಠಾನವುಳ್ಳವರಾಗಿಹರು.

ಮಂತ್ರದ ರಹಸ್ಯವರಿತವರು ಮನ ಶುದ್ಧಾತ್ಮರು, ಮನ ಶುದ್ಧವಾಗಬೇಕಾದರೆ

ಮಂತ್ರದ ರಹಸ್ಯವನ್ನು ಬಲ್ಲವರಿಂದ ತಿಳಿವುಡೆ ಆಗ ಮನಸ್ಸು ತನ್ನ ಸಂಕಲ್ಪ ವಿಕಲ್ಪ ಸ್ವಭಾವ ಬಿಡುವದು. ಮನವೆಂದರೆ ಇಲ್ಲದ್ದು ಕಲ್ಪಿಸುವದು ಸಂಕಲ್ಪ ಇದ್ದುದ ನರಿಯದಿಹುದು ವಿಕಲ್ಪ ಈ ಮನವನ್ನು ಮಂತ್ರದ ರಹಸ್ಯ ತಿಳಿಯಲು ಹಚ್ಚಿದರೆ ಆಗ ತನ್ನ ಪೂರ್ವಸ್ವಭಾವ ಬಿಟ್ಟು ಅಕಲ್ಪಿತ ಘನವಾಗುವದು. ಇದು ಕಾರಣ ಮಂತ್ರ ರಹಸ್ಯವೆಂದಲ್ಲಿ ಪ್ರಣಮ ಮಂತ್ರವಾಗಲಿ, ಪಂಚಾಕ್ಷರಿ ಮಂತ್ರವಾಗಲಿ, ಷಡಕ್ಷರಿ ಮಂತ್ರವಾಗಲಿ, ಮಂತ್ರದ ರಹಸ್ಯ ತಿಳಿಯಲು ಇದ್ದ ಪರವಸ್ತು ಸಿದ್ಧವಾಗುವದು. ಆಗ ಇಲ್ಲದ ಮಾಯಿಕ ತತ್ವ ಇಲ್ಲವಾಗುವುಡೆ, ಮನವು ತಾನೆ ಶುದ್ಧವಾಗುವದು. ಅದಕ್ಕಾಗಿ ಅಣ್ಣ ಬಸವಣ್ಣನವರು ಮಹಾನುಭಾವರ ಸಂಗದಿಂ ದೆನ್ನ ತನು ಶುದ್ಧಿ ಮನಶುದ್ಧಿ ಭಾವಶುದ್ಧಿ, ಸರ್ವಾಂಗ ಶುದ್ಧಿ ಎಂದು ಹೇಳಿಹರು.

ಮಹಾತ್ಮರ ಮಹಾನುಭಾವವನ್ನು ಮಾನವನು ಎಲ್ಲಿಯುವರೆಗೆ ಸಂಗಮಾಡುವದಿಲ್ಲ, ಅವನು ಅಪವಿತ್ರನು. ಆರು ಸಂಗ ಮಾಡಿಹರು, ಅವರ ತನು ಪವಿತ್ರ ಮನಪವಿತ್ರ, ಭಾವಪವಿತ್ರ, ಏಕೆಂದರೆ ಮಹಾತ್ಮರ ಮಹಾನುಭಾವ ಮಂತ್ರದ ರಹಸ್ಯವನ್ನು ಸರಿಯಾಗಿ ತಿಳಿಸುವುದರಿಂದ ಇಲ್ಲದ ತನು, ಮನ, ಭಾವ, ಇಲ್ಲವಾಗಿ ಇದ್ದ ಮಂತ್ರ ಒಂದೆ ಸಿದ್ಧವಾಗುವದು ಆಗ ಎತ್ತ ನೋಡಿದಡತ್ತ ಪ್ರಣವ ಕಂಡ ಪ್ರಣವಾರೂಢರಿಗೆ ಸ್ವಭಾವತಃ ಮನಶುದ್ಧಿವುಳ್ಳವರು ಅವರಿಗೆ ಜಪದ ಹಂಗೇಕೆ? ತಪಸ್ಸಿನ ಹಂಗೇಕೆ?

ಭಾವಶುದ್ಧ ವುಳ್ಳಾತಂಗೆ ಹೂವ್ವಿನ ಹಂಗೇಕೆ: ಭಾವ ಶುದ್ಧವಾಗಬೇಕಾದರೆ ಭರಿತಭಾವಿ ಆಗಬೇಕು. ಪೂರ್ಣಭಾವಿ ಆಗಬೇಕು. ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣ ಮುದಚ್ಯತೆ ಎಂಬ ತತ್ವ ದೃಷ್ಟಿಯುಳ್ಳ ಭರಿತಭಾವ ಅವಶ್ಯಕವಾದುದು. ಇದು ಅಖಂಡ ಭಾವ, ಎಲ್ಲಿ ನೋಡಿದಡಲ್ಲಲ್ಲಿ, ಲಿಂಗಜಂಗಮ ಒಂದೆನ್ನುವ ಭಾವ ಸಚ್ಚಿದಾನಂದ ಭಾವ, ಇದು ಭಾವಲಿಂಗದ ಭಾವ ಸದ್ಭಾವ, ಇದು ಸದಮಳ ಜ್ಞಾನವುಳ್ಳ ಸುಜ್ಞಾನಿಗಳ ಭಾವ. ಇವರುಗಳೆ ಭಾವ ಶುದ್ಧವುಳ್ಳವರು. ಇವರು ಹೂವ್ವಿನ ಹಂಗು ಮೀರಿದವರು ಇವರ ಭಾವ ದೇವನಿಗೆ ಅರ್ಪಿಸುವ ಹೂವು ಆಗಿದೆ. ಸ್ಥಾವರ ಜಗವೆಂಬುದು ಲಿಂಗಮಯವಾಗಿದೆ. ಇದು ಕಾರಣ ಇವರಿಗೆ ಹೂವ್ವಿನ ಅವಶ್ಯಕತೆಯಿಲ್ಲ.

ಕೂಡಲ ಚೆನ್ನ ಸಂಗಯ್ಯ ನಿಮ್ಮನರಿದಾತಂಗೆ ನಿಮ್ಮ ಹಂಗೇಕೆ: ಕೂಡಲ ಚೆನ್ನ ಸಂಗಯ್ಯನೆಂಬದು ನಿರಂತರವಾಗಿಹ ಮಂಗಳಮಯ ಸಚ್ಚಿದ್ಘನ ಈ ಘನವಂತಂಗೆ ಕೂಡಲಚೆನ್ನ ಸಂಗಯ್ಯ ನೆಂಬುದಿಲ್ಲ. ನಾನೆಂಬುದಿಲ್ಲ, ನೀನೆಂಬುದಿಲ್ಲ, ನಾನೀನೆಂಬ ಸಂದಳಿದ ನಿಜ ನಿಲವು ಇದು ಕಾರಣ, ನಿಮ್ಮ ನರಿದವಂಗೆ ನಿಮ್ಮ ಹಂಗೇಕೆ ಎಂದು ಹೇಳಿಹರು.

**ವಚನ 30**

**ಮುಟ್ಟದ ಮುನ್ನ ಗುರು ಉಂಟು,**

**ಲಿಂಗ ಉಂಟು, ಜಂಗಮ ಉಂಟು,**
**ಮುಟ್ಟಿದ ಬಳಿಕ ಗುರುವಿಲ್ಲ, ಲಿಂಗವಿಲ್ಲ,**
**ಜಂಗಮವಿಲ್ಲ, ಕೂಡಲಚೆನ್ನಸಂಗಯ್ಯನಲ್ಲಿ**
**ಸ್ವಯವಲ್ಲದೆ ಪರವಿಲ್ಲ,**

**ತಾತ್ಪರ್ಯ:** ಮುಟ್ಟದ ಮುನ್ನ ಗುರು ಉಂಟು, ಲಿಂಗ ಉಂಟು, ಜಂಗಮ ಉಂಟು, ಮುಟ್ಟಿದ ಬಳಿಕ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಕೂಡಲಚೆನ್ನಸಂಗಯ್ಯನಲ್ಲಿ ಸ್ವಯವಲ್ಲದೆ ಪರವಿಲ್ಲ: ಪೂರ್ವಕಾಲದಲ್ಲಿ ಗುರು ಸಾಂಪ್ರದಾಯವಿದ್ದುದು ಕಂಡುಬರುತ್ತದೆ. ಇದರಲ್ಲಿ ಒಂದು ವಿಶೇಷ, ಹಸ್ತ ಮಸ್ತಕ ಸಂಯೋಗ ವಿದ್ದುದುದು ಕಂಡು ಬರುತ್ತದೆ.

ಶ್ರೀಗುರು ಶಿಷ್ಯನ ಮಸ್ತಕವ ತನ್ನ ಹಸ್ತದಿಂದ ಮುಟ್ಟುತ್ತಾನೆ. ಯತಾ ವಾಚ್ಯ ನಿವರ್ತಂತೆ ಅಪ್ರಾಪ್ಯ ಮನಸಾ ಸಹ ವಾಕ್ ದಿಂದ ಕಥನ ಮಾಡುವದು ಬ್ರಹ್ಮವಲ್ಲ, ಮನಸ್ಸಿನಿಂದ ಕಲ್ಪಿಸುವದು ಬ್ರಹ್ಮವಲ್ಲ. ಅಂಥದ್ದನ್ನು ಗುರುವಿನಿಂದ ಉಪದೇಶ ಪಡೆಯುವದು ಹೇಗೆ?

ಎಲ್ಲಿ ವಾಕ್ ಮನಸ್ಸು ಅರಿಯಲು ಅಶಕ್ತವಾಗಿವೆಯೊ? ಅದನ್ನು ಗುರಿವಿನಿಂದ ಉಪದೇಶ ಪಡೆಯುವುದು ಹೇಗೆ? ಇದನ್ನು ಭೋಧಿಸಿದ ಗುರು ಕಲಿತುಕೊಂಡ ಶಿಷ್ಯ ಅ್ಥು□ಹ್ಥ ಸಮ ಪ್ರಕಾಶಮಾನವಾದ ತತ್ವ ತಿಳಿದುಕೊಂಡಿರುವರು. ಎಲೈ ಜಿಜ್ಞಾಸುವೆ, ವಾಕ್ ಮನಸ್ಸು ನಿನ್ನಿಂದ ತಿಳಿಸಿ ಕೊಳ್ಳುವವು. ತಿಳಿಸಿಕೊಳ್ಳುವ ಅನಾತ್ಮ ನೀನು ಆಗಲಾರೆ. ಇವುಗಳಿಗೆ ಮೀರಿದ ಘನವೆ ನೀನು ನಿನ್ನನ್ನು ನೀನು ತಿಳಿ ಅರಿದರುಹಿಸಿಕೊಂಬುದಕ್ಕೂ ಮೀರಿದವನು. ನೀನು ಅರಿಯುದರುವು ನೀನಾಗಿರುವುದರಿಂದ ನಿನ್ನಿಂದ ನೀನೆ ತಿಳಿಯುವುದು. ನೆನಹು ನಿರ್ಣಯಕ್ಕೂ ಭಾವನೆಗೂ ಘನನಾಗಿರುವದರಿಂದ ನಿರ್ವಿಕಾರಿ ನಿರುಪಾಧಿ ನಿರಾಲಂಬ, ನಿಸ್ಸಂಗ ಸಚ್ಚಿದಾನಂದ ಅಖಂಡಿತ ಘನವಪ್ಪ ಪೂರ್ಣ ಪರಾತ್ಪರ ಜ್ಯೋತಿಯಾಗಿರುವದರಿಂದ ನಿನ್ನಿಂದ ನೀನು ತಿಳಿ ಎಂದು ಭೋಧಿಸಿದ ಗುರು , ಇದನ್ನು ತಿಳಿದುಕೊಂಡ ಶಿಷ್ಯ ಇವರಿಬ್ಬರು ಸಮ ಪ್ರಕಾಶ ಮಾನವಾದ ತತ್ವ ತಿಳಿದಿರುವರು.

ಈ ಸಮ ನಿಲಯ ಅರಿತವರ ನಿಲಯ, ಶಿಷ್ಯರು ಅಭೋಧಕರಾಗಿಲ್ಲ, ಗುರು ಘನ ಬೋಧಕನಾಗಿಲ್ಲ, ಇವರು ಬೋಧಾಬೋದಕಕ್ಕೂ ಮೀರಿ ನಿಂತವರು. ಮೀರಿದ ಘನತತ್ವ ತಿಳಿಯ ಹೋದವರು. ಗುರು ಸಾಂಪ್ರದಾಯ ಜ್ಞಾನ ಅಜ್ಞಾನಕ್ಕೆ ಸಮವಾಗಿಹ ಸಾಂಪ್ರದಾಯ. ಇವರು ತನ್ನ ತಾ ತಿಳಿಯ ಹೋದವರು. ಇವರ ದಿವ್ಯ ದೃಷ್ಟಿಯಲ್ಲಿ ಮುಂಚೆ ಆವುದು ಅಬೋಧವಾಗಿಲ್ಲ, ತನ್ನಲ್ಲಿ ಬೋಧಸ್ವರೂಪ ಹುಟ್ಟಿಲ್ಲವೆಂದಲ್ಲಿ ತನಗೆ ಬೋಧ ಸ್ವರೂಪವು ಎಂದು ಹೇಳುವುದು, ಅಬೋಧ ಸ್ವರೂಪನೆಂದು ಹೇಗೆ ಹೇಳುವದು. ಅನಾಮಯವಾಗಿರುವ ನಿರ್ವಾಣವೆ ತನ್ನ ಸ್ವರೂಪವೆಂದು ತನ್ನಿಂದ ತನ್ನ ಸ್ವರೂಪವದು ವೇದ್ಯವಾದಲ್ಲಿ ಅಲ್ಲಿ ಗುರುವುಂಟೆ, ಲಿಂಗವುಂಟೆ? ಜಂಗಮ ಉಂಟೆ? ಕೂಡಲಚೆನ್ನ ಸಂಗಯ್ಯನಲ್ಲಿ ಸ್ವಯವಲ್ಲದೆ ಪರವಿಲ್ಲ, ತಾನೆಂಬದು ತಾನೆ,

ತನಗೆ ತಿಳಿಯುವವನಿಲ್ಲ, ತನ್ನನ್ನು ತಿಳಿಯತಕ್ಕ ವಸ್ತುವೂ ಇಲ್ಲವೆಂದಲ್ಲಿ, ಕಾರಣವೂ ಇಲ್ಲ. ಕಾರ್ಯವೂ ಇಲ್ಲ, ಕೂಡಲಚೆನ್ನ ಸಂಗಯ್ಯನೆಂಬುದು ಚಿಂತನಕ್ಕೊಳಪಟ್ಟುದು ಎಂದು ಹೇಗೆ ಹೇಳುವುದು. ಅದು ಅಚಿಂತ್ಯವೆಂದು ಹೇಗೆ ಹೇಳಲಿ, ಏಕೆಂದರೆ ನನ್ನ ಸ್ವರೂಪಕ್ಕಿಂತ ಅನ್ಯ ಆವಾವುದು ಆಗದ್ದರಿಂದ ನಿರಂತರವಾಗಿರುವ ಮಂಗಳಮಯ ಪರಮ ಸತ್ಯವಾದುದರಿಂದ, ಅದನ್ನು ವಾಕ್ ಮನಸ್ ಬುದ್ಧಿ ಇವುಗಳಿಂದ ವಿವರಿಸುವದೆಂತು. ಇದು ಕಾರಣ ಗುರು ಘನನನ್ನು ಮುಟ್ಟಿದವರು ಶಿಕ್ಕುತ್ತಾರೆ, ಆತನಿಂದ ಹಸ್ತ ಮಸ್ತಕ ಸಂಯೋಗದಿಂದ ಮುಟ್ಟಿಸಿಕೊಂಡವರು ಶಿಕ್ಕುತ್ತಾರೆ. ಲಿಂಗವನ್ನು ಮುಟ್ಟಿದವರು ಶಿಕ್ಕುತ್ತಾರೆ, ಜಂಗಮದೇವಯ್ಯನನ್ನು ಮುಟ್ಟಿದವರು ಶಿಕ್ಕುತ್ತಾರೆ. ತನ್ನನ್ನು ಮುಟ್ಟಿದವರು ಶಿಕ್ಕುತ್ತಾರೆಯೆ?

ಗುರುಘನನು ಶಿಷ್ಯನನ್ನಾಗಿ ಮುಟ್ಟುವವರು ಉಂಟು, ಜಂಗಮ ಘನರು ಭಕ್ತನನ್ನಾಗಿ ಮುಟ್ಟುವವರು ಉಂಟು, ಶಿಷ್ಯನಾದವನು ಗುರುಪಾದವ ಮುಟ್ಟಿದವರು ಉಂಟು, ಭಕ್ತರು ಜಂಗಮಪಾದ ಮುಟ್ಟಿದವರು ಉಂಟು, ಇವರುಗಳು ತಾನಾರೆಂದರಿತು ತನ್ನ ತಾ ಮುಟ್ಟಿದವರೆನ್ನಬೇಕೆ? ತನ್ನನ್ನು ತಾ ಮುಟ್ಟಿದ ಗುರುಘನನು, ಶಿಷ್ಯನ ಮುಟ್ಟಲಿಲ್ಲ, ಶಿಷ್ಯ ತನ್ನ ತಾ ಮುಟ್ಟಿದ ಬಳಿಕ ಗುರುವೆಂದು ಮುಟ್ಟಲಿಲ್ಲ, ಜಂಗಮ ಘನನು ತನ್ನ ತಾ ಮುಟ್ಟಿದ ಬಳಿಕ ಭಕ್ತನೆಂದು ಮುಟ್ಟಲಿಲ್ಲ. ಭಕ್ತನು ತನ್ನ ತಾ ಮುಟ್ಟಿದ ಬಳಿಕ ಜಂಗಮ ಘನವೆಂದು ಮುಟ್ಟಲಿಲ್ಲ.

ತನ್ನ ತಾ ಮುಟ್ಟಿದ ಬಳಿಕ ಸ್ವಯವಲ್ಲದೆ ಪರವಿಲ್ಲ, ತನ್ನ ಹೊರ್ತು ಅನ್ಯ ಆವುದು ಇರಲಿಂಬಿಲ್ಲವಾದಲ್ಲಿ ತನ್ನ ಮುಟ್ಟಿದ ಗುರುವಿಲ್ಲ, ತನ್ನ ಮುಟ್ಟಿದ ಲಿಂಗವಿಲ್ಲ, ತನ್ನ ಮುಟ್ಟಿದ ಜಂಗಮವಿಲ್ಲ,

ಗುರು ಘನನಾದಲ್ಲಿ ತನ್ನಿಂದ ತನ್ನ ತಾ ಮುಟ್ಟಿದವರಾಗಿರುವುದು, ತನ್ನ ಮುಟ್ಟಿದವನಾದುದರಿಂದ, ಶಿಷ್ಯನ ಮುಟ್ಟುವವನಾಗಿದ್ದಾನೆ. ತನ್ನನ್ನು ಮುಟ್ಟಿದವ, ಏನನ್ನು ಮುಟ್ಟದವ. ಘನಕ್ಕೆ ಘನ, ಏನೊಂದಾಗದ ಸ್ವಮಹಿಮನು. ಆಶ್ಚರ್ಯ ಗುರುವಾದನೆ ಲಿಂಗವಾದನೇ ಜಂಗಮವಾದನೆ? ಅಂದು ಇಂದು ಎಂದೆಂದೂ ಇದ್ದಂತಿರುವ ಘನಕ್ಕೆ ಘನ ನಿರುಪಮ ನಿರಾಳ ತಾನೆ.

ತನ್ನುನ್ನು ಮುಟ್ಟುವದು? ತನ್ನಿಂದ ತನ್ನ ಮುಟ್ಟುವದು ನಿಜವ ಮುಟ್ಟಿದುದು, ಇದು ಮುಟ್ಟಬಾರದ ಮುಟ್ಟಿದುದು, ಅಸಾಧ್ಯವ ಸಾಧಿಸಿದುದು. ನೆಲೆಗೆಟ್ಟು ನಿರ್ಧರಿಸಿದುದು, ಎಂದು ಪ್ರಭುದೇವ ಬಿತ್ತರಿಸಿದಂತೆ ತಾನಾರೆಂದು ತನ್ನ ತಾ ಮುಟ್ಟಿದುದೆ ಮುಟ್ಟಬಾರದು ಮುಟ್ಟಿದಂತೆ, ಅಸಾಧ್ಯವ ಸಾಧಿಸಿದಂತೆ. ಈ ಗುರು, ಲಿಂಗ, ಜಂಗವರೆಂಬ ಭಾವ ಕೆಟ್ಟುದೆ ನೆಲೆಕೆಟ್ಟು ನಿರ್ಧರಿಸಿದಂತೆ. ಇದು ಕಾರಣ ಷಟ್ ಸ್ಥಲ ಚಕ್ರವರ್ತಿ ಚೆನ್ನ ಬಸವರಾಜರು ಮುಟ್ಟಿದ ಬಳಿಕ ಗುರುವಿಲ್ಲ ಲಿಂಗವಿಲ್ಲ, ಜಂಗಮವಿಲ್ಲ, ಸ್ವಯವಲ್ಲದೆ ಪರವಿಲ್ಲವೆಂದು ಹೇಳಿಹರು.

**ವಚನ 31**

**ಕಿಚ್ಚಿನ ಕೆಂಡದಂತೆ ಹೊರೆಯಿಲ್ಲದಿಪ್ಪೆಯಯ್ಯಾ,**

**ಬೆಂಕಿಯ ಬೆಳಕಿನಂತೆ ನೀನಿಪ್ಪೆಯಯ್ಯಾ**
**ನಿಮ್ಮ ಕಂಡ ಪರಮಜ್ಞಾನಿ ಗುಹೇಶ್ವರಾ.** ॥ **265** ॥

ತಾತ್ಪರ್ಯ: ಕಿಚ್ಚಿನ ಕೆಂಡದಂತೆ ಹೊರೆಯಿಲ್ಲದಿಪ್ಪೆಯಯ್ಯಾ: ಕಿಚ್ಚಿನ ಕೆಂಡ? ಇದು ನೋಡುವುಡೆ ಕೆಂಡವೆ, ಕೆಂಡ ಪ್ರಜ್ವಲಿಸುವದು. ಪ್ರಜ್ವಲಿಸುವ ಕೆಂಡದಲ್ಲಿ ಭಾರವಾದ ಕಟ್ಟಿಗೆಗಳು ಇವೆಯಾ? ಇದ್ದಲ್ಲಿ ಪ್ರಜ್ವಲಿಸುವ ಕೆಂಡವಾಗದು. ಬೆಂಕಿಯ ಬೆಳಕಿನಂತೆ ನೀನೆಪ್ಪೆಯಯ್ಯಾ ಬೆಂಕಿ ಬೆಳಕನ್ನು ವಿಭಾಗಿಸಲು ಬರುವುದೆ? ನುಡಿಯಲ್ಲಿ ಬೆಂಕಿ ಬೆಳಕು ಅನ್ನಬಹುದಲ್ಲದೆ, ತಿಳಿದು ನೋಡುವುಡೆ ಬೆಂಕಿ ಆವುದು, ಅದು ಬೆಳಕು. ಬೆಳಕಾವುದು ಅದು ಬೆಂಕಿಯಾಗಿದೆಯಲ್ಲ. ಇದನ್ನು ಕಂಡ ಕಣ್ಣು ಪರಮಜ್ಞಾನಿ ಕಿಚ್ಚಿನ ಕೆಂಡದ ಘನವು ಕಂಡಿದೆ. ಬೆಂಕಿಯ ಬೆಳಕಿನ ಘನವು ಕಂಡಿದೆ. ಕಂಡ ಕಣ್ಣು ಇದು ವರ್ಣಿಸಲಳವಲ್ಲವೆಂದು ಮೌನ ಮುದ್ರೆ ಧರಿಸಿದುದು ಆರು ನೋಡರು. ಕಿಚ್ಚಿನ ಕೆಂಡದಂತೆ ಹೊರೆಯಿಲ್ಲದಿಪ್ಪೆಯಯ್ಯ, ಲಿಂಗಾಂಗ ಸಮರಸ ಜ್ಞಾನವುಳ್ಳ ಜ್ಞಾನಾಗ್ನಿಯೆ ಕಿಚ್ಚಿನ ಕೆಂಡದಂತೆ ಹೊರೆಯಿಲ್ಲದಿಪ್ಪ ಪರಮ ಜ್ಞಾನ, ಈ ಪರಮಜ್ಞಾನ ನಾಮ ರೂಪವೆಂಬ ಸ್ಥಾವರ ಜಂಗಮ ಜಗದ ಹೊರೆಯಿಲ್ಲದಿಪ್ಪೆಯಯ್ಯ.

ಅಸ್ತಿ ಭಾತಿ ಎಂಬ ಎನ್ನ ಸತ್ಯದಲ್ಲಿ ನಾಮ ರೂಪ ಹುಸಿ ಎಂತು ಜನಸಿತೆಂದು ಅರಿಯೆನಯ್ಯ ಸಚ್ಚಿದ್ಘನವೆಂಬ ಸತ್ಯ ಈ ಸದ್ವಸ್ತುವಿನ ಘನವನಾರು ಬಲ್ಲರು? ಸಚ್ಚಿದಾನಂದವೆಂದು ಪುನಃ ಪುನಃ ಅನ್ನುವವರುಂಟು, ಉಪದೇಶ ಮಾಡುವವರುಂಟು, ಮಾಡಿದುದನ್ನು ಶ್ರವಣ ಮನನ, ನಿಧಿಧ್ಯಾಸ ಮಾಡುವವರುಂಟು. ಸದ್ವಸ್ತುವನರಿತು ಅದುವೆ ಆದವರುಂಟೆ? ಸಚ್ಚಿತ್ ಘನವೆಂಬ ತತ್ವ ಬಲ್ಲವರ ಜ್ಞಾನವೆ ಕಿಚ್ಚಿನಕೆಂಡದಂತೆ. ಅವರದು ಮರವರುವೆಂಬ ಗಜಿಬಿಜಿ ಕಾಣದ ಜ್ಞಾನ ಎತ್ತ ನೋಡಿದಡಿತ್ತತ್ತ ಸಚ್ಚಿದಾನಂದ ಸಿದ್ಧವಾದ ಜ್ಞಾನ. ಅದು ಸತ್‌ದ ಸತ್ ಚಿತ್ತದ ಚಿತ್ ಆನಂದದ ಆನಂದ, ನಿತ್ಯದ ನಿತ್ಯ, ಪೂರ್ಣದ ಪೂರ್ಣವಾದುದರಿಂದ ಅರುವಿನ ಅರುವು ಇದು ಜ್ಞಾನಾಗ್ನಿ.

ಇದು ಮರವರುವೆಂಬ ಭ್ರಾಂತಿಯ ಸುಡುವ ಪ್ರಚಂಡಜ್ಞಾನ, ಇಲ್ಲಿ ದೃಶ್ಯದ ಭ್ರಾಂತಿಯ ನಷ್ಟವಾದುದಲ್ಲದೆ ದೃಕ್ ನಾನೆನ್ನುವ ಭ್ರಾಂತಿಯ ನಿರಸನ ಮಾಡುವದಾಗಿದೆ. ಇದು ನುಡಿಗೊಳಪಡದೆ ನಡೆಗೆ ಮೀರಿದ ಘನವಾದುದರಿಂದ ನುಡಿ ನಡೆಯ ಹೊರೆಯಿಲ್ಲದಿಪ್ಪ ಜ್ಞಾನ. ನುಡಿದು ಹೇಳುವ ಮಹಾವಾಕ್ಯಗಳ ಹಂಗಿಲ್ಲದ ಜ್ಞಾನ, ಸವಿಕಲ್ಪ ಸಮಾಧಿ ನಿರ್ವಿಕಲ್ಪ ಸಮಾಧಿಯೆಂಬ ಹೊರೆಯಿಲ್ಲದಿಪ್ಪ ಜ್ಞಾನ. ಪರಮಜ್ಞಾನ ಕಿಚ್ಚಿನ ಕೆಂಡದಂತೆ ಇದರ ಘನವು ಹೃದಯಕ್ಕೆ ವೇದ್ಯವಲ್ಲದೆ ನುಡಿಗಿಂಬಿಲ್ಲ. ನಡೆಗೆ ಎಡೆಯಿಲ್ಲ ನೋಡಾ.

ಬೆಂಕಿಯ ಬೆಳಕಿನಂತೆ ನೀನೆಪ್ಪೆಯಯ್ಯ, ಜ್ಞಾನ, ಜ್ಞೇಯ ಒಂದಾದ ನಿಲವು ಬಸವರಸರದು ಪ್ರಭುದೇವರದು. ಇದು ಉಪಮಿಸದ ನಿಲವು ಇದನ್ನು ವಿವರಿಸಲು ಶಬ್ದಮೀಸಲು, ಭಾವಕ್ಕಿಂಬಿಲ್ಲ ನೋಡಾ ಬೆಂಕಿಯ ನೋಡಲು ಹೋದ ಕಂಣಿಂಗೆ ಬೆಂಕಿಯ ಬೆಳಕು ಕಂಡು ಕಣ್ಣು ಮೌನ ಧರಿಸಿತ್ತು.

ನಿರಂತರವಾಗಿರುವ ಮಂಗಳಮಯ ಪರಮಸತ್ ಎಂಬ ಜ್ಞಾನರೂಪಿ ಬೆಂಕಿ

ಅರಿದು ನೋಡುವುಡೆ ನಿರಂತರವಾಗಿರುವ ಮಂಗಳಮಯ ಪರಮಸತ್ ಸ್ವರೂಪತಾನೆ. ಬ್ರಹ್ಮಾಂಡದೊಳಗಿದ್ದರೂ ಬ್ರಹ್ಮಾಂಡವಾಗದವನು ಅವಯವಂಗಳಲ್ಲಿದ್ದರೂ ನಿರವಯನಾಗಿರುವದರಿಂದ ನಿಸ್ಸಂಗ ಘನನೆಂದಿಹರು.

ಓ ನಿರಾಲಂಬ ಲಿಂಗವೆ ನೀನು ಆವಾವುದಕ್ಕೂ ಅಂಟದೆ, ತಟ್ಟದೆ ಮುಟ್ಟದೆ ನೀನಿರ್ದೆಯಲ್ಲ. ನಿನ್ನಳವು ಅದನೆಂತುಸುರುವುದು ಇದು ಕಾರಣ ನೀನು ವಾಙ್ಮನೋತೀತವಾಗಿರುವದರಿಂದ ಶೃತಿ ಮೌನ ಧರಿಸಿದವಲ್ಲವೆ? ಲಿಂಗ ಸಚ್ಚಿದಾನಂದ ಇದ್ದಂತಿರುವ ಅಖಂಡ, ಅಚಿಂತ್ಯ ಇದನೆಂತು ಉಸುರುವುದು, ಇದುವೆ ಆಯತ ಸ್ವಾಯತ ಸನ್ನಿಹಿತವಾದುದು. ಗುರುಕೃಪೆಯಿಂದ ಆಯತ ಸ್ವಾಯತ ಸನ್ನಿಹಿತ ಸುಖವ ಕಂಡುದು ನೋಡಾ.

ಗುರು ತೋರಿದ ಲಿಂಗವೆ ನಿರಂತರ ಭಕ್ತನ ಅಂಗದ ಮೇಲೆ ನಿವಾಸವಾದುದರಿಂದ ಆಯತ ಇದನ್ನು ಅರಿಯಹೋಗಿ ಲಿಂಗವೆಂಬುದು ತನ್ನ ಅಧೀನದಲ್ಲಿರುವ ಅರುವಿನ ಅರುವು ಈ ಅರುವಿನ ಅರುವು ಕರಿಗೊಂಡಡೆ ಸ್ವತಃ ಸಿದ್ಧವಾದ ಸನ್ನಿಹಿತವು ನೋಡಾ.

ಅನುವ ಕಂಡೆ, ಗುರು ತೋರಿದ ಲಿಂಗದಿಂದ ಅನುವ ಕಂಡೆನೆಂದು ಹೇಳಿದಾಗ ಲಿಂಗವದು ಅನವು ತನ್ನ ಅನುವು ಗುರುವಿನ ಅನುವು, ವಾಙ್ಮನೋತೀತ ವಾಗಿಹ ಅರುವು, ಶಬ್ದಮುಗ್ಧವಾಗಿಹ ಅನುವು ತನ್ನಿಂದ ತನ್ನ ನೋಡುವ ಅನುವು, ಇದುವೆ ನಿಶ್ಚಿಂತವಾಗಿಹ ನಿರಾಳ ಸ್ವರೂಪ, ಈ ಸ್ವರೂಪವೆ ತನ್ನ ಇರವು. ಇದುವೆ ತಾನು ಸಂಪಾದಿಸುವ ಸಂಪತ್ತು. ಸಮ ಸುಖದ ಸಂಪತ್ತು ಜ್ಞಾನ ಸಂಪತ್ತು ಗುರು ಕರುಣಿಸಿದ ಕರುಣಾಮೃತ, ಈ ಕಾರುಣ್ಯ ಘನವೆ ಹೊರಗೆ ಕಂಗೊಳಿಸುವ ಆಯತ ರೂಪಿ ಇಷ್ಟಲಿಂಗ, ಒಳಗೆ ಅರುವ ಅರಿಯಹೋಗಿ ತನ್ನೊಳ ಸ್ವಾಯತವಾಗಿಹ ಪ್ರಾಣಲಿಂಗ ಇದುವೆ ಒಳ ಹೊರಗೆನ್ನದೆ ಸ್ವತಃ ಸಿದ್ಧವಾಗಿಹ ಘನವು ತಾನೆ, ತಾನೆ ತನ್ನ ಕಂಡುದೆ ಸುಖವ ಕಂಡೆನೆಂದು ಹೇಳಿಹರು.

ಅರಿದರಿದು ಮರಹ ಮರೆದೆ ಕುರುಹಿನ ಮೋಹ ಮೊರೆಗೆಡದೆ ಚೆನ್ನಮಲ್ಲಿಕಾರ್ಜುನ ನಿಮ್ಮನರಿದು ಸೀಮೆಗೆಟ್ಟೆ. ಅಕ್ಕ ಘನವ ಕಂಡು ಅರಿದರಿದು ನೋಡಿದೆಯಾ, ಅನುವ ಕಂಡೆಯಾ, ಇದಾರ ಅನುವ ಕಂಡೆ, ನಿನ್ನಿಂದ ನಿನ್ನ ಸ್ವರೂಪ ಕಂಡೆಯಾ, ಇದುವೆ ಸಕಲ ನಿಃಕಲವಾಗಿಹ ಇದು ಎರಡೊಂದಾದ ನಿಲವು ನೋಡಿದ ಕಣ್ಣು ನುಡಿದಿಲ್ಲ, ಅದು ಇದ್ದಂತಿರುವ ಕಣ್ಣು ಹೇಗೋ ಹಾಗೆ, ನಿರಂತರವಾಗಿಹ ಮಂಗಳಮಯ ಸಚ್ಚಿದ್ಘನ, ಅರಿದು ನೋಡುವುಡೆ ಏನೊಂದೆನಲಿಲ್ಲದ ಅರಿಯದರುವು ನೋಡಾ. ಅರಿಯದರುವು ಅದು ನಿರಂತರವಾಗಿರುವ ಮಂಗಳಮಯ ಪರಮಸತ್ಯವು ಇದು ಬೆಂಕಿಯ ಬೆಳಕಿನಂತೆ ನೀನಿಪ್ಪೆಯಯ್ಯ, ಇದು ಕಾರಣ ನಿಮ್ಮ ಕಂಡ ಪರಮಜ್ಞಾನಿ ಗುಹೇಶ್ವರಾ.

ಪರಮಜ್ಞಾನಿ ಯಾರು? ನಿಮ್ಮ ಕಂಡವರೆ ಪರಮಜ್ಞಾನಿ, ಗುಹೇಶ್ವರನ ಕಂಡವರೆ ಪರಮಜ್ಞಾನಿಗಳು ಈ ದೇಹರೂಪಿ ಗುಹೆಯಲ್ಲಿರುವ ಈಶ್ವರರೂಪಿ ಪರಂಜ್ಯೋತಿ

ಸ್ವಯಂಜ್ಯೋತಿ ಕಂಡವರೆ ತನ್ನ ಕಂಡವರು ಇವರೆ ಪರಮಜ್ಞಾನಿಗಳು. ಈ ಮಹಾಂತ ಕಿಚ್ಚಿನ ಕೆಂಡದಂತೆ ಬೆಂಕಿಯ ಬೆಳಕಿನಂತೆ, ಇದು ಕಾರಣ ನಿಮ್ಮ ಕಂಡವ ತನ್ನ ಕಂಡವ. ತನ್ನ ಕಂಡವ ನಿಮ್ಮ ಕಂಡವ. ಎಲ್ಲೆಲ್ಲೂ ಕಾಣದುದ ಕಂಡುದರಿಂದ ಪರಮಜ್ಞಾನಿ ಗುಹೇಶ್ವರ ಎಂದು ಹೇಳಿಹರು.

**ವಚನ 32**

**ಘನವ ಕಂಡೆ, ಅನುವ ಕಂಡೆ,**
**ಆಯತ , ಸ್ವಾಯತ, ಸನ್ನಿಹಿತ ಸುಖವ ಕಂಡೆ,**
**ಅರಿದರಿದು ಮರಹ ಮರದೆ ಕುರುಹಿನ**
**ಮೋಹ ಮೊರೆ ಗೆಡದೆ ಚೆನ್ನಮಲ್ಲಿಕಾರ್ಜುನ**
**ನಿಮ್ಮನರಿದು ಸೀಮೆಗೆಟ್ಟೆ.**

**ತಾತ್ಪರ್ಯ:** ಘನವ ಕಂಡೆ, ಅನುವ ಕಂಡೆ, ಆಯತ, ಸ್ವಾಯುತ, ಸನ್ನಿಹಿತ ಸುಖವ ಕಂಡೆ: ಲಿಂಗಪೂಜಿಸುವ ಲಿಂಗಾರ್ಚಕರು ಲಿಂಗವ ಕಂಡರೂ ಇದು ಗುರು ಕರುಣಿಸಿದ ಅನುವರಿತು ಲಿಂಗನೋಡಿ ಘನವ ಕಂಡೆ ಅನುವ ಕಂಡೆನೆಂದು ನುಡಿದುದುಂಟೆ? ಅಕ್ಕನ ದೃಷ್ಟಿಗೆ ಇಷ್ಟಲಿಂಗ ಘನವಾಗಿ ಕಂಡಿದೆ. ಸ್ವರೂಪವಾಗಿ ಕಂಡಿದೆ, ಘನವೆಂದರೆ ನಿರೂಪ ಘನ ನಿಸ್ಸಂಗ ಘನ, ನಿರಾಲಂಬ ಘನ, ಸಚ್ಚಿದಾನಂದ ಘನ, ಓಹೋ, ಈ ಘನವು ಇದ್ದಂತಿರುವ ಘನ, ಅಖಂಡ ಘನ, ಅಚಿಂತ್ಯವ ಕಂಡೆ ಎಂದಿಹಳೆಂದಲ್ಲಿ ಅಕ್ಕ ಲಿಂಗಯ್ಯನ್ನನು ರೂಪಾಗಿ ಕಾಣಲಿಲ್ಲ. ಅರೂಪವಾಗಿ ಕಾಣಲಿಲ್ಲ. ರೂಪಾರೂಪಕ್ಕೆ ಬೆಳಗುವ ಜ್ಯೋತಿಯಾಗಿ ಕಂಡುದರಿಂದ ಘನವ ಕಂಡೆನೆಂದಿಹಳು.

ಲಿಂಗಯ್ಯ ನಿಸ್ಸಂಗ ಘನ, ಜಗಭರಿತನಾಗಿದ್ದರೂ ಜಗವ ಹೊದ್ದದವನಾದುದರಿಂದ ನಿಸ್ಸಂಗ ಘನ, ಗುಣದೊಳಿಗಿದ್ದರೂ ಗುಣವ ಹೊದ್ದದವ ಪಿಂಡದೊಳಗಿದ್ದರೂ ಪಿಂಡವಾಗದವನು. ಅನುವ ಕಂಡೆನೆಂದು ಹೇಳಿದುದು. ಅದನಾರವ್ವಾ ವರ್ಣಿಸುವದು. ಈ ಅನುವ ಕಂಡು ಮರಹ ಮರೆದೆಯಾ, ಅಕ್ಕ ಗುರು ಕರುಣಿಸಿದ ಕಾರುಣ್ಯ ಕರಕಮಲದಲ್ಲಿ ಪ್ರಜ್ವಲಿಸುವ ಪರಂಜ್ಯೋತಿ, ಇದನರಿಯ ಹೋಗಿ ಅದುವೆ ನೀನೆ ಅದೆಯಾ, ಇದರಿಂದ ಮರಹ ಮರದೆಯಾ, ಓಹೋ ಗುರು ಕೊಟ್ಟ ಜ್ಞಾನ ಇದುವೆ ಲಿಂಗವಾಗಿ ಅಂಗೈಯಲ್ಲಿ ನಿವಾಸಿಸಿದೆಯಾ, ಅಜ್ಞರಿಗೆ ಕುರುಹಾಗಿ ಕಂಣಿಲ್ಲದಾದರೂ, ಸುಜ್ಞರು, ಅರಿಯ ಹೋಗಿ ಅರುವಿನ ಅರುವಾಗಿ ನಿಂದಿತ್ತಲ್ಲ, ಅದುವೆ ನಿನ್ನಯ ನಿಜದ ನಿವಾಸವಾಯಿತೆ? ಅಕ್ಕ ಗುರು ಕರುಣಿಸಿದ ಅರುವಿನ ಅರುವಾಗಿ ಅರಿಯ ಹೋದೆಯಾ, ಅಹುದು, ನಿನ್ನ ಅಪ್ರತಿಮ ಸಾಹಸ, ನೀನು ಅಸಾಧ್ಯವ ಸಾಧಿಸಿದ ಮಹಾಶಕ್ತಿ. ಮಹದರುವಿನ ಅರುವು ಪರಮಜ್ಞಾನಿ.

ಅಕ್ಕ! ನಿನ್ನದು ತತ್ವ ದೃಷ್ಟಿ. ಕಲ್ಪಿತಳಾಗಿ ಅರಿಯ ಹೋಗಲಿಲ್ಲ. ಭಾವಿಕಳಾಗಿ ಭಾವಿಸಲಿಲ್ಲ. ಚಿಂತನಕ್ಕೆಡೆಗೊಡದೆ ಅಚಿಂತ್ಯವೆ ನೀನಾಗಿ ಮರಹಮರೆದೆಯಾ, ಅಕ್ಕ ನೀ ಮರೆದ ಮರಹು ಅದಾರು ತಾಯೆ ಹೀಗೆಯೆ ಎಂದು ವರ್ಣಿಸುವದು! ಸೀಮಿತ ದೃಷ್ಟಿಯುಳ್ಳವರು, ನಿನ್ನ ಮರೆದ ಮರಹು ಅದನೆಂತು ಅರಿವುದು.

ಲಿಂಗಪತಿ ಶರಣಸತಿ ಆನು ಎಂಬುದು ಮರದ ಮರಹು. ಏನಿದು! ನಿನ್ನ ಸೀಮಾತೀತ ನಿಲವು. ಇದು ನೆಲೆಯಿಲ್ಲದ ನಿಲವು. ಅಪ್ರಮಾಣ ಅಗಮ್ಯ ಲಿಂಗವ ಅರಿದರಿದುದರಿಂದ ಕುರುಹಿನ ಮೋಹ ಮೊರೆಗೆಡದೆ ಚೆನ್ನ ಮಲ್ಲಿಕಾರ್ಜುನ ನಿಮ್ಮ ನರಿದು ಸೀಮೆಗೆಟ್ಟೆ,

ಅಕ್ಕ ಗುರುತೋರಿದುದಕ್ಕೆ ತೋರಬಾರದ ಘನಲಿಂಗವೆಂದರಿದಳು. ಚೆನ್ನ ಮಲ್ಲಿಕಾರ್ಜುನನೆಂದರಿದು ಸೀಮೆಗೆಟ್ಟಳು. ಇಷ್ಟಲಿಂಗವೆಂಬುದು ಅನುಪಮ ಲಿಂಗ, ಅಖಂಡಿತ ಲಿಂಗ, ಅಚಲಿತ ಲಿಂಗ, ಈ ಅಪ್ರತಿಮ ಅಗಮ್ಯವರಿತವರು ಸೀಮೆಗೆಟ್ಟವರು, ಅಚಿಂತ್ಯದಿರುವೆ ತಮ್ಮಯ ಇರುವಿನ ಅರುವಾದವರು ಕಾಯಾನುಭಾವಿಗಳಲ್ಲ ಪ್ರಣಾನುಭಾವಿಗಳಲ್ಲ ಜೀವಾನುಭಾವಿಗಳಲ್ಲ ಲಿಂಗವರಿತ ಸರ್ವಾಂಗ ಲಿಂಗಿಗಳು. ಇದು ಕಾರಣ ಅಖಂಡಿತ ಘನಪೂರ್ಣವಪ್ಪ ಲಿಂಗವೆ ತಮ್ಮ ಇರುವುಳ್ಳ ಅರುವಿನರುವಾದುದರಿಂದ ನಿಜ ಲಿಂಗೈಕ್ಯರು ಉಪಮೆಗೆ ನಿಲುಕದವರಾಗಿ ತನು ನಷ್ಟ. ಮನ ನಷ್ಟ. ಭಾವ ನಷ್ಟ. ನೆನಹು ನಷ್ಟ ಜ್ಞಾನ ನಷ್ಟವಾದುದರಿಂದ ಆವಾವುದ ಅರಿಯಲಿಲ್ಲ. ಅರಿಯದರುವೆ ತಾನಾಗಿ ಸೀಮೆಗೆಟ್ಟೆ ಎಂದಿಹಳು.

**ವಚನ 33**

**ಅಂತರಂಗ ಸನ್ನಿಹಿತ, ಬಹಿರಂಗ ನಿಶ್ಚಿಂತವೋ ಅಯ್ಯಾ,**
**ತನು ತನ್ನ ಸುಖ, ಮನ ಪರಮ ಸುಖವೊ,**
**ಇದು ಕಾರಣ ಕಾಯ ವಾಯುವೋ,**
**ಗುಹೇಶ್ವರಾ ನಿರಾಳವೊ? ಅಯ್ಯಾ. ॥ 307 ॥**

ತಾತ್ಪರ್ಯ: ಅಂತರಂಗ ಸನ್ನಿಹಿತ ಬಹಿರಂಗ ನಿಶ್ಚಿಂತವೋ ಅಯ್ಯ: ಅಂತರಂಗ? ಇದಾರ ಅಂತರಂಗ! ಇದು ಶರಣನ ಅಂತರಂಗ ಸ್ವಾನುಭವ ಪರಮಸಿದ್ಧಿಯುಳ್ಳ ಅಂತರಂಗ, ಲಿಂಗದರುವಿನಿಂದ ಸಿದ್ಧವಾದ ಅಂತರಂಗ. ಅಂತರಂಗವದು ಸಚ್ಚಿದಾನಂದ ಜ್ಞಾನದಿಂದ ಸಿದ್ಧವಾದುದು. ಅದು ಪರಾನಂದ ಪರಮಾಮೃತ ಪರಾತ್ಪರ ಏನೊಂದೆನಲಿಲ್ಲದ ಅರುವಾಗಿಹ ಅಂತರಂಗ ಇದು ಗುಹೇಶ್ವರ ಪ್ರಜ್ವಲಿಸಿಹ ಅಂತರಂಗ ಅಪ್ರತಿಮ ಲಿಂಗವರಿತು ಅಚಲಾನಂದಮಯವಾಗಿಹ ಅಂತರಂಗ.

ಬಹಿರಂಗ ನಿಶ್ಚಿಂತವೋ ಅಯ್ಯ, ಶರಣನ ಕಾಯ ಒಳಗೂ ಶುದ್ಧ ಹೊರಗೂ ಶುದ್ಧ. ಶುದ್ಧ, ಸಿದ್ಧ ಪ್ರಸಿದ್ಧ ಪ್ರಸಾದವನರಿದು ಅದುವೆ ಆಗಿಹ ಕಾಯ. ತೆರಹಿಲ್ಲದ ಘನದ ಕಾಯ. ಅದಕ್ಕೆ ಕಾಯ ಎನಬೇಕೆ? ಅಥವಾ ವಾಯು ಏನಬೇಕೆ? ಅದು ನಿರಾಳ ಸ್ಫಟಿಕದ ಘಟದಂತೆ ಒಳಹೊರಗೆನ್ನದೆ ಪ್ರಜ್ವಲಿಸುವ ಚಿತ್ಕಾಯವಾದುದರಿಂದ ಬಹಿರಂಗ ನಿಶ್ಚಿಂತವೋ ಅಯ್ಯ.

ಅಂತರಂಗ ಶರಣನದು, ಗುಹೇಶ್ವರನ ನಿಜನಿವಾಸವಾಗಿಹ ಅಂತರಂಗ ಸಚ್ಚಿದಾನಂದದ ಅಂತರಂಗ ಅಖಂಡಾನಂದದ ಅಂತರಂಗ ಪೂರ್ಣಾನಂದ ಮಯವಾಗಿಹ ಅಂತರಂಗ, ಇದು ಕಾರಣ ಮಹಾಂತನ ಬಹಿರಂಗವದು ನಿಶ್ಚಿಂತ.

ಬಾಹ್ಯದೃಷ್ಟಿ ಬಾಹ್ಯಭಾವ, ಬಾಹ್ಯಜಗತ್ತು, ಅದು ನಿಶ್ಚಿಂತವಾಗಿಹ ನಿರಾಮಯ. ಮಹಾಂತನ ಬಾಹ್ಯದೃಷ್ಟಿ, ಸಚ್ಚಿದಾನಂದ ದೃಷ್ಟಿ, ಸಚ್ಚಿದಾನಂದ ಭಾವ, ನೋಟವದು ಲಿಂಗನೋಟ, ಸ್ಥಾವರ ಜಂಗಮ ಜಗವದು, ಸಚ್ಚಿದಾನಂದ ದೃಷ್ಟಿ, ಸಚ್ಚಿದಾನಂದ ಭಾವ, ನೋಟವದು ಲಿಂಗನೋಟ, ಸ್ಥಾವರ ಜಂಗಮ ಜಗವದು ಸಚ್ಚಿದಾನಂದವಾದುದರಿಂದ ಅದು ನಿಶ್ಚಿಂತದ ನಿಜಾಲಯ.

ಮಹಾಂತನ ಬಹಿರದೃಷ್ಟಿ ಅದು ದಿವ್ಯ ದೃಷ್ಟಿ, ಅಲ್ಲಿ ಸತ್ತವರಿಲ್ಲ ಬದುಕಿದವರಿಲ್ಲ, ತನ್ನವರಿಲ್ಲ ಅನ್ಯರಿಲ್ಲ, ಇಹ ಪರವೆಂಬುದಿಲ್ಲ, ಪುಣ್ಯಪಾಪವಿಲ್ಲಾಗಿ ಅಹುದಾದುದಿಲ್ಲ, ಅಲ್ಲಾದುದಿಲ್ಲ, ಅಂದು ಇಂದು ಎಂದೆಂದೂ ಇದ್ದಂತಿರುವ ಮಂಗಳಮಯ ಲಿಂಗಸ್ವರೂಪ ಅದರ ಹೊರ್ತು ಅನ್ಯ ಆವುದು ಇಲ್ಲವೆಂಬುದು ದಿಟವಾದುದರಿಂದ ಶರಣನ ಬಹಿರಂಗ ನಿಶ್ಚಿಂತದ ನಿಜ ನಿವಾಸ ಅದು ಪರಮಾನಂದಮಯ.

ತನು ತನ್ನ ಸುಖ, ಮನ ಪರಮಸುಖ ಇದು ಕಾರಣ ಕಾಯವಲ್ಲಾ ವಾಯು ವಾಯುವಲ್ಲ, ಶರಣ ಲಿಂಗವರಿತು ಲಿಂಗಾಂಗಿಯಾಗಿಹ ಘನಾಂಗಿಯ ಕಾಯವ ಕಾಣಬಾರದು. ಶರಣನ ತನು ತನ್ನ ಸುಖ, ಈ ಸುಖಕ್ಕೆ ಅದಾವ ಸುಖವೆನಬೇಕು? ಶರಣ ಸ್ವಸುಖಿಯಾದುದರಿಂದ ವಿಷಯ ಸುಖಿ ಅವಿಷಯ ಸುಖಿ ಎಂದು ಹೇಗೆ ಹೇಳುವುದು. ಅನಿತ್ಯ ಸುಖಿ ನಿತ್ಯಸುಖಿ ಎಂದು ಹೇಗೆ ಹೇಳುವುದು. ಸುಖವೆ ತನ್ನ ತನುವಾದ ಮಹಾಂತ ಅಖಂಡಿತ ಘನ ಪೂರ್ಣವಪ್ಪ, ಲಿಂಗವೆ ತನ್ನ ತನುವೆಂದರಿದ ಮಹಾಂತ. ಈ ಮಹಾಂತನ ತನು ಅದಾರಿಗೆ ? ನರರಿಗಿಲ್ಲ ಸುರಾಸರರಿಗಿಲ್ಲ, ರುದ್ರಗಣ ದೇವಗಣ, ಪ್ರಮಥಗಣ, ಇವರಿಗಾದರೂ ಶರಣನ ತನು ಉಂಟೆ? ನಿತ್ಯರು ಸತ್ಯರು, ಮುಕ್ತರು ಎಂದು ಹೇಳಿದ ಚಿದಹಮ್ಮಿನವರಿಗಾದರೂ ಶರಣರ ತನು ಉಂಟೆ?

ಶರಣರ ತನು ಸ್ವತಂತ್ರ ತನು, ಎರವಲವಾಗಿ ಪ್ರಾಪ್ತಿಮಾಡಿಕೊಂಡ ತನುವಲ್ಲ. ಇದು ಸ್ವತಃ ಸಿದ್ಧವಾದ ಸ್ವಪ್ರಕಾಶದ ತನು, ನಿರಂತರವಾಗಿರುವ ಮಂಗಳಮಯ ಸಚ್ಚಿದ್ಘನವಾಗಿಹ ತನು, ಈ ತನು ಶರಣರ ತನುವಾದುದರಿಂದ ತನು ತನ್ನ ಸುಖವೆಂದು ಹೇಳಿಹರು. ಮನ ಪರಮಸುಖ, ಮನವೆಂಬುದು ಈ ತನುವ ಅರಿದರಿದು ನೋಡಿದುದರಿಂದ ಮನವದು ಪರಮಸುಖ ಮನವದು ಅಕಲ್ಪಿತ ಘನವಾದುದರಿಂದ ಪರಮಸುಖ, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನವಾದುದರಿಂದ ಅದು ಅಚಿಂತ್ಯಾತ್ಮವು ಇದು ಕಾರಣ ಮನ ಪರಮಸುಖವೆಂದು ಹೇಳಿಹರು. ಇದು ಸವೆಯದ ಸುಖವು ಅಚ್ಚ ಸುಖದ ಸುಖವು ಆದುದರಿಂದ ಮನವು ಪರಮಸುಖವೆಂದು ಹೇಳಿಹರು.

**ವಚನ 34**

**ಅಂಗದ ಮೇಲೆ ಲಿಂಗ, ಲಿಂಗದ ಮೇಲೆ ಅಂಗವಿದೇನೊ?**
**ಮನದ ಮೇಲೆ ಅರಿವು ಅರುವಿನ ಮೇಲೆ ಕುರುಹು ಅದೇನೊ?**

**ನೀನೆಂಬಲ್ಲಿ ನಾನು ನಾನೆಂಬಲ್ಲಿ ನೀನು, ನಾನೀನೆಂಬುದಕ್ಕೆ**
**ತೆರಹಿಲ್ಲ ಗುಹೇಶ್ವರಾ. ॥ 310 ॥**

**ತಾತ್ಪರ್ಯ:** ಅಂಗದ ಮೇಲೆ ಲಿಂಗ, ಲಿಂಗದ ಮೇಲೆ ಅಂಗವಿದೇನೊ? ಓ ಅಣ್ಣಯ್ಯಗಳಿರಾ, ಅಂಗದ ಮೇಲೆ ಲಿಂಗ ಎನ್ನುವಿರಿ? ಅಂಗವನ್ನು ತಿಳಿದು ಅಂಗದ ಮೇಲೆ ಲಿಂಗ ಆನ್ನುವಿರೊ? ಅಥವಾ ಲಿಂಗವ ತಿಳಿದು ಲಿಂಗವೆನ್ನುವಿರೊ?

ಅಂಗವೆಂಬುದು ಶರೀರವೆಂದು ತಿಳಿದಲ್ಲಿ ಲಿಂಗವದು ಪೀಟಗಕ್ಕೆ ಕಂತಿ ಧರಿಸಿದ ಲಿಂಗಕ್ಕೆ ಲಿಂಗವೆಂದು ತಿಳಿದಿರುವಿರಾ? ಇದುವೆ ನಿಮ್ಮಯ ಅರುವಾದಲ್ಲಿ ಅಂಗವು ಜಡ ಲಿಂಗವು ಜಡ. ಜಡಕ್ಕೆ ಜಡವು ಕಟ್ಟಿದರೆ ಜಡ ಬುದ್ಧಿ ಹೋಗಬಹುದೆ? ಇದರಿಂದ ದೇಹ ತಾನೆನ್ನುವ ಬುದ್ಧಿ ನಷ್ಟವಾಗಬಹುದೆ? ಲಿಂಗವರಿತ ಲಿಂಗೈಕ್ಯರಾಗರು. ಅಂಗದ ಮೇಲೆ ಲಿಂಗ ಎನ್ನುವವರು. ಲಿಂಗದ ಮೇಲೆ ಅಂಗ ಎನ್ನುವವರು ಲಿಂಗಾಂಗ ಸಮರಸ ಜ್ಞಾನವಿಲ್ಲದವರು. ಅಂಗ, ಲಿಂಗ ವರಿಯದವರು, ಶ್ರೀ ಗುರು ಕರಣೆಯ ಕರುಣಾಮೃತವುಳ್ಳ ಲಿಂಗವ ಪಡೆಯದವರು, ಲಿಂಗ ಸಕೀಲ ಸಂಯೋಗದ ರಹಸ್ಯವರಿಯದವರು. ಇವರು ಅಂಗವರಿಯಲಿಲ್ಲ. ಲಿಂಗವರಿಯಲಿಲ್ಲ. ಅರಿದಲ್ಲಿ, ಅಂಗ ಲಿಂಗವು, ಲಿಂಗ ಅಂಗವು. ಅಲ್ಲಿಯೆ ಲಿಂಗ ನಿರಂತರ ಅದು ತನ್ನ ನಿಜದ ನಿವಾಸವು. ಏಕೆಂದರೆ ಅಂಗವೆಂಬುದು ತಾನು, ತಾನೊಂದೆ ನಿರಂತರವಾಗಿರುವ ಮಂಗಳಮಯ ಸಚ್ಚಿದ್ಘನ.

ಗುರು ತೋರಿದ ಲಿಂಗ ಅದು ತನ್ನಿರವು ತಾನೆ ಆಗಿರುವಲ್ಲಿ ತನಗೂ ತನ್ನಿರುವಾಗಿಹ ಲಿಂಗವೆಂಬ ಸಂಜ್ಞೆಗೂ ಭೇದವೆ? ಅಯ್ಯ ಇದ್ದುದೊಂದೆ ನಿರಂತರವಾಗಿರುವ ಮಂಗಳಮಯ ಪರತತ್ವವಿರುವಲ್ಲಿ ಲಿಂಗವೆಂದರೂ ಅದುವೆ, ಅಂಗವೆಂದರೂ ಅದುವೆ ಇದ್ದುದ್ದೊಂದೆ ಅನಾಮಯ ಘನ, ಅಚಿಂತ್ಯ ಘನ. ಅಕಲ್ಪಿತ ವಿರುವಲ್ಲಿ ಜಡವೆಂಬ ಲಿಂಗವು ಇಲ್ಲದುದು ಪೀಟಗಕ್ಕೆ ಕಂತಿ ಧರಿಸಿದ ಲಿಂಗವು ಇಲ್ಲದುದು. ಇಲ್ಲದ ಅಂಗದ ಮೇಲೆ ಇಲ್ಲದ ಲಿಂಗ ಧರಿಸಿದುದಾದರೂ ಹೇಗೆ? ಅಥವಾ ಇಲ್ಲದ ಶರೀರದ ಮೇಲೆ ಇದ್ದ ನಿರಂತರ ಲಿಂಗವ ಹಾಕಿದುದಾದರೂ ಅದೆಂತು? ಸಾವಯವ ಶರೀರದ ಮೇಲೆ ನಿರವಯ ಲಿಂಗವ ಹಾಕುವದಾದರೂ ಅದೆಂತು? ಸಟೆಯ ಮೇಲೆ ದಿಟವ ಧರಿಸಬಹುದೆ? ಇದು ಕಾರಣ ಅಂಗದ ಮೇಲೆ ಲಿಂಗ ಲಿಂಗದ ಮೇಲೆ ಅಂಗವಿದೇನೋ ಎಂದು ಪ್ರಭುದೇವ ಪ್ರಶ್ನಿಸಿಹನು.

ಎಲೆ ಅಂಗವೆ ಎಲೆ ಜೀವವೆ ನೀನು ಲಿಂಗ. ಗುರು ತೋರಿದ ಲಿಂಗವಾದರೂ ತಿಳಿದು ನೋಡೆಂದು, ಲಿಂಗವಿದು ನಿನ್ನ ಸ್ವರೂಪವೆಂದು ಕುರುಹ ತೋರಿದ. ಇದ ನರಿವುಡೆ, ತಾನೆ ಲಿಂಗವೆಂಬುದು ತನ್ನಿಂದ ತನಗದು ವೇದ್ಯವು.

ಮನದ ಮೇಲೆ ಅರಿವು ಅರುವಿನ ಮೇಲೆ ಕುರುಹು ಇದೇನೊ? ಮನದ ಮೇಲೆ ಅರಿವು ಎನ್ನುವ ಮತಿವಂತರು ಮನವನ್ನಾದರೂ ತಿಳಿದಿರುವರಾ? ಅರುವನ್ನಾದರೂ ತಿಳಿದಿರುವರಾ? ಮನವೆಂಬುದು ಸಂಕಲ್ಪ ವಿಕಲ್ಪ. ಅರುವದು ಕಲ್ಪಿತ ಅಲ್ಲದ್ದು. ಸಂಕಲ್ಪ ವಿಕಲ್ಪವೆಂಬುದು ಅವಿಚಾರ, ಅರುವೆಂಬುದು ವಿಚಾರ.

ಅವಿಚಾರ ಕತ್ತಲು, ವಿಚಾರವದು ಬೆಳಕು. ಕತ್ತಲೆಯ ಮೇಲೆ ಬೆಳಕು ಧರಿಸಬಹುದೆ? ಬೆಳಕು ಧರಿಸಿದಲ್ಲಿ ಕತ್ತಲು ಇರಬಲ್ಲುದೆ? ಇದು ಕಾರಣ ಲಿಂಗವಂತರು ಇವುಗಳ ಅರಿಯರು.

ಅರಿತವರ ದೃಷ್ಟಿಯಲ್ಲಿ ಮನವೆಂಬುದು ಅರಿವು, ಅರುವೆಂಬದು ಅರುವೆ, ಅರುವು ಅರಿಯದ್ದರಿಂದ ಮನ ಅರುವು ಎಂಬ ದ್ವಿತೀಯ ನಾಮ ಪಡದಿದೆ. ಅರಿತಲ್ಲಿ ಮನವೆಂಬುದದುವೆ, ಅರುವೆಂಬುದದುವೆ.

ಅರುವಿನ ಮೇಲೆ ಕುರುಹು ಇದೇನೊ? ಮರವಿಂಗೆ ಕುರುಹು ಉಂಟಲ್ಲದೆ ಅರುವಿಂಗೆ ಕುರುಹು ಉಂಟೆ? ಅರುವರಿತ ಪ್ರಭುದೇವ ಅರುವಿನ ಮೇಲೆ ಕುರುಹು ಇದೇನೊ? ಎಂದು ಎಚ್ಚರಿಸಿಹನು.

ಅರುವಿನ ಮೇಲೆ ಕುರುಹ ಕಾಣುವವರು ಅರುವ ಅರಿತವರಲ್ಲ. ಗುರು ತೋರಿದ ಕುರುಹ ಅರಿತವರಲ್ಲ, ಅರಿತಲ್ಲಿ ಅರುವೆಂಬುದು ಗುರು ತೋರಿದ ಕುರುಹು, ಕುರುಹೆಂಬದು ತನ್ನಿರುವಿನ ಅರುವು. ನೀನೆಂಬಲ್ಲಿ ನಾನು, ನಾನು ಎಂಬಲ್ಲಿ ನೀನು ನಾ ನೀನೆಂಬುದಕ್ಕೆ ತೆರಹಿಲ್ಲ ಗುಹೇಶ್ವರಾ. ನೀನೆಂಬಲ್ಲಿಯೆ ನಾನು, ನಾನೆಂಬಲ್ಲಿಯೆ, ನೀನು, ಈ ನಾನು ನೀನು, ಒಂದನ್ನೊಂದು ಸಾಪೇಕ್ಷೆ ಮಾಡಿಕೊಂಡು ಬಂದವುಗಳು.

ಲಿಂಗ ನೀನು, ಭಕ್ತ ನಾನು, ಜಂಗಮ ನೀನು ಭಕ್ತ ನಾನು, ಸ್ವಾಮಿ ನೀನು ಸೇವಕ ನಾನು, ಪೂಜ್ಯ ನೀನು ಪೂಜಕ ನಾನು, ಗುರು ನೀನು ಶಿಷ್ಯ ನಾನು, ಬದ್ಧ ನಾನು ಬುದ್ಧ ನೀನು. ಹೀಗೆ ಉಪಾಧಿಯನ್ನವಲಂಬನ ಮಾಡಿಕೊಂಡು ಬಂದವುಗಳು.

ಜಂಗಮ ನೀನು, ಭಕ್ತ ನಾನೆನ್ನುವ ಭಕ್ತನಾದರೂ ತನ್ನ ತಾ ತಿಳಿದನೆ? ಜಂಗಮನನ್ನಾದರೂ ತಿಳಿದನೆ? ಸ್ವಾಮಿ ನೀನು ಸೇವಕ ನಾನೆನ್ನುವ ಸೇವಕನಾದರೂ ತನ್ನ ತಾ ತಿಳಿದನೆ? ಸ್ವಾಮಿಯನ್ನಾದರೂ ತಿಳಿದನೆ? ಲಿಂಗ ನೀನು, ಭಕ್ತ ನಾನು ಗುರು ನೀನು ಶಿಷ್ಯ ನಾನು ಎನ್ನುವ ಭಕ್ತರುಗಳಾಗಲಿ ಶಿಷ್ಯರುಗಳಾಗಲಿ, ತಮ್ಮನ್ನು ತಾವು ತಿಳಿದರೆ? ಲಿಂಗವನ್ನಾಗಲಿ ಗುರು ಘನವನ್ನಾಗಲಿ ತಿಳಿದರೆ? ತಿಳಿಯದ್ದರಿಂದ ನಾನೆಂಬಲ್ಲಿಯೆ ನೀನಾಯಿತ್ತು. ನೀನೆಂಬಲ್ಲಿಯೆ ನಾನಾಯಿತ್ತು. ತನ್ನ ತಾನರಿವುಡೆ ನೀ ನಾನೆಂಬುದಕ್ಕೆ ತೆರಹಿಲ್ಲವಾಯಿತ್ತು. ತೆರಹಿಲ್ಲದ ಘನವಾದ ತನ್ನಂ ಅರಿವುಡೆ ನಾನೀನೆಂಬುದಕ್ಕೂ ಸಂದಿಲ್ಲ ನೋಡಾ ಸಂದಿಲ್ಲದಿಪ್ಪಗಮ್ಯ ಅಪ್ರಮಾಣ ಅಚಿಂತ್ಯವದು, ನಾ ನೀನೆಂಬುದಕ್ಕೆ ತೆರಹಿಲ್ಲದುದು, ಗುಹೇಶ್ವರಾ ಎಂದು ಪ್ರಭು ಬಿತ್ತರಿಸಿದುದು.

**ವಚನ 35**

**ಅಂಗವಿಲ್ಲಾಗಿ ಅನ್ಯ ಸಂಗವಿಲ್ಲವಯ್ಯ,**
**ಅನ್ಯ ಸಂಗವಿಲ್ಲಾಗಿ ಮತ್ತೊಂದು ವಿವರಿಸಲಿಲ್ಲ.**
**ಮತ್ತೊಂದು ವಿವರಿಸಲಿಲ್ಲಾಗಿ ನಿಸ್ಸಂಗವಾಯಿತ್ತಯ್ಯ,**
**ಗುಹೇಶ್ವರಾ ನಿಮ್ಮ ನಾಮ ಎಂತುಟಯ್ಯ. ॥ 303 ॥**

ತಾತ್ಪರ್ಯ: ಅಂಗವಿಲ್ಲಾಗಿ ಸಂಗವಿಲ್ಲವಯ್ಯಾ: ಅಂಗವಿದ್ದಲ್ಲಿ ಸಂಗವುಂಟು. ಅಂಗ? ಶರೀರಂಗಳು ಜೀವನೆಂದು ಅರ್ಥವಾಗುವುದು, ಇಲ್ಲಿ ಅಂಗವೆಂಬುದು ಸ್ಥೂಲಾಂಗ, ಸೂಕ್ಷ್ಮಾಂಗ, ಕಾರಣಾಂಗ, ಮಹಾಕಾರಣಾಂಗವೆಂದು ಅರ್ಥವು.

ಇವುಗಳಿದ್ದಲ್ಲಿ ಅಹಂಭಾವ, ಅವಿದ್ಯೆ ಭಾವ, ಜ್ಞಾನಾಜ್ಞಾನ ಭಾವ, ಜ್ಞಾನ ವಿಕೃತಿ ಭಾವ, ವರ್ತನ ವಿಕೃತಿ ಭಾವ, ಮೋಹನ ವಿಕೃತಿ ಭಾವಂಗಳು ಉಂಟು. ಇವೆಲ್ಲವುಗಳು ಭ್ರಾಂತಿ ಭಾವಂಗಳು, ಇವೆಲ್ಲವುಗಳು ಭ್ರಾಂತಿ ಭಾವಂಗಳು, ಇವುಗಳು ಅಂಗವಿದ್ದಾಗ ಇದ್ದವು. ಅಂಗವೆ ಇಲ್ಲದಿರುವಾಗ ಇವುಗಳೆಲ್ಲಿ? ಇವುಗಳ ಸಂಗವೆಲ್ಲಿ? ಅಂಗವಿದ್ದಲ್ಲಿ ಇಂದ್ರಿಯಂಗಳ ಭಾವ, ವಿಷಯಂಗಳ ಭಾವ, ಭೂತ ಭಾವ, ಕರಣ ಭಾವಂಗಳು ಉಂಟು, ಅಂಗವಿಲ್ಲದಿರುವಲ್ಲಿ ಸಂಗವಿಲ್ಲವಯ್ಯ.

ಸ್ಥೂಲಾಂಗವಿದ್ದಲ್ಲಿ ವಿಶ್ವ, ಸೂಕ್ಷ್ಮಾಂಗವಿದ್ದಲ್ಲಿ ತೈಜಸ, ಕಾರಣಾಂಗವಿದ್ದಲ್ಲಿ ಪ್ರಾಜ್ಞ, ಮಹಾಕಾರಣಾಂಗವಿದ್ದಲ್ಲಿ ತೂರ್ಯರೆಂಬ ಜೀವರು ಉಂಟು. ಅಂಗವಿಲ್ಲದಿರುವಾಗ ಜೀವರುಗಳೆಲ್ಲಿ? ಅಂಗ ಜೀವಗಳಿಲ್ಲದಿರುವಲ್ಲಿ ಸಂಗವಿಲ್ಲವಯ್ಯ.

ಲಿಂಗವರಿತ ಘನಾಂಗಿ ಸರ್ವಾಂಗ ಲಿಂಗಿ ಇಲ್ಲಾದುದಿಲ್ಲಾದುದು ಎಲ್ಲಿಪ್ಪುದು, ಇಲ್ಲಾದುದಿಲ್ಲಾದುದೆಂದಿಪ್ಪುದು. ಎಂಬ ಲಿಂಗ ಗಂಭೀರ ಎಲ್ಲೆಲ್ಲೂ ಲಿಂಗವನ್ನೆ ಕಾಣುವ ಮಹಾಲಿಂಗ ಮತ್ತೊಂದು ವಿವರಿಸಲಿಲ್ಲಾಗಿ ನಿಸ್ಸಂಗವಾಯಿತ್ತಯ್ಯ, ಮಹಾಲಿಂಗ ನಿಸ್ಸಂಗದ ಸಂಗವ ನೇನೆಂಬೆನಯ್ಯ, ಈ ಮಹಾಂತ ಗಗನದಂತಿರುವ ನಿಸ್ಸಂಗಿ, ಈ ಘನವಂತನ ಇರುವೆ ನಿಸ್ಸಂಗ ವಿವರಿಸಲಿಲ್ಲಾಗಿ ಗುಹೇಶ್ವರಾ ನಿಮ್ಮ ನಾಮ ಎಂತುಂಟಯ್ಯ.

ನಿಸ್ಸಂಗದಿರುವ ವರ್ಣಿಸುವದದೆಂತು, ಆವುದು ವರ್ಣನೆಯಿಂದುಕ್ತವಾಗಿದೆ. ಅದು ನಿಸ್ಸಂಗವಾಗದು, ನಿಸ್ಸಂಗವದು ಮಾತಿನ ಮಹಾಂತರದಲ್ಲ, ಮಹಾನುಭವಿಗಳ ಮಹದರುವು, ಅದು ಲಿಂಗಸಕೀಲ ಸಂಯೋಗ ವರ್ಮಸ್ಥಲ ಅರಿತವರ ನಿಸ್ಸಂಗವದು. ಅವರದು ಅಂಗವಿಲ್ಲಾಗಿರುವ ನಿಸ್ಸಂಗ ಅದು ಸಂಗವ ಕಾಣದ್ದರಿಂದ ವಿವರಿಸದ ನಿಸ್ಸಂಗ. ಈ ನಿಸ್ಸಂಗ ಮಾತಿನ ರಂಜಕರಿಗೆ ತಿಳಿಯದು. ಏಕೆಂದರೆ ಇದು ಮಾತಿಗೂ ಮನಕ್ಕೂ ಮಿಗೆ ಮಿಗೆಯಾಗಿ ಮೀರಿನಿಂತ ಪರತತ್ವ, ಅದು ಅರಿತವರ ಇರವು, ಅರಸುವವರ ಅರ್ಚಿಸುವವರ, ಅನುಷ್ಠಾನವಂತರ ಇರವು ಅಲ್ಲ. ಇವರುಗಳ ಬುದ್ಧಿಗೆ ಮೀರಿ ಬೆಳಗುವ ಬೆಳಗುಳ್ಳ ಮಹಾಬೆಳಗು. ಇದು ಲಿಂಗ ಲಿಂಗ, ಜಂಗಮ ಜಂಗಮ, ಪ್ರಸಾದ ಪ್ರಸಾದ ಎನ್ನುವವರ ಇರವು ಅಲ್ಲ. ಇದು ಲಿಂಗವರಿತವರ ಇರವು. ಲಿಂಗವೆನ್ನದವರ ಜಂಗಮವೆನ್ನದವರ ಪ್ರಸಾದವೆನ್ನದವರ ಇರವು. ತಾನಾರೆಂದರಿತವರ ಇರವು. ಅವರದು ಶಬ್ದಮುಗ್ಧನಾಮ ಉಪಮಿಸದ ನಾಮ, ತಾನೆ ತಾನಾದುದು, ನಿಮ್ಮ ನಾಮ ಎಂತುಟಯ್ಯ, ನಿಶಬ್ದ ಘನದ ನಿಮ್ಮ ನಾಮ ಎಂತುಟಯ್ಯ ಎಂದು ಹೇಳಿಹರು.

**ವಚನ 36**

**ಆಚಾರ ಅನಾಚಾರವಾಯಿತ್ತಯ್ಯ**
**ಸೀಮೆ ನಿಸ್ಸೀಮೆಯಾಯಿತ್ತು.**

ಪ್ರಾಣ ಸಂಚಯತಪ್ಪಿ ಲಿಂಗಸಂಚಯವಾಯಿತ್ತು.
ಎಲ್ಲಿ ಶಬ್ದವಲ್ಲಿಯೆ ಲಿಂಗಸ್ವಾಯತವಾಯಿತ್ತು.
ಎಲ್ಲಿ ಸೋಂಕಲ್ಲಿಯೆ ಲಿಂಗ ಸ್ವಾಯತವಾಯಿತ್ತು.
ಎಲ್ಲಿ ರೂಪಲ್ಲಿಯೇ ಲಿಂಗಸ್ವಾಯತವಾಯಿತ್ತು.
ಎಲ್ಲಿ ರುಚಿ ಅಲ್ಲಿಯೆ ಲಿಂಗ ಸ್ವಾಯತವಾಯಿತ್ತು.
ಎಲ್ಲಿ ಗಂಧವಲ್ಲಿಯೆ ಲಿಂಗಸ್ವಾಯತವಾಯಿತ್ತು.
ಕೂಡಲಸಂಗಮದೇವಾ ಕರುಣಾರಸಾಬ್ಧಿ ಕಡಗೋಡಿವರಿಯಿತ್ತಯ್ಯ ಎನ್ನ ಮೇಲೆ.

**ತಾತ್ಪರ್ಯ:** ಆಚಾರ, ಅನಾಚಾರವಾಯಿತ್ತು, ಸೀಮೆ ನಿಸ್ಸೀಮೆಯಾಯಿತ್ತು. ಪ್ರಾಣ ಸಂಚಯ ತಪ್ಪಿ ಲಿಂಗ ಸಂಚಯವಾಯಿತ್ತು: ಬಸವರಸರು ಆಚಾರ ಅನಾಚಾರವಾಯಿತ್ತು ಎಂದು ಹೇಳಿದುದು ಎಷ್ಟು ಗಮನಾರ್ಥವು. ಅಣ್ಣನ ಆಚಾರ ಅನಾಚಾರವಯಿತೆ? ಬಸವಣ್ಣನವರ ಆಚಾರ ! ಮರಳು ತಲೆ ಹುರುಳು ತಲೆ ನೀನೆ, ಹೆಂಗೂಸು ಗಂಡು ಗೂಸು ನೀನೆ, ಎಮ್ಮಕ್ಕನ ಗಂಡ ನೀನೆ ಎಂದ ಆಚಾರ ಭರಿತ ಭಾವದಾಚಾರ ಸಕಲವು ದೇವನ ಸ್ವರೂಪವಾಗಿ ಕಂಡ ಆಚಾರ, ಇದು ಅನಾಚಾರವಯಿತ್ತೆ? ಇದೆಂಥ ಸೋಜಿಗ ಬಸವರಸರೆ ತನ್ನ ಆಚಾರ, ಅನಾಚಾರವೆಂದು ಒಪ್ಪಿಕೊಂಡರೆ? ಮತ್ತು ಈ ಆಚಾರ ಕೆಟ್ಟುದರಿಂದ ಸೀಮೆ ನಿಸ್ಸೀಮೆಯಾಯಿತ್ತು. ಪ್ರಾಣ ಸಂಚಯ ತಪ್ಪಿ ಲಿಂಗಸಂಚಯವಾಯಿತ್ತು.

ಸಕಲವು ದೇವನಾಗಿ ಕಂಡ ಆಚಾರ, ಅದು ಅನಾಚಾರವಾದುದು ಹೇಗೆ? ಈ ಆಚಾರ ತಾನಾರೆಂದರಿಯದ ಆಚಾರ, ಅದಕ್ಕಾಗಿ ಇದು ಅನಾಚಾರವೆಂದು ಹೇಳಿಕೊಂಡ. ಸಕಲವು ದೇವನಾಗಿ ಕಂಡ ಆಚಾರ ತನ್ನ ಕಂಡಿತೆ? ತಾನಾರೆಂದರಿತರೆ? ಮರಳು ತಲೆ ಹುರುಳುತಲೆ ನೀನೆ ಎಂದ ಬಸವರಸ, ತಾನಾರೆಂದು ಅರಿತು ಸಕಲವು ದೇವನೆಂದನೆ? ಅರಿದರೆ ದೇವನೆಂದರೆ ಸಕಲವು ದೇವನೆಂದು ಅರಿತ ಬಸವೇಶ ದೇವನಿಗೆ ದೇವನೆಂಬುದಾದರೂ ಇದೆಯಾ? ಮರಳು ತಲೆ ಎಂಬುದಾದರೂ ಇದೆಯಾ? ಹುರುಳು ತಲೆ ಎಂಬುವದಾದರೂ ಇದೆಯಾ? ಅಥವಾ ತಾನಾರೆಂದರಿತಲ್ಲಿ ತನಗಿಂತನ್ಯ ದೇವನಿರುವನೆ? ಇರದಿರುವಲ್ಲಿ ತಾನೆ ದೇವನೆಂಬುದು ತನ್ನಿರವು ತನ್ನಿಂದ ತನಗೆ ತಿಳಿದು ಆಚಾರ ಅನಾಚಾರವಾಯಿತ್ತು ಸೀಮೆ ನಿಸ್ಸೀಮೆಯಾಯಿತ್ತು ಎಂದು ಹೇಳಿಹನು.

ಸೀಮೆ ಆವುದು? ನಾನೆಂಬುದು ಸೀಮೆ, ನೀನೆಂಬುದು ಸೀಮೆ, ಅಹುದೆಂಬುದು ಸೀಮೆ, ಅಲ್ಲವೆಂಬುದು ಸೀಮೆ, ಸಗುಣವದು ಸೀಮೆ, ನಿರ್ಗುಣವದು ಸೀಮೆ, ಅರಿತೆನೆಂಬುದು ಸೀಮೆ, ಅರಿಯೆನೆಂಬುದು ಸೀಮೆ, ಗುರುವೆಂಬುದು ಸೀಮೆ, ಶಿಷ್ಯನೆಂಬುದು ಸೀಮೆ, ಭಕ್ತನೆಂಬುದು ಸೀಮೆ, ಜಂಗಮನೆಂಬುದು ಸೀಮೆ, ನುಡಿಗೊಳಪಟ್ಟುದು ಸೀಮೆ, ಈ ಸೀಮೆಯೆ ನಿಸ್ಸೀಮವಾಯಿತ್ತು.

ಸೀಮೆ ನಿಸ್ಸೀಮವಾದುದು ಆವಾಗ? ಸಕಲವು ದೇವನೆಂಬ ಭಕ್ತ ತಾನಾರೆಂದು ತನ್ನ ತಾನರಿದಲ್ಲಿ ದೇವನು ಬೆಳಗುವವನಾದಲ್ಲಿ ತಾನು ಬೆಳಗುವವನಿಗೆ ಬೆಳಗುವ ಬೆಳಗುಳ್ಳ ಬೆಳಗು, ನಿರಂತರವಾಗಿಹ ಮಹಾಬೆಳಗು ತಾನೆಂಬುದು ತನ್ನಿಂದ ತನಗದು

ತಿಳಿದು ಸಕಲವು ದೇವನೆಂಬ ಸೀಮೆ ಹೋಗಿ, ತನ್ನಿರವು ನಿಸ್ಸೀಮೆಯಾಯಿತ್ತು. ಈ ನಿಸ್ಸೀಮತ್ವವು ನಾನೀನೆಂಬುದಕ್ಕೆ ತೆರಹಿಲ್ಲದ ನಿಲವು, ತನ್ನ ನಿಲವು, ಇಲ್ಲಿ ನಾನು ಭಕ್ತ, ನೀನು ಜಂಗಮವುವೆಂಬುದಕ್ಕೆ ತೆರಹಿಲ್ಲದ ನಿಲವು, ಇಲ್ಲಿ ವಿಭಾಗ ದೃಷ್ಟಿಗಿಂಬಿಲ್ಲವಾದುದರಿಂದ ಸೀಮೆ ನಿಸ್ಸೀಮೆಯಾಯಿತ್ತು ಎಂದು ಹೇಳಿದರು.

ಪ್ರಾಣ ಸಂಚಯ ತಪ್ಪಿ ಲಿಂಗಸಂಚಯವಾಯಿತ್ತು: ಲಿಂಗವರಿಯಹೋಗಿ ಲಿಂಗ ತಾನೆಂಬ ಅರಿವು, ತನ್ನಿಂದ ತನಗದು ವೇದ್ಯವಾಯಿತ್ತು. ಅಂದೆ ಪ್ರಾಣ ತಾನೆಂಬುದು ನಷ್ಟವಾಯಿತು. ಆಗ ಭವ ಕೆಟ್ಟಿತ್ತು. ಇದಲ್ಲದೆ ತಾನಭವನೆಂಬುದು ದೃಢ ದೃಢಂಗವಾದುದರಿಂದ ಇದು ಸಗುಣ. ಇದು ನಿರ್ಗುಣವೆಂಬ ವಿಭಾಗದೃಷ್ಟಿಗಿಂಬಿಲ್ಲವಾಗಿ ಇದು ಜಡ ಇದು ಅಜಡನೆಂಬುಭಂಯು ಭಾವಕ್ಕಿಂಬಿಲ್ಲದಂತಾಯಿತ್ತು. ಇಲ್ಲಿ ಅರಿಸಿಕೊಳ್ಳುವ ಅನಾತ್ಮ ಅರಿಯುವ ಆತ್ಮನೆಂಬ ಸೀಮಿತ ಹೋಗಿ ನಿಸ್ಸೀಮವಾದುದರಿಂದ ತಾನು ಘನಕ್ಕೆ ಘನನೆಂಬುದು ತನ್ನಿಂದ ತನಗದು ಸಿದ್ಧವಾಗಿ, ಪ್ರಾಣವೆಂಬ ಅವಿಚಾರವೆ ಇಲ್ಲವಾಗಿ ಲಿಂಗವೆ ಸಿದ್ಧವಾಯಿತು. ತಾನೆಂಬುದು ಲಿಂಗ, ಲಿಂಗವದು ತಾನೆ, ತಾನೆ ತಾನು ಇದ್ದುದು ಅನುಪಮ ನಿಲಯ, ಇದುವೆ ಸೀಮೆ ನಿಸ್ಸೀಮವಾದ ನಿಲಯ.

ಎಲ್ಲಿ ಶಬ್ದವಲ್ಲಿಯೆ ಲಿಂಗಸ್ವಾಯತ: ತನ್ನ ಅರಿಯದ ಮುನ್ನವದು ಶಬ್ದ ತಾನಾರೆಂದರಿವುಡೆ ಶಬ್ದವೆಂಬುದು ಲಿಂಗ, ಲಿಂಗವದು ತಾನೆ ಅಹಹ! ಇದೆಂಥ ಅರುವಿನ ಅರುವಾಗಿಹ ತಿರುಳು. ಲೌಕಿಕರಿಗೆ ಶಬ್ದದಿಂದ ಸ್ಥಾವರ ಜಂಗಮ ಜಗದ ತಿಳುವಳಿಕೆಯಾದರೆ ಅರಿತ ಮಹಾಂತನಿಗೆ ಎಲ್ಲೆಲ್ಲೂ ತನ್ನ ಅಧಿಷ್ಠಾನವು ಸ್ವಮಹಿಮೆಯು, ಮುನ್ನ ಮುನ್ನಲಾದ ತನ್ನಿರುವೆ ಆಗಿಹ ಲಿಂಗವೆ ಸಿದ್ಧವಾಯಿತೆ? ಮಾತೆಂಬುದು ಜ್ಯೋತಿರ್ಲಿಂಗವಾಯಿತೆ, ಮಹಾತ್ಮರ ಪ್ರಸಾದವಾಣಿ ಅದು ಶಬ್ದವಲ್ಲ, ಅದು ನಿಃಶಬ್ದಘನವ ತನ್ನೊಳಗೆ ಸಂಬಂಧವಾದ ಚಿಜ್ಯೋತಿ, ಎಲ್ಲಿ ಸೋಂಕು ಅಲ್ಲಿಯೆ ಲಿಂಗಸ್ವಾಯತವಾಯಿತ್ತು. ಅರಿತ ಮಹಾಂತ ಎಲ್ಲೆಲ್ಲಿ ಮುಟ್ಟಿದಲ್ಲಲ್ಲಿ ಲಿಂಗ ಸಂಬಂಧ, ಅಲ್ಲಿ ಜ್ಞಾನೇಂದ್ರಿಯಂಗಳೆಂಬುದಿಲ್ಲ. ಇಂದ್ರಿಯಂಗಳಿಲ್ಲವಾಗಿ ವಿಷಯಗಳಿಲ್ಲ, ಲಿಂಗದೇಹಿ ದೇಹಗುಣಗಳಳಿದು ನಿರ್ದೇಹಿಯಾದ ಶರಣಂಗೆ ಇಂದ್ರಿಯಂಗಳೆಲ್ಲಿ? ಇಲ್ಲದುದು ಇಲ್ಲವೆ ಇಲ್ಲ ಇದ್ದ ಲಿಂಗವು ಪ್ರಜ್ವಲಿಸುವಲ್ಲಿ ಅರಿತ ಮಹಾಂತನ ಸೋಂಕು ಅದು ಲಿಂಗ ಸೋಂಕು ಎಂದು ಹೇಳಿಹರು.

ಎಲ್ಲಿ ರೂಪಲ್ಲಿಯೆ ಲಿಂಗ ಸ್ವಾಯತವಾಯಿತ್ತು: ಲಿಂಗವೆಂಬುದು ಅಖಂಡಿತ ಘನಪೂರ್ಣವಪ್ಪ ತನ್ನಿರುವೆಂದರಿದ ಮಹಾಂತ ನಿಸ್ಸೀಮ ನಾದುದರಿಂದ ಆತಂಗೆ ರೂಪವೆಂಬುದು ಲಿಂಗವೆ ನೋಡುವ ನೋಟವು ಲಿಂಗವೆ, ಇದು ಲಿಂಗ ಸಕೀಲ ಸಂಯೋಗ ವರ್ಮಸ್ಥಲ ನರಿತವರ ದಿವ್ಯ ದೃಷ್ಟಿ ಎಲ್ಲಿ ರೂಪವಲ್ಲಿಯೆ ಲಿಂಗಸ್ವಾಯತವೆಂದು ಹೇಳಿಹರು.

ಎಲ್ಲಿ ರುಚಿ ಅಲ್ಲಿಯೆ ಲಿಂಗ ಸ್ವಾಯತವಾಯಿತ್ತು: ಲಿಂಗವರಿತು, ಸರ್ವಾಂಗ ಲಿಂಗವಾಗಿಹ ಘನವಂತ, ಎಲ್ಲಿರುಚಿ ಅಲ್ಲಿಯೆ ಲಿಂಗ ಸಂಬಂಧವಾಯಿತ್ತು. ಲಿಂಗ

ದೇಹಿಯಾದ ಶರಣ ರಸನೇಂದ್ರಿಯ ಕಾಣಲಿಲ್ಲ, ಕಾಣದ್ದರಿಂದ ರುಚಿಯೆಂಬುದು ಲಿಂಗ. ರಸನೇಂದ್ರಿಯ ರಸನ ಇದು ಸೀಮಾತೀತ ಪದವು ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಮಹಾಂತ, ಅಖಂಡ ಸುಖಿಯಾದುದರಿಂದ ಎಲ್ಲಿ ರುಚಿ ಅಲ್ಲಿಯೆ ಲಿಂಗಸ್ವಾಯತವೆಂದು ಹೇಳಿಹರು.

ಎಲ್ಲಿ ಗಂಧವಲ್ಲಿಯೆ ಲಿಂಗಸ್ವಾಯತವಾಯಿತ್ತು. ತನ್ನ ತಾನರಿತ ಮಹಾಂತನ ನಿಲವು ಎಲ್ಲಿ ನೋಡಿದಡಲ್ಲಲ್ಲಿ ತನ್ನ ಕಂಡ ನಿಲವು. ತನ್ನ ನಿಲವು ಆತನು ಗಂಧದ ಗಂಧನಾಗಿರುವದರಿಂದ ಘ್ರಾಣೇಂದ್ರಿಯ ಕಾಣಲಿಲ್ಲ. ಅದನು ಸವಿಯುವ ಗಂಧವೂ ಕಾಣಲಿಲ್ಲ. ಗಂಧದ ಗಂಧವಾಗಿಹ ತನ್ನ ನಿಲುವಿನಲ್ಲಿ ಸುಗಂಧವೆಂಬುದಕ್ಕಿಂಬಿಲ್ಲ. ದುರ್ಗಂಧವೆಂಬದಕ್ಕಿಂಬಿಲ್ಲ. ದ್ವಂದ್ವಾತೀತಂಗೆ ಎಲ್ಲಿ ಗಂಧವಲ್ಲಿಯೆ ಲಿಂಗ ಸ್ವಾಯತವಾಗಿದೆ. ಗಂಧವೆಂಬದುಕ್ಕಿಂಬಿಲ್ಲ. ಗಂಧವೆಂಬುದು ಲಿಂಗ, ಅಲ್ಲಿ ಗಂಧ ಬೇರೆ ತಾನು ಬೇರೆಂಬ ವಿಭಾಗ ದೃಷ್ಟಿಗಿಂಬಿಲ್ಲವಾದುದರಿಂದ ಗಂಧವದು ತನ್ನೊಳ ಲಿಂಗಸಂಬಂಧವಾದ ಸಂಬಂಧವು.

ಕೂಡಲಸಂಗಮದೇವಾ ಕರುಣಾ ರಸಾಬ್ದಿ ಕಡಗೋಡಿ ವರಿಯಿತ್ತಯ್ಯ ಎನ್ನ ಮೇಲೆ. ಓ ಲಿಂಗ ಒಂದಾಗಿರ್ದ ಜಂಗಮ ಘನವೆ, ನಿನ್ನ ಕರುಣಾರಸ ಅಪಾರ. ಅಪಾರವಾಗಿಹ ಕರುಣೆ ಜಂಗಮಲಿಂಗವೆ ನಿನ್ನದು. ನಿನ್ನ ಕರುಣಾರಸಾಬ್ದಿರೂಪಿ ಹೃದಯ, ಅದು ಜ್ಞಾನಾನಂಧ ಶರಧಿ ಅದು ಮಹಾಪ್ರಸಾದ ರೂಪದಿಂದ ನನ್ನ ಕಲ್ಯಾಣಗೋಸ್ಕರ, ವಾಗ್ ವೈಖರಿಎಂಬ ಕಡಗೋಡಿಯು ಎನ್ನ ಮೇಲೆ ಹರಿದಿದೆ. ಕೂಡಲಸಂಗಮದೇವಾ ಎಂದು ಬಸವರಸರು ತನ್ನೊಳ ಲಿಂಗಸಂಬಂಧವಾದ ಸಂಬಂಧದ ಘನತ್ವ ವಚನಾಮೃತ ರೂಪದಿಂದ ಜ್ಞಾನಾಮೃತದ ಸುರಿಮಳೆಯನ್ನೆ ಜ್ಞಾನಗಂಗೆಯ ರೂಪವಾಗಿ ಹರಿಸಿದ್ದಾರೆ. ಇದು ಸ್ವಾನುಭವದ ಗಂಗೆ ಸಕಲರಿಗೆ ಅನುಪಮ ಲಿಂಗದರಿವು ವೇದ್ಯವಾಗಲಿ ಎಂಬುದೆ ಅವರ ಹೃದಯದ ಹೆಗ್ಗುರಿಯಾಗಿದೆ.

**ವಚನ 37**

**ಲಿಂಗಮಧ್ಯದೊಳಗೆ ಜಗವಿರ್ದಡೇನೊ?**
**ಜಗವ ಹೊರಗಿಕ್ಕಿ ಲಿಂಗವನೊಳಗಿಟ್ಟು ಕೊಂಡ**
**ಶರಣನ ಘನಕ್ಕೆ ಶರಣೆಂಬೆ**
**ಆ ಮಹಾಘನವಾಯಿತಕ್ಕೊಳಗು**
**ಪ್ರಳಯಕ್ಕೆ ಹೊರಗು ಕೂಡಲಚೆನ್ನಸಂಗಮದೇವಾ.**

ತಾತ್ಪರ್ಯ: ಲಿಂಗಮಧ್ಯದೊಳಗೆ ಜಗವಿರ್ದಡೇನೊ ಜಗವ ಹೊರಗಿಕ್ಕಿ ಲಿಂಗವನೊಳಗಿಟ್ಟಕೊಂಡ ಶರಣನ ಘನಕ್ಕೆ ಶರಣೆಂಬೆ: ಸೂರ್ಯಲೋಕದ ಮಧ್ಯದೊಳಗೆ ಗೂಗೆ ಇದ್ದಡೇನು, ಆ ಗೂಗೆಯು ಸೂರ್ಯನ ಘನವ ತಿಳಿಯದು. ಅದಕ್ಕೆ ಕತ್ತಲೆಯು ಬಹು ಪ್ರಿಯವಾಗಿದೆ. ಹಾಗೆ ಜಗವು ಜಡ, ಜಡವ ನಂಬಿದ ಮಾನವ ಜಡ, ಜಡದೇಹವ ನಂಬಿದ ಮಾನವ ಅಜ್ಞಾನಿ. ಇದು ಗಾಡಾಂಧಕಾರ. ಇವನಿಗೆ ದೇಹ ಭಾವವೆ ಪ್ರಿಯವಾಗಿದೆ. ಸಚ್ಚಿದ್ಘನವೆಂಬ ಲಿಂಗವು ತನ್ನ ಸ್ವಪ್ರಕಾಶದಿಂ

ಪ್ರಕಾಶಿಸಿದರೂ ಅದು ಅವನಿಗೆ ಪ್ರಿಯವಾಗಲೊಲ್ಲದು. ಏಕೆಂದರೆ ಅನಿತ್ಯವಾದ ದೇಹವ ನಂಬಿದವನು ಲಿಂಗಮಧ್ಯದೊಳಗಿರ್ದಡೂ ನಿರುಪಯೋಗ.

ಲಿಂಗಮಧ್ಯದೊಳಗೆ ಜಗ, ಲಿಂಗ ಸತ್ತಾರೂಪ ಜಗ, ಈ ಜಗ ಸಾಮಾನ್ಯವೆ? ಸದ್ರೂಪತ್ವ ನೋಡದ ಜಗವಿರ್ದಡೂ ನಿರುಪಯೋಗ. ಲಿಂಗಮಧ್ಯದೊಳಿರುವ ಜಗಕ್ಕೆ ಅದಾವ ಭಯ. ಅದಾವ ದುಃಖ ಅದಾವ ಮರವು, ಅದಾವ ಸಂಕಲ್ಪವಿಕಲ್ಪ, ಲಿಂಗಮಧ್ಯೆದಲ್ಲಿದ್ದರೂ ಲಿಂಗದ ಕಡೆ ಮುಖವಾಗದ ಜಗವಿರ್ದಡೇನೊ? ಇದು ನಿರುಪಯೋಗ.

ಶರಣ, ಜಗವ ನೋಡಲಿಲ್ಲ. ಜಗದ ಜಂಗುಳಿಯ ನೋಡಹೋಗಲಿಲ್ಲ. ಲಿಂಗದ ಘನವ ಕಂಡು ಲಿಂಗವ ನೊಳಗಿಟ್ಟುಕೊಂಡ ಶರಣನ ಘನಕ್ಕೆ ಶರಣೆಂಬೆ, ಶರಣಂಗೆ ಅಸ್ತಿ, ಭಾತಿ,ಪ್ರಿಯ ಬಹುಪ್ರಿಯವಾಯಿತ್ತು. ತೋರಿ ಇಲ್ಲವಾಗುವ ಮಾಯಿಕ ರೂಪಿ ಜಗವು ಅಪ್ರಿಯವಾಯಿತ್ತು. ದಿಟದ ಪ್ರೀತಿ ಮಾಡುವರಲ್ಲದೆ ಸಟೆಯ ಪ್ರೀತಿ ಮಾಡುವರುಂಟೆ? ಆರು ಶರಣರು ಅವರು ದಿಟದ ಪ್ರೀತಿವಂತರು ದಿಟವಾವುದೆಂದಲ್ಲಿ ಲಿಂಗವೆ ದಿಟವಾದುದು. ಅದು ಅಖಂಡಿತ ಘನ ಪೂರ್ಣವಪ್ಪ ಸಚ್ಚಿದ್ಘನ. ಈ ಘನಲಿಂಗವರಿಯಲು ಪರಾತ್ಪರ ಜ್ಞಾನ ಹೃದಯದೋಳ್ ಧರಿಸಿದ ಅದನ್ನು ಅತ್ಯಂತ ಪ್ರೀತಿಯಿಂದ ಆಲಂಗಿಸಿ ಅರಸಲು ಹೋದ, ಭಾವಿಸ ಹೋದ. ನೆನೆಯಲು ಹೋದ, ನಿರ್ಧರಿಸ ಹೋದ, ಚಿಂತಿಸ ಹೋದ, ಕೊನೆಗೆ ಲಿಂಗವು ಘನಗಂಭೀರವಾಗಿ ಕಂಡಿತು. ಲಿಂಗದ ಅಳತೆ ಆಳ ಹುಡುಕಹೋದ. ವಾಣಿ ಕುಂಠಿತವಾಯಿತ್ತು. ಭಾವಿಸಹೋದ ಭಾವ ಭ್ರಮೆಗೀಡಾಯಿತ್ತು. ನೆನೆಯ ಹೋದ ಮನ ನಿಲುಕದಾಯಿತ್ತು. ಇದು ಕಾರಣ ಶರಣ ವಾಙ್ಮನೋತೀತ ಲಿಂಗವೆಂದರುಹಿ ಇವೆಲ್ಲವುಗಳ ತಾನೆ ಅರಿಯುವದ ಕಂಡು ಇವುಗಳ ಘನವ ಮಾಡಲಿಲ್ಲ. ಲಿಂಗವರಿಯ ಹೋಗಿ ತಾನೆ ಘನಕ್ಕೆ ಘನನಾದ ಏಕೆಂದರೆ ಶರಣ ಲಿಂಗಕ್ಕೆ ಲಿಂಗವಾಗಿ, ಅರುವಿಂಗೆ ಅರುವಾಗಿ ಲಿಂಗವ ತನ್ನೊಳಿಟ್ಟುಕೊಂಡುದರಿಂದ ಶರಣರ ಘನಕ್ಕೆ ಶರಣೆಂಬೆ.

ಶರಣ ಲಿಂಗವ ನೊಳಗಿಟ್ಟ ಮಹಾಂತ ಈ ಮಹಾಂತನ ಹೃದಯ ಅಖಂಡಿತ ಘನ ಪೂರ್ಣವಪ್ಪ ಪರಮಜ್ಞಾನವ ತನ್ನೊಳಗಿಟ್ಟು ಕೊಂಡ ಸೀಮಾತೀತ ಹೃದಯ. ಇದು ಅರು ಹೃದಯ, ಅರುವ ಅರಿಯಹೋದ ಹೃದಯ ಸಾಮಾನ್ಯವೆ? ಅರಿದರಿದು ನೋಡಿ ನಿಬ್ಬೆರಗುಳ್ಳದ್ದಾಗಿ ಅಚಲಾನಂದ ದೊಳಿಪ್ಪ ಹೃದಯ ಇಲ್ಲಿಯೆ ನಿಶ್ಚಿಂತ ನಿರಾಳ ನೆಲೆಗೊಂಡ ನಿಜನಿವಾಸ. ಇದು ಅವಿಮುಕ್ತ ಕ್ಷೇತ್ರ. ಈ ಮಹಾಂತ ಕ್ಷರಾಕ್ಷರ ವೆಂಬುದಕ್ಕೂ ಮೀರಿದ ಘನನಾದುದರಿಂದ ಅಸಾಧ್ಯವ ಸಾಧಿಸಿದ ಮಹಾಂತ, ಕಾಣದುದ ಕಂಡೆ, ನೋಡದುದ ನೋಡಿದೆ, ಅರಿಯದರುವಾಗಿಹ ಶರಣನ ಘನಕ್ಕೆ ಶರಣೆಂಬೆ ಎಂದು ಹೇಳಿಹರು.

ಆ ಮಹಾಘನ ವಾಯತಕ್ಕೊಳಗು ಪ್ರಳಯಕ್ಕೆ ಹೊರಗು ಕೂಡಲಚೆನ್ನ ಸಂಗಮದೇವಾ, ಶರಣನ ಹೃದಯ ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವ ನೊಳಗಿಟ್ಟು ಕೊಂಡುದರಿಂದ ಆ ಮಹಾಘನ ಸಂಬಂಧ ವಾಯಿತ್ತು. ಬಹು

ಇಷ್ಟವಾಯಿತ್ತು. ಹೃದಯಕ್ಕೆ ಹೃದಯವೆ ಅರುವಿನ ಅರುವಾಗಿ ಪ್ರಜ್ವಲಿಸುವದಾಯಿತು. ಇದು ನಡೆಗೂ ನುಡಿಗೂ ಮಿಗೆ ಮಿಗೆಯಾಗಿರುವದು ಕಂಡು ಶರಣ ಅರಿಯದರುವಾದ ಏನೊಂದೆನಲಿಲ್ಲದ ಅರುವಾದ, ಈ ಅಪ್ರಮಾಣ ಅಗಮ್ಯನು ಪ್ರಳಯಕ್ಕೆ ಹೊರಗು, ಪ್ರಳಯದ ನೋಟದಿಂದ ಹೊರಗು, ಮಾಟದಿಂದ ಹೊರಗು, ನೆನಹು ನಿರ್ಣಯದಿಂದ ಹೊರಗು, ಅಕಲ್ಪಿತ ಘನವೆ ತನ್ನಿರುವಿನ ಅರುವಾದುದರಿಂದ ಮಹಾಘನ ಆಯತಕ್ಕೊಳಗು ಎಂದು ಹೇಳಿಹರು.

ಜಗವ ಹೊರಗಿಕ್ಕಿ ಲಿಂಗವನೊಳಗಿಟ್ಟಕೊಂಡ ಶರಣ ಪ್ರಳಯಕ್ಕೊಳ ಪಡಬಹುದೆ? ಅಖಂಡಿತ ಘನಪೂರ್ಣವಪ್ಪ ಲಿಂಗವನ್ನೆ ತನ್ನ ಹೃದಯದಲ್ಲಿಟ್ಟಕೊಂಡ ಜ್ಞಾನಲಿಂಗಿ, ಸರ್ವಾಂಗ ಲಿಂಗಿ ಪ್ರಳಯುಕ್ಕೊಳಪಡಬಹುದೆ? ಜ್ಞಾನಲಿಂಗ ವರಿಯಹೋಗಿ ತಾನದುವೆ ಆದ ಜ್ಞಾನಾನಂದ ಚಿದಾನಂದ ತಾನೆ ತಾನಾದ ಚಿನ್ಮಯ ಪ್ರಳಯಕ್ಕೊಳಪಡಬಹುದೆ?

ಘನಗಂಭೀರ ಮಹಾಘನ ಲಿಂಗವೆ, ತನಗೆ ಅತ್ಯಂತ ಪ್ರಿಯವಾದ ಶರಣ, ಇದು ಶರಣಂಗೆ ಪ್ರಿಯವಾದ ಲಿಂಗದರವು ಈ ಅರುವೆ ಅಖಂಡಿತ ಘನ ಪೂರ್ಣವಾಗಿಹ ಲಿಂಗವ ತನ್ನಿಂದ ಕಂಡಿರದ ಶರಣ, ಅರುವಿಂಗರುವಾಗಿಹ ಘನವ ತಿಳಿದ ಶರಣ, ಲಿಂಗಕ್ಕೆ ಲಿಂಗವಾಗಿ ಲಿಂಗವನ್ನೆ ತನ್ನೊಳಗಿಟ್ಟ ಕೊಂಡ ಶರಣ. ಈ ಮಹಾಂತ ಪ್ರಳಯಕ್ಕೊಳಪಡುವದದೆಂತು. ಇದು ಕಾರಣ ಶರಣ ಪ್ರಳಯಕ್ಕೆ ಹೊರಗು ಎಂದು ಹೇಳಿಹರು.

**ವಚನ 38**

**ಲಿಂಗಾಭಿಮಾನಿಗೆ ಅಂಗಾಶ್ರಯವಿಲ್ಲ.**
**ಬಂದುದೆ ಪರಿಣಾಮ, ನಿಂದುದೆ ನಿವಾಸ.**
**ಅದು ಇದು ಎಂಬುದಿಲ್ಲ ಕೂಡಲ ಚೆನ್ನ ಸಂಗನ ಶರಣಂಗೆ. ॥ 538 ॥**

ತಾತ್ಪರ್ಯ: ಲಿಂಗಾನುಭವಿಗೆ ಅಂಗಾಶ್ರಯವಿಲ್ಲ: ಲಿಂಗಾನುಭವಿ ಆರು? ಲಿಂಗದ ಅನುಭವಿಯೆ ಲಿಂಗಾನುಭವಿ. ಲಿಂಗವರಿತವರೆ, ಲಿಂಗಾನುಭವಿಗಳು. ಲಿಂಗಾರ್ಚಕರು ಲಿಂಗಾನುಭವಿಗಳೆ? ಆರಿಗೆ ಅಂಗಾಶ್ರಯುವಿಲ್ಲ, ಅವರು ಲಿಂಗಾನುಭವಿಗಳು. ಅವರಿಗೆ ಬೇಕೆಂಬುದಿಲ್ಲ. ಬೇಡೆಂಬುದಿಲ್ಲ. ಅಹುದಾದುದಿಲ್ಲ. ಅಲ್ಲಾದುದಿಲ್ಲ, ಅದು ಇದು ಎಂಬುದು ಮುನ್ನಿಲ್ಲ, ಅಪ್ರತಿಮ ಲಿಂಗವರಿತು ಅಚಲಾನಂದ ದೊಳಿಪ್ಪ ಅಗಮ್ಯ ಅಪ್ರಮಾಣನೆ ಲಿಂಗಾನುಭವಿ. ಲಿಂಗಾನುಭವಿಯು ಮಾತು ಮನಂಗಳಿಂದತ್ತತ್ತ ನಿಃಶಬ್ದಾನುಭವಿ ಅನಿಮಿಷ ದೇವನೆ ಲಿಂಗಾನುಭವಿ.

ಲಿಂಗಾನುಭವಿಯ ಕಾಯ ಕಂಗಳಂಗದಲ್ಲಿ ಲಿಂಗವು ಅನಿಮಿಷವಾಗಿಹ ಕಾಯ. ಶ್ರೋತೃ ಸೊಗಸಿನ ಘನಾನು ಭಾವದಲ್ಲಿಪ್ಪ ಕಾಯ, ಮನ ಪ್ರಾಣ ಸಂಯೋಗದಿಂದ ಕೂಡಲ ಚೆನ್ನ ಸಂಗಯ್ಯ ನಲ್ಲಿ ನಿಜವಾಗಿಪ್ಪ ಕಾಯ. ಇದು ಲಿಂಗಾನುಭವವುಳ್ಳ ಕಾಯ. ಈ ಕಾಯ ಚಿತ್ಕಾಯ ಲಿಂಗಕಾಯ ಲಿಂಗವರಿಯ ಹೋಗಿ ತಾನೆ ಲಿಂಗವಾಗಿಹ ಕಾಯ ನಿಃಶಬ್ದ ಘನಾನುಭವವುಳ್ಳ ಕಾಯ. ಅಹಹ ನಿಃಶಬ್ದ ಘನಾನುಭವ

ವರ್ಣಿಸುವದದೆಂತು ಇದು ಮಾತಿಗೂ ಮೌನಕ್ಕು ಮೀರಿರುವ ಘನಗಂಭಿರವಾದ ಮಹಾಘನಕ್ಕೇನೆನ್ನಬೇಕು. ಇಲ್ಲಿ ಮಾತು ಮೌನವು ಸಮಾನವು, ಕಾಣಬಾರದ ಘನವ ಕಂಡುದ ನಿಃಶಬ್ದ ಘನವೆ ತಾನಾಗಿಹ ನಿಲವು ಮನ ಮರವುಳ್ಳದ್ದಾಗಿರಲಿ, ಅರುವುಳ್ಳದ್ದಾಗಿರಲಿ ಎರಡನ್ನು ಕಾಣದ ಅಕಲ್ಪಿತ ಘನಾನುಭವಿಯ ವರ್ಣಿಸುವದದೆಂತು.

ಲಿಂಗಾನುಭವಿ ಎಂದರೆ ಕೂಡಲಚೆನ್ನಸಂಗಯ್ಯನಲ್ಲಿ ನಿವಸವಾದ ಮಹಾಂತ. ಕಂಗಳಂಗದಲ್ಲಿ ಲಿಂಗ ನಿವಾಸವಾದುದರಿಂದ ಅನಿಮಿಷ ದೃಷ್ಟಿ, ಕಂಗಳು ಲಿಂಗದಲ್ಲಿ ಲೀಯವಾದ ದೃಷ್ಟಿ. ಪೂರ್ವ ಸ್ವಭಾವ ಮರೆತು ಅಪೂರ್ವಿಕ ದೃಷ್ಟಿ, ಘನದೃಷ್ಟಿ, ಈ ದಿವ್ಯದೃಷ್ಟಿಯಲ್ಲಿ ತನಗಿಂತ ಅನ್ಯವಾವುದನ್ನು ಕಾಣದ್ದರಿಂದ ತಾನೆಂಬುದಿಲ್ಲ ಅನ್ಯವೆಂಬುದಿಲ್ಲ ಅರುವೆಂಬುದಿಲ್ಲ ಮರವೆಂಬುದು ಮುನ್ನಿಲ್ಲ. ಕಂಗಳಂಗದಲ್ಲಿ ಲಿಂಗ ಲಿಂಗದಂಗದಲ್ಲಿ ಕಂಗಳು ಒಂದಾದ ನಿಜ ನಿಲವು. ಇದುವೆ ಲಿಂಗಾನುಭವ ನೆಲೆಗೊಂಡ ದೃಷ್ಟಿ.

ಶ್ರೋತೃ ಸೊಗಸಿನ ಘನಾನುಭವದಲ್ಲಿಪ್ಪರು ಲಿಂಗಾನುಭವಿ ಶ್ರೋತೃ ತ್ವಕ್ಕು ಜಿಹ್ವೆ, ಘ್ರಾಣೇಂದ್ರಿ, ರಸನೇಂದ್ರಿಯಂಗಳೆಂಬ ಜ್ಞಾನೇಂದ್ರಿಯಂಗಳೆಲ್ಲ ಲಿಂಗದ ಘನಾನುಭವದತ್ತತ್ತ ಸಾಗಿಹವು. ವಿಷಯಂಗಳಿಂದ ವಿಮುಖವಾಗಿ ಪುರುಷೋತ್ತಮನತ್ತ ಸಾಗಿಹವು. ಸವೆಯದ ಬೇಸರವಾಗದ ಸಾಕೆನಿಸದ ಸುಖದತ್ತ ಸಾಗಿಹವು. ಸುಖದ ಸುಖಿಯಾಗಿ ಘನಾನುಭವದಲ್ಲಿಪ್ಪುದೆ ಲಿಂಗಾನುಭವಿ. ಇವು ಜ್ಞಾನೇಂದ್ರಿಯಂಗಳ ಜ್ಞಾನಾರ್ಜನೆ ಜ್ಞಾನಾನಂದ, ಮನ ಪ್ರಾಣಕ್ಕೆ ನಿಃಶಬ್ದ ಘನಾನುಭವ ತಾಕಿ; ಲಿಂಗಸುಖದ ಸುಖಿಯಾಗಿಪ್ಪವು. ಮನ ಲಿಂಗದ ಘನಾನುಭವ ಅರಿಯಹೋಗಿ ತನ್ನ ಉಪಾಧಿಮನ ಉಪಾಧಿರಹಿತ ಮನವೆಂಬುದಳಿದು ನಿರ್ವಾತ ದೀಪದಂತೆ ಅಕಲ್ಪಿತ ಘನದಿರುವಿನ ನಿಬ್ಬೆರಗಿನೋಳ್ ನಿಂದುದು, ಅದಾರಯ್ಯ ಹೀಗೆ ಎಂದು ವರ್ಣಿಸುವದು.

ಬಂದುದೆ ಪರಿಣಾಮ, ಲಿಂಗಾನುಭವಿಗೆ ಅಂಗಾಶ್ರಮವಿಲ್ಲದುದೆ ಪರಿಣಾಮ ಕಂಗಳಂಗದಲ್ಲಿ ಲಿಂಗದ ನಿಜ ನಿವಾಸವಾಗಿಪ್ಪ ಪರಿಣಾಮ, ಜ್ಞಾನೇಂದ್ರೀಯಂಗಳ ಸಮುದಾಯ ಲಿಂಗದತ್ತತ್ತ ಸಾಗಿ ಸವೆಯದ ಸುಖದಲ್ಲಿದ್ದು ತಮ್ಮ ಪೂರ್ವಸ್ವಭಾವ ಮರೆತುದೆ ಪರಿಣಾಮ. ಮನ ಪ್ರಾಣವೆಂಬ ತಮ್ಮ ಸಂಜ್ಞೆಯ ಕಳಕೊಂಡು ಲಿಂಗದಲ್ಲಿ ಲೀಯವಾದುದೆ ಪರಿಣಾಮ. ಶರೀರ ಇಂದ್ರಿಯಂಗಳು ಪ್ರಾಣಾದಿಗಳು ಮನ ಬುದ್ಧಿಯಾಗಿ ಬಂದು ಅಪ್ರತಿಮ ಲಿಂಗವರಿತು ಲಿಂಗ ಸುಖದ ಸುಖಿಯಾದುದೆ ಪರಿಣಾಮ.

ನಿಂದುದೆ ನಿವಾಸ, ಲಿಂಗ ನಿವಾಸ, ಸುಖ ಸ್ವರೂಪ ಸುಖದ ನಿವಾಸ ಏನೆಂದೆನಲಿಲ್ಲದ ಅರುವಿನ ವಾಸ, ಅರಿಯದರುವಿನ ವಾಸ, ನಿಶ್ಚಿಂತ ವಾಗಿಹ ನಿರಾಳ ನೆಲೆಗೊಂಡ ನಿವಾಸ. ಇಲ್ಲಿ ನಿಃಶಬ್ದ ಘನಾನುಭಾವದ ವಾಸ. ಇಲ್ಲಿ ಲಿಂಗಾನುಭವಿಗಳು ನಿಂದುದು. ಇದು ತನ್ನಯ ವಾಸ, ಅದು ಇದು ಎಂಬುದಿಲ್ಲ ಕೂಡಲ ಚೆನ್ನ ಸಂಗಯ್ಯನ ಶರಣಂಗೆ ಅದು ಅಂಗ ಇದು ಲಿಂಗ ಎಂಬುದಿಲ್ಲ. ಅದು ಜಡ ಇದು ಅಜಡ ವೆಂಬುದಿಲ್ಲ. ಅದು ನಿತ್ಯ ಇದು ಅನಿತ್ಯವೆಂಬುದಿಲ್ಲ, ಇದು ಇಹ ಅದು ಪರವೆಂಬುದಿಲ್ಲ,

ನಿಸ್ಸೀಮ ನಿಲಯವುಳ್ಳ ಮಹಾಂತ ಸೀಮಿತದೃಷ್ಟಿ ನಷ್ಟವಾದುದರಿಂದ ಅದು ತತ್ವಪದವೆಂಬುದಿಲ್ಲ ಇದು ತ್ವಂಪದವೆಂಬುದಿಲ್ಲ. ಲಕ್ಷ್ಯವೆಂಬುದಕ್ಕೂ ಮೀರಿದವನಾದುದರಿಂದ ಅದು ಇದು ಎಂಬುದಿಲ್ಲ ಶರಣಂಗೆ ಎಂದು ಹೇಳಿಹರು.

**ವಚನ 39**

**ಎನ್ನ ಮನ ನಿಮ್ಮಲ್ಲಿ ನೆಟ್ಟು ತೆಗೆಯಬಾರದ ಬೆರಗು ನೋಡಯ್ಯಾ.**
**ಇಹವೆಂಬುದನರಿಯೆ, ಪರವೆಂಬುದನರಿಯೆ,**
**ಪರಮಾನದಂದದಲ್ಲಿರ್ದೆ ನೋಡಯ್ಯಾ.**
**ಪರಮನ ನೆನಹೆ ನೆನಹಾಗಿ ಪರಮ ಸುಖದಲ್ಲಿ**
**ಸುಖಿಸುತಿರ್ದೆ ನೋಡಯ್ಯ ಅಪ್ರತಿಮ**
**ಕೂಡಲಚೆನ್ನ ಸಂಗಯ್ಯ ಎನ್ನ ಬೆರಗಿನ**
**ಭೇದವ ನೀನೆ ಬಲ್ಲೆಯಯ್ಯಾ. ॥ 481 ॥**

ತಾತ್ಪರ್ಯ: ಎನ್ನ ಮನ ನಿಮ್ಮಲ್ಲಿ ನೆಟ್ಟು ತೆಗೆಯಬಾರದು: ಓ ಲಿಂಗ ಒಂದಾಗಿರ್ದ ಜಂಗಮವೆ ಎನ್ನ ಮನ ನಿಮ್ಮಲ್ಲಿ ನೆಟ್ಟು ತೆಗೆಯಬಾರದು. ನೀವು ನೆನಹಿಂಗೆ ಮೀರಿದ ಘನ, ಭಾವಕ್ಕಗಮ್ಯವಾಗಿಹ ಘನ, ನೀವು ಎನ್ನ ಮನ ನೆನಹಿಂಗೆ ಮೀರಿ ನಿಮ್ಮಲ್ಲಿ ನೆಟ್ಟುದರಿಂದ ತೆಗೆಯಬಾರದು.

ಓ ಶುದ್ಧ ಶಿವೈಕ್ಯ ಜಂಗಮವೆ ಎಷ್ಟೋ ಕಾಲದಿಂದ ಎನ್ನ ಮನ ನೆನಹಿಂದುಕ್ತವಾಗಿ, ನಿಮ್ಮ ಮುಟ್ಟ ಹೋಗಿ ಮುಟ್ಟಲಿಲ್ಲ ಭಾವಿಸ ಹೋಗಿ ಭಾವ ಭ್ರಮೆಯಿಂದುಕ್ತವಾಯಿತ್ತು, ಕಲ್ಪಿಸಹೋಗಿ ಕಂಗೆಟ್ಟಿತ್ತು.

ನಿಮ್ಮ ನಟ್ಟ ಎನ್ನ ಮನ ಇಹವೆನ್ನದ ಮನ ಪರವೆನ್ನದ ಮನ ನಾನೆನ್ನದ ಮನ ನೀನೆನ್ನದ ಮನ ಅಹುದೆನ್ನದ ಮನ ಅಲ್ಲೆನ್ನದ ಮನ ಬೇಕೆನ್ನದ ಮನ, ಬೇಡೆನ್ನದ ಮನ, ನಿನ್ನನ್ನು ಸಗುಣನೆಂದುಸರದ ಮನ, ನಿರ್ಗುಣನೆನ್ನದಮನ ಸತ್ ಎನ್ನದ ಮನ, ಅಸತ್ ಎನ್ನದ ಮನ, ಚಿತ್ ಎನ್ನದ ಮನ ಅಚಿತ್ ಎನ್ನದ ಮನ, ಆನಂದವೆನ್ನದ ಮನ, ನಿರಾನಂದ ವೆನ್ನದ ಮನ, ನಿತ್ಯವೆನ್ನದ ಮನ, ಅನಿತ್ಯವೆನ್ನದ ಮನ, ಅಪೂರ್ಣ ವೆನ್ನದ ಮನ, ಪೂರ್ಣವೆನ್ನದ ಮನ ಏನೂ ಎನ್ನದ ಮನ ನಿಮ್ಮ ನೆಟ್ಟ ಮನವಾದುದರಿಂದ ತೆಗೆಯಬಾರದು ನೋಡಾ.

ಓಹೋ ಜಂಗಮ ಲಿಂಗವೆ ನೀವು ನುಡಿಗೆಡೆಗೊಡದ ಘನವಾದುದರಿಂದ ಎನ್ನ ಮನ ನುಡಿಗೆಡೆಗೊಡದ್ದಾಗಿ ನಿಮ್ಮಲ್ಲಿ ಒಂದಾದುದು ನೋಡಾ. ಅದು ಪುನಃ ನುಡಿಯಿಂದುಕ್ತವಾಗಬಾರದು ನೆನಹಿಂದುಕ್ತವಾಗ ಬಾರದು. ಭಾವದಿಂದುಕ್ತವಾಗಬಾರದು ಓ ಲಿಂಗ ಜಂಗಮವೆ ನಿಮ್ಮಲ್ಲಿ ಎನ್ನ ಮನ ಲೀಯವಾಗಿ ಬೆರಗುಗೊಂಡಿದೆ ನೋಡಾ ನಿಮ್ಮಲ್ಲಿ ನೆಟ್ಟು ಬೆರಗು ಶಬ್ದಂಗಳೆ ನಾಚಿ ನಿಶಬ್ದವೆ ಎನ್ನ ನಿಲುವಾಗಿಹ ಬೆರಗು ನೋಡಯ್ಯ, ನೆನಹು ನಿರ್ಣಯ ನಾಚಿ ಎನ್ನ ಪೂರ್ವದ ಮನ ನಷ್ಟವಾಗಿ, ಧ್ಯಾನಾತೀತವಾದುದೆ ಬೆರಗು ನೋಡಯ್ಯ.

ನಿಮ್ಮ ನೆಟ್ಟ ಬೆರಗು ಇಹವ ಕಾಣಲಿಲ್ಲ ಪರವ ಕಾಣಲಿಲ್ಲ, ನಾನೆನಲಿಲ್ಲ,

ನೀನೆನಲಿಲ್ಲ, ಅದು ಎನಲಿಲ್ಲ, ಇದು ಎನಲಿಲ್ಲ, ಏನೊಂದರಸದೆ ಪರಮಾನಂದ ದಲ್ಲಿರ್ದೆ ನೋಡಯ್ಯ. ಪರಮನ ನೆನಗೆ ನೆನಹಾಗಿ ಪರಮ ಸುಖವ ಸುಖಿಸುತಿರ್ದೆ ನೋಡಾ. ಓ ಮಹಾಘನ ಲಿಂಗವೆ, ನೀನು ಜಂಗಮರೂಪಿ ಲಿಂಗ. ನೀನು ಅನುಪಮ ನೆನ್ನುವದೆ ಪರಮನ ನೆನಹು ನೋಡಾ. ಕ್ಷರಾಕ್ಷರ ನೆನ್ನುವದಕ್ಕೂ ಮೀರಿದ ಘನ ನೆನ್ನುವುದೆ ಪರಮನ ನೆನಹು. ನಿಮ್ಮಲ್ಲಿ ನೆಟ್ಟ ಎನ್ನ ಮನ ನೀವು ಜಂಗಮ ರೂಪದಲ್ಲಿ ಕಂಡರೂ ಕ್ಷರವೆನ್ನಲು ಹೋಗದ ಮನ, ಅಕ್ಷರವೆನಲು ಹೋಗದ ಮನ, ವ್ಯಕ್ತವಾಗಿ ಕಾಣದ ಮನ, ಅವ್ಯಕ್ತವಾಗಿ ಕಾಣದ ಮನ. ವ್ಯಾಪ್ತ ನೆನಲಿಲ್ಲ, ವ್ಯಾಪಕ ನೆನಲಿಲ್ಲ, ನಾಮಿವೆನಲಿಲ್ಲ, ಅನಾಮಿ ಎನಲಿಲ್ಲ, ನಿರ್ನಾಮವೆ ಎನ್ನ ನೆನಹಿನ ನೆನಹಾಗಿ ಪರಮಸುಖದಲ್ಲಿ ಸುಖಿಸುತಿರ್ದೆ ನೋಡಾ.

ಓ ಜಂಗಮ ಲಿಂಗವೆ ನೀವು ಅರಸಬಾರದ ಘನವಾದುದರಿಂದ ಎನ್ನ ಮನ ಏನೊಂದರಸದ್ದಾದುದೆ ನಿಮ್ಮ ನೆನಹಿನ ನೆನಹು, ಸುಖದ ಸುಖವಾಯಿತ್ತು. ಅಪ್ರತಿಮ ಕೂಡಲಚೆನ್ನ ಸಂಗಯ್ಯ ಎನ್ನ ಬೆರಗಿನ ಭೇದವ ನೀನೆ ಬಲ್ಲೆಯಯ್ಯ, ಏನೊಂದುಸರಲು ಎಡೆಗೊಡದ ಘನಗಂಭೀರ ಮಹಾಘನವೆ ಎನಗೆ ಬೆರಗು ಆದುದು ನೀನೆ ಬಲ್ಲೆಯಯ್ಯ ಎನ್ನ ಮನ ಪೂರ್ವಸ್ವಭಾವ ಮರೆತು ನಿಮ್ಮಲ್ಲಿ ನೆಟ್ಟುದು ನೀವೆ ಬಲ್ಲಿರಾಗಿ ಆ ಬೆರಗು ನಿಮ್ಮ ಪರಮಸುಖದಲ್ಲಿ ಸುಖಿಸುತಿರ್ದುದು ನೀವೆ ಬಲ್ಲಿರಯ್ಯ. ಎಂದು ಚೆನ್ನಬಸವರಾಜದೇವರು ತಮ್ಮ ಮನ ಮಿಕ್ಕಿಮೀರಿ ನಿಂದ ನಿಲುವುಳ್ಳ ಘನಸುಖದಲ್ಲಿರ್ದುದು ಕೊಂಡಾಡಿದ್ದಾರೆ.

**ವಚನ 40**

**ಅರಿದೆನೆಂದಡೆ ಅರಿಯಬಾರದು ನೋಡಾ**
**ಘನಕೆ ಘನ ತಾನೆ ನೋಡಾ,**
**ಚೆನ್ನಮಲ್ಲಿಕಾರ್ಜುನ ನಿರ್ಣಯವಿಲ್ಲದೆ ಸೋತೆನು**

**ತಾತ್ಪರ್ಯ:** ಅರಿದೆನೆಂದಡೆ ಅರಿಯಬಾರದು ನೋಡಾ, ಘನಕ್ಕೆ ಘನ ತಾನೆ ನೋಡಾ: ಘನಕ್ಕೆ ಘನನಾದ ತನ್ನನ್ನು ಅರಿದೆನೆಂದಡೆ ಅರಿಯಬಾರದು. ಏಕೆಂದರೆ ತನ್ನನ್ನು ಅರಿವಿನಿಂದ ಅರಿದಿಹೆನೆಂದಡೆ, ಅರುವು ಮರಹಿಂಗೊಳಗಾಯಿತ್ತಾಗಿ, ಆ ಅರುವಿನಿಂದ ಅರಿದಿಹೆನೆಂಬ ಅಜ್ಞಾನಿಯ ಮಾತ ಕೇಳಲಾಗದು. ಭಾವದಿಂದ ಭಾವಿಸಿಹೆನೆಂದಡೆ ಭಾವ ಭ್ರಾಂತಿಗೊಳಗಾಗಿತ್ತಾಗಿ ಆ ಭಾವದಿಂದ ಭಾವಿಸಿಹನೆಂಬ ಭ್ರಮಿಕನ ಮಾತು ಕೇಳಲಾಗದು. ಜ್ಞಾನದಿಂದ ಅರಿದಿಹೆನೆಂಬ ಜ್ಞಾನ ಅಜ್ಞಾನಕ್ಕೊಳಗಾಯಿತ್ತಾಗಿ ಆ ಜ್ಞಾನದಿಂದ ಅರಿದಿಹೆನೆಂಬ ಅಜ್ಞಾನಿಯ ಮಾತ ಕೇಳಲಾಗದು ಸದ್ ಜ್ಞಾನ ಬರಿತ ಕೂಡಲಚೆನ್ನ ಸಂಗಾ ನಿಮ್ಮ ಶರಣ.

ಅರಿದೆನೆಂದಡೆ ಅರಿಯಬಾರದು. ಘನಕ್ಕೆ ಘನನಾದ ತನ್ನನ್ನು ಅದಾವುದು ಅರಿವುದು? ತಾನೆ ಅರಿಯಬಹುದು. ಅರಿಯದಿರಬಹುದು. ಸ್ವತಂತ್ರ ತಾನೆ. ತನ್ನನ್ನು ಅರುವಿನಿಂದ ಅರಿದಿಹೆನೆಂದಡೆ ಅರುವು ಮರಹಿಂಗೊಳಗಾಯಿತ್ತಾಗಿ ಆ ಅರುವಿನಿಂದ ಅರಿದಿಹೆನೆಂಬ ಅಜ್ಞಾನಿಯ ಮಾತ ಕೇಳಲಾಗದು.

ಕೆಲಬರು ತನ್ನನ್ನು ಅರುವಿನಿಂದ ಅರಿದಿಹೆನೆಂಬುದು ಅದು ಅರುವಿಗೆ ಮರವು ಅರುವೆಂಬುದು ನುಡಿಯಿಂದುಕ್ತವಾದುದು. ತಾನು ನುಡಿಗೆಡೆಗೊಡದ ಘನ ನುಡಿಯಿಂದುಕ್ತವಾದ ಅರುವು ನುಡಿಗೆಡೆಗೊಡದ ಘನನಾದ ತನ್ನನ್ನು ಅರಿಯಬಹುದೆ? ಅರಿಯಬಾರದು, ಅರಿಯಲಾರದ ಅರುವಿನಿಂದ ತನ್ನನ್ನು ಅರಿದಿಹೆನೆಂಬುದು ಮರಹು, ಈ ಮರಹಿನ ಅರುವುಳ್ಳವನಾಗಿ ತನ್ನ ಅರಿದಿಹೆನೆಂಬ ಅಜ್ಞಾನಿಯ ಮಾತ ಕೇಳಲಾಗದು.

ಕೆಲಬರು ಘನಕ್ಕೆ ಘನನಾದ ತನ್ನನ್ನು ಭಾವದಿಂದ ಭಾವಿಸಿಹೆವೆಂಬುದು ಅದಾವ ಭಾವ. ಬ್ರಹ್ಮಭಾವ, ಸಚ್ಚಿದಾನಂದ ಭಾವ, ಪೂರ್ಣಭಾವ ಮಾಡಿ ತನ್ನನ್ನು ಅರಿದೆನೆಂದಡೆ ಇದು ಆಗದು. ಏಕೆಂದರೆ ಭಾವಕ್ಕಗಮ್ಯನಾದ ತನ್ನನ್ನು ಬ್ರಹ್ಮಭಾವ ಮಾಡಿ ಅರಿಯುವದದೆಂತು? ಭಾವಕ್ಕಗಮ್ಯನಾದ ತನ್ನನ್ನು ತಾ ತಿಳಿಯದೆ ಸಚ್ಚಿದಾನಂದ ಭಾವದಿಂದ ಭಾವಿಸಿರುವೆನೆಂಬುದು ಇದು ಭ್ರಮಿತರ ಮಾತು. ಇದು ಕಾರಣ ಈ ಭ್ರಮಿತ ಭಾವದಿಂದಲಾದರೂ ಭಾವಕ್ಕಗಮ್ಯವಾದ ತನ್ನ ಘನವ ಅರಿಯನು. ಕೆಲಬರು ಜ್ಞಾನದಿಂದ ತನ್ನನ್ನು ಅರಿದಿಹೆನೆಂಬರು ಅದಾವ ಜ್ಞಾನದಿಂದ ಅರಿದಿಹರು.

ಜೀವೊಬ್ರಹ್ಮೈವ ನಾ ಪರಃ ಜೀವ ಬ್ರಹ್ಮರೇಕತ್ವಜ್ಞಾನದಿಂದ ತನ್ನನ್ನು ಅರಿದಿಹೆ ವೆನ್ನವರು. ಏನೊಂದುಸುರಲು ಎಡೆಗೊಡದ ತಾನು ಜೀವನು ಸಚ್ಚಿದಾನಂದ, ಬ್ರಹ್ಮವು ಸಚ್ಚಿದಾನಂದ, ಸಕಲವು ಸಚ್ಚಿದಾನಂದ ಜ್ಞಾನದಿಂದ ತಿಳಿಯುವದಾದರೂ ಹೇಗೆ? ಘನಕ್ಕೆ ಘನವಾದ ತಾನು ಅನುಪಮ ಜೀವ ಬ್ರಹ್ಮರೇಕತ್ವ ಜ್ಞಾನವೆಂಬುದು ಉಪಮೆಗೊಳಪಟ್ಟುದು. ತಾನು ಅಲಕ್ಷ್ಯಮದ್ವಯಃ ಶೂನ್ಯ ಮಮೂರ್ತಂ ಪರಮವ್ಯಯಮ್ ಜೀವ ಬ್ರಹ್ಮರೇಕತ್ವ ಜ್ಞಾನ ಲಕ್ಷಣ ಲಕ್ಷ್ಯದಿಂದುಕ್ತವಾದುದು. ತಾನು ಲಕ್ಷಣ ಲಕ್ಷ್ಯವೆಂದುಸರಲು ಎಡೆಗೊಡದ ಅಲಕ್ಷ್ಯ ಅದ್ವಯಂ ಅಖಂಡ ಅಮೂರ್ತ ಪರಮ ಅವ್ಯಯನಾಗಿರುವ ತನ್ನನ್ನು ಅರಿಯಬಹುದೆ? ಅರಿಯಬಾರದು.

ಇದು ಕಾರಣ ತನ್ನನ್ನು ಅರುವಿನಿಂದ ಅರಿದೆನೆಂದಡೆ ಅರಿಯಬಾರದು. ಬ್ರಹ್ಮಭಾವ ಲಿಂಗಭಾವದಿಂದ ಭಾವಿಸಿ ಅರಿದೆನೆಂದರೂ ಅರಿಯಬಾರದು. ಕಲ್ಪಿತ ಜ್ಞಾನದಿಂದ ಅಕಲ್ಪಿತ ಘನವ ಅರಿದೆನೆಂದಡೆ ಅರಿಯಬಾರದು. ಏಕೆಂದರೆ ಘನಕ್ಕೆ ಘನನಾದ ತನ್ನನ್ನು ಕಲ್ಪಿತ ಅರಿವು ಕಲ್ಪಿತ ಭಾವ ಕಲ್ಪಿತಜ್ಞಾನ ಇವುಗಳಾವು ಅರಿಯವು. ಇವು ಹೆತ್ತರಿವು ತಾನು ಸ್ವಯಮೇವ ಅರುವಿನ ಅರುವು. ಹೆತ್ತರಿವು ಅರುವಿಂಗರುವಾಗಿಹ ಘನಕ್ಕೆ ಘನ ತಾನೆ ಇರುವಲ್ಲಿ ತನ್ನನ್ನು ಈ ಹೆತ್ತರಿವು ಅರಿಯಲಾಗದು.

ಚೆನ್ನಮಲ್ಲಿಕಾರ್ಜುನನ ನಿರ್ಣಯ ವಿಲ್ಲದೆ ಸೋತೆನು: ಚೆನ್ನಮಲ್ಲಿಕಾರ್ಜುನನೆಂಬುದು ವಾಕ್, ಮನಸ್ಸು, ಬುದ್ಧಿಗೆ ವಿಷಯವಾಗದ ಘನ, ವಾಣಿ ಅದನೆಂತು ಕಥನ ಮಾಡುವುದು. ಅಕಲ್ಪಿತ ಘನನಾದ ಚೆನ್ನಮಲ್ಲಿಕಾರ್ಜುನ ಕಲ್ಪಿತವಾದ ಮನದ ಕಲ್ಪನೆಯು ಕಲ್ಪಿಸದು. ಅರಿಯದರುವು ಏನೊಂದೆನಲಿಲ್ಲದ ಅರುವು ಮರವರುವುಳ್ಳ ಬುದ್ಧಿ ಇದನೆಂತು ನಿರ್ಣಯಿಸುವದು. ಅಚಿಂತ್ಯವಾದ ಘನಕ್ಕೆ ಘನ, ಚಿಂತನವುಳ್ಳ ಚಿತ್ತಾದರೂ ಚಿಂತಿಸುವದದೆಂತು? ಇದು ಕಾರಣ ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನ ನಿರ್ಣಯವಿಲ್ಲದೆ ಸೋತೆನು ಎಂದು ಹೇಳಿದ್ದಾರೆ.

ಕಥನ ಮಾಡಲು ಬಂದ ವಾಣಿ ಸೋತಿತು. ಕಲ್ಪಿಸಿ ಬಂದ ಮನ ಸೋತಿತು. ನೆನಹಿಂಗೆ ಮೀರಿದ ಘನವ ಕಂಡು ನೆನಹಿನಿಂದುಕ್ತವಾದ ಮನವು ಸೋತಿತು. ಅರಿಯದರುವು ಎಂಬುದು ಚೆನ್ನಮಲ್ಲಿಕಾರ್ಜುನ ಈ ಮಹದರುವನ್ನು ಬುದ್ಧಿಯ ನಿರ್ಣಯ ಮಾಡದಾಗದ್ದರಿಂದ ನಿರ್ಣಯವಿಲ್ಲದೆ ಸೋತೆನು ಎಂದು ಹೇಳಿದಾರೆ.

**ವಚನ 41**

**ತುಂಬಿದುದು ತುಳಕದು ನೋಡಾ,**
**ನಂಬಿದುದು ಸಂದೇಹಿಸದು, ನೋಡಾ.**
**ಒಲಿದುದು ಓಸರಿಸದು ನೋಡಾ ನೆರೆ**
**ಅರಿದುದು ಮರೆಯದು ನೋಡಾ**
**ಚೆನ್ನಮಲ್ಲಿಕಾರ್ಜುನಯ್ಯ, ನೀನೊಲಿದ**
**ಶರಣಂಗೆ ನಿಸ್ಸೀಮ ಸುಖವಯ್ಯ.**

**ತಾತ್ಪರ್ಯ:** ತುಂಬಿದುದು ತುಳಕದು ನೋಡಾ: ಆವುದು? ತುಂಬಿದುದು ಯತಾವಾಚ್ಯ ನಿವರ್ತಂತೆ ಅಪ್ರಾಪ್ಯ ಮನಸಾ ಸಹ. ಆವುದು ವಾಕ್ ಮನವು ನಿರ್ಣಯ ಮಾಡಲು ಸೋತಿದೆ, ಅದುವೆ ತುಂಬಿದುದು. ಘನಕ್ಕೆ ಘನವಾದ ತಾನೆ ತುಂಬಿದುದು ತುಳಕದು ನೋಡಾ. ವಾಕ್ ತುಂಬಿದುದು ಆಗದು ಸ್ಥಾವರ ಜಂಗಮ ಜಗವು ತುಂಬಿದುದು ಆಗದು. ಅರಿಸಿಕೊಳ್ಳವದು ತುಂಬಿದುದು ಆಗದು, ಅರಿಯುವದು ತುಂಬಿದುದು ಆಗದು. ಅಳಿದು ಉಳಿದುದು ಆಗಿ ತೋರುವುದ ತುಂಬಿದುದು ಆಗದು. ಸ್ಥೂಲ ಸೂಕ್ಷ್ಮವು ತುಂಬಿದುದು ಆಗದು, ಅಂತರ್ಮುಖ ಬಹಿರ್ಮುಖವು ತುಂಬಿದುದು ಆಗದು. ತತ್ವ ಅತತ್ವವೆಂಬ ವಿವೇಕವು ತುಂಬಿದುದು ಆಗದು. ಅಜ್ಞಾನ ಜ್ಞಾನವು ತುಂಬಿದುದು ಆಗದು. ಜೀವ ಪರಮೈಕ್ಯವೆಂಬ ಅನುಸಂದಾನವು ತುಂಬಿದುದು ಆಗದು. ನಿತ್ಯಾನಿತ್ಯವೆಂಬ ವಾಕ್ ದ್ವೈತವು ತುಂಬಿದುದು ಆಗದು. ನಾಹಂ ಎಂಬುದು ತುಂಬಿದುದು ಆಗದು. ಸೋಹಂ ಕೋಹಂ ಚಿದಹಮ್ಮು ಎಂಬಿವು ತುಂಬಿದುದು ಆಗದು. ಇವೆಲ್ಲವು ಹೆತ್ತರಿವು ಬಿಡಿ ಅರಿವು ಇವು ಮಾಯಾಮಯ. ಇವು ಅಪೂರ್ಣವು.

ಇವೆಲ್ಲಕ್ಕೂ ಬೆಳಗುಳ್ಳ ತಾನು ಘನಕ್ಕೆ ಘನಾಗಿರ್ದುರಿಂದ ತುಂಬಿದುದು ತಾನು ತುಳಕದವನು ತಾನು ತಾನಾರೆಂದರಿತ ತನ್ನ ಸ್ವರೂಪ ತುಂಬಿದುದು ಅದು ತುಳಕದು.

ನಂಬಿದುದು ಸಂದೇಹಿಸದು ನೋಡಾ: ಆವುದು ಸಂದೇಹದಿಂದುಕ್ತವಾಗಿದೆ ಅದು ಮನದ ಕಾರ್ಯ, ಮನಸ್ಸಿಗೆ ಮೀರಿದ ಘನ. ಘನನೆಂಬುದಕ್ಕೂ ಮೀರಿ ಬೆಳಗುವ ಬೆಳಗು, ತನ್ನದಾಗಿರುವದರಿಂದ ತನ್ನ ನಂಬಿದವನಿಗೆ ಎಂದೂ ಸಂಶಯ ಬರದು. ತಾನಾಗದ ತನ್ನದಾಗದ ದೇಹವಾಗಲಿ, ಪ್ರಕೃತಿ ರೂಪ ಗುಣ ಕಾರ್ಯವಾಗಲಿ, ಮಾಯಾಮಯ ತತ್ವವಾಗಲಿ, ಜೀವತ್ರಯ ಭಾವತ್ರಯಗಳ ನಂಬದುದರಿಂದ ಸಂದೇಹ ಬರುವದು ಸಹಜ. ಭಾವಾತೀತವಾದ ತನ್ನಿರವು ನಂಬಿದ ಮಹಾಂತನಿಗೆ ಸಂದೇಹ ಎಂದೂ ಬರದು, ಗುಣ ಗುಣಗಳ ಕಾರ್ಯ ನಂಬಿದವರಿಗೆ ಸಂದೇಹ ಬರುವದು

ಸಹಜ. ಗುಣಾತೀತ ವಾದ ತನ್ನಿರವು ನಂಬಿದವನಿಗೆ ಸಂದೇಹ ಬರದು.

ಒಲಿದುದು ಓಸರಿಸದು, ಆವುದು ಒಲಿದು ಬಂದಿದೆ ಅದಕ್ಕೆ ಬೇಸರವಾಗದು. ಬೇಸರವಾಗದ ಸುಖವೆಂದರೆ ತನ್ನ ಒಲಿದುದು. ಬಹುಜನ ಅನಾತ್ಮ ತತ್ವ ಒಲಿಸಿಕೊಳ್ಳಲು ಬಡಬಡಿಸುವರು ತನ್ನಿಂದ ತೋರಿ ಇಲ್ಲವಾಗುವ ಮಾಯಿಕ ತತ್ವವಾದ ಅಣಿಮಾದಿ ಸಿದ್ಧಿಗಳು ದೇವಲೋಕದ ಇಂದ್ರಪದವಿ ಸಾಲೋಕ ಸಾಮೀಪ್ಯ, ಸಾರೂಪ್ಯ ಇರಲಿ, ಇವುಗಳ ಒಲಿಸಿಕೊಂಡರೂ ಇವು ಪ್ರಥಮ ಪ್ರೀತಿಯಿದ್ದಂತೆ ಗತಿಸಿದಂತೆ ಆ ಪ್ರೀತಿ ಉಳಿಯದು. ಅದರ ಘನತ್ವವು ಉಳಿಯದು. ಅಲ್ಲಿ ಸುಖವು ಹಂಗಿನ ಸುಖವು ಇದು ಕಾರಣ, ಒಲಿಯ ಬೇಕಾದುದು ತನ್ನ ಸ್ವರೂಪ, ಅಚಿಂಥ್ಯ ಅಪ್ರಮಾಣವಾದುದು. ಅರಿಯದರವು ಇದು ಒಲಿಯಬೇಕಾದುದು ಇದು ಒಲಿತಲ್ಲಿ ಬೇಸರವಾಗದು, ತನ್ನ ತಾನರಿತ ಮಹಾಂತಂಗೆ ತನ್ನ ಸ್ವರೂಪಮಾದ ಅಚಿಂತ್ಯತ್ವ ಒಲಿದುದು ಇದು ಬೇಸರವಾಗದು.

ನೆರೆ ಅರಿದುದು ಮರೆಯದು ನೋಡಾ: ಆರು ತನ್ನ ಸ್ವರೂಪ ಯತಾರ್ಥ ತಿಳಿದಿಹರು. ಅದು ವಿಸ್ಮೃತಿ ಆಗದು. ಏಕೆಂದರೆ ತನ್ನ ಸ್ವರೂಪ ತೆರಹಿಲ್ಲದ ಘನ, ನಿರಂತರವಾಗಿರುವ ಮಂಗಳಮಯ ಪರಮಸತ್ ಸ್ವರೂಪ. ಆರು ತನ್ನನ್ನು ತಾನು ಚೆನ್ನಾಗಿ ತಿಳಿವನು. ಅದು ತನ್ನ ಸ್ವರೂಪ. ದೂರ ಸಮೀಪವೆಂದು ಹೇಗೆ ಹೇಳುವದು. ತನ್ನದು ಮನ ಮೇರೆದಪ್ಪಿದ ಇರವು. ಇದು ತನ್ನಿಂದ ತನಗದು ತಿಳಿವುಡೆ ಅದು ವಿಸ್ಮೃತಿಯಾಗದು. ಕಲ್ಪಿಸುವದೆಲ್ಲ ಸ್ಮೃತಿ ವಿಸ್ಮೃತಿಯ ಕಾರ್ಯ ಅಕಲ್ಪಿತ ಘನವೆಂಬದು ತನ್ನಿರವು ತನಗದು ತಿಳಿವುಡೆ, ಇದು ವಿಸ್ಮೃತಿ ಆಗುವದದೆಂತು, ಸ್ಮೃತಿ ಆಗುವದಾದರೂ ಅದೆಂತು.

ಚಿಂತಿಸುವದೆಲ್ಲ ಕಲ್ಪಿತಕಾರ್ಯ, ಅಚಿಂತ್ಯ ಘನವದು ತನ್ನಿರವು ಎಂಬುದು ತನ್ನಿಂದ ತನಗದು ವೇದ್ಯವಾಗುವುಡೆ, ಚಿಂತಿಸುವ ಕಲ್ಪಿತ ಕಾರ್ಯ ತಾನಾಗನು, ಚೆನ್ನಮಲ್ಲಿಕಾರ್ಜುನಯ್ಯ, ನೀನೊಲಿದ ಶರಣಂಗೆ ನಿಸ್ಸೀಮ ಸುಖವಯ್ಯ. ಆವುದು ಕಲ್ಪಿತ ಪುರುಷನ ಕಾರ್ಯವಾಗಿದೆ. ಅದು ಸೀಮಿತದಿಂದುಕ್ತವಾಗಿದೆ. ಚಿಂತನ ನೆನಹು, ನಿರ್ಣಯದಿಂದುಕ್ತವಾಗಿದೆ, ಆವುದು ನಿಸ್ಸೀಮವಾಗಿದೆ. ಅದು ತಾನಾರೆಂದರಿತ ತನ್ನ ನಿಲವು ತನ್ನ ನಿಲುವೆ ಚೆನ್ನಮಲ್ಲಿಕಾರ್ಜುನ ನಿಲುವು ತಾನು ಚೆನ್ನಮಲ್ಲಿಕಾರ್ಜುನನೆಂಬುದು ತೆರಹಿಲ್ಲದಿಪ್ಪ ಅಗಮ್ಯ ಅಪ್ರಮಾಣ ಘನ. ನುಡಿದು ಹೇಳಿದರದಕ್ಕದೆ ಕೊರತೆ. ಈ ಘನಕ್ಕೆ ಘನವಾದ ತನ್ನಿರವು ತನಗೆ ವೇದ್ಯವಾಗಿ ಎತ್ತ ನೋಡಿದಡತ್ತತ್ತ ತಾನೆ, ತನಗಿಂತ ಭಿನ್ನವೆಂಬುದು ಇಲ್ಲ. ತನ್ನ ಸಮಾನವೆಂಬುದು ಇಲ್ಲ ತನ್ನೊಂದಿಗೆ ಸೇರಿದುದು ಎಂಬುದು ಇಲ್ಲ, ಇಲ್ಲವೆಂಬುದು ಇಲ್ಲವಾಗಿ ಚೆನ್ನಮಲ್ಲಿಕಾರ್ಜುನಯ್ಯ ಒಲಿದ ಸುಖ ನಿಸ್ಸೀಮ ಸುಖವೆಂದು ಹೇಳಿಹರು.

**ಇತಿ ಸಮಾಪ್ತಿ**

# ಕಲ್ಪಿತ ಕೃಪೆ

(ಶಿವಶರಣರ 49 ವಚನಗಳು ಹಾಗೂ ತಾತ್ಪರ್ಯ)

ಲೇಖಕರು:

ಪರಮಪೂಜ್ಯ ಸದ್ಗುರು

ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು

# ಓಂ ತತ್ ಸತ್

## ಗ್ರಂಥಕರ್ತರ ಮಾತು

ಕೃಪೆ; ಇದಾರ ಕಲ್ಪಿತ ಕೃಪೆ! ಗುರು ಕೃಪೆ ಎನ್ನಲೆ? ವೇದ ಕೃಪೆಯೆ? ಈಶ್ವರ ಕೃಪೆಯೆ? ಅಂತಃಕರಣ ಕೃಪೆ ಅನ್ನಬೇಕೆ? ತಾನನ್ಯವೆಂದುಸುರಲು ಎಡೆಗೊಡದ ಕೃಪೆಗೆ ಏನನ್ನಬೇಕು! ಪ್ರಕೃತಿ ಪುರುಷರೆಂಬುದನ್ನೆ ಕೆಡಿಸುವ ಕೃಪೆಗೆ ಏನನ್ನಬೇಕು!

ಆನು ಅರಿದೆ ಮರದೆ ಅಳಿದೆ ಉಳಿದೆನೆಂಬ ಪ್ರಜ್ಞೆಯ ಕೆಡಿಸುವ ಕೃಪೆ, ಅಂತರ್ಮುಖ, ಬಹಿರ್ಮುಖವೆಂಬ ಸೀಮಿತ ದೃಷ್ಟಿ ಕೆಡಿಸುವ ಕೃಪೆ, ತತ್ವ ಅತತ್ವವೆಂಬ ವಿವೇಕ ಕೆಡಿಸುವ ಕೃಪೆ. ಪುಣ್ಯ ಪಾಪ, ಸ್ವರ್ಗ ನರಕ, ಬಂಧ ಮೋಕ್ಷವೆಂಬ ಪ್ರವರ್ತಕ ನಿವರ್ತಕ ಕೆಡಿಸುವ ಕೃಪೆ. ಜೀವ ಪರಮವೆಂಬ ದ್ವಿವಿಧ ಭಾವಂಗಳ ಕೆಡಿಸುವ ಕೃಪೆ. ಬೋಧ ಅಬೋಧ, ಬೋಧಾಬೋಧವ ಕೆಡಿಸುವ ಕೃಪೆ. ನಿತ್ಯ ಅನಿತ್ಯವೆಂಬ ಕಲ್ಪಿತ ಕೆಡಿಸುವ ಕೃಪೆ. ನಾಹಂ ಕೋಹಂ ಸೋಹಂ ಚಿದಹಂ ದಾಸೋಹಂ ಎಂಬ ಭಾವಂಗಳ ಕೆಡಿಸುವ ಕೃಪೆ? ಕಲ್ಪಿತನ ಸಕಲ ಕಲ್ಪನೆಗಳ ನಷ್ಟ ಮಾಡುವ ಲೀಲೆಗೆ ಏನನ್ನಬೇಕು.

ಗುರುವೆಂಬುದು ಕಲ್ಪಿತ ಲಿಂಗವೆಂಬುದು ಕಲ್ಪಿತ, ವೇದವೆಂಬುದು ಕಲ್ಪಿತ ಅಂತಃಕರಣವೆಂಬುದು ಕಲ್ಪಿತ ಈ ಕಲ್ಪಿತನ ಕಲ್ಪನೆಗಳ ಕೆಡಿಸುವ ಕೃಪೆಯೆ ಕಲ್ಪಿತ ಕೃಪೆ. ಲಿಂಗ ಲಿಂಗವೆಂಬುವಂಗೆ ಲಿಂಗವೆನ್ನದಂತಾಗಿ ಲಿಂಗವೆ ಆಗಿಹ ಕೃಪೆ. ಜಂಗಮ ಜಂಗಮವೆಂಬುವಂಗೆ ಜಂಗಮವೆನ್ನದಂತಾಗಿ ಜಂಗಮ ಲಿಂಗವಾಗಿಹ ಕೃಪೆ ಲಿಂಗಜಂಗಮವಾಗಿಹ ಕೃಪೆ, ಪ್ರಸಾದ ಪ್ರಸಾದ ವೆಂಬುವಂಗೆ ಪ್ರಸಾದವೆನ್ನದಂತಾಗಿ ಮಹಾಪ್ರಸಾದವಾಗಿಹ ಕೃಪೆ, ಈ ಮೂರೊಂದು ಮಾಡಿದ ಕೃಪೆ ಕಲ್ಪಿತ ಕೃಪೆ. ತಾನೆ ಲಿಂಗ ತಾನೆ ಜಂಗಮ, ತಾನೆ ಪ್ರಸಾದವಾಗಿಹ ಕೃಪೆ, ಸಕಲ ಕಲ್ಪಿತವ ಕೆಡಿಸುವ ಕೃಪೆ ಏನನ್ನಬೇಕು? ತನ್ನಿಂದ ತನ್ನ ಕಂಡ ಕೃಪೆ, ತನ್ನ ಕೃಪೆ ತನಗಾಗಿಹ ಕೃಪೆ, ಶಬ್ದ ಮುಗ್ಧನ ಮಾಡುವ ಕೃಪೆಗೆ ಏನನ್ನಬೇಕು? ಇದು ಅನುಪಮ ಕೃಪೆ ಶರಣನ ಕೃಪೆ ಎಂದು ಹೇಳಿಹರು.

– ವಿದ್ಯಾನಂದ ಶರಣರು
ಡಬ್ಬೇರಮಡುವು

## ಓಂ ತತ್ ಸತ್

# ಗ್ರಂಥಕರ್ತರ ಮಾತು

ಕೃಪೆ; ಇದಾರ ಕಲ್ಪಿತ ಕೃಪೆ! ಗುರು ಕೃಪೆ ಎನ್ನಲೆ? ವೇದ ಕೃಪೆಯೆ? ಈಶ್ವರ ಕೃಪೆಯೆ? ಅಂತಃಕರಣ ಕೃಪೆ ಅನ್ನಬೇಕೆ? ತಾನನ್ಯವೆಂದುಸುರಲು ಎಡೆಗೊಡದ ಕೃಪೆಗೆ ಏನನ್ನಬೇಕು! ಪ್ರಕೃತಿ ಪುರುಷರೆಂಬುದನ್ನೆ ಕೆಡಿಸುವ ಕೃಪೆಗೆ ಏನನ್ನಬೇಕು!

ಆನು ಅರಿದೆ ಮರದೆ ಅಳಿದೆ ಉಳಿದೆನೆಂಬ ಪ್ರಜ್ಞೆಯ ಕೆಡಿಸುವ ಕೃಪೆ, ಅಂತರ್ಮುಖ, ಬಹಿರ್ಮುಖವೆಂಬ ಸೀಮಿತ ದೃಷ್ಟಿ ಕೆಡಿಸುವ ಕೃಪೆ, ತತ್ವ ಅತತ್ವವೆಂಬ ವಿವೇಕ ಕೆಡಿಸುವ ಕೃಪೆ. ಪುಣ್ಯ ಪಾಪ, ಸ್ವರ್ಗ ನರಕ, ಬಂಧ ಮೋಕ್ಷವೆಂಬ ಪ್ರವರ್ತಕ ನಿವರ್ತಕ ಕೆಡಿಸುವ ಕೃಪೆ. ಜೀವ ಪರಮವೆಂಬ ದ್ವಿವಿಧ ಭಾವಂಗಳ ಕೆಡಿಸುವ ಕೃಪೆ. ಬೋಧ ಅಬೋಧ, ಬೋಧಾಬೋಧವ ಕೆಡಿಸುವ ಕೃಪೆ. ನಿತ್ಯ ಅನಿತ್ಯವೆಂಬ ಕಲ್ಪಿತ ಕೆಡಿಸುವ ಕೃಪೆ. ನಾಹಂ ಕೋಹಂ ಸೋಹಂ ಚಿದಹಂ ದಾಸೋಹಂ ಎಂಬ ಭಾವಂಗಳ ಕೆಡಿಸುವ ಕೃಪೆ? ಕಲ್ಪಿತನ ಸಕಲ ಕಲ್ಪನೆಗಳ ನಷ್ಟ ಮಾಡುವ ಲೀಲೆಗೆ ಏನನ್ನಬೇಕು.

ಗುರುವೆಂಬುದು ಕಲ್ಪಿತ ಲಿಂಗವೆಂಬುದು ಕಲ್ಪಿತ, ವೇದವೆಂಬುದು ಕಲ್ಪಿತ ಅಂತಃಕರಣವೆಂಬುದು ಕಲ್ಪಿತ ಈ ಕಲ್ಪಿತನ ಕಲ್ಪನೆಗಳ ಕೆಡಿಸುವ ಕೃಪೆಯೆ ಕಲ್ಪಿತ ಕೃಪೆ. ಲಿಂಗ ಲಿಂಗವೆಂಬುವಂಗೆ ಲಿಂಗವೆನ್ನದಂತಾಗಿ ಲಿಂಗವೆ ಆಗಿಹ ಕೃಪೆ. ಜಂಗಮ ಜಂಗಮವೆಂಬುವಂಗೆ ಜಂಗಮವೆನ್ನದಂತಾಗಿ ಜಂಗಮ ಲಿಂಗವಾಗಿಹ ಕೃಪೆ ಲಿಂಗಜಂಗಮವಾಗಿಹ ಕೃಪೆ, ಪ್ರಸಾದ ಪ್ರಸಾದ ವೆಂಬುವಂಗೆ ಪ್ರಸಾದವೆನ್ನದಂತಾಗಿ ಮಹಾಪ್ರಸಾದವಾಗಿಹ ಕೃಪೆ, ಈ ಮೂರೊಂದು ಮಾಡಿದ ಕೃಪೆ ಕಲ್ಪಿತ ಕೃಪೆ. ತಾನೆ ಲಿಂಗ ತಾನೆ ಜಂಗಮ, ತಾನೆ ಪ್ರಸಾದವಾಗಿಹ ಕೃಪೆ, ಸಕಲ ಕಲ್ಪಿತವ ಕೆಡಿಸುವ ಕೃಪೆ ಏನನ್ನಬೇಕು? ತನ್ನಿಂದ ತನ್ನ ಕಂಡ ಕೃಪೆ, ತನ್ನ ಕೃಪೆ ತನಗಾಗಿಹ ಕೃಪೆ, ಶಬ್ದ ಮುಗ್ಧನ ಮಾಡುವ ಕೃಪೆಗೆ ಏನನ್ನಬೇಕು? ಇದು ಅನುಪಮ ಕೃಪೆ ಶರಣನ ಕೃಪೆ ಎಂದು ಹೇಳಿಹರು.

**– ವಿದ್ಯಾನಂದ ಶರಣರು**
**ಡಬ್ಬೇರಮಡುವು**

**ವಚನ 1**

**ನಾನು ಘನ ತಾನು ಘನವೆಂಬ ಹಿರಿಯರುಂಟೆ ಜಗದೊಳಗೆ**
**ಹಿರಿದು ಕಿರಿದೆಂದಲ್ಲಿ ಏನಾಯಿತ್ತು?**
**ಹಿರಿಕಿರಿದೆಂಬ ಶಬ್ದವಡಗಿದರೆ ಆತನೆ ಶರಣ ಗುಹೇಶ್ವರಾ. ॥ 335 ॥**

**ತಾತ್ಪರ್ಯ:** ನಾನು ಘನ, ತಾನು ಘನವೆಂಬ ಹಿರಿಯರುಂಟೆ ಜಗದೊಳಗೆ: ಪ್ರಪಂಚದೊಳಗೆ ಬಹು ಹಿರಿಯರು ಶಿಕ್ಕುವರು. ಘನವರಿತವರು ಸಿಕ್ಕುವುದು ವಿರಳ. ನಾನು ಘನ ತಾನು ಘನವೆಂಬ ಹಿರಿಯರು, ಕೆಲಬರು ಇಂದ್ರಿಯ ನಿಗ್ರಹದಲ್ಲಿ ಬಲ್ಲಿದರಾಗಿ ಹಿರಿಯರೆನಿಸಿ ಕೊಂಡಿಹರು. ಕೆಲಬರು ತಪಸ್ಸು ಯಜ್ಞ ಯುಗಾದಿ ಮಾಡುವಲ್ಲಿ ಬಲ್ಲಿದರಾಗಿ ಹಿರಿಯರೆಂದೆನಿಸಿಕೊಂಡಿಹರು, ಕೆಲಬರು ಹಠ ಯೋಗದಲ್ಲಿ ರಾಜಯೋಗದಲ್ಲಿ ಶಿವಯೋಗದಲ್ಲಿ ಪರಿಣಿತರಾಗಿ ಹಿರಿಯರೆಂದೆನಿಸಿಹರು. ಕೆಲಬರು ಶಾಸ್ತ್ರಾಧ್ಯಯನದಲ್ಲಿ ಪುರಾಣ ಪ್ರವಚನಗಳಲ್ಲಿ ಪರಿಣಿತರಾಗಿ ಹಿರಿಯರೆಂದೆನಿಸಿಹರು. ಕೆಲಬರು ವೇದಂಗಳ ಬಿಡಿಸುವಲ್ಲಿ ಹಿರಿಯರೆಂದೆನಿಸಿಹರು. ಇವರುಗಳೆಲ್ಲ ತಮ್ಮ ತಮ್ಮೊಳಗೆ ಆನು ಘನ ತಾನು ಘನವೆನ್ನುವ ಮತಿವಂತರು; ಈ ಮಹಾಂತರು ಜಗದೊಳಗೆ ಸಿಕ್ಕುವರು.

ಈ ಹಿರಿಯರ ಹಿರಿತನದಿಂದೇನಾಯಿತ್ತು. ಇವರ ಹಿರಿತನದಿಂದ ಮಾಯಿಕದ ವಿಷಮತ್ವವೆ ಬೆಳೆದು, ಅಹಂಭಾವಕ್ಕಿಂಬಾಯಿತ್ತು. ಸಮತತ್ವ ಆರಿಗೂ ಸಿದ್ಧವಾಗದಾಯಿತ್ತು. ಸಮತತ್ವ ಸಿದ್ಧವಾಗದ್ದರಿಂದ ತಾನಾರೆಂಬ ಸ್ವರೂಪದ ಘನವ ತಿಳಿಯದೆ ಹೋಯಿತ್ತು. ಇವರೆಲ್ಲರೂ ಮಾಯಾಧೀನರು, ಶಬ್ದ ಸಂಭ್ರಮದ ಸುಳುವಿನಲ್ಲಿ ಸಿಕ್ಕ ಸೂತಕಿಗಳು. ಇದು ಕಾರಣ ನಾನು ಘನ ತಾನು ಘನವೆಂಬುವವರಿಗೆ ನುಡಿಯೆ ಘನ, ನಡೆಯೆ ಘನ, ತ್ಯಾಗ ಘನ, ಯೋಗ ಘನ, ವೇದ ಘನವಾಗಿ ಅಭ್ಯಾಸಮಾಡುವ ಮತಿ ಘನವಾಯಿತಲ್ಲದೆ ಸ್ವರೂಪ ಘನವಾಗಲಿಲ್ಲ.

ತನ್ನ ತಾನರಿವುಡೆ, ಇವುಗಳೆಲ್ಲ ತನಗೆ ತೋರಿ ಇಲ್ಲವಾಗುವ ಮಾಯಿಕ ತಾನೆಂಬದು ಸ್ವತಃ ಸಿದ್ಧವಾದ ತತ್ವ, ಸತ್ಯ ಜ್ಞಾನಾನಂದ ಸಚ್ಚಿದಾನಂದ ತಾನು ಇದು ನುಡಿಯಿಂದುಕ್ತವಾದುದಲ್ಲ, ಸರ್ವದಾ ಸರ್ವತ್ರ ತಾನೆ ಎಲ್ಲಿ ನೋಡಿದಡಲ್ಲಲ್ಲಿ ತಾನು.

ಹಿರಿಕಿರಿದೆಂಬ ಶಬ್ದವಡಗಿದರೆ ಆತನೆ ಶರಣ ಗುಹೇಶ್ವರಾ: ಮರವಿಂಗೆ ಹಿರಿದು ಕಿರಿದುಂಟಲ್ಲದೆ ಅರುವಿಂಗೆ ಹಿರಿದು ಕಿರುದುಂಟೆ? ಅರುವಿಂಗರುವಾಗಿಹ ಶರಣಂಗೆ ಹಿರಿದಾವುದು, ಕಿರಿದಾವುದು? ಸೀಮಿತವಂತಂಗೆ ಹಿರಿದುಂಟು ಕಿರಿದುಂಟು. ನಿಸ್ಸೀಮಂಗೆ ಹಿರಿದಿಲ್ಲ ಕಿರಿದಿಲ್ಲ. ನಾನೆಂಬಲ್ಲಿ ಹಿರಿದುಂಟು ನೀನೆಂಬಲ್ಲಿ ಕಿರಿದುಂಟು. ಗುರುವೆಂಬಲ್ಲಿ ಹಿರಿದುಂಟು. ಶಿಷ್ಯನೆಂಬಲ್ಲಿ ಕಿರಿದುಂಟು. ಜಂಗಮನೆಂದಲ್ಲಿ ಹಿರಿದಾಯಿತ್ತು, ಭಕ್ತನೆಂದಲ್ಲಿ ಕಿರಿದಾಯಿತ್ತು. ಹಿರಿದು ಕಿರಿದೆಂಬ ಶಬ್ದವಡಗಿದರೆ ಆತನೆ ಶರಣ ಗುಹೇಶ್ವರಾ. ನಾನೀನೆಂಬ ಶಬ್ದವಡಗಿಹುದೆ ಶರಣತ್ವ.

ಎಲ್ಲಿ ವಿಷಮ ದೃಷ್ಟಿ ನಷ್ಟವಾಗಿಹುದು ಅದು ಶರಣತ್ವ ಆವಲ್ಲಿ ಸಮತೆ ಸಯವಾಗಿಹುದು ಅದು ಶರಣತ್ವ. ಅರಿದರುಹಿಸಿ ಕೊಂಬುದಕ್ಕೆ ಮೀರಿದ ಘನವರಿತು

ಅದುವೆ ಆಗಿಹರು. ಆನು ನೀನೆನ್ನದಿಹ ಸ್ವರೂಪ ಸುಖವಂತನೆ ಶರಣ. ಪಂಡಿತ ಪಾಮರನನ್ನು ಕಾಣದವನೆ ಶರಣ, ದೇಹೋಹಂ ಭಾವ ಕೆಟ್ಟದು ಕೋಹಂ ಭಾವರೂಪಿ ಕಿರಿದು ಕೆಟ್ಟುದು ಸೋಹಂ ಭಾವರೂಪಿ ಹಿರಿದು ಕೆಟ್ಟುದು. ಚಿದಹಂ ರೂಪಿ ಅರುವಿನ ಹಿರಿದು ಕೆಟ್ಟದು ದಾಸೋಹಂ ಭಾವರೂಪಿ ಕಿರಿದು ಕೆಟ್ಟುದು ಭಾವಕ್ಕಗಮ್ಯನಾದುದರಿಂದ ಹಿರಿದು ಕಿರಿದೆಂಬ ಶಬ್ದವಡಗಿರುವದು. ಭಾವುಕತಕನದಲ್ಲಿ ಕಿರಿದೆಂಬ ಶಬ್ದವಡಗಿಹುದು. ಅರಿದಿಹೆನೆಂಬಲ್ಲಿ ಹಿರಿತನ ಶಬ್ದವಡಗಿಹುದು.

ಶರಣನು ಮರವರುವಿಂಗೆ ಮೀರಿದ ಮಹಾಂತ ಇದು ಕಾರಣ ನೀವೆಂಬ ದಾಸೋಹಂ ಭಾವಕ್ಕೂ ಮೀರಿದವನು ಸಚ್ಚಿದಾನಂದ ನಾನು ಅಖಂಡ ನಾನು ಪೂರ್ಣ ನಾನೆಂಬ ಅರುವಿನ ಅಹಂಕಾರಕ್ಕೂ ಮೀರಿದವನು. ಈ ಮಹಾಂತ ತೆರಹಿಲ್ಲದ ಘನ ನಾನೆಂಬುದಕ್ಕೂ ಇಂಬುಗೊಡದ ಮಹಾಂತ ನೀನೆಂಬುದಕ್ಕೂ ಇಂಬುಗೊಡದ ಮಹಾಂತ ಎಲ್ಲೆಲ್ಲೂ ತನ್ನನ್ನೆ ಕಾಣುವ ಘನಕ್ಕೆ ಘನ ಇದು ಕಾರಣ ಹಿರಿದು ಕಿರಿದೆಂಬ ಶಬ್ದವಡಗಿದ್ದರಿಂದ ಶರಣನೆಂದು ಹೇಳಿಹರು.

**ವಚನ 2**

**ತಾನು ಮಿಂದು ಕಾಲು ತೊಳೆದ ಬಳಿಕ**
**ಲಿಂಗಕ್ಕೆ ಮಜ್ಜನಕ್ಕೆರೆವರು.**
**ತಾನು ಲಿಂಗವೊ ಲಿಂಗ ಲಿಂಗವೊ?**
**ಏನು ಲಿಂಗ ಬಲ್ಲಡೆ ನೀವು ಹೇಳಿರೆ.**
**ಲಿಂಗ ಸಂಬಂಧವ ನರಿಯದೆ ಕೆಟ್ಟರು ಗುಹೇಶ್ವರಾ. ॥ 341 ॥**

ತಾತ್ಪರ್ಯ: ಪ್ರಭುದೇವ, ತಾನು ಲಿಂಗವೊ? ಲಿಂಗ ಲಿಂಗವೊ? ಏನು ಲಿಂಗ ಹೇಳಿರೆ? ಲಿಂಗ ಸಂಬಂಧವರಿತಿರುವಿರಾ? ಬಲ್ಲಡೆ ಹೇಳಿರಿ? ತಾನು ಮಿಂದು ಕಾಲು ತೊಳೆದ ಬಳಿಕ ಲಿಂಗಕ್ಕೆ ಮಜ್ಜನಕ್ಕೆರೆವರು. ಅಂದಲ್ಲಿ ನಿಜವಾದ ಲಿಂಗವಾವುದು ನೀವೆ ತಿಳಿದು ನೋಡಿ ಎಂದು ಸಕಲರಿಗೂ ಎಚ್ಚರಿಸಿಹನು. ಲಿಂಗಾರ್ಚಕರಾಗಿರುವ ಲಿಂಗವಂತರ ಹಿಡಿದು ಕೊಂಡು, ಪೂಜಾ ಲಿಂಗ ಹಾಕಿಕೊಳ್ಳದವರನ್ನು ಸಹ ಎಚ್ಚರ ಮಾಡಿಹನು.

ಪ್ರಥಮ ತನ್ನ ಮಜ್ಜನವಾದ ಮೇಲೆ ಹಿಂದಿನಿಂದ ಕೊರಳಲ್ಲಿ ಧರಿಸಿದ ಲಿಂಗಕ್ಕೆ ಮಜ್ಜನಕ್ಕೆರದ ಮೇಲೆ ನಿಜವಾದ ಲಿಂಗ ಘನ ಆವುದು ಎಂಬುದನ್ನು ನೀವೆ ತಿಳಿದು ನೋಡಿರಿ.

ಅರಿಯದೆ ನಿಜವಾದ ಲಿಂಗವ ಬಿಟ್ಟು, ತನಗಿಂತನ್ಯವಾದುದು ಲಿಂಗವೆಂದರೆ ಅದು ಲಿಂಗವಾಗುವುದೆ? ಗುರು ಕೊಟ್ಟ ಲಿಂಗವೆಂದು ಕೊರಳಲ್ಲಿ ಹಾಕಿದ, ಅದನ್ನು ಲಿಂಗವೆಂದು ಪೂಜಿಸಿದ. ಪೂಜಿಸಿದ ಮಾತ್ರಕ್ಕೆ ನಿರಂತರವಾಗಿರುವ ಮಂಗಳಮಯ ಲಿಂಗವೆಂಬುದು ಇದು ನನ್ನ ಇರುವುಳ್ಳ ಅರುವು ಎಂಬ ಅರಿವು ಆಯಿತೆ? ಆಗದಿದ್ದಲ್ಲಿ ನಿಜಲಿಂಗ ಹೇಗಾಗುವುದು, ಇದಲ್ಲದೆ ಪ್ರತಿದಿನ ತನ್ನದೆ ಮೊದಲು ಮಜ್ಜನವಾಗುತ್ತಿದ್ದುದು ಕಂಡರೂ ತನ್ನ ಘನವಾದರೂ ತಿಳಿಯಲಿಲ್ಲ. ಗುರು ತೋರಿದ ಲಿಂಗವೆಂದರೂ

ಅದರ ಘನವ ತಿಳಿಯಲಿಲ್ಲ.

ಗುರು ಕರುಣಿಸಿದ ಲಿಂಗ ಇದು ನಿನ್ನ ಸ್ವರೂಪ. ನಿನಗಿಂತ ಅನ್ಯವಲ್ಲ, ನಿನ್ನ ನಿಜವ ತಿಳಿ ಎಂದು ಕರುಣಿಸಿದರೂ ಲಿಂಗದ ಘನವ ತಿಳಿಯದ್ದರಿಂದ ಲಿಂಗವು ತನಗಿಂತನ್ಯವಾಗಿ ತಾನು ಮಜ್ಜನವ ಎರೆವವನೆ ಆದ. ಅದು ಮಜ್ಜನವ ಮಾಡಿಕೊಳುವು ಆಯಿತ್ತು. ಇದು ಕಾರಣ ಮಾನವ ಮರವುಳ್ಳವ ಅರುವಿನ ಜನ್ಮ ಧರಿಸಿದರೂ ಅರುವಿನ ಘನವ ತಿಳಿಯುವವನು ಶಿಗುವದು ವಿರಳ.

ಮಾನವ ಅತಿಮಾನವನಾಗಲು ಸದ್ಗುರು ಕೃಪೆಯು ಮುಖ್ಯವು, ಆ ಮಹಾಂತನ ಕೃಪೆಯಾದಾಗ, ತಾನು ಮಿಂದು ಕಾಲು ತೊಳೆದ ಬಳಿಕ ಲಿಂಗಕ್ಕೆ ಮಜ್ಜನಕ್ಕೆರೆವರು, ತಾನು ಲಿಂಗವೊ? ಲಿಂಗ ಲಿಂಗವೊ? ಎಂಬುದರ ಯತಾರ್ಥ ಜ್ಞಾನವಾಗಿ ತಾನು ಉಳಿಮುಟ್ಟದ ಲಿಂಗ ಮನ ಮುಟ್ಟದ ಲಿಂಗವಾದ್ದರಿಂದ ಮೊದಲು ತನ್ನ ಸ್ನಾನ ಹಿಂದಿನಿಂದ ಉಳಿಮುಟ್ಟಿದ ಲಿಂಗದ ಸ್ನಾನ, ಈ ಲಿಂಗಕ್ಕೆ ತಾನೆ ಮಜ್ಜನ ಮಾಡುವನಲ್ಲದೆ ಅದು ಮಜ್ಜನ ಮಾಡಿಕೊಳ್ಳದು, ಅದಕ್ಕೆ ಸ್ವಾತಂತ್ರವಿಲ್ಲ.

ತಾನು ಲಿಂಗಸ್ವರೂಪನಾಗಿರುವಲ್ಲಿ, ತನ್ನ ಮಜ್ಜನ ತಾನೆ ಮಾಡಿಕೊಳ್ಳವನು, ಇದು ಕಾರಣ ಪ್ರಭುದೇವ ತಾನು ಲಿಂಗವೊ? ಲಿಂಗ ಲಿಂಗವೊ? ಏನು ಹೇಳಿರಿ ಎಂದು ಲಿಂಗವಂತರನ್ನು ನಿಜಲಿಂಗದ ಕಡೆ ಮುಖ ತಿರುಗಿಸಲು ಎಚ್ಚರ ಗೊಳಿಸುತ್ತಿಹನು. ತಾನು ಮಿಂದು ಕಾಲು ತೊಳೆದ ಬಳಿಕ ಲಿಂಗಕ್ಕೆ ಮಜ್ಜನವ ಮಾಡುವದು ಅರಿದರಿದು ನೋಡುವುಡೆ ತಾನು ಅಂದರೆ ಲಿಂಗ; ಲಿಂಗವಾದ್ದರಿಂದ ತನ್ನದು ಪ್ರಥಮ ಮಜ್ಜನವಾಗಿ ಹಿಂದಿನಿಂದ ಉಳಿಮುಟ್ಟಿದ ಲಿಂಗದ ಮಜ್ಜನವ ಮಾಡುವದು ಪ್ರತ್ಯಕ್ಷ ನಡೆದದೆ. ತಾನು ಚೈತನ್ಯರೂಪಿ ಲಿಂಗವಾದುದರಿಂದ ತನ್ನದು ಮೊದಲು ಸ್ನಾನವಾಗಿ ಹಿಂದಿನಿಂದ ಪೂಜಾಲಿಂಗದ ಸ್ನಾನ. ಈ ಪೂಜಾಲಿಂಗವು ಒಂದು ದಿವಸವಾದರೂ ಚೈತನ್ಯರೂಪಿ ಲಿಂಗದೇವನೆ ತಾನಾದ ತನ್ನ ಸ್ನಾನ ಒಂದು ದಿವಸವಾದರೂ ಮಾಡಿಸಿರುವದೆ? ಮಾಡಿಸದು. ಚೇತನ ಪುರುಷ ಏನನ್ನಾದರೂ ಮಾಡಬಹದು. ಅಚೇತನರೂಪಿ ಲಿಂಗವೇನು ಮಾಡುವದು.

ಗುರು ಕರುಣಿಸಿದ ಲಿಂಗವರಿಯುವವರೆಗೆ ಲಿಂಗವದು ಪೂಜಾಲಿಂಗವೆ? ಪೂಜಿಸಿ ಕೊಳ್ಳುವ ಮೂರ್ತಿಯೆ? ಚೈತನ್ಯವಾಗದು ಸಕಲರ ಸ್ವರೂಪವಾಗದು.

ಅರುವ ಅರಿಯ ಹೇಳಿ ಸದ್ಗುರುನಾಥ ಕುರುಹ ಕೈಯಲ್ಲಿ ಕೊಟ್ಟನಲ್ಲದೆ ತನ್ನ ಅರುವನೆ ಮರೆದು ಕುರುಹ ಪೂಜಿಸುವ ನರ ಕುರಿಗಳ ನೋಡಾ ಕೂಡಲಚೆನ್ನಸಂಗಮದೇವಾ. ಗುರು ತೋರಿದ ಲಿಂಗವದು ತನ್ನ ಅರುವು, ತನ್ನ ಸ್ವರೂಪ, ಅದನ್ನು ತಿಳಿಯದ್ದರಿಂದ ಅದು ಕುರುಹಾಗಿ ಕಂಡಿತು. ಇದು ಕಾರಣ ಪೂಜಾಲಿಂಗವಾಗಿ ಮಜ್ಜನಕ್ಕೆರೆದರು. ಅರುವ ಅರಿತಿದ್ದುದಾದಲ್ಲಿ ತಾನು ಮಿಂದು ಕಾಲು ತೊಳೆದು ಕೊಳ್ಳವವನಾದ್ದರಿಂದ ತಾನೆ ಲಿಂಗವಾಗಿಹ ರಹಸ್ಯ ವಿದಿತವಾಗುತ್ತಿತ್ತು.

ಪ್ರಭುದೇವ, ಅರುವ ಅರಿತ ಅವರ್ಣೀಯ ಘನ ಅಚಿಂತ್ಯಾತ್ಮನಾದುದರಿಂದ, ಸಕಲವು ಲಿಂಗಮಯವಾಗಿ ಕಂಡ. ತಾನೆ ಮಿಂದು ಕಾಲು ತೊಳೆದು ಕೊಳ್ಳವದು

ಕಂಡ, ಪ್ರಥಮ ತನ್ನ ಮಜ್ಜನಕ್ಕೆರೆವುದು ಕಂಡ, ಹಿಂದಿನಿಂದ ಪೂಜಾಲಿಂಗ ಮಜ್ಜನಕ್ಕೆರೆವುದು ಕಂಡ, ತಾನೆ ಲಿಂಗವಾಗಿಹ ರಹಸ್ಯ ಸಕಲರಿಗೂ ವಿದಿತಗೊಳಿಸಿದ, ಇದಲ್ಲದೆ ಲಿಂಗಸಂಬಂಧವ ನರಿಯದೆ ಕೆಟ್ಟರು. ಲಿಂಗಸಂಬಂಧವದು ಸಚ್ಚಿದಾನಂದ ಸಂಬಂಧ ಅರುವಿನ ಸಂಬಂಧ. ಅರುವ ಅರುವಾಗಿ ಅರಿದರಿವುದು, ಇಲ್ಲಿ ಅರಿಸಿಕೊಳ್ಳುವ ಅನಾತ್ಮವಿಲ್ಲ. ಇಲ್ಲವೆಂಬುದು ಇಲ್ಲವಾದುದರಿಂದ ಲಿಂಗವಾಗಿ ಲಿಂಗವರಿಯ ಹೋಗುವುಡೆ, ಲಿಂಗಕ್ಕೆ ಲಿಂಗವಾಗಿ ಬೆಳಗುಳ್ಳ ಘನವಾಗಿಹ ಸಂಬಂಧ. ಇದು ಶಬ್ದ ಮುಗ್ಧ ಸಂಬಂಧ. ತನ್ನ ನುಡಿ ತನಗೆ ಹಗೆಯಾಗಿಹ ತನ್ನ ಸಂಬಂಧ ನಿಜದ ಸಂಬಂಧ ಅನಾಮಯವಾಗಿರುವ ನಿರ್ವಾಣದ ಸಂಕೇತ. ಇವರೆ ಲಿಂಗವರಿತವರು, ಇನ್ನುಳಿದವರು ಲಿಂಗಸಂಬಂಧದಿಂದ ದೂರಾದುದರಿಂದ ಅವರು ಕೆಟ್ಟವರು ಎಂದು ಪ್ರಭುದೇವ ಹೇಳಿಹರು.

**ವಚನ 3**

**ಒಂದರ ಮೋರೆಯನೊಂದು ಮೂಸಿನೋಡಿ**
**ಮತ್ತೊಚ್ಚಿ ಹೊತ್ತಿಂಗೆ ಕಚ್ಚಿಯಾಡಿ, ಹೋದಂತಾಯಿತ್ತು,**
**ನೋಡಿರೆ? ಕಲಿಯುಗದೊಳಗಣ ಮೇಳಾಪವ!**
**ಗುರುವೆಂಬಾತ, ಶಿಷ್ಯನಂತುವನರಿಯ,**
**ಶಿಷ್ಯನೆಂಬಾತ ಗುರುವಿನಂತುವನರಿಯ,**
**ಭಕ್ತರೆಂಬುವರು ಭಕ್ತರೊಳಗೆ ಸಮವಿಲ್ಲ**
**ಜಂಗಮರೆಂಬುವರು ಜಂಗಮದೊಳಗೆ ಸಮವಿಲ್ಲ.**
**ಇದು ಕಾರಣ, ಈ ಕಲಿಯುಗದೊಳಗೆ ಉಪದೇಶ ತೋರುವ**
**ಕಾಳಗುರಿಕೆಯ ಮಕ್ಕಳನೇನೆಂಬೆ ಗುಹೇಶ್ವರಾ. ॥ 318 ॥**

**ತಾತ್ಪರ್ಯ:** ಒಂದರ ಮೋರೆಯನೊಂದು ಮೂಸಿ ನೋಡಿ, ಮತ್ತೊಚ್ಚಿ ಹೊತ್ತಿಂಗೆ ಕಚ್ಚೆಯಾಡಿ ಹೋದಂತಾಯಿತ್ತು ನೋಡಿರೆ? ಕಲಿಯುಗದೊಳಗಣ ಮೇಳಾಪವ: ಗುರುವೆಂಬಾತ ಶಿಷ್ಯನಂತುವನರಿಯು, ಶಿಷ್ಯನೆಂಬಾತ ಗುರುವಿನಂತುವನರಿಯ:

ಪ್ರಭುದೇವ ಕಲಿಯುಗದೊಳಗಣ ಗುರುಶಿಷ್ಯರ ಮೇಳಾಪವನೋಡಿ, ಗುರುವಾದವನ ಬೋಧವ ನೋಡಿ, ಶಿಷ್ಯನಾದವನ ಕಲಿತನ ನೋಡಿ ಇವರುಗಳ ಕಂಡು ಜರಿಯುತ್ತಿದ್ದಾನೆ. ಇವರ ಕೂಟ ಪಶುಕೂಟ, ವಿಷಯಾಸಕ್ತಿಯಿಂದುಕ್ತವಾದ ಕೂಟ, ಗುಣಗಾನದ ಕೂಟ, ಅಂತರಂಗ ವಿಷಯ ಭೋಗಕ್ಕಾಗಿ ಹಂಬಲಿಸುವ ಕೂಟ, ವೈಯಕ್ತಿಕ ಪ್ರತಿಷ್ಠೆ ಬೆಳೆಸಿಕೊಳ್ಳುವ ಕೂಟ, ಭಾವ ಭ್ರಮಿತರ ಕೂಟ. ಇದು ಒಬ್ಬರ ಮೇಲೆ ಒಬ್ಬರು ಮೂಸಿ ನೋಡುವ ಕೂಟ. ಗುಣಧರ್ಮಂಗಳ ಮೂಸಿನೋಡುವ ಕೂಟ. ಇದು ತುಸು ಕಾಲದ ಕೂಟ, ಇವರ ಮೇಳಾಪವು ತುಸು ಕಾಲದ್ದು, ಶಿಷ್ಯರ ಭಾವರೂಪ ಭಕ್ತಿಯು ತುಸು ಕಾಲದ್ದು, ಗುರುವಿನ ಜ್ಞಾನವಾದರೂ ತುಸು ಕಾಲದ್ದು, ಇವರು ಚಾರಿತ್ರ ನೋಡುವ ಮಾಯಿಕ ದೃಷ್ಟಿಯುಳ್ಳವರು.

ಗುರುವಾದವನು ಶಿಷ್ಯರ ಗುಣಧರ್ಮನೋಡುವ ನೋಟ., ಶಿಷ್ಯರಾದವರು ಗುರುವಿನ ಚಾರಿತ್ರ ನೋಡುವ ಭಾವುಕರು, ಹೀಗಾಗಿ ಇವರುಗಳು ಒಬ್ಬರ ಮೋರೆಯನೊಬ್ಬರು ಮೂಸಿ ನೋಡುವರು. ಗುರುವಿನಂತುವ ಶಿಷ್ಯನು ಅರಿಯ, ಶಿಷ್ಯನಂತುವ ಗುರುವ ಅರಿಯ, ಗುರುವಾದವರು ಶಿಷ್ಯನ ಮುನ್ನ ಮುನ್ನಲಾದ ಸ್ವರೂಪ ಅರಿಯ, ಶಿಷ್ಯನಾದರೂ ಗುರು ಘನವೆಂಬುದುನರಿಯ, ಈರ್ವರು ಮೂಲ ಸ್ವರೂಪವನರಿಯದ ಕುರುಡರು.

ಭಕ್ತನೆಂಬಾತ ಜಂಗಮುದಂತುವ ನರಿಯು, ಜಂಗಮುವೆಂಬಾತ ಭಕ್ತರಂತುವನರಿಯ: ಭಕ್ತ ಜಂಗಮರದು ಇದೆ ಹಾಡು. ಏಕೆಂದರೆ ಭಕ್ತನಾದವನು, ಜಂಗಮವೆಂಬಾತ, ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗವೆಂದು ತಿಳಿಯಲಿಲ್ಲ. ಜಂಗಮವೆಂಬುದು ಒಂದು ಜಾತಿಗೆ ಹೋಲಿಸಿ ನೋಡಿದ. ಅಜಾತನನ್ನಾಗಿ ಕಾಣುವ ಭಾಗ್ಯ ಭಕ್ತನಿಗೆ ಬರಲಿಲ್ಲ. ಜಂಗಮವೆಂಬಾತನು ಭಕ್ತನ ಮೂಲಸ್ವರೂಪ ತಿಳಿಯದ್ದರಿಂದ ಭಕ್ತನೆಂಬುದು ತನ್ನ ಸೇವೆ ಮಾಡುವ ಸೇವಕನೆಂದ, ತನ್ನನ್ನು ದೇವನೆಂದು ಘನನೆಂದು ತಿಳಿದುಕೊಂಡ, ತಾನು ಪೂಜ್ಯನಾದ, ಭಕ್ತನನ್ನು ಪೂಜಕನನ್ನಾಗಿ ಮಾಡಿದ. ಇದು ಕಾರಣ ಜಂಗಮನಾದರೂ ಭಕ್ತರ ಮೂಲ ಸ್ವರೂಪವನರಿಯ ಇವರ ಮೇಳಾಪವು ಮಾಯಿಕವು. ಇವರ ಪಾದೋದಕವಾಗಲಿ, ಪ್ರಸಾದವಾಗಲಿ, ಮಾಯಿಕವು. ಅಲ್ಲಿ ಅಮರತ್ವದ ರಹಸ್ಯ ತಿಳಿಯುವ ಕಾರ್ಯವಿಲ್ಲ. ಇವರು ಕೂಡ ಒಬ್ಬರ ಮೋರೆಯನೊಬ್ಬರು ಮೂಸಿ ನೋಡುವವರೆ ಆಗಿಹರಲ್ಲದೆ ಸಮ ಸ್ವರೂಪ ಘನವರಿಯಲಿಲ್ಲ.

ಗುರು ಗುರುವಿನಲ್ಲಿ ಸಮವಿಲ್ಲ, ಶಿಷ್ಯ ಶಿಷ್ಯರಲ್ಲಿ ಸಮವಿಲ್ಲ. ಜಂಗಮ ಜಂಗಮರಲ್ಲಿ ಸಮವಿಲ್ಲ, ಭಕ್ತ ಭಕ್ತರಲ್ಲಿ ಸಮವಿಲ್ಲ, ಇದು ಕಾರಣ ಈ ಕಲಿಯುಗದೊಳಗೆ ಉಪದೇಶ ಮಾಡುವ ಕಾಳುಗುರಿಕೆಯ ಮಕ್ಕಳನೇನೆಂಬೆ ಗುಹೇಶ್ವರಾ: ಶಿಷ್ಯರಿಗೆ ಉಪದೇಶ ಮಾಡುವ ಗುರು ಘನರು ಬಹಳ ಇದ್ದಾರೆ. ಇವರುಗಳು ಒಬ್ಬರನ್ನೊಬ್ಬರು ಸೇರರು. ತಮ್ಮ ಗುರುತ್ವ ಕೊಂಡಾಡಿ, ಇನ್ನೊಬ್ಬರ ಗುರುತ್ವ ಹಿಯಾಳಿಸುವ ವಿಷಮತ್ವ ಬುದ್ಧಿಯುಳ್ಳ, ಗುರುನಾಥನೆ ಬಹಳ. ಗುರು ಘನವನರಿದಿಹೆನೆಂದರೆ ಕಿಂಚಿತ್ತು ಎಂಬ ಮಾರ್ಮಿಕ ರಹಸ್ಯ ತಿಳಿದವರು ವಿರಳ. ಈ ಗುರುಘನರು ಶಬ್ದ ಸಂಭ್ರಮದವರು ಗುಣ ಗಂಧಾವಸ್ಥೆಯ ಹಮ್ಮುಳ್ಳವರು. ಇವರು ಶೃತಿ ಪರಾಯಣರು. ಸ್ಮೃತಿ ಸ್ವಾನುಭವದಿಂದುಕ್ತವಾದ ಘನವಂತರು. ಇವರು ಘನವಂತರಾದರು, ಅರುವುಳ್ಳವರಾದರು, ಘನಕ್ಕೆ ಘನರಾಗಲಿಲ್ಲ. ಅರುವಿಂಗರುವಾಗಿ ಸ್ವಮಹಿಮರಾಗಲಿಲ್ಲ. ಚಿಂತಿಸುವರೆ ಆಗಿಹರಲ್ಲದೆ ಅಚಿಂತ್ಯ ಘನವಾಗಲಿಲ್ಲ.

ಚಿಂತನವದು ಸೀಮಿತವಾಯಿತಲ್ಲದೆ ನಿಸ್ಸೀಮವಾದುದಾಗಲಿಲ್ಲ. ಇದು ಕಾರಣ ಗುರುವಾದವರು, ಬೋಧ ಅಬೋಧ, ಬೋಧಾಬೋಧಕ್ಕೆ ಮೀರಿದ ಘನವಾಗಿಹ ತಮ್ಮ ಮೂಲಸ್ವರೂಪ ತಿಳಿಯದ್ದರಿಂದ ಶಿಷ್ಯನನ್ನು ತನಗಿಂತ ಅನ್ಯವಾಗಿ ತಿಳಿದುಕೊಂಡುದುಲ್ಲದೆ ಯತಾವಾಚ್ಯನಿವರ್ತಂತೆ ಅಪ್ರಾಪ್ಯ ಮನಸಾಸಹ ಎಂದು

ವಾಣಿ, ಮನಸ್ಸಿಗೆ ನಿಲುಕದ್ದಾವುದೊ ಅದುವೆ ಬ್ರಹ್ಮವೆನ್ನುವರು. ತಾವು ವಾಣಿಯೆ ಆಗಿಹರು ಮನವೆ ತಾವಾಗಿಹರು. ಇವರು ಶಬ್ದ ಸಂಭ್ರಮದ ಜಾಣರು ನಿಃಶಬ್ದ ಘನವರಿತ ಮಹಾಘನವಾಗಲಿಲ್ಲ. ಶಬ್ದಕ್ಕೆ ಮೀರಿ ನಿಂತು ನೋಡುವ ಭಾಗ್ಯ ಇವರದಾಗಲಿಲ್ಲ ನೆನಹಿಂಗು, ನಿರ್ಣಯಕ್ಕೂ ಮೀರಿ ನಿಂತು ನೋಡುವ ದಿವ್ಯ ದೃಷ್ಟಿ ಇವರದಾಗದ್ದರಿಂದ ವಿಷಮತ್ವವೆ ಸಿದ್ಧವಾಯಿತಲ್ಲದೆ ಸಮತತ್ವ ಸಿದ್ಧವಾಗಲಿಲ್ಲ.

ಸಮವದು, ನುಡಿಗೂ ನಡೆಗೂ ಒಳಪಡದ ತತ್ವ, ಕಥನಕ್ಕೆ ಮೀರಿದ ನಿಃಶಬ್ದ ಘನವು ನಿಷ್ಪತ್ತಿ ನಿರಾಳವು ನುಡಿದುದೆಂದು, ನಡೆದುದೆಂದು? ಇದು ಶಿಶು ಕಂಡ ಕನಸು, ಶಿಶು ಕಂಡ ಕನಸು ಸುಖವಿರುವಲ್ಲಿ ಹೇಳಿದುದೆಂದು? ಗುರುವೆ ಆಗಲಿ, ಶಿಷ್ಯರೆ ಆಗಲಿ, ಭಕ್ತರಾಗಲಿ, ಜಂಗಮರಾಗಲಿ ತಮ್ಮ ಸ್ವರೂಪವರಿತಲ್ಲಿ, ಗುರುವೆಂಬುದು ಅದು ಒಂದು ವ್ಯಕ್ತಿಯಲ್ಲ. ಶಿಷ್ಯರು, ಭಕ್ತರು, ಇವರು ಕೂಡ ಗುರು ಜಂಗಮ ತತ್ವಕ್ಕಿಂತ ಅನ್ಯವಲ್ಲ. ಗುರುವಾರೊ? ಶಿಷ್ಯ, ಶಿಷ್ಯರಾರೊ? ಗುರು ಭಕ್ತರಾರೋ, ಜಂಗಮ ಜಂಗಮರಾರೊ? ಭಕ್ತ ಅಖಂಡಿತಘನ ಪೂರ್ಣವಪ್ಪ ಲಿಂಗ, ಅನುಪಮ ಲಿಂಗ, ಅಚಲಿತ ಲಿಂಗದಲ್ಲಿ ಗುರು, ಶಿಷ್ಯರು, ಭಕ್ತ, ಜಂಗಮರು ಭಿನ್ನ ಭಿನ್ನ ಆಗಿರುವರಾ? ಭಿನ್ನಾಭಿನ್ನವೆನ್ನಲು ಇಂಬುಗೊಡದ ಅಚಲಿತ ಲಿಂಗ, ಚಲನವಲನವುಳ್ಳದ್ದಾಗುವುದೆ? ಇವರು ಅರುವಿನ ಅರುವಾಗಲಿಲ್ಲ. ಅರಿದರಿದು ಅದುವೆ ತಾವಾಗಲಿಲ್ಲ, ಉಪಮೆ ಗೊಳಪಟ್ಟರಲ್ಲದೆ ಅನುಪಮರಾಗಲಿಲ್ಲ. ಸೀಮಿತರಾದರಲ್ಲದೆ, ನಿಸ್ಸೀಮರಾಗಲಿಲ್ಲ. ಭಕ್ತ ಕೆಟ್ಟು ಭವಿಗಳಾಗುವದು.

ಸೀಮಿತ ಜ್ಞಾನ, ಸೀಮಿತ ಆಚಾರ, ಸೀಮಿತ ದೃಷ್ಟಿ ಇದು ಕಲಿಯುಗದ ಮೇಳಾಪ. ಇಲ್ಲಿ ಉಪದೇಶ ಮಾಡುವವರೆಲ್ಲ ಕಾಳುಗುರಿಕೆ ಮಕ್ಕಳು. ಯಮನ ಮಕ್ಕಳು ಮೃತ್ಯುವಿನ ಮಕ್ಕಳು ಅಮರತ್ವದ ಹೊಲಬನರಿಯದ್ದರಿಂದ ಗುರುವಾದವನು, ಶಿಷ್ಯನಾದವನು, ಭಕ್ತನಾದವನು, ಜಂಗಮನಾದವನು ಹಾಳು. ಇವರ ಜನ್ಮಂಗಳೆಲ್ಲ ನಿರರ್ಥಕ. ಇವರ ಆಚಾರ ಜ್ಞಾನ ಭಾವ ಬೋಧೆ ಜನ್ಮಂಗಳಿಗೆ ಕಾರಣವಾಗಿಹವಲ್ಲದೆ ಭವರಹಿತರಾಗಲಿಲ್ಲ ಎಂದು ಜರಿದಿಹರು.

**ವಚನ 4**

**ಆಕಾರ ನಿರಾಕಾರವೆಂಬೆರಡೂ ಸ್ವರೂಪಂಗಳು;**
**ಒಂದು ಆಹ್ವಾನ, ಒಂದು ವಿಸರ್ಜನ,**
**ಒಂದು ವ್ಯಾಕುಳ, ಒಂದು ನಿರಾಕುಳ.**
**ಉಭಯಕುಳರಹಿತ ಗುಹೇಶ್ವರಾ, ನಿಮ್ಮ ಶರಣ ನಿಶ್ಚಿಂತನು. ॥ 359 ॥**

ತಾತ್ಪರ್ಯ: ಆಕಾರ ನಿರಾಕಾರವೆಂಬವೆರಡು ಸ್ವರೂಪಂಗಳು, ಒಂದು ಆಹ್ವಾನ, ಒಂದು ವಿಸರ್ಜನ: ಈ ಆಕಾರ ನಿರಾಕಾರವೆಂಬೆರಡು ಆರ ಸ್ವರೂಪವೆನಬೇಕು. ಇದರಲ್ಲಿ ಒಂದು ಸ್ವಾಗತ, ಮತ್ತೊಂದಕ್ಕೆ ತ್ಯಜಿಸುವದು, ಒಂದು ವ್ಯಾಕುಳ, ಇನ್ನೊಂದು ನಿರಾಕುಳ, ಒಂದು ದುಃಖದಿಂದುಕ್ತವಾದುದು ಇನ್ನೊಂದು ದುಃಖವಿಲ್ಲದುದು.

ಆವುದು ದುಃಖದಿಂದುಕ್ತವಾದುದು? ಆವುದು ದುಃಖವಿಲ್ಲದುದು? ಆವುದು

ಅವಯವವುಳ್ಳದ್ದಾಗಿದೆ ಅದು ಷಡ್ವಿಕಾರಮಯವು, ಪಂಚಕ್ಲೇಶವುಳ್ಳದು, ತ್ರಿವಿಧ ತಾಪದಿಂದುಕ್ತವು, ಅದು ನಾಮರೂಪವುಳ್ಳ ಶರೀರವು. ಆವುದು ಅವಯವ ರಹಿತವಾಗಿದೆ ಅದು ನಿರ್ವಿಕಾರವು, ಪಂಚಕ್ಲೇಶವಿಲ್ಲದುದು. ನಿರವಯವು, ಅಚಿಂತ್ಯವು ಅಶರೀರವಾದ್ದರಿಂದ ಎಂದೆಂದೂ, ನಾಶರಹಿತವು, ಅದು ದೃಕ್ ರೂಪಾಗಿದೆ.ಆವುದು ಆಹ್ವಾನ? ಆವುದು ವಿಸರ್ಜನೆ? ಆವುದು ನಾಶವುಳ್ಳದ್ದಾಗಿದೆ. ಅದನ್ನು ತ್ಯಾಜ್ಯ ಮಾಡುವದು. ಆವುದು ನಿರಂತರವಾಗಿದೆ, ನಾಶರಹಿತವಾಗಿದೆ, ಅದನ್ನು ಅಪ್ಪಿಕೊಳ್ಳವದು ಅದನ್ನು ಕರೆತರುವದು.

ಎರಡು ಸ್ವರೂಪಂಗಳು. ಒಂದು ಅವಿಚಾರದಲ್ಲಿ ಕಂಡರೆ ಒಂದು ವಿಚಾರದಲ್ಲಿ ಕಾಣುವುದು. ಮೂರುವರಿ ಮೊಳ ಶರೀರ ತಾನೆನ್ನುವದೆ ಅವಿಚಾರ. ನಾಶವುಳ್ಳ ಶರೀರ ತಾನೆನ್ನುವದೆ ಅವಿಚಾರ. ಶರೀರವು ದುಃಖದಿಂದುಕ್ತವಾದುದು, ತ್ರಿವಿಧ ತಾಪದಿಂದುಕ್ತವಾದುದು.

ನಿತ್ಯಾನಿತ್ಯ ವಿಚಾರವೆ ವಿಚಾರ. ನಾಶ ರಹಿತ ಆತ್ಮ ತಾನೆನ್ನುವದೆ ವಿಚಾರ. ಇದು ಮುಕ್ತಾತ್ಮವಿಚಾರ. ಆಕಾರ ನಿರಾಕಾರ ಸ್ವರೂಪವೆಂಬೆರಡು ಅವಿಚಾರ, ವಿಚಾರದ ಮುಖಗಳು. ಇವು ತತ್ವ ಅತತ್ವವೆಂಬ ವಿವೇಕಿಗಳಿಗೆ ಕಾಣಿಸುವ ಮುಖಗಳು. ಒಂದು ನಾಮರೂಪದಿಂದುಕ್ತವಾದುದು. ಮತ್ತೊಂದು ಅನಾಮಯವಾಗಿ ನಿರೂಪವಾಗಿಹ ಲಿಂಗ ಮುಖ ಇದು ಕಾರಣ ಒಂದು ಸಾಕಾರ ಒಂದು ನಿರಾಕಾರ.

ಒಂದು ದುಃಖದಿಂದುಕ್ತವಾದುದು, ಇನ್ನೊಂದು ದುಃಖರಹಿತವು ಆತ್ಮಅನಾತ್ಮ ವಿಚಾರವುಳ್ಳ ಜಿಜ್ಞಾಸು ಒಂದನ್ನು ಆಹ್ವಾನ ಮಾಡುತ್ತಾನೆ. ಇನ್ನೊಂದನ್ನ ತ್ಯಜಿಸುತ್ತಾನೆ. ಉಭಯ ಕುಳ ರಹಿತ ಗುಹೇಶ್ವರಾ ನಿಮ್ಮ ಶರಣ ನಿಶ್ಚಿಂತ. ಗುಹೇಶ್ವರಾ ನಿಮ್ಮ ಶರಣ ನಿಶ್ಚಿಂತ ತಾನಾರೆಂದರಿತ ಶರಣ ಆತ ನಿಶ್ಚಿಂತ.

ಶರಣನಲ್ಲಿ ಆಹ್ವಾನವಿಲ್ಲ ವಿಸರ್ಜನವಿಲ್ಲ, ಆಕಾರನಲ್ಲ ನಿರಾಕಾರನಲ್ಲ ಉಪಮೆಗೆ ಮೀರಿದ ಮಹಾಂತನನ್ನು ವರ್ಣಿಸುವದಾದರೂ ಅದೆಂತು?

ಶರಣ ನಿಶ್ಚಿಂತ. ವಿಚಾರ ಅವಿಚಾರಗಳಿಗೆ ಮೀರಿದ ಮಹಾಂತ. ನಿರಂತರವಾಗಿಹ ಮಂಗಳಮಯ ಪರಮಸತ್ಯ ತಾನೆಂದರಿತ ಸ್ವಮಹಿಮ. ಅಲ್ಲಿ ನಾಶವೆಂಬುದಿಲ್ಲ, ಅವಿನಾಶಿ ಎಂಬುದಿಲ್ಲ, ದುಃಖಿ ಎಂಬುದಿಲ್ಲ, ದುಃಖ ರಹಿತನೆಂಬುದಿಲ್ಲ, ಅಂಗನೆಂಬುದಿಲ್ಲ, ಲಿಂಗನೆಂಬುದಿಲ್ಲ, ಸತ್ ಎಂಬುದಿಲ್ಲ, ಅಸತ್ ಎಂಬುದಿಲ್ಲ, ಚಿತ್ ಎಂಬುದಿಲ್ಲ, ಅಚಿತ್ ಎಂಬುದಿಲ್ಲ, ಅರಸುವವನಲ್ಲ, ಆರಾಧಿಸುವವನಲ್ಲ, ಪೂಜ್ಯನೆಂಬುದಿಲ್ಲ, ಪೂಜಕ ನೆಂಬುದಿಲ್ಲ, ಅಹುದೆಂಬುದಿಲ್ಲ, ಅಲ್ಲವೆಂಬುದಿಲ್ಲ, ಅಹುದಲ್ಲವೆಂಬುದಕ್ಕೂ ಮೀರಿದ ಅನುಪಮ ನಿಲುವೆ ಅಲ್ಲಮ, ಈ ನೆಲೆಯಿಲ್ಲದ ನಿಲುವೆ ಶರಣನ ನಿಲುವು.

ಶರಣ ಉಭಯ ಕುಳರಹಿತ. ಅವಿಚಾರ ಕುಳದವನು ಆಗನು, ವಿಚಾರ ಕುಳದವನು ಆಗನು; ನಿಶ್ಚಿಂತ ಕುಳದವನು. ಏನೊಂದಾಗದೆ ಇದ್ದಂತಿರುವ ನಿರಂತರವಾಗಿಹ ಮಂಗಳಮಯ ಪರಮ ಸತ್ ಸ್ವರೂಪ, ಸಹಜ, ಅಜ, ಅಚಿಂತ್ಯ

ಸ್ವರೂಪ ತಾನಾದ ಮಹಾಂತನು ನಿಶ್ಚಿಂತ.

ನಿಶ್ಚಿಂತವಾಗಿಹ ಶರಣಂಗೆ ಹಿತವಾದುದಿಲ್ಲ, ಅಹಿತವಾದುದಿಲ್ಲ, ಅರುವರಿತ ಅರಿಯದರುವು ಏನೆಂದೆನಲಿಲ್ಲದ ಅರುವು ತಾನೆ ತಾನಾದ ಇರವು. ಸುಖದೇಕರಸ, ಸುಖಮಯ ತಾನೆ ಪರಾನಂದಮಯ ನಾಗಿಹ ಅಖಂಡೈಕರಸ ತಾನೆ ಆದುದರಿಂದ ನಿಶ್ಚಿಂತ. ಶರಣನ ಪದ ಅಚಿಂತ್ಯಪದ, ಚಿಂತನಕ್ಕೆಡೆಗೊಡದ ಪದ, ಭಾವಕ್ಕಗಮ್ಯವಾಗಿಹ ಪದ, ನಿರಂತರವಾಗಿರುವ ಮಂಗಳಮಯ ಸುಖ ಸ್ವರೂಪನಾದುದರಿಂದ ನಿಶ್ಚಿಂತನೆಂದು ಹೇಳಿಹರು.

**ವಚನ 5**

**ಅಂಗ ಜೀವಿಗಳೆಲ್ಲ ಅಶನಕ್ಕೆ ನೆರೆದು ಲಿಂಗ ವಾರ್ತೆಯ ನುಡಿವರಯ್ಯ.**
**ಕಾಯ ಜೀವಿಗಳೆಲ್ಲ ಕಳವಳಿಸಿ ನುಡಿವರಯ್ಯಾ**
**ಮನಬಂದ ಪರಿಯಲ್ಲಿ ನುಡಿವಿರಿ,**
**ಗುಹೇಶ್ವರ ಲಿಂಗ ನಿಮಗೆಲ್ಲಿಯದೊ? ॥ 356 ॥**

**ತಾತ್ಪರ್ಯ:** ಅಂಗಜೀವಿಗಳೆಲ್ಲ ಅಶನಕ್ಕೆ ನೆರೆದು ಲಿಂಗವಾರ್ತೆಯ ನುಡಿವರಯ್ಯ: ಪ್ರಭುದೇವ, ಲಿಂಗವಾರ್ತೆಯ ನುಡಿವವರು, ನುಡಿಗೆಡೆಗೊಡದ ಘನರಾಗಿದ್ದಲ್ಲಿ ಅವರು ಲಿಂಗವಾರ್ತೆಯುಳ್ಳವರು. ಅಂತಪ್ಪ ಮಹಾನುಭವಿಗಳು ಲಿಂಗಸಕೀಲ ಸಂಯೋಗದ ವರ್ಮಸ್ಥಲವರಿತವರು. ಅವರು ಘನಕ್ಕೆ ಘನ ತಾನೆ ತಾನಾಗಿಪ್ಪ ಸ್ವಮಹಿಮರು. ಲಿಂಗವಾರ್ತೆಯ ಬೋಧಿಸುವ ಅನುವುಳ್ಳವರು. ಸ್ವರೂಪಸುಖದ ಸುಖಿಗಳು, ಸುಖಮಯರು, ಇವರು ಘನಮಹಿಮರು. ಇವರ ದಿವ್ಯ ದೃಷ್ಟಿಗೆ ಅಜ್ಞಾನಿಗಳು ವಿಷಯಾಸಕ್ತರು, ದೇಹಬುದ್ಧಿ ದೃಢವಾಗಿಹ ಜೀವಿಗಳು, ಅಶನಕ್ಕೆ ನೆರೆದು ಲಿಂಗವಾರ್ತೆಯ ನುಡಿವುದು ಕಂಡು ಬೆರಗಾಗಿದ್ದಾರೆ.

ನರರು ಸುರರು ಮೊದಲಾದವರು ಪಿಂಡವೆಂಬ ಭಾಂಡದಲ್ಲಿ ಅಡಗಿಹರಾಗಿ, ನಾನವರ ರೂಹಿಸಬಲ್ಲೆನೆ? ಅಯ್ಯ ದೇವಗುಣ, ರುದ್ರಗುಣ, ಪ್ರಮಥಗಣ ಮೊದಲಾದವರು ಬ್ರಹ್ಮಾಂಡವೆಂಬ ಭಾಂಡದಲ್ಲಿಯೆ ಅಡಗಿಹರಾಗಿ ನಾನವರ ಭಾವಿಸಬಲ್ಲೆನೆ ಅಯ್ಯ. ಸತ್ಯರು ಮುಕ್ತರು ಎಂಬ ಮಹಾಮಹಿಮರೆಲ್ಲರು ಚಿದ್ ಬ್ರಹ್ಮಾಂಡವೆಂಬ ಭಾಂಡದಲ್ಲಿಯೆ ಅಡಗಿಹರಾಗಿ ನಾನವರ ಅರಿಯಬಲ್ಲೆನೆ? ಇಂತಿ ತ್ರಿಭಾಂಡವನೊಳಕೊಂಡು ಅಖಂಡಿತ ಘನಪೂರ್ಣವಪ್ಪ ಭಾಂಡವೆ ತನ್ನಿರವೆಂದರಿದ ನಿಜ ಲಿಂಗೈಕ್ಯನ ಉಪಮಿಸಲಿಲ್ಲಾಗಿ ರೂಹಿಸಲಿಲ್ಲಾ, ರೂಹಿಸಲಿಲ್ಲಾಗಿ ಭಾವಿಸಲಿಲ್ಲಾ, ಭಾವಿಸಲಿಲ್ಲಾಗಿ ಅರಿಯಲಿಲ್ಲಾ, ಅರಿಯಲಿಲ್ಲಾಗಿ ಅರಿಯಲಿಲ್ಲದರುವೆ ತಾನಾಗಿ ಗುಹೇಶ್ವರನೆಂಬುದು ಬೇರಿಲ್ಲ ಕಾಣಾ.

ಕಾಯಜೀವಿಗಳು ಕಳವಳಿಸಿ ನುಡಿವರಯ್ಯ: ಪ್ರಭು, ನರರು ಸುರರು ಮೊದಲಾದವರು ಪಿಂಡವೆಂಬ ಭಾಂಡದ ಭಾವರೂಪ ಭ್ರಮಿತರು, ಇವರಿಗೆ ಪಿಂಡವೆ ಘನವಾದುದರಿಂದ ಪಿಂಡದ ಭಾವಕ್ಕೆ ಮೀರಿ ನಿಲ್ಲುವದಾಗದು. ಭಾವಕ್ಕಗಮ್ಯವಾದ ಮಹತ್ಸುಖವ ಇವರಿಗದೆಂತು ಸಾಧ್ಯ. ಇದು ಕಾರಣ ಇವರ ಕಾಯವಾಗಲಿ,

ಕಾಯಕವಾಗಲಿ, ನಡೆನುಡಿಯಾಗಲಿ ಆಚಾರ ವಿಚಾರವಾಗಲಿ, ನೆನಹು ನಿರ್ಣಯವಾಗಲಿ, ಧ್ಯಾನ ಮೌನವಾಗಲಿ, ಶಾಸ್ತ್ರಾಧ್ಯಯನವಾಗಲಿ, ಇವರಿಗೆ ಪಿಂಡದೃಷ್ಟಿ, ಪಿಂಡಭಾವ, ಪಿಂಡವಾಸನೆ ಪ್ರಬಲವಾಗಿರುವದರಿಂದ ಅಖಂಡಿತ ಘನ ಪೂರ್ಣವಪ್ಪುದು ತನ್ನ ಸ್ವರೂಪವು ನಿಜವೆಂದು ತಿಳಿಯರು. ಅದಕ್ಕಾಗಿ ಇವರು ಕಾಯಭಾವವುಳ್ಳ ಭ್ರಮಿತರು, ಇದಲ್ಲದೆ ಕಾಯದ ಕಳವಳವುಳ್ಳವರು ನಿರಂತರ ಹೊನ್ನು, ಹೆಣ್ಣು, ಮಣ್ಣಿನ ಕಾತುರವುಳ್ಳವರಾಗಿಯೆ ನುಡಿವರು.

ದೇವಗಣ, ರುದ್ರಗಣ, ಪ್ರಮಥಗಣ, ಮೊದಲಾದವರು ಬ್ರಹ್ಮಾಂಡವೆ ಇವರಿಗೆ ಘನವಾಗಿದೆ. ಈ ಬ್ರಹ್ಮಾಂಡದ ಒಡೆತನದ ವಾಸನೆಯುಳ್ಳವರಾದುದರಿಂದ, ತೋರಿ ಇಲ್ಲವಾಗುವ ತಮ್ಮ ಮಾಯಿಕ ಶರೀರ ಮಾಯಿಕ ಪದವಿ. ಮಾಯಿಕ ಕಾರ್ಯವೆ ಇವರಿಗೆ ಘನವಾಯಿತಲ್ಲದೆ, ತಮ್ಮ ನಿಜವು ಇವರಿಗೆ ಘನವಾಯಿತಲ್ಲದೆ, ತಾವಾರು ತಮ್ಮ ನಿಜವು ಇವರಿಗೆ ಘನವಾಗಲಿಲ್ಲ. ಇದು ಕಾರಣ ಇವರು ಕಾಯ ಜೀವಿಗಳು. ಇವರ ಕಾರ್ಯ ಕಳವಳದ ಕಾರ್ಯ ಭ್ರಾಂತಿ ಕಾರ್ಯ. ಇವರಿಗಾದರೂ ಅಖಂಡಿತ ಘನ ಪೂರ್ಣವಪ್ಪುದೆ ತಮ್ಮ ಸ್ವರೂಪ ಇದು ತಮ್ಮಿರವು ಎಂದರಿಯಲಿಲ್ಲವಾದ್ದರಿಂದ ಲಿಂಗವಾರ್ತೆಯ ನುಡಿಯ ಸಮರ್ಥರು ಆಗಲಿಲ್ಲ.

ಸತ್ಯರು, ನಿತ್ಯರು, ಮುಕ್ತರು ಎಂಬ ಮಹಾಮಹಿಮರು, ಚಿದ್ ಬ್ರಹ್ಮಾಂಡವೆ ಇವರಿಗೆ ಘನ ಶೃತಿ ಸ್ಮೃತಿ ಸ್ವಾನುಭವವೆ ಘನವಾದ್ದರಿಂದ ಶಾಸ್ತ್ರವಾಸನೆಯುಳ್ಳವರು. ಅರುವಿನ ಅಭಿಮಾನಿಗಳು ಗುಣಗಂಧಾವಸ್ಥೆಯು ಪರಮಪ್ರೇಮಿಗಳು, ತೂರ್ಯಾವಸ್ಥೆಯೆ ತಮ್ಮಿರವೆಂದು ತಿಳಿದವರು. ಮನಸ್ಸು ಸದಾ ಬ್ರಹ್ಮಚಿಂತನೆಯಲ್ಲಿರಲಿ ಎಂಬುದೆ ಇವರ ಕಾತುರ. ಅದಕ್ಕಾಗಿ ಸತ್ಯರು ನಿತ್ಯರು ಮುಕ್ತರು ಸಚ್ಚಿದಾನಂದ ನಾನೆಂಬ ಚಿದಹಮ್ಮುಳ್ಳ ಕಾತುರದವರಾದುದರಿಂದ ಇವರು ನಿಸ್ಸೀಮರಾಗಲಿಲ್ಲ. ಅಖಂಡಿತ ಘನಪೂರ್ಣವಪ್ಪುದು ತಮ್ಮ ಸ್ವರೂಪ ವೆಂದರಿಯಲಿಲ್ಲ. ಇವರು ಕೂಡ ನಿಶಬ್ದವೇದಿಗಳಾಗದ್ದರಿಂದ ಸತ್ಯರು, ನಿತ್ಯರು, ಮುಕ್ತರು ಎಂಬ ಚಿದಹಮ್ಮಿನ ಕಳವಳವುಳ್ಳವರಾದಲ್ಲಿ ಲಿಂಗವಾರ್ತೆ ಅದೆಲ್ಲಿಯದು? ಇವರುಗಳೆಲ್ಲ ಸತ್ಯವರಿಯಲಿಲ್ಲ, ನಿತ್ಯವರಿಯಲಿಲ್ಲ ಮನ ಬಂದ ಪರಿಯಲ್ಲಿ ನುಡಿವುರು. ಒಬ್ಬನಿಗೆ ಪಿಂಡಪ್ರಧಾನವಾದರೆ ದೇವಗಣಾದಿಗಳಿಗೆ ಬ್ರಹ್ಮಾಂಡ ಘನವಾಗಿದೆ. ಸತ್ಯರಿಗೆ ನಿತ್ಯರಿಗೆ ಚಿತ್ ಬ್ರಹ್ಮಾಂಡ ಪ್ರಧಾನವಾಗಿದೆ. ಈ ಮೂರಕ್ಕೂ ಮೀರಿದ ಅಖಂಡಿತ ಘನ ಪೂರ್ಣವು ಆದ ಸ್ವರೂಪ ಇವರಾರಿಗೂ ಘನವಾಗಲಿಲ್ಲ. ಘನವಾಗದ್ದರಿಂದ ಅಖಂಡಿತ ಘನಪೂರ್ಣವಪ್ಪುದು ಇದುವೆ ತಮ್ಮಿರವು ಎಂದು ಆರೂ ತಮ್ಮ ಸ್ವರೂಪದಲ್ಲಿ ನಿಂತು ನೋಡಲಿಲ್ಲ. ನೋಡದ್ದರಿಂದ ಇವರು ಲಿಂಗದ ವಾರ್ತೆಯ ನುಡಿಯುವದದೆಂತು!

ಲಿಂಗದ ವಾರ್ತೆಯ ನುಡಿವ ಮಹಾಂತರೆಂದರೆ ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವೆ ತಮ್ಮ ಸ್ವರೂಪವೆಂದರಿತಿರುವವರು. ನುಡಿದು ನಿಃಶಬ್ದರಾಗಿರುವವರು. ನಿಸ್ಸೀಮ ನಿಲುವು ನಿಜ ನಿಲುವೆಂದರಿದವರು ಅವರು ಭಾವಕ್ಕಗಮ್ಯರು ಅಚಿಂತ್ಯ ಪದವೆ ತಮ್ಮದಾದ ಘನಮಹಿಮರು ಅರಿಯಲಿಲ್ಲದರುವೆ

ತಾವಾದ ಮಹಾಂತರು. ಅವರಿಗೆ ಗುಹೇಶ್ವರ ತಮಗಿಂತ ಬೇರೆ ಎಂದು ಕಂಡವರಲ್ಲ. ಇನ್ನುಳಿದವರು ಅಹಂಭಾವಕ್ಕಿಂಬು ಕೊಟ್ಟವರಾದುದರಿಂದ ಕಾಯ ಜೀವಿಗಳು ಅಶನಕ್ಕೆ ನೆರೆವರು ಇವರಿಗೆ ಗುಹೇಶ್ವರನೆಂಬ ಲಿಂಗವಾರ್ತೆಯ ನುಡಿಯುವ ಅಸಮರ್ಥರು ಆದುದರಿಂದ ಲಿಂಗವಿಲ್ಲ ಎಂದು ಹೇಳಿಹರು.

**ವಚನ 6**

**ಅರಿದೆವರಿದೆವೆಂಬಿರಿ ಅರಿದ ಪರಿಯೆಂತು ಹೇಳಿರೆ?**
**ಅರಿದವರು ಅರಿದೆವೆಂಬರೆ?**
**ಅರಿಯಬಾರದ ಘನವರಿದು,**
**ಅರಿಯದಂತಿಪ್ಪರು ಗುಹೇಶ್ವರಾ. ॥ 362 ॥**

ತಾತ್ಪರ್ಯ: ಅರಿದೆವರಿದೆ ವೆಂಬಿರಿ ಅರಿದ ಪರಿ ಎಂತು ಹೇಳಿರೆ: ಪ್ರಭುದೇವ ಅರಿದೆವರಿದೆ ಎನ್ನುವವರಿಗೆ ಪ್ರಶ್ನಿಸುತ್ತಾನೆ. ಓ ಅರಿದೆವರಿದೆ ಎನ್ನುವ ಘನವಂತರೆ? ನೀವು ಏನನ್ನು ಅರಿತು ಅರಿದೆವರಿದೆ ಎನ್ನುವರಿ, ನೀವು ಅರಿದ ಪರಿ ಆವುದು? ರೀತಿ ಆವುದು ಕ್ರಮ ಆವುದು? ನೀವಾರು ನಿಮ್ಮನ್ನು ನೀವರಿತು, ಅರಿದೆವರಿದೆ ಎನ್ನುವಿರಾ? ಒಳ್ಳೆಯದು ಬಹು ಸಂತೋಷ, ಹಾಗಾದರೆ ನಿಮ್ಮನ್ನು ನೀವು ಅರಿತ ಬಗೆ ಆವುದು? ಗುರುವಿಡಿದ ಅರುವು ಅರುವಲ್ಲ, ಲಿಂಗವಿಡಿದ ಅರುವು ಅರುವಲ್ಲ, ಗುರುವಿಡಿದ ಅರುವಿನಿಂದ ನಿಮ್ಮನ್ನು ನೀವು ಅರಿತೆವೆಂದರೂ ಅದು ಅರುವಲ್ಲ, ಲಿಂಗ ಲಿಂಗವೆಂಬ ಅರುವಿನಿಂದ ನಿಮ್ಮ ನೀವು ಅರಿತೆವೆಂದರೂ ಅದು ಅರುವಲ್ಲ, ನೀವೆಂದರೆ ಅರಿಯಬಾರದ ಘನ, ಅದನೆಂತು ಅರಿವುದು. ಕಲ್ಪಿತವಲ್ಲದ ಪುರುಷನನ್ನು ಕಲ್ಪಿತರಾಗಿ ಅರಿದ ಬಗೆ ಆವುದು?

ನೆನಹು ನಿರ್ಣಯಕ್ಕೆ ಮೀರಿದ ಘನ, ನೀವು ನೆನೆನೆನೆದು ಇದು ಅಲ್ಲ ಅದು ಅಹುದು. ಅದು ಅಲ್ಲ ಇದು ಅಹದು ಎಂದು ಹೇಗೆ ನಿರ್ಣಯಿಸುವಿರಿ ಮರವರುವಿಗೆ ಮೀರಿದ ಘನವನ್ನು ಒಮ್ಮೆ ಮರವುಳ್ಳವರಾಗಿ ಒಮ್ಮೆ ಅರುವುಳ್ಳರಾಗಿ ಅರಿದೆವರಿದೆವೆನ್ನುವಿರಿ, ಅಚಿಂತ್ಯ ಘನ ಚಿಂತನಕ್ಕೆಡೆಕೊಟ್ಟಲ್ಲಿ ಅದನೆಂತು ಅರಿದೆವರಿದೆವೆನ್ನುವಿರಿ.

ಶೃತಿಗೆ ಮೀರಿದ ಘನ ಶೃತಿಗಗೋಚರವಾಗಿಹ ಘನ ಶೃತಿಯೆ ಘನವಾಗಿರುವಲ್ಲಿ ಅರಿದ ಪರಿ ಎಂತು ಹೇಳಿರಿ. ಕ್ಷರಾಕ್ಷರ ಮೀರಿದ ಘನವ ಕ್ಷರವಾಗಿ ಅರಿದು ಹೇಳಿದಿರೆ? ಅಥವಾ ಅಕ್ಷರವಾಗಿ ಅರಿದು ಹೇಳಿದರೆ? ನೀವು ಆವುದು ಆಗಿ ಅರಿದ ಪರಿ ಹೇಳಿರೆ? ನುಡಿಗೆಡೆಗೊಡದ ಘನ ನೀವು ನುಡಿಯಿಂದುಕ್ತರಾಗಿ ಅರಿದ ಪರಿ ಆವುದು? ಎಡೆಗೆ ಕಡೆಯಿಲ್ಲದುದರೊಳ್ ನೀವು ನಡೆದು ಅರಿದ ಪರಿ ಆವುದು? ಘನಕ್ಕೆ ಘನವಾದುದು ನೀವು ನುಡಿನಡೆಯ ಘನವಂತರಾಗಿ ಅರಿದ ಪರಿ ಆವುದು ಹೇಳಿರಿ?

ಅರುವಿಂಗರುವಾಗಿಹ ಘನಕ್ಕೆ ಘನ ನೀವು ಅದಾವ ಅರುವಾಗಿ ಅರಿದಪರಿ ಹೇಳಿರೆ? ಅರಿಯಬಾರದ ಘನ ನೀವು ಅರಿತ ಬಗೆ ಆವುದು? ವಾಙ್ಮನೋತೀತವಾದ ಘನ ವಾಙ್ಮನವುಳ್ಳವರಾಗಿ ನೀವು ಅರಿದ ಪರಿ ಹೇಳಿರೆ? ಅರಿದವರರಿದೆವೆಂಬರೆ?

ವಾಣಿಯೆ ತಾವಾಗದವರು, ನಿರ್ವಾಣರು. ಮನವೆ ತಾವಾಗದವರು ಕಲ್ಪಿತವಲ್ಲದ ಪುರುಷೋತ್ತಮ ತಾನೆ ನೋಡಾ. ಅಲ್ಲಿ ನೆನಹು ನಿರ್ಣಯ ನಷ್ಟವಾಗಿ ನಿಷ್ಪತ್ತಿ, ನಿರಾಳವಾಗಿಹ ನಿಜಧಾಮ ಅದು ನೋಡಾ. ಇದು ಕಾರಣ, ಅರಿದೆವರಿದೆವೆಂಬರಿ, ಎಂದು ಪ್ರಭುದೇವ ಕೇಳಿದುದು. ಏಕೆಂದರೆ ಅರಿದವರರಿದೆವೆಂಬಿರೆ? ಅದರ ಉತ್ತರವ ತಾನೆ ಹೇಳಿಹನು. ನುಡಿಯುವ ನುಡಿ ನಷ್ಟ, ನೆನಹ ನಿರ್ಣಯದಿಂದುಕ್ತವಾದ ಮನ ಬುದ್ಧಿಯು ನಷ್ಟ, ಅರಿತೆ ಅರಿಯೆನೆನ್ನುವ ಮರವರವು ನಷ್ಟವಾಗಿರುವದರಿಂದ ಅರಿದವರರಿದೆವೆಂದು ಹೇಗೆ ಹೇಳುವದು, ತನು ನಷ್ಟ, ಮನ ನಷ್ಟ, ನೆನಹು ನಷ್ಟ, ಭಾವ ನಷ್ಟ, ಜ್ಞಾನ ನಷ್ಟವಾಗಿರುವಲ್ಲಿ ನೀವು ಆವುದಾಗದವರು. ಏನೊಂದಾಗದ ಘನ ಅದು. ಅರಿಯಬಾರದ ಘನನರಿತವರು ಅರಿಯದಂತಿಪ್ಪರು ಗುಹೇಶ್ವರಾ.

ಅರಿಯಬಾರದ ಘನ ಆವುದು? ತಾನೆ ಅರಿಯಬಾರದ ಘನ, ತನ್ನ ತಾನರಿತುದೆ ಅರಿಯಬಾರದ ಘನವರಿತವರು. ತನ್ನನ್ನು ಗುರುವಿಡಿದ ಅರುವು ಅರಿಯಲಿಲ್ಲಾ, ಲಿಂಗವಿಡಿದ ಅರಿವು ಅರಿಯಲಿಲ್ಲ. ಶೃತಿಗಳು ಅರಿಯಲಿಲ್ಲ, ಸ್ಮೃತಿ, ಅನುಭವವು ಅಲ್ಲಿಗೆ ಬರವು ಮೂಕನ ಮೌನ ನುಡಿದು ಹೇಳುವದದೆಂತು, ನಿಃಶಬ್ದ ಘನದಿರುವು ವಾಣಿ, ಶೃತಪಡಿಸುವದದೆಂತು? ಅಕಲ್ಪಿತ ಘನವ ಕಲ್ಪಿತ ಪುರುಷ ಕಲ್ಪಿಸುವದದೆಂತು?

ಎಲ್ಲ ಎಲ್ಲವ ನರಿವವರುಂಟು, ತನ್ನ ತಾನರಿವವರುಂಟೆ? ಅರಿದಿಹೆನೆಂಬುದು ಚಿದಹಮ್ಮದ ಮದ ನೋಡಾ, ನಿರ್ಧರಿಸಿಹೆನೆಂಬುದು ಅನುಭವದ ಮದನೋಡಾ, ಅರಿದರುಹಿಸಿ ಕೊಂಬುದಕ್ಕೆ ಮೀರಿದ ಘನವ ನರಿವ ಪರಿ ಎಂತು? ನಿರಂಜನ ಪ್ರಭುನಾಗೇಶ್ವರಾ ನಿಮ್ಮ ವರಪ್ರಸಾದ ದನುವಿನಗಮ್ಯ ಅಗಾಧವ ವರ್ಣಿಸಬಹುದೆ? ವರ್ಣಾತೀತ ನೋಡಾ.

ತನ್ನ ತಾನರಿಯುವದೆಂದರೆ ಅರಿದರುಹಿಸಿ ಕೊಂಬುದಕ್ಕೆ ಮೀರಿದ ಘನವಾಗಿ ನಿಂತುನೋಡುವುದೆ ಅರಿಯಬಾರದ ಘನವರಿತ ಪರಿ. ಆ ಮಹಾಂತ ಅರಸಿಕೊಳ್ಳುವ ಅನಾತ್ಮ ಕಾಣಲಿಲ್ಲ ಅರಿವ ಅರುವ ಕಾಣಲಿಲ್ಲಾ ಇದು ಕಾರಣ ಅರಿಯಬಾರದ ಘನವರಿತವರು ಅರಿಯದಂತಿಪ್ಪರು ಗುಹೇಶ್ವರಾ. ಅರಿಯಬಾರದ ಘನ ತಾನೆ ತನ್ನ ತಾನರಿತವರು ಅರಿಯದಂತಿಪ್ಪರು, ಅವರು ಈ ನಾಮರೂಪ ಜಗವ ಅರಿಯದಂತಿಪ್ಪರು, ಅವರ ದಿವ್ಯದೃಷ್ಟಿಗೆ, ನಾಮರೂಪ ಜಗವು ಅರಿಯಬಾರದ ಘನವಾಗಿದೆ. ತನ್ನ ಸ್ವರೂಪವಾಗಿಹುದು ತಾನೆ ಆಗಿಹನು. ಬೋಧ, ಅಭೋಧ, ಭೋಧಾಭೋಧವು. ಅರಿಯಬಾರದ ಘನವಾಗಿದೆ ಎಲ್ಲಿ ನೋಡಿದಡಲ್ಲಲ್ಲಿ ಅರಿಯಬಾರದ ಘನವೆ ಪ್ರಜ್ವಲಿಸುವದಾಗಿ ಗುಹೇಶ್ವರ ತಾನಾಗಿ ಬೆಳಗಿನ ಬೆಳಗುಳ್ಳದಾಗಿದೆ ಇದು ನಿಸ್ಸೀಮವು ಅರಿಯದರುವಾಗಿಹ ಘನವು ಅರಿಯಲಿಲ್ಲದರುವೆ ತಾನಾಗಿ ನಿಂತ ನಿಜದಿರುವು ತನ್ನ ಹೊರ್ತು ಏನೊಂದನ್ನು ಕಾಣದ್ದರಿಂದ ಅರಿತವರು ಅರಿಯದಂತಿಪ್ಪರು ಗುಹೇಶ್ವರಾ ಎಂದು ಪ್ರಭುದೇವ ಹೇಳಿದುದು.

**ವಚನ 7**

**ಕಾಯದಲ್ಲಿ ಕಳವಳವೆಡೆಗೊಂಡ ಬಳಿಕ,**
**ಅರುವಿನಲ್ಲಿ ಮರವೆ ತಾನೆ ನಿಂದಿತ್ತು ನೋಡಾ.**
**ಕಾಯದ ಕಳವಳ ವಾಯುವೆಂದರಿಯ ಬಲ್ಲಡೆ**
**ದೇವ ಗುಹೇಶ್ವರ ನಿಲುವು ತಾನೆ ನೋಡಾ. ॥ 386 ॥**

**ತಾತ್ಪರ್ಯ:** ಕಾಯದಲ್ಲಿ ಕಳವಳವೆಡೆಗೊಂಡ ಬಳಿಕ ಅರುವಿನಲ್ಲಿ ಮರವೆ ತಾನೆ ನಿಂದಿತ್ತು ನೋಡಾ ಕಾಯದ ಕಳವಳ, ತಾನಾರೆಂಬ ತನ್ನ ಸ್ವರೂಪ ಜ್ಞಾನ, ಮರವ ಮಾಡುವ ಕಗ್ಗತ್ತಲೆ, ನರರು, ಸುರಾಸುರರು, ಮನು, ಮುನಿಗಣ ಆರೆ ಇರಲಿ, ಕಾಯದಲ್ಲಿ ಕಳವಳಕ್ಕಿಂಬಾದಲ್ಲಿ ಅರುವಿನ ಹಿರಿಮೆ ಕೆಡಿಸಿ, ಭ್ರಾಂತಿಯೆ ಮುಂದು ಮಾಡಿತ್ತು. ಈ ಭ್ರಾಂತಿಯ ಅಹಂಕಾರ ಭಾವ, ಅವಿದ್ಯಾಭಾವ, ಜ್ಞಾನಾಜ್ಞಾನ ಭಾವ, ಜ್ಞಾನ ವಿಕೃತಿ ಭಾವ, ವರ್ತನೆ ವಿಕೃತಿಭಾವ, ಮೋಹ ವಿಕೃತಿಭಾವ ಎಂಬ ಭ್ರಾಂತಿ ಭಾವವ ಮಾಣಿಸಯ್ಯ, ಇಂದ್ರಿಯಭಾವ, ವಿಷಯಭಾವ, ಭೂತ ಭಾವ, ಕರಣಭಾವ, ವಿಶ್ವ, ತೈಜಸ್, ಪ್ರಾಜ್ಞನೆಂಬ ಜೀವ ಭಾವದ ಭ್ರಮೆಯ ಕಳೆಯಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ.

ಕಾಯದಲ್ಲಿ ಕಳವಳವೆಡೆಗೊಂಡ ಬಳಿಕ ಅರುವಿನಲ್ಲಿ ಮರವೆ ತಾನೆ ನಿಂದಿತ್ತು. ಈ ಕಾಯದಲ್ಲಿ ಜೀವನು, ಕರ್ಮದ ಫಲಾಪೇಕ್ಷೆ ಯುಳ್ಳವನಾಗಿರಲಿ, ಈಶಾರ್ಪಣ ಮಾಡುವ ಕಾಂಕ್ಷೆಯುಳ್ಳವನಾಗಿರಲಿ, ಸಕಲ ಕರ್ಮಕ್ಕೆ ಸಾಕ್ಷಿ ನಾನೆನ್ನುವ ಜ್ಞಾನ ಕಾಂಡಿಯ ಹಂಬಲದ್ದಿರಲಿ ಈ ಮೂರು ಅಹಂಕಾರದಿಂದುಕ್ತವಾದವುಗಳೆ ಇಲ್ಲಿ ಭಾವ ಬದಲಾವಣೆ ಕಾಣಬಹುದು.

ಕರ್ಮಿಯ ಭಾವ ಕಾಯ ನಾನೆನ್ನುವ ಭಾವ, ಈಶಾರ್ಪಣ ಮಾಡುವ ಭಾವ ಭಕ್ತನದು. ಸಾಕ್ಷಿ ನಾನೆನ್ನುವ ಭಾವ, ಜ್ಞಾನಿಗಳದ್ದು ಒಂದು ಅವಿದ್ಯೆಯಿಂದುಕ್ತವಾದ ಭಾವವಾದರೆ, ಇನ್ನೊಂದು ಜ್ಞಾನಾಜ್ಞಾನ ದಿಂದುಕ್ತವಾದ ಭಾವ, ಮಗದೊಂದು ಚಿದಹಮ್ಮುಳ್ಳಭಾವ, ಸಾಕ್ಷಿ ನಾನೆನ್ನುವದು, ಜ್ಞಾನ ವಿಕೃತಿಭಾವ, ಈಶಾರ್ಪಣ ಮಾಡುವದು ವರ್ತನೆ ವಿಕೃತಿ ಭಾವ, ಕಾಯ ನಾನೆನ್ನುವದು ಮೋಹನ ವಿಕೃತಿ ಭಾವ, ಇವೆಲ್ಲವುಗಳು ಮರುವರುವಿನಿಂದುಕ್ತವಾದ ಭಾವಂಗಳು. ಇಲ್ಲಿ ಭಾವಕ್ಕಗಮ್ಯವಾದ ನಿಜದಿರವು ಇಲ್ಲವಾಗಿ ಈ ಭ್ರಾಂತಿ ಭಾವಂಗಳೆ ತಾನಾಗಿಹನು. ಇದು ಕಾರಣ ಭ್ರಾಂತಿ ಭಾವವ ಮಾಣಿಸಯ್ಯ ಇದಲ್ಲದೆ, ಇಂದ್ರಿಯ ಭಾವ, ವಿಷಯ ಭಾವ, ಭೂತ ಭಾವ, ಕರಣ ಭಾವ, ವಿಶ್ವ ತೈಜಸ, ಪ್ರಾಜ್ಞನೆಂಬ ಜೀವ ಭಾವದ ಭ್ರಮೆಯ ಕಳೆಯಿಸಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭಾವೆ.

ಇಂದ್ರಿಯ ಭಾವ, ವಿಷಯಭಾವ, ಭೂತಭಾವ, ಶರಣಭಾವ, ತಾನಾಗದ ತನ್ನದಾಗದ ಕರ್ಮೇಂದ್ರಿಯಂಗಳೆ ಇರಲಿ, ಜ್ಞಾನೇಂದ್ರಿಯಂಗಳೆ ಇರಲಿ, ದಶಪ್ರಾಣಂಗಳೆ ಇರಲಿ, ಹೊನ್ನು ಹೆಣ್ಣು, ಮಣ್ಣೆಂಬ ವಿಷಯ ಭಾವವಿರಲಿ, ಸ್ಥಾವರ, ಜಂಗಮವೆಂಬ ಭಾವವಿರಲಿ, ಒಡಲುಳ್ಳಭಾವವಿರಲಿ, ಇವುಗಳ ಕಾರ್ಯವಿರಲಿ, ಇವುಗಳು ತನ್ನಿಂದ

ತಿಳಿಸಿಕೊಳ್ಳುವವುಗಳು, ತಿಳಿಯುವ ದೃಶ್ ರೂಪನಾದ ಪ್ರತ್ಯಗಾತ್ಮನಿಗಿಲ್ಲ, ತಾನು ತಿಳಿಸಿಕೊಳ್ಳುವ ಅನಾತ್ಮವಾಗಿಲ್ಲ, ತಿಳಿಯುವ ದೃಶ್ಯ ಆಗಿಲ್ಲ, ಅರಿದರುಹಿಸಿ ಕೊಂಬುದಕ್ಕೂ ಮೀರಿದ, ಅಖಂಡಿತ ಘನ ಪೂರ್ಣವಾದುದೆ ತಾನಿರುವಲ್ಲಿ ತನಗೆ ಕರ್ಮೇಂದ್ರಿಯಂಗಳೆಲ್ಲಿ? ಜ್ಞಾನೇಂದ್ರಿಯಂಗಳೆಲ್ಲಿ? ಅವುಗಳೇ ಇಲ್ಲದಿರುವಾಗ ಅವುಗಳ ಕಾರ್ಯವೆಲ್ಲಿ, ತನ್ನೊಳು ಇಲ್ಲವೆಂಬುದು, ಇಲ್ಲವೆನ್ನಲು ಇಂಬಿಲ್ಲದಿರುವಲ್ಲಿ ತನ್ನ ಮರವಿನ ಕಲ್ಪನೆಯ ತನಗೆ ಇಂದ್ರಿಯಂಗಳ ಭಾವ ವಿಷಯಂಗಳ ಭಾವ ಹೊನ್ನೆಂಬ ಭಾವ ಹೆಣ್ಣೆಂಬ ಭಾವ, ಮಣ್ಣೆಂಬ ಭಾವ ಪಂಚವಿಷಯಂಗಳ ಭಾವವನ್ನುಂಟು ಮಾಡಿದೆ. ಸಕಲ ಭಾವಂಗಳಿಗಿಂಬು ಮಾಡಿದುದು ತನ್ನಯ ಮರವು.

ಮರವಿನಿಂದ ಮನ, ಬುದ್ಧಿ, ಚಿತ್ತಾ, ಅಹಂಕಾರವಾದುದಲ್ಲದೆ ನೆನಹು, ನಿರ್ಣಯ, ಚಿಂತನ, ಕರ್ತೃತ್ವ ಭೋಕ್ತೃತ್ವದ ಉಪಭೋಗಿಯಾಗಿ ಕೊನೆಗೆ ಜೀವನೆಂದು ಕಲ್ಪಿಸಿಕೊಂಡು, ಜಾಗ್ರುತಭಿಮಾನಿ ವಿಶ್ವಸ್ವಪ್ನದಭಿಮಾನಿ ತೈಜಸ, ನಿದ್ರೆಯಭಿಮಾನಿ ಪ್ರಾಜ್ಞನೆಂಬ ಜೀವನಾದುದು ತಾನಾರೆಂದು ತನ್ನನರಿಯದ ಮರವು, ಈ ಮರವಿನಿಂದ ಕಾಯದಲ್ಲಿ ಕಳವಳವೆಡೆಗೊಂಡ ಬಳಿಕ ಅರುವಿನಲ್ಲಿ ಮರವು ತಾನೆ ನಿಂದಿತ್ತು.

ಕಾಯದ ಕಳವಳ ವಾಯುವೆಂದರಿಯ ಬಲ್ಲಡೆ ದೇವ ಗುಹೇಶ್ವರ ನಿಲವು ತಾನೆ, ಕಾಯದ ಕಳವಳ ವಾಯುವೆಂದರಿಯಬೇಕಾದರೆ ತಾನಾರೆಂದು ತನ್ನ ತಾನರಿದರಿದು ನೋಡುವುಡೆ ಆಗ ತಾನು ಅರಿಯದರವು ಎಂಬುದು ತನ್ನಿಂದ ತನಗದು ವಿದಿತವಾಗಬೇಕು. ಅಲ್ಲಿ ಆವಾವುದರ ಅಂಟಿಲ್ಲದ ನಿರಾಲಂಬಿತ್ವ ಸಿದ್ಧಿಸುವದು, ಇದು ತನ್ನಿಂದ ತನ್ನ ನೋಡಿದ ಸ್ವತಃ ಸಿದ್ಧ ಪದ, ತನ್ನ ಸ್ವಯಪದ ಕರಿಗೊಂಡಾಗ ಬುದ್ಧಿ, ಪ್ರಪಂಚದ ಸತ್ಯತ್ವ ಮಿಥ್ಯೆತ್ವ ಬುದ್ಧಿಯುಳ್ಳದ್ದಾಗಿರಲಿ. ಪರಮಾರ್ಥದ ಸತ್ಯತ್ವ ಮಿಥ್ಯೆತ್ವ ಬುದ್ಧಿಯುಳ್ಳದ್ದಾಗಿರಲಿ. ಇವೆಲ್ಲವು ಬುದ್ಧಿಯ ಕಾರ್ಯ, ಮರವರುವಿನ ಕಾರ್ಯ, ಬುದ್ಧಿ ಮರವಿನಿಂದುಕ್ತವಾದಾಗ ಕ್ಷೋಭೆಗೊಳ್ಳುತ್ತದೆ. ಅದು ಅರುವಿನಿಂದುಕ್ತವಾದಾಗ ಶಾಂತವಾಗಿ ಕ್ಷೋಭೆ ರಹಿತವಾಗುತ್ತದೆ. ಈ ಮರವಿನ ಕಾರ್ಯ ಪ್ರವೃತ್ತಿ ಅರುವಿನ ಕಾರ್ಯ ನಿವೃತ್ತಿ, ಪ್ರವೃತ್ತಿ, ನಿವೃತ್ತಿ, ಬುದ್ಧಿಕಾರ್ಯವಲ್ಲದೆ ತಾನಲ್ಲ ತಾನು ಇವಾವುಗಳಿಗೂ ಅಂಟದ ನಿರಾಲಂಬಿ ತಾನೆ ಎಂಬದು ತನ್ನೊಳ ಕರಿಗೊಂಡಿರುವದರಿಂದ ಆಗ ಕಾಯದ ಕಳವಳ ವಾಯು ಎಂದರಿದ ತತ್ವ ದೃಷ್ಟಿ , ಆ ಮಹಾಂತನದಾಗಿರುವದರಿಂದ ತಾನೆಂಬುದು ಅಕಲ್ಪಿತ ಘನ. ಅಚಿಂತ್ಯಾತ್ಮ ಭಾವಕ್ಕಗಮ್ಯ, ಏನೊಂದುಸರಲು ಎಡೆಗೊಡದ ಘನ ತನ್ನಿರವು ತನಗದು ವೇದ್ಯವಾದುದರಿಂದ ಸಹಜ ಸ್ವರೂಪನಾಗಿಹ ದೇವ ದೇವ. ಮಹಾಪ್ರಸಾದ ತೆರಹಿಲ್ಲದ ಘನ ಗುಹೇಶ್ವರ ನಿಲವು ತಾನೆ ಎಂದು ಹೇಳಿದುದು.

**ವಚನ 8**

**ಅಹಂಕಾರವನೆ ಮೆರೆದು, ದೇಹ ಗುಣಂಗಳನೆ ಜರೆದು,**
**ಇಹ ಪರವು ತಾನೆಂದರಿದ ಕಾರಣ ಸೋಹಂ ಭಾವ ಸ್ವಸ್ಥಿರವಾಯಿತ್ತು,**
**ಸಹಜದುದಯದ ನಿಲುವಿಂಗೆ**

**ಮಹಾಘನ ಲಿಂಗದ ಬೆಳಗು ಸ್ವಾಯತವಾದ ಕಾರಣ**
**ಗುಹೇಶ್ವರ ನಿಮ್ಮ ಶರಣನುಪಮಾತೀತನು.** ॥ 401 ॥

**ತಾತ್ಪರ್ಯ:** ಅಹಂಕಾರವನೆ ಮರೆದು, ಅಹಂಕಾರ ಮರೆಯಬೇಕಾದರೆ ಕಲ್ಪಿತ ಪುರುಷನೆಂದು, ಜೀವನೆಂದು ಎಲ್ಲಿಯವರೆಗೆ ಒಪ್ಪಿಕೊಂಡಿಹನು. ಅಲ್ಲಿಯವರೆಗೆ ಅಹಂಕಾರ ಮರೆಯುವದು ಅಸಾಧ್ಯ. ದೇಹೋಹಂ ಎಂದಲ್ಲಿ ಅಹಂಕಾರಿಯು, ನಾನು ಜೀವನೆಂದಲ್ಲಿ ಅಹಂಕಾರಿಯು ಅಂತರಾತ್ಮನೆಂದಲ್ಲಿಯು ಅಹಂಕಾರಿಯು ಪರಮಾತ್ಮನೆಂದಲ್ಲಿಯು ಅಹಂಕಾರಿಯು, ಅಹಂಕಾರ ಮರೆಯಲು ತತ್ವದೃಷ್ಟಿಯೇ ಮುಖ್ಯ.

ಅಹಂಕಾರ ಮರೆಯಬೇಕಾದರೆ, ತತ್ವದೃಷ್ಟಿ ದಯಪಾಲಿಸುವ ಶ್ರೀಗುರು ಕೃಪೆ ಮುಖ್ಯ, ಸದ್ಗುರು ಕೃಪೆಗೆ ಅಹಂಕಾರ ಮರೆಯುವದಕ್ಕೆ ವಿಳಂಬವಾಗುವುದಿಲ್ಲ, ಕತ್ತಲೆಯ ಕಳೆಯಲು ಬೆಳಕಿಗೆ ಹೇಗೆ ವಿಳಂಬವಾಗುವುದಿಲ್ಲ ಹಾಗೆ ಸದ್ಗುರು ರೂಪಿ ಚಿತ್ ಪ್ರಕಾಶಕ್ಕೆ ಅಹಂಕಾರ ರೂಪಿ ಕತ್ತಲೆ ಕಳೆಯಲು ವಿಳಂಬವಿಲ್ಲ. ಸದ್ಗುರು ದೇವನೆ, ಕಲ್ಪಿತ ಪುರುಷನ ಅಹಂಕಾರ ಕಳೆಯುವ ಸಮರ್ಥ ದೇವ, ದೇವ. ಈ ಮಹಾಂತ ತನ್ನ ನಂಬಿದ ಭಕ್ತರನ್ನು ತನ್ನಂತೆ ಮಾಡುವ ಮಹಾಮಹಿಮ, ತಾನು ಹೇಗೆ ಕಲ್ಪನೆಗೆ ನಿಲುಕದವನಾಗಿಹನೋ ಹಾಗೆ ಭಕ್ತರನ್ನು ಕೂಡ, ಕಲ್ಪಿತ ಪುರುಷನೆಂಬುದನ್ನೆ ಇಲ್ಲಮಾಡಿ ತೆರಹಿಲ್ಲದ ಘನವ ಪ್ರಜ್ವಲಿಸುವ ಪರಮದೇವ ಈ ಮಹಾಂತನ ಕೃಪಾದೃಷ್ಟಿಗೆ ಸಹಜ ಕರಗಿಹೋಗುವುದು. ಅಹಂಕಾರವನ್ನು ಆಶ್ರಯಿಸಿ, ದೇಹಗುಣ ದೇಹಭಾವ ದೃಢವಾಗಿಹವು. ಆವಲ್ಲಿ ಅಹಂಕಾರಕ್ಕಿಂಬಿಲ್ಲ, ಅಲ್ಲಿ ಸ್ವಭಾವತಃ ದೇಹಗುಣಂಗಳನ್ನು ತಿರಸ್ಕರಿಸುತ್ತಾನೆ. ಪೂರ್ವದಲ್ಲಿ ಅಹಂಕಾರದಿಂದ ಸೀಮಿತನಾಗಿದ್ದ ದೇಹಗುಣಂಗಳ ತಾದಾತ್ಮ್ಯದೋಷದಿಂದ ತಾನಾರೆಂಬ ತನ್ನ ಘನತ್ವ ತಿಳಿಯದಂತಾದುದರಿಂದ ಇಹಪರವು ತಿಳಿಯದಂತಾಯಿತ್ತು.

ತತ್ವ ದೃಷ್ಟಿಯುಳ್ಳವ ನಾಗುವದರಿಂದ ಅಹಂಕಾರ ಇಲ್ಲದುದು ಇಲ್ಲವಾಯಿತ್ತು. ಅದರ ಸತ್ಯತ್ವ ಬುದ್ಧಿಯು ಕರಗಿತ್ತು ಹಾಗೂ ಮಿಥ್ಯೆತ್ವ ಬುದ್ಧಿಯು ಕರಗಿತು, ಆಗ ದೇಹಗುಣಂಗಳ ತಾದಾತ್ಮ್ಯ ಭಾವವುಳ್ಳವನಾಗನು, ಭಾವಕ್ಕಗಮ್ಯನೆ ತಾನಾದುದರಿಂದ ಇಹವೂ ತಾನೆ, ಪರವೂ ತಾನೆ, ತಾನೆ ಪೂರ್ವದಲ್ಲಿ ಭಾವಕ್ಕೊಳಪಟ್ಟವ ನಾದುದರಿಂದ ಇಹವೂ ತನಗಿಂತ ಬೇರಾಗಿ ಕಂಡಿದ್ದ. ಪರವೂ ಬೇರಾಗಿ ಕಂಡಿದ್ದ. ಆವಾಗ ತಾನು ಅಕಲ್ಪಿತ ಘನವೆಂಬುದು ತನ್ನಿಂದ ತನಗೆ ವೇದ್ಯವಾದುದರಿಂದ ಇಹ ಪರವೂ ತಾನೆಂದರಿದ ಕಾರಣ ಸೋಹಂ ಭಾವ ಸ್ವಸ್ಥಿರವಾಯಿತ್ತು.

ಸೋಹಂ ಭಾವವದು ನಿಸ್ಸೀಮಭಾವ, ಇದು ಅಖಂಡಿತ ಘನ ಪೂರ್ಣವಪ್ಪ ತನ್ನಿರವು ಇದು ಪೂರ್ವದ ಸಿರಿ, ತನ್ನ ಸ್ವಸಿರಿ, ಜ್ಞಾನೈಶ್ವರ್ಯ, ಜ್ಞಾನಘನ. ಇದು ಕಾರಣ ಇಹವು ಕಂಡರೂ ತಾನೆ ಪರವು ಕಂಡರೂ ತಾನೆ, ಸೋಹಂ ಭಾವ ಸ್ವಸ್ಥಿರವಾದ ಘನ ಅದನೆಂತು ಬಣ್ಣಿಸುವದು. ಪೂರ್ಣಮದಃ ಪೂರ್ಣಮಿದಂ ಎಂಬುವ ಭಾವ, ಪೂರ್ವದಲ್ಲಿದ್ದುದು ಅದುವೆ ಮಧ್ಯದಲ್ಲಿದ್ದುದು ಅದುವೆ, ಮುಂದೆ ಇದ್ದುದು ಅದುವೆ;

ಇಹವಾದುದು ಅದುವೆ, ಪರವಾದುದು ಅದುವೆ, ನಾನು ಆದುದು ಅದುವೆ, ನೀನು ಆದುದು ಅದುವೆ, ನಾನೀನೆಂಬುದಕ್ಕೆ ತೆರಹಿಲ್ಲದ ಘನವಾದುದು ಅದುವೆ, ಎಲ್ಲಿ ನೋಡಿದಡಲ್ಲಲ್ಲಿ ಅದುವೆ, ಅಂದು ಇಂದು ಎಂದೆಂದೂ ಇದ್ದುದು ಅದುವೆ, ಸಹಜದುದಯದ ನಿಲುವಿಂಗೆ ಮಹಾಘನ ಲಿಂಗ ಬೆಳಗು ಸ್ವಾಯತವಾದ ಕಾರಣ ಗುಹೇಶ್ವರ ನಿಮ್ಮ ಶರಣನುಪಮಾತೀತನು. ಮರವಿನ ಹೃದಯಕ್ಕೆ ಕಲ್ಪಿತ ಪುರುಷನಾಗಲು ಎಷ್ಟು ಸಹಜವೊ? ಅರುವಿನ ಹೃದಯಕ್ಕೆ ಅಕಲ್ಪಿತ ಘನ ತಾನೆ ತಾನಾಗಿ ಬೆಳಗುವದು ಸಹಜವು ಆಗಿದೆ ಅನುಪಮವು ಆಗಿದೆ.

ಶರಣ ಅಕಲ್ಪಿತ ಘನನಾದುದರಿಂದ ಆ ಮಹಾಂತನ ಜ್ಞಾನವು ಅನುಪಮವು ಆಗಿದೆ, ಇಲ್ಲಿ ತರ್ಕಕ್ಕೆ ಇಂಬಿಲ್ಲ ಸಮಾಧಿಯೋಗಕ್ಕೂ ಇಂಬಿಲ್ಲ ಶರಣನ ಜ್ಞಾನವೆಂದರೆ ತನ್ನಿಂದ ತನಗೆ ಉದಯವಾದ ಉದಯ. ಇದು ಮನಮೇರೆದಪ್ಪಿದ ನಿಲಯ ಇಲ್ಲಿ ಗುರು ಉಪದೇಶ ಹೇಗೆ ಸಾಧ್ಯ. ಅರುವೆಂಬುದಕ್ಕೂ ಮೀರಿರುವದರಿಂದ ಮಹಾಘನ ಆವುದು. ಅರುವೆಂಬುದಕ್ಕೂ ಮೀರಿ ತನ್ನಿಂದ ತಾನೆ ಬೆಳಗುವದಾಗಿದೆ. ಅದು ಮಹಾಘನ ಇದುವೆ ಲಿಂಗದ ಬೆಳಗು. ಶೃತಿಗೆ ಮೀರಿದ ಘನ ನುಡಿಗೆಡೆಗೊಡದ ಘನ, ನಡೆಗೆಡೆಗೊಡದ ಘನ ಸ್ವಯಮೇವ ಜ್ಯೋತಿ, ಇದು ಅಂದು ಇಂದು ಎಂದೆಂದೂ ಇದ್ದಂತಿದ್ದ ಜ್ಯೋತಿ ನಿರಂತರವಾಗಿಹ ಸಹಜ. ಮಂಗಳಮಯವು ತಾನೆ. ತಾನೆ ಬೆಳಗು, ಇದು ತನ್ನೊಳ ತನ್ನಿಂದ ತನಗದು ವೇದ್ಯವಾದುದೆ ಮಹಾಘನ ಲಿಂಗದ ಬೆಳಗು ಸಂಬಂಧವಾದುದು. ಇದು ಕಾರಣ ಗುಹೇಶ್ವರ ನಿಮ್ಮ ಶರಣನುಪಮಾತೀತನು.

ಗುಹೇಶ್ವರ ನಿಮ್ಮ ಶರಣ ಅನುಪಮ ಆಕಾಶದ ಉದ್ದ ಅಗಲವು ಅನುಪಮ, ಆಕಾಶದ ಇರವು ಅನುಪಮ, ಆಕಾಶದ ಘನವ ತಿಳಿಯಬೇಕಾದಲ್ಲಿ ತಾನೊಮ್ಮೆ ಆಕಾಶವಾಗ ಬೇಕಾಗುತ್ತದೆ. ಅದರ ವರ್ಣನೆ, ನಾಲ್ಕು ಭೂತಗಳು ಹೇಗೆ ಮಾಡಬಲ್ಲವು, ಹಾಗೆ ಶರಣ ಅನುಪಮ ಮತಿಗತಿಗೆ ಮೀರಿರುವದರಿಂದ ಅನುಪಮ, ಮರವರುವಿಂಗೆ ಮೀರಿರುವದರಿಂದ ಅನುಪಮ. ಭಾವಕ್ಕಗಮ್ಯನಾದುದರಿಂದ ಅನುಪಮ. ಅರುವಿಂಗರುವಾದವನನ್ನು ಅರಿಯುವದು ಹೇಗೆ ಸಾಧ್ಯ. ಆಕಾಶ ಹೇಗೆ ಶಬ್ದಮುಗ್ಧ ಹಾಗೆ ಸಹಜದುದಯ ನಿಲುವುಳ್ಳ ಮಹಾಘನ ಲಿಂಗದ ಬೆಳಗು ತನ್ನೊಳ ತನ್ನಿಂದ ತನಗದು ಸಂಬಂಧವಾಗಿ ತಾನೆ ಆದುದರಿಂದ ನಿಮ್ಮ ಶರಣನು ಉಪಮಾತೀತನು.

**ವಚನ 9**

**ಲೋಕದ ನಚ್ಚು ಮಚ್ಚು ಬಿಟ್ಟು ನಿಶ್ಚಿಂತವಾಯಿತ್ತು**
**ಏನು ಹತ್ತಿತ್ತೆಂದರಿಯೆನಯ್ಯ,**
**ಏನು ಹೊದ್ದಿತ್ತೆಂದರಿಯೆನಯ್ಯಾ.**
**ಗುಹೇಶ್ವರನೆಂಬ ಗ್ರಹ ಒಳ ಕೊಂಡಿತ್ತಾಗಿ**
**ನಾನೇನೆಂದರಿಯೆನಯ್ಯ ॥ 405 ॥**

ತಾತ್ಪರ್ಯ: ಲೋಕದ ನಚ್ಚು ಮೆಚ್ಚು ನಿಶ್ಚಿಂತವಾಯಿತ್ತು: ನಿಶ್ಚಿಂತನಾಗಬೇಕಾದಲ್ಲಿ ಲೋಕದ ನಂಬಿಗೆ ಲೌಕಿಕ ಭಾವ, ಲೌಕಿಕ ನೀತಿ, ಲೋಕ ಬುದ್ಧಿ, ಲೋಕ ವಿಚಾರ,

ಇವುಗಳು ಬಿಟ್ಟಾಗಲೆ ನಿಶ್ಚಿಂತತೆ ಸಿದ್ಧವಾಗುವದು, ಲೋಕ? ತೋರುವುದೆಲ್ಲ ಲೋಕ, ಅತಿ ಸಮೀಪವಾದುದೆಂದಲ್ಲಿ ತನ್ನ ಶರೀರವೆ ಲೋಕ, ಅನಾತ್ಮವೆ ಲೋಕ, ಪಿಂಡವೆ ಲೋಕ, ಪ್ರಕೃತಿಯೆ ಲೋಕ, ಗುಣಮಯಿಯೆ ಲೋಕ, ನಾಮರೂಪದಿಂದುಕ್ತವಾದುದು ಲೋಕ, ಭಾವನೆಯಿಂದುಕ್ತವಾದುದೆ ಲೋಕ. ಗುಣ, ಕ್ರಿಯೆ, ಕರ್ಮದಿಂದುಕ್ತವಾದುದೆ ಲೋಕ, ಭ್ರಮಾತ್ಮಕದೃಷ್ಟಿಯೆ, ಲೋಕ.

ಸತ್ವ ಗುಣದಿಂದುಕ್ತವಾದುದು ದೇವಲೋಕ, ಸತ್ವ, ರಜ, ತಮ, ಮೂರರ ಮಿಶ್ರದಿಂದುಕ್ತವಾದುದು ಮಾನವಲೋಕ. ರಜ ತಮಗಳೆ ಪ್ರಧಾನವಾಗಿಹುದೆ ದಾನವರಲೋಕ, ಶುದ್ಧಸತ್ವ ಗುಣದಿಂದುಕ್ತವಾದುದು ಬ್ರಹ್ಮ ಜಿಜ್ಞಾಸು ಲೋಕ, ಚಿದಹಮ್ಮವರ ಲೋಕ, ಪುರುಷಾರ್ಥದವರ ಲೋಕ, ಇವೆಲ್ಲವು ತೋರಿ ಇಲ್ಲವಾಗುವ ಮಾಯಿಕವು, ಇವೆಲ್ಲವುಗಳ ತೊರೆದು ನಿರಂತರವಾಗಿರುವ ಮಂಗಳಮಯ ಪದದಲ್ಲಿರುವುದೆ ನಿಶ್ಚಿಂತತೆಯು. ಇದು ಅಚಿಂತ್ಯ ಪದದವರ ಇರವು ಅರಿವು, ಇದು ಭಾವಕ್ಕಗಮ್ಯವಾದ ತತ್ವ ನೆಲೆಗೊಂಡಾಗ ನಿಶ್ಚಿಂತವಾಯಿತ್ತು.

ಲೋಕವೆಂಬುದು ಇಲ್ಲದುದು, ತಾನು ಇದ್ದವನು, ನಿರಂತರ ಇದ್ದವನು, ಇದ್ದವನಾರು? ತನ್ನನ್ನು ತಾನು ಎಲ್ಲಿಯವರೆಗೆ ತಿಳಿಯುವದಿಲ್ಲ. ತಿಳಿಯದ್ದರಿಂದ ಇಲ್ಲದ ಲೋಕದಲ್ಲಿ ನಿಶ್ಚಿಂತತೆ ಎಲ್ಲಿಯದು? ಆರು ತಾನಾರೆಂದು ತನ್ನನ್ನು ತನ್ನಿಂದ ತಿಳಿದನೋ ಅಂದೆ ಅವರು ಅಚಿಂತ್ಯರು ಅವರೆ ನಿಶ್ಚಿಂತರು.

ಏನು ಹತ್ತಿತೆಂದರಿಯೆನಯ್ಯ, ಏನು ಹೊದ್ದಿತೆಂದರಿಯೆ ನಯ್ಯ, ಗುಹೇಶ್ವರನೆಂಬ ಗ್ರಹ ಒಳಕೊಂಡಿತ್ತಾಗಿ ನಾನೇನೆಂದರಿಂಯೆನಯ್ಯ. ಚಿಂತನೆಗೊಳಪಟ್ಟುದು ಮನಸ್ಸಿಗೆ ಬುದ್ಧಿಗೆ ಸಂಬಂಧವಾಗಿದ್ದರೆ ಹೇಳಲು ಬರುತ್ತದೆ. ಭಾವಕ್ಕಗಮ್ಯವಾದುದು ನಿಸ್ಸೀಮವು ಆದಿ, ಮಧ್ಯ, ಅಂತ್ಯವಲ್ಲದ ತತ್ವ ಅದು ತನಗಿಂತನ್ಯವಾಗದ ತತ್ವ, ನುಡಿಗೆಡೆಗೊಡದ ಘನವಾಗಿರುವಲ್ಲಿ, ಪ್ರಭುದೇವ ಏನು ಹತ್ತಿತ್ತೆಂದರಿಯೆ ನಯ್ಯ ಏನು ಹೊದ್ದಿತ್ತೆಂದರಿಯೆ ನಯ್ಯ ಎಂದು ಹೇಳಿದುದು. ಗುಹೇಶ್ವರನೆಂಬ ಗ್ರಹ ತಾನಾಗಿಹ ಸ್ವಯಂಜ್ಯೋತಿ ಇದು ಗುಹೇಶ್ವರನೆಂಬ ಗ್ರಹ ಒಳಕೊಂಡಿತ್ತಾಗಿ ನಾನೇನೆಂದರಿಯೆನಯ್ಯ, ಸಕಲರ ಹೃದಯವೆಂಬ ಗುಹೆಯಲ್ಲಿ ಬೆಳಗುವ ಜ್ಯೋತಿ, ಅರುವಿನ ಅರುವು ಅರಿಯದರುವು ಏನೊಂದೆನಲಿಲ್ಲದ ಅರುವು ಇದು ಸಕಲರ ಸ್ವರೂಪ. ಇದನ್ನು ಅರಿದರಿದು ಗುಹೇಶ್ವರನೆಂಬ ಗ್ರಹ ತಾನೆ, ಪಿಂಡಾಂಡ ಬ್ರಹ್ಮಾಂಡವೆನ್ನದೆ ಒಳಕೊಂಡ ಸ್ವಯಂಜ್ಯೋತಿ ತಾನೆ. ಇದು ನಾನೆಂಬುವಂಗೆ ಒಳಕೊಂಡ ಜ್ಯೋತಿಯಲ್ಲ ನೀನೆಂಬುವಂಗೆ ಒಳಕೊಂಡ ಜ್ಯೋತಿಯಲ್ಲ. ಚಿದಹಮ್ಮಿಗೂ ಒಳಪಟ್ಟ ಜ್ಯೋತಿಯಲ್ಲಾ ನಾನೀನೆಂಬ ಸಂದಳಿದ ಜ್ಯೋತಿ ಗುಹೇಶ್ವರ ಜ್ಯೋತಿ. ಇದು ಅನುಪಮ ಜ್ಯೋತಿ ನುಡಿನಡೆಗೂ ಮೀರಿದುದು. ಶೃತಿಗೂ ಮೀರಿದುದು. ಇಲ್ಲಿ ಗುರೂಪದೇಶ ಹೇಗೆ ಸಾಧ್ಯ.

ಅರಿದರುಹಿಸಿ ಕೊಂಬುದಕ್ಕೆ ಮೀರಿದ ಜ್ಯೋತಿಗೆ ಏನನ್ನಬೇಕು. ಉಸುರಿದರದಕ್ಕದೆ ಕೊರತೆ, ಇದು ಕಾರಣ ಅಕ್ಕ ಅರಿದೆನೆಂದರೆ ಅರಿಯಬಾರದು.

ಘನಕ್ಕೆ ಘನ ತಾನೆ ನೋಡಾ ಚೆನ್ನಮಲ್ಲಿಕಾರ್ಜುನನ ನಿರ್ಣಯವಿಲ್ಲದೆ ಸೋತೆನು ಎಂದು ಹೇಳಿರುವಲ್ಲಿ, ಇಲ್ಲಿ ವಾಣಿ ಇಂದ್ರಿಯಂಗಳು ಮನ, ಬುದ್ಧಿ, ಅರಿವು ಎಂಬುದು ಗುಹೇಶ್ವರನೆಂಬ ಗ್ರಹ ಅರಿಯಹೋಗಿ, ಅರಿಯದಾಗಿ ಸೋತವು. ನುಡಿಯ ಹೋಗಿ ಅದು ಶಬ್ದಕ್ಕೆ ನಿಲುಕದ್ದರಿಂದ ವಾಣಿ ಸೋತಿತು. ಚಿಂತಿಸಹೋಗಿ, ಚಿಂತನವು ಸೋತಿತು. ಭಾವಿಸಹೋಗಿ ಭಾವ ದಿಗ್ಭ್ರಮೆಗೊಂಡಿತ್ತು. ನಿರ್ಣಯಿಸಹೋಗಿ, ಅರುವೆಂಬದು, ಅರಿಯದಾಯಿತ್ತು. ಇವುಗಳು ಸೋತುದೆ ಅನುಪಮ ನಿಲಯ, ತನ್ನ ನಿಲಯ, ಗುಹೇಶ್ವರನೆಂಬುದು ಒಳಕೊಂಡ ನಿಲಯವಾದ್ದರಿಂದ ನಾನೇನೆಂದರಿಯೆ ನಯ್ಯ, ಎಂದು ಪ್ರಭು ಹೇಳಿದುದು. ಇದು ಹೃದಯದೊಳು ಬೆಳಗಿದ ಬೆಳಗು ಏನ ಹತ್ತಿತ್ತೆಂದರಿಯೆನಯ್ಯ, ಏನ ಹೊದ್ದಿತ್ತೆನಂದರಿಯೆ ನಯ್ಯ ಎಂದು ಕಥನಕ್ಕೆ ನಿಲುಕದ ನಿಲುವು ಅದನೆಂತುಸುರುವುದು.

ನಿರ್ಭಾವದ ನಿಜದಲ್ಲಿ ನಿಂತ ಬೆರಗು ಏನ ಹೊದ್ದಿತ್ತೆಂದರಿಯೆ ನಯ್ಯ, ಎಂದು ತನ್ನದಾದ ನಿಶ್ಚಿಂತತೆಯ ಘನತ್ವ ಕೊಂಡಾಡಿದ ನಿಶ್ಚಿಂತತೆಯೆಂಬುದು ತಾನಾರೆಂದು ತನ್ನಿಂದ ತನ್ನ ಅರಿದ ಘನವು ತಾನು ಅರಿದರುಹಿಸಿ ಕೊಂಬುದಕ್ಕೂ ಮೀರಿದ ಘನವೆಂದು ತನ್ನಿಂದ ತಾನು ಅರಿದು ಏನೇನೂ ಅರಿಯದಂತಿದ್ದ ಪದ, ಇದು ಏನೊಂದಾಗದ ಪದ, ಅಂದು, ಇಂದು, ಎಂದೆಂದೂ ಇದ್ದಂತಿದ್ದ ಪದ, ಆವಾವುದಕ್ಕೂ ಇಂಬು ಕೊಡದ ಪದ, ತನ್ನ ಪದ. ತಾನೆ ಅಚಿಂತ್ಯ ತನ್ನ ಪದ ನಿಶ್ಚಿಂತಪದ, ಆವಾವ ಹಂಗಿಗೊಳಪಡದ ಪದ, ಸ್ವಾತಂತ್ರ ಪದ, ಸ್ವಯಮೇವ ನಿಲವು, ಇದು ಪ್ರಪಂಚ ಪರಮಾರ್ಥದ ಹಂಗಿಲ್ಲದೆ ಬೆಳಗುವ ಪದ ಇದು ಎರವಲ ಪದವಲ್ಲ, ಇದು ಕಾರಣ ಪ್ರಭು, ಪ್ರವೃತ್ತಿರೂಪ ಪ್ರಪಂಚ ನಿವೃತ್ತಿರೂಪಿ ಪರಮಾರ್ಥವೆಂಬ ಲೋಕದ ನಚ್ಚು ಮಚ್ಚು ಬಿಟ್ಟು, ನಿಶ್ಚಿಂತವಾಯಿತ್ತು ಎಂದ ಹೇಳಿದ ಆಕಾಶವಾಣಿ ಆವಾವುಗಳ ಹಂಗಿಲ್ಲದ ಪದವಾದುದರಿಂದ ಇದು ಸ್ವತಂತ್ರ ಈ ಸ್ವತಂತ್ರ ತನ್ನದಾಗಿ ತನ್ನೊಳ ಉದಯವಾದುದರಿಂದ ನಿಶ್ಚಿಂತತೆ ಸಹಜ ಸಾಧ್ಯ.

**ವಚನ 10**

**ಹೊರಗನೆ ಕೊಯ್ದು ಹೊರಗಿನೆ ಪೂಜಿಸಿದವರ ಕಂಡು,**
**ನಾಚಿದೆ ನಾಚಿದೆನಯ್ಯಾ.**
**ಒಳಗೆ, ಒಂದು ಅನು(ನಿ?)ಮಿಷಲಿಂಗವ ಕಂಡು,**
**ಎನ್ನ ಮನೋ ಪುಷ್ಪದಲ್ಲಿ ಪೂಜಿಸಿದಡೆ**
**ನಾಚಿಕೆಯ ಮಾದು ನಿಸ್ಸಂದೇಹಿಯಾದೆನು – ಗುಹೇಶ್ವರಾ.** ॥ 417 ॥

**ತಾತ್ಪರ್ಯ:** ಹೊರಗನೆ ಕೊಯ್ದು ಹೊರಗನೆ ಪೂಜಿಸಿದವರು ಕಂಡು ನಾಚಿದೆನಯ್ಯ: ಪ್ರಭುದೇವ ಲಿಂಗಾರ್ಚಕರ ಲಿಂಗಪೂಜೆಯ ಕಂಡು ನಾಚಿದೆನಯ್ಯ, ಎಂದು ಹೇಳಿದುದು. ನಿಜವರಿತ ಮಹಾಂತನ ದೃಷ್ಟಿಗೆ ಈ ಪೂಜಾಲಿಂಗದ ಪೂಜೆಗೆ ಹೊರಗಿನ ಪತ್ರಿ ಹೊರಗಿನ ಪುಷ್ಪ ಹೊರಗಿನ ಧೂಪ, ದೀಪ, ನೈವೇದ್ಯ, ಮಡಿನೀರು, ಭಸ್ಮ ಗಂಧ ಎಲ್ಲವೂ ಹೊರಗಿನವು ಮತ್ತು ಇವರು ಪೂಜಿಸಿಕೊಳ್ಳುವ ಲಿಂಗ

ಹೊರಗಿನದು. ಸೆಜ್ಜೆ ಹೊರಗಿನದು.

ಮನಸ್ಸು ಹೊರಗಿನದು ಎಲ್ಲವು ಲೋಕಾಚಾರ, ಡಾಂಭಿಕದಿಂದುಕ್ತವಾದವುಗಳು ಅರಿಯದದ ಆಚಾರ ಇದನ್ನು ಕಂಡು ನಾಚಿದೆನಯ್ಯ ಎಂದು ಹೇಳಿದರು.

ಅರುವ ಅರಿಯ ಹೇಳಿ ಸದ್ಗುರುನಾಥ ಕುರುಹ ಕೊಟ್ಟನಲ್ಲದೆ ಅರುವನೆ ಮರೆದು ಕುರುಹನೆ ಪೂಜಿಸುವ ನರ ಕುರಿಗಳ ನೋಡಾ ಕೂಡಲಚನ್ನಸಂಗಯ್ಯ ಎಂದು ಷಟ್ ಸ್ಥಲ ಚಕ್ರವರ್ತಿ ಚನ್ನ ಬಸವರಾಜದೇವರು ಗುರುಕೊಟ್ಟ ಕುರುಹ (ಇಷ್ಟಲಿಂಗ) ಅರುವ ಅರಿಯ ಹೇಳಿದ ಕುರುಹ, ಇದು ಅರುವು, ಅರುವು ಎಂಬುವವರ ಕುರುಹು ಅಲ್ಲ, ಲಿಂಗ, ಲಿಂಗ ಎಂಬುವವರ ಕುರುಹು ಅಲ್ಲ. ಸಚ್ಚಿದಾನಂದ ಪೂರ್ಣ, ಅಖಂಡ, ಅನಂತ ಎಂಬುವವರ ಕುರುಹು ಅಲ್ಲ. ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗ ತಂದುಕೊಟ್ಟ ಕುರುಹ, ಸದ್ಗುರು ಕರಸ್ಥಲಕ್ಕೆ ಕರುಣಿಸಿದ ಕುರುಹು ಇದು ಅರುವ ಅರಿಯ ಹೇಳಿದ ಕುರುಹು ಇದನರಿತಲ್ಲಿ ತನ್ನಯ ಇರುವಿನ ಅರುವು ಶಬ್ದಮುಗ್ಧ ಮೌನ ಮುದ್ರೆ ಧರಿಸಿದ ನಿಃಶಬ್ದ ಬ್ರಹ್ಮ ಅವರ್ಣೀಯ ಸಂಕೇತ. ಇದು ಶೃತಿಗಳಿಗೂ ಮಿಕ್ಕಿಮೀರಿನಿಂತ ನಿಲುವುಳ್ಳ ಸಂಜ್ಞೆ ಧ್ಯಾನಕ್ಕೂ ಮೀರಿದ ಸಂಜ್ಞೆ ಚಿಂತನಕ್ಕೂ ಮೀರಿದ ಸಂಜ್ಞೆ ಈ ಗುರು ಸಂಜ್ಞೆಯ ಅರಿಯ ಹೋದವರಿಗೆ ಉಪಾಧಿಕ ಮನ ನಷ್ಟ, ಉಪಾಧಿರಹಿತ ಮನ ನಷ್ಟವಾಗಿ ಲಿಂಗೋದ್ಭವ ಪ್ರಜ್ವಲಿಸುತ್ತಿತ್ತು ನೋಡಾ ಗುಹೇಶ್ವರ ಲಿಂಗ ತಾನಾಗಿ.

ಗುಹೇಶ್ವರ ಲಿಂಗ ತಾನಾದ ಸಂಕೇತ, ಪ್ರವೃತ್ತಿ, ನಿವೃತ್ತಿ ಇವೆರಡು ಸೋತ ಸಂಕೇತ. ಮರವಿನಿಂದುಕ್ತವಾದ ಮನ, ಅರುವಿನಿಂದುಕ್ತವಾದ ಮನ, ಇವೆರಡು ಸೋತ ಸಂಕೇತ. ಅಂದರೆ ಇವೆರಡು ಚಿಂತನಕ್ಕೊಳಪಟ್ಟವು ಇನ್ನೊಂದು ಅಸ್ತಿ, ಭಾತಿ, ಪ್ರಿಯವೆಂಬ ಚಿಂತನಕ್ಕೊಳಪಟ್ಟವು. ಇವೆರಡು ಅಚಿಂತ್ಯ ಘನವಾಗಲು ಅಸಾಧ್ಯ. ಭಾವಕ್ಕಗಮ್ಯವಾಗಲು ಅಸಾಧ್ಯವೆಂದು ಮನಕ್ಕೆ ವಿದಿತವಾಗಿ ನೆನೆಯಲು ಭಾವಿಸಲು ನಾಚಿ ಹೋದುದೆ ಇವೆರಡು ಸೋತ ಸಂಕೇತ. ಆಗ ಗುರು ಕರುಣಿಸಿದ ಅನುಪಮ ಲಿಂಗದ ಘನವು ಗೊತ್ತಾಗುವದು, ಆಗ ಗುರುಕೊಟ್ಟ ಕುರುಹ ಎಂದು ಭಾವಿಸಲಾರ, ಏಕೆಂದರೆ ಅದರ ಘನವ ಅರಿತು, ಈ ಅನುಪಮಲಿಂಗ ಮಾತು ಮನಂಗಳಿಂದತ್ತತ್ತ, ನೆನಹು ನಿರ್ಣಯದಿಂದತ್ತತ್ತ ಭಾವ, ಅಭಾವಂಗಳಿಂದತ್ತತ್ತ ವೇದ ಶಾಸ್ತ್ರಗಳಿಂದತ್ತತ್ತ ಎಂಬುದು ವೇದ್ಯವಾಗಿ ಆಗ, ಲಿಂಗವರಿಯ ಹೋದ ಮಹಾಂತ, ತಾನು ಮಾತು ಮನಂಗಳ ಮೀರುತ್ತಾನೆ. ನೆನಹು ನಿರ್ಣಯ ಮೀರುತ್ತಾನೆ. ಭಾವವೆಂಬುದು ಭ್ರಾಂತು ಎಂದು ತಿಳಿಯುತ್ತಾನೆ. ಆಗ ಒಳಗೊಂದು ಅನಿಮಿಷ ಲಿಂಗ ಕಂಡು ಎನ್ನ ಮನೋ ಪುಷ್ಪದಲ್ಲಿ ಪೂಜೆಯ ಮಾಡಿದಡೆ ನಾಚಿಕೆಯ ಮಾದು. ನಿಃಸಂದೇಹಿಯಾದೆನು ಗುಹೇಶ್ವರಾ ಎಂದುದು ಚೆನ್ನಾಗಿ ಒಪ್ಪುತ್ತಾನೆ.

ಒಳಗೊಂದು ಅನಿಮಿಷ ಲಿಂಗ ಕಂಡವರಾರು? ಮನೋಪುಷ್ಪವಾವುದು! ಪೂಜೆ ಮಾಡಿದುದು ಹೇಗೆ? ಒಳಗೊಂದು ಅನಿಮಿಷ ಲಿಂಗ ಕಂಡವರೆಂದರೆ, ಅರುವ ಅರಿಯ ಹೋದವರು ಅರಿಯದರುವು ತನ್ನಿರವು ಆದುದೆ, ಅನಿಮಿಷಲಿಂಗ

ಕಂಡವರು, ಮನೋಪುಷ್ಪ ವೆಂಬುದು ಸುಮನವು, ಈ ಮನೋ ಪುಷ್ಪರೂಪಿ ಸುಮನದಿಂದ ಪೂಜೆ ಮಾಡಿದುದು.

ಇದೆಂಥ ಘನಕ್ಕೆ ಘನವಾದ ಕಾರ್ಯ, ಸಂಕಲ್ಪವಿಕಲ್ಪಕ್ಕೊಳಪಟ್ಟು ಮನವೆನಿಸಿಕೊಂಡುದೆ, ಈಗ ಒಳಗೊಂದು ಅನಿಮಿಷಲಿಂಗ ಕಾಣಲು ಇದ್ದ ಘನಲಿಂಗವರಿಯ ಹೋಗಿ, ಸದ್ಗುರು ಕೃಪೆಯಿಂದ ಸುಮನವಾಯಿತ್ತು. ಈ ಸುಮನವೆಂಬುದು ಸಮಸ್ವರೂಪ ಪುಷ್ಪ, ಇದು ನಾಮರೂಪವಾಗದ ಮನ, ದೃಕ್ ರೂಪವಾಗದ ಮನ, ಮರವರುಏಂಗೆ ಮೀರಿನಿಂತ ಮನ, ನಿರಂತರ ವಾಗಿರುವ ಮಂಗಳಮಯ ಪರಮಸತ್ಯದಲ್ಲಿ ಸಮರಸವಾದ ಮನ, ಇದು ಆವಾವುದನ್ನು ಕಾಣದೆ, ಗುರುಕೊಟ್ಟ ಅನುಪಮಲಿಂಗದಲ್ಲಿ ಲೀಯವಾಗಿ, ತಾನೆ ತಾನಾದುದೆ ಒಳಗೊಂದು ಅನಿಮಿಷ ಲಿಂಗವ ಕಂಡು ಮನೋಪುಷ್ಪದಲ್ಲಿ ಪೂಜೆಯ ಮಾಡಿ ನಾಚಿಕೆಯ ಮಾದು ನಿಸ್ಸಂದೇಹಿ ಯಾದೆನು ಎಂದು ಹೇಳಿಹನು.

**ವಚನ 11**

**ಒಲುಮೆಯ ಕೂಟಕ್ಕೆ ಹಾಸಿನ ಹಂಗೇಕೆ?**
**ಬೇಟದ ಮರುಳಿಗೆ ಲಜ್ಜೆ ಮುನ್ನುಂಟೆ?**
**ನಿಮ್ಮನರಿದ ಶರಣಂಗೆ ಪೂಜೆಯ ಹಂಬಲ, ದಂದುಗವೇಕೆ?**
**ಮಿಸುನಿಯ ಚಿನ್ನಕ್ಕೆ ಒರೆಗಲ್ಲ ಹಂಗೇಕೆ?**
**ಗುಹೇಶ್ವರಲಿಂಗಕ್ಕೆ ಕುರುಹ ಮುನ್ನುಂಟೆ?** ॥ 425 ॥

**ತಾತ್ಪರ್ಯ:** ಒಲುಮೆಯ ಕೂಟಕ್ಕೆ ಹಾಸಿನ ಹಂಗೇಕೆ: ಒಲಿತ ಗಂಡಿಗೆ ಒಲಿತ ಹೆಣ್ಣಿಂಗೆ ಇವರ ಕೂಟಕ್ಕೆ ಹಾಸಿಗೆಯ ಹಂಗೇಕೆ? ಕೂಟದ ಕಾತುರವಾಗಿರವಲ್ಲಿ ಹಾಸಿಗೆಯು ಪರವೇನು? ಒಂದಕ್ಕೊಂದು ಒಲಿತುದರಿಂದ ಕೂಟವೆ ಮುಖ್ಯವಾದುದರಿಂದ ಈ ಗಂಡು ಹೆಣ್ಣಿಗೆ ಹಾಸಿಗೆಯ ಹಂಗಿರದು.

ಒಲಿತ ಗಂಡಾವುದು? ಒಲಿತ ಹೆಣ್ಣಾವುದು? ಎರಡೊಂದಾದುದು, ಒಲಿತ ಗಂಡು, ಒಲಿತ ಹೆಣ್ಣು ಕೂಟ ಶಬ್ದಕ್ಕೆ ತೆರಹಿಲ್ಲದುದೆ ಕೂಟ, ಅಂಗ ಅಂಗ ಎನ್ನದಿಹುದೆ ಲಿಂಗ ಲಿಂಗ ಎನ್ನದಿಹುದೆ ಎರಡೊಂದಾದ ಸಂಕೇತ, ಶಬ್ದಕ್ಕೆ ತೆರಹಿಲ್ಲದುದೆ ಸಾಮರಸ್ಯ. ಭಾವಕ್ಕಿಂಬಿಲ್ಲವಾದುದೆ ಒಲುವೆಯ ಕೂಟ. ಅಂಗನೆನ್ನಲು ಇಂಬಿಲ್ಲ ಲಿಂಗನೆನ್ನಲು ಇಂಬಿಲ್ಲ ಈ ಎರಡು ಭಾವಕ್ಕಿಂಬಿಲ್ಲವೆಂದಲ್ಲಿ, ಆವಾವಭಾವಕ್ಕಿಂಬಿಲ್ಲವಾದುದೆ ಒಲುಮೆಯ ಕೂಟ, ಶಬ್ದಮೀಸಲುವಾಗಿಹುದೆ ಹಾಸಿಗೆಯ ಹಂಗಿಲ್ಲ, ಶರಣ ಸತಿ, ಲಿಂಗಪತಿ, ಒಲುಮೆಯ ಕೂಟ, ಸತಿ,ಸತಿ,ಎನ್ನದಿಹುದೆ ಪತಿ ಪತಿ ಎನ್ನದಿಹುದೆ ಎರಡೊಂದಾದ ಸಂಕೇತ.

ಲಿಂಗವೆನ್ನೆ, ಲಿಂಗೈಕ್ಯವೆನ್ನೆ, ಸಂಗವೆನ್ನಿ, ಸಮರಸವೆನ್ನೆ ಆಯಿತೆನ್ನಿ, ಆಗದೆನ್ನೆ ಚೆನ್ನಮಲ್ಲಿಕಾರ್ಜುನನಲ್ಲಿ ಏನೂ ಎನ್ನದೆ ಶಬ್ದಮುಗ್ಧವಾಗಿದ್ದೆ. ಇದು ಒಲುವೆ ಕೂಟ, ಎರಡೊಂದಾದ ಕೂಟ, ಶಬ್ದದ ಹಂಗು ಹರಿದು ಶಬ್ದಮುಗ್ಧವಾದದ್ದೆ ಹಾಸಿಗೆಯ ಹಂಗಿಲ್ಲದ ಸಂಕೇತ.

ಬೇಟದ ಮರುಳಿಂಗೆ ಲಜ್ಜೆ ಮುನ್ನುಂಟೆ? ಪ್ರೇಮಕ್ಕೆ ಮರುಳಾದವಂಗೆ ಲಜ್ಜೆ ಏತರದು, ಕೂಟಕ್ಕೆ ಮರುಳಾದವರುಂಟು, ಕೂಟಸ್ಥನಿಗೆ ಮರುಳಾದವರುಂಟೆ, ವಿಕಾರಕ್ಕೆ ಮರುಳಾದವರುಂಟು, ನಿರ್ವಿಕಾರಕ್ಕೆ ಮರುಳಾದವರುಂಟೆ? ಕಲ್ಪಿತಕ್ಕೆ ಮರುಳಾದವರುಂಟು. ಕಲ್ಪಿತವಲ್ಲದುದಕ್ಕೆ ಮರುಳಾದವರುಂಟೆ? ಗಂಡು ಹೆಂಣೆಂಬುದು ಕಲ್ಪಿತ, ಪ್ರೇಮವೆಂಬುದು ಅಕಲ್ಪಿತ. ಗಂಡು ಹೆಣ್ಣಾದುದು ಸತಿ ಪತಿ ಆದುದು ಗಣಿತ, ಗುಣಿತ, ಇದು ಗುಣದಿಂದುಕ್ತವಾದುದರಿಂದ ನಾಚಿಕೆ ಇದೆ. ಗುಣಾತೀತವದು ಅಗಣಿತ, ಪ್ರೇಮ, ಗಣನೆಗೆ ಮೀರಿದುದು. ಪ್ರೇಮಕ್ಕೆ ಮರುಳಾದವರು ವಿರಳ, ಸ್ವಪ್ರೇಮಕ್ಕೆ ಮರುಳಾದವಂಗೆ ಲಜ್ಜೆ ಏತರದು? ಆವುದು ನಿಸ್ಸೀಮವಾಗಿದೆ. ಅದು ಸ್ವಪ್ರೇಮ, ತನ್ನ ಪ್ರೇಮ ದಿಟಪ್ರೇಮ, ನಿರಂತರವಾಗಿದ್ದ ಮಂಗಳಮಯವದು ಪ್ರೇಮ. ಇದು ಸ್ವಸುಖದಿಂದುಕ್ತವಾದುದರಿಂದ ಅಪಾರ. ಈ ಅಪಾರ ಪ್ರೇಮಕ್ಕೆ ಮರುಳಾದವಂಗೆ ಲಜ್ಜೆ ಏತರದು! ನಾಚಿಕೆ ಏತರದು! ಪರ ಪ್ರೇಮಕ್ಕೆ ಮರುಳಾದಲ್ಲಿ ನಾಚಿಕೆ ಉಂಟು, ಸ್ವಪ್ರೇಮಕ್ಕೆ ಮರುಳಾದಲ್ಲಿ ನಾಚಿಕೆ ಏತರದು. ಇದು ತನಗೆ ತಾನೆ ಮಾಡುವ ಪ್ರೇಮ ಸ್ವಪ್ರೇಮ, ತನ್ನ ಪ್ರೇಮ, ಸ್ವರೂಪಪ್ರೇಮ. ಈ ಪ್ರೇಮಕ್ಕೆ ಮರುಳಾದವಂಗೆ ಲಜ್ಜೆ ಮುನ್ನಿಲ್ಲವಾದ್ದರಿಂದ ಬೇಟದ ಮರುಳಿಂಗೆ ಲಜ್ಜೆ ಮುನ್ನುಂಟೆ ಎಂದು ಹೇಳಿಹರು.

ನಿಮ್ಮ ನರಿದ ಶರಣಂಗೆ ಪೂಜೆಯ ಹಂಬಲ ದಂದುಗವೇಕೆ? ನಿಮ್ಮ ನರಿದ ಶರಣನನುಪಮ ಲಿಂಗಸ್ಥೂಲವೆಂಬರು ಕೆಲಬರು ಲಿಂಗಸ್ಥೂಲವಲ್ಲ, ಲಿಂಗಸೂಕ್ಷ್ಮವೆಂಬರು ಕೆಲಬರು, ಲಿಂಗಸೂಕ್ಷ್ಮವಲ್ಲ, ಸ್ಥೂಲಸೂಕ್ಷ್ಮದ ಮೇಲಣ ಜ್ಞಾನರೂಪು ಪರಾನಂದ ಪರಬ್ರಹ್ಮವೆ ಲಿಂಗವೆಂದರಿದ ಅರುವು ಅಖಂಡರೂಪು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಲವು ತಾನೆ ಬೇರಿಲ್ಲ.

ಶರಣ ನಿಮ್ಮನರಿದು ನಿಮ್ಮನ್ನು ಜ್ಞಾನರೂಪು ಪರಾನಂದ ಪರಬ್ರಹ್ಮವೆ ನೀವೆಂದರಿದ ಅರಿವು ಅಖಂಡರೂಪು ಆಗಿರುವಲ್ಲಿ ನಿಮ್ಮ ನಿಲವು ತಾನೆ ಬೇರಿಲ್ಲವಾದುದರಿಂದ ನಿಜಗುರು ತಾನೆ ಸ್ವತಂತ್ರ ತಾನೆ ಸ್ವತಃ ಸಿದ್ಧ ತಾನಾಗಿಹ ಲಿಂಗಘನವು ಎಂಬುದು ದೃಢಾಂಗವಾಗಿರುವಲ್ಲಿ ಪೂಜೆಯ ಹಂಬಲವೂ ಇಲ್ಲ. ತೊಡದೂ ಇಲ್ಲ, ನಿಶ್ಚಿಂತನೂ ನಿರಾಲಂಬನು. ಆರು ನಿಮ್ಮನ್ನು ಯತಾರ್ಥ ತಿಳಿದಿರುವದಿಲ್ಲ ಅವರಿಗೆ ಪೂಜೆಯ ಹಂಬಲವೂ ಇದೆ. ಪೂಜೆ ಮಾಡುವ ಕಾರ್ಯ ತ್ರಿಕಾಲ ನಡೆದಿದೆ. ಇವರಿಗೆ ಲಿಂಗಘನವು ಜ್ಞಾನರೂಪು ಪರಾನಂದ ಅಖಂಡವೆಂಬುದು ತಿಳಿಯದ್ದರಿಂದ ಲಿಂಗದೇವನು ರೂಪಕ್ಕೊಳಪಡಿಸಿ ಕಂಡಲ್ಲಿ ಪೂಜೆಯ ಹಂಬಲವುಳ್ಳವರಾಗಿಹರೆಂದು ಹೇಳಿಹರು.

ಮಿಸುನಿಯ ಚಿನ್ನಕ್ಕೆ ಒರೆಗಲ್ಲಹಂಗೇಕೆ? ಮಿಸುನಿಯಲ್ಲಿ ತಯ್ಯಾರಾದ ಬಂಗಾರಕ್ಕೆ ಒರೆಗಲ್ಲಿಗೆ ಹಚ್ಚಿನೋಡುವ ಪ್ರಸಂಗವೇತರದು, ಚಿನ್ನದ ಗಣಿಯಲ್ಲಿ ಸಿದ್ಧವಾದ ಬಂಗಾರ, ಅದಕ್ಕೇಕೆ ಒರೆಗಲ್ಲ ಹಂಗು, ನಕಲಿ ಬಂಗಾರಕ್ಕೆ ಒರೆಗಲ್ಲಿಗೆ ಹಚ್ಚಿನೋಡುವ ಅವಸರ ಟಂಕಕಲಿತ ಬಂಗಾರಕ್ಕೆ ಒರೆಗಲ್ಲಿನ ಅವಶ್ಯಕತೆ ಹೇಗೋ ಹಾಗೆ, ತನ್ನಿಂದ ತನ್ನ ನೋಡಿದ ಅರುವಿಂಗರುವಾಗಿಹ ಘನದರುವಿಂಗೆ, ಶೃತಿಗಳ ನೋಡುವ ಹಂಗೇಕೆ?

ಮಿಸುನಿಯಲ್ಲಿ ತಯಾರಾದ ಚಿನ್ನಕ್ಕೆ ಒರೆಗಲ್ಲ ಹಂಗಿರದು ಹೇಗೋ ಹಾಗೆ ನುಡಿಗೆಡೆಗೊಡದ ಘನದಿರುವಿನ ಅರುವೆ ತನ್ನದಾಗಿಹ ಘನವಂತ ಮಿಸುನಿಯಲ್ಲಿ ತಯ್ಯಾರಾದ ಬಂಗಾರವಿದ್ದ ಹಾಗೆ ಆ ಮಹಾಂತಂಗೆ ನುಡಿಯ ಹಂಗಿರದು, ಶೃತಿಗ ಗೋಚರವಾಗಿಹ ಮಹದರುವಿನ ಇರುವೆ ತನ್ನದಾಗಿಹ ಘನವಂತನಿಗೆ ಶೃತಿಯ ಹಂಗಿರದು, ಅಚಿಂತ್ಯವೆ ತನ್ನಿರುವಿನ ಅರುವಾಗಿಹ ಘನ, ಆ ಘನವಂತನಿಗೆ ಸ್ವರೂಪ ಚಿಂತನೆ ಮಾಡುವ ಹಂಗೇತರದು.

ನಿಃಶಬ್ದವೇದಿಗೆ ಶಬ್ದವೇದದ ಹಂಗೇತರದು? ಇದು ಅರುಹೃದಯವಾದವರ ಹೃದಯ ಅರಿಯದರುವೆ ತನ್ನಿರವು ಆದ ಹೃದಯ. ಇಲ್ಲಿ ಕಲ್ಪಿತ ಜ್ಞಾನದ ಹಂಗೇತರದು, ಪುರುಷಾರ್ಥ ಜ್ಞಾನಿಯು, ಪರಮ ಪುರುಷಾರ್ಥ ಜ್ಞಾನದ ಹಿರಿಮೆಯ ಅದನೆಂತು ತಿಳಿವನು? ದೇಹಿಯಾದವನು ದೇಹಿಗೆ ದೇಹಿಯಾಗಿರ್ಪ ಘನವದೇನು ಬಲ್ಲನು. ವಿಶೇಷಜ್ಞಾನಿಯು ನಿರ್ವಿಶೇಷ ಜ್ಞಾನ ಘನವ ಅದನೆಂತು ಬಲ್ಲನು, ಅರಿದರುಹಿಸಿಕೊಂಬುದರ ಜ್ಞಾನವುಳ್ಳವನು. ಅರಿದರುಹಿಸಿ ಕೊಂಬುದಕ್ಕೆ ಮೀರಿದ ಘನದಿರುವ ಅರುವಾಗಿಹ ಘನವದನೆಂತು ಬಲ್ಲನು. ಅರಸುವವನು ಅರಸದವನ ಘನವನದೆಂತು ಬಲ್ಲನು? ಇದು ಕಾರಣ ಕ್ಷರಾಕ್ಷರವೆಂಬುದಕ್ಕೂ ಮೀರಿದ ಘನವದು ಅನುಪಮ ತತ್ವ, ಅದು ಅರಿಯದರುವಾಗಿಹ ಘನವು ಚಿಂತನಕ್ಕೆಡೆಗೊಡದ ಇರುವಿನ ಅರುವು. ಅಚಿಂತ್ಯವು ಆದಲ್ಲಿ, ಕಲ್ಪಿತರನ್ನು ತನ್ನ ಅಚಿಂತ್ಯದಿರುವಿನ ಬಗ್ಗೆ ಕೇಳುವ ಅವಶ್ಯಕತೆ ಇರದು.

ಗುಹೇಶ್ವರ ಲಿಂಗಕ್ಕೆ ಕುರುಹು ಮುನ್ನಿಲ್ಲ, ತನ್ನ ತಾನರಿದವಂಗೆ ಕುರುಹು ಮುನ್ನಿಲ್ಲ, ಏಕೆಂದರೆ ತಾನಾರೆಂದರಿದ ಮಹಾಂತನೇ ಗುಹೇಶ್ವರಲಿಂಗ, ಇದು ಕಾರಣ ಘನಲಿಂಗವಾಗಿಹ ತನಗೆ ಕುರುಹು ಮುನ್ನಿಲ್ಲ, ಆನು ನೀನೆಂಬುದಿಲ್ಲ, ತಾನರಿದ ಬಳಿಕ ಏನೂ ಇಲ್ಲ, ಇಲ್ಲಾದುದು ಇಲ್ಲಾದುದು ಎಲ್ಲಿಪ್ಪುದು. ಇದು ಕಾರಣ ಗುಹೇಶ್ವರ ಲಿಂಗಕ್ಕೆ ಕುರುಹು ಮುನ್ನಿಲ್ಲವೆಂದು ಹೇಳಿದುದು.

**ವಚನ 12**

**ತುಂಬಿ ಬಂದಡೆ ಪರಿಮಳ ಓಡಿತ್ತ ಕಂಡೆ!**
**ಏನು ಸೋಜಿಗ ಹೇಳಾ?**
**ಮನ ಬಂದಡೆ ಬುದ್ಧಿ ಓಡಿತ್ತ ಕಂಡೆ,**
**ದೇವ ಬಂದಡೆ ದೇಗುಲ ಓಡಿತ್ತ ಕಂಡೆ –ಗುಹೇಶ್ವರಾ. ॥ 429 ॥**

**ತಾತ್ಪರ್ಯ:** ತುಂಬಿ ಬಂದಡೆ ಪರಿಮಳ ಓಡಿತ್ತು ಕಂಡೆ: ಏನು ಸೋಜಿಗ ಹೇಳಾ, ತುಂಬಿ ಬಂದಡೆ ಪರಿಮಳ ಓಡುವ ಇದೆಂಥ ಪರಿಮಳ? ಸಸಿ ಬಂದಡೆ ಸಮುದ್ರನಾಥ ಓಡಿತ್ತಕಂಡೆ ಸಸಿಗೂ ಸಮುದ್ರಕ್ಕಿರುವ ನಿಕಟ ಪ್ರೀತಿ, ಆಲಿಂಗನದ ತವಕ, ಅದಾರು ವರ್ಣಿಸುವದು.

ಮುಕ್ತಾಯಕ್ಕನೆಂಬ ತುಂಬಿ ಬಂದಡೆ ಪ್ರಭುವೆಂಬ ಪರಿಮಳ ಓಡಿ ಬಂದುದು ಅದಾರು ವರ್ಣಿಸುವದು. ಬ್ರಹ್ಮ ಜಿಜ್ಞಾಸುವೆಂಬ ತುಂಬಿ ಬಂದಡೆ, ಪರಬ್ರಹ್ಮವೆಂಬ

ಪರಿಮಳ ಓಡಿ ಬಂದುದು, ಎನಗಿದು ಸೋಜಿಗ ಹೇಳಾ, ಶಿಷ್ಯನೆಂಬ ತುಂಬಿ ಬಂದಡೆ ಸದ್ಗುರುವೆಂಬ ಪರಿಮಳ ಓಡಿತ್ತ ಕಂಡೆ. ಮರವರುವಿನಿಂದುಕ್ತವಾಗಿಹ ತುಂಬಿ ಬಂದಡೆ ಕೇವಲ ಅದು ಸ್ವರೂಪವಾಗಿಹ ಪರಿಮಳ ಓಡಿತ್ತ ಕಂಡೆ ಏನು ಸೋಜಿಗ ಹೇಳಾ, ಪರಿಮಳವಿದ್ದಲ್ಲಿ ತುಂಬಿ ಬರುವುದು ಸಹಜ. ತುಂಬಿ ಬಂದಲ್ಲಿ ಪರಿಮಳ ಓಡಿದುದು, ಆಶ್ಚರ್ಯವಲ್ಲವೆ?

ಚಿಂತನದಿಂದುಕ್ತವಾದ ಶಿಷ್ಯನಿದ್ದಡೆಗೆ ಚಿದಾಕಾಶ ಓಡಿ ಬಂದಿತ್ತೆ? ಇದೆಂಥ ಆಶ್ಚರ್ಯ. ಮುಕ್ತಿಯ ಬಯಕೆಯಿದ್ದೆಡೆಗೆ ಅವಿಮುಕ್ತ ಕ್ಷೇತ್ರ ಓಡಿ ಬಂದಿತ್ತೆ, ಏನು ಸೋಜಿಗ, ಅರಿಯುವ ತವಕವಿದ್ದೆಡೆಗೆ, ಅರಿಯಬಾರದ ಘನ ಓಡಿಬಂದಿತ್ತೆ, ನುಡಿಗಡಣವಿದ್ದಲ್ಲಿಗೆ ನುಡಿಗೆಡೆಗೊಡದ ಘನ ಓಡಿಬಂದಿತ್ತೆ? ಭಾವ ಭರಿತ ವಿದ್ದೆಡೆಗೆ ಭಾವಕ್ಕಗಮ್ಯವು ಓಡಿಬಂದಿತ್ತೆ.

ಮನ ಬಂದಡೆ ಬುದ್ಧಿ ಓಡಿತ್ತ ಕಂಡೆ: ಮನ, ಇದಾವ ಮನ? ಆತ್ಮಾಕಾರ ಮನ, ಬ್ರಹ್ಮಾಕಾರ ಮನ ಅಸಂಪ್ರಜ್ಞಾತ ಮನ ಬಂದಡೆ ಸಂಪ್ರಜ್ಞಾತ ಬುದ್ಧಿ ಓಡಿತ್ತ ಕಂಡೆ ನೆನಯುವ ಮನ ಬಂದಡೆ ನೆನೆಯದ ಬುದ್ಧಿ ನಿರ್ಣಯಿಸಲಿಕ್ಕೆ ನಿಲುಕದ ಸುಬುದ್ಧಿ ಓಡಿ ಬಂದುದು ಕಂಡೆ. ಮುಕ್ತಾಯಕ್ಕನ ಮನ ಪರಿಮಳ ಸುಖದ ತವಕದ ಮನ, ಈ ಮನ ಶಬ್ದಾಡಂಬರ ಸೇರದ ಮನ, ದ್ವೈತ ದೃಷ್ಟಿ, ದ್ವೈತ ಜ್ಞಾನ ಸೇರದ ಮನ, ಹಮ್ಮು ಬಿಮ್ಮು ಸೇರದ ಮನ ಎರಡಳಿದ ಮನ, ಪರಿಮಳಸುಖದ ತವಕದ ಮನ. ಬುದ್ಧಿ? ಇದಾವ ಬುದ್ದಿ ಎರಡ ಕಾಣದ ಬುದ್ಧಿ, ನಾ ನೀನೆಂಬುದು ಕಾಣದ ಬುದ್ಧಿ, ಗುಹೇಶ್ವರ ತಾನಾದ ಬುದ್ಧಿ. ಇದು ಸ್ವಸುಖದ ಬುದ್ಧಿ ಇದುವೆ ಅರುವಿನ ಪರಿಮಳ ನುಡಿದು ನಿಃಶಬ್ದವಾಗಿಹ ಪರಿಮಳ ನಡೆದು ನಿರ್ಗಮನಿಯಾಗಿಹ ಪರಿಮಳ, ಅರುವರಿಯ ಹೋಗಿ ಅರಿಯದರುವಾಗಿಹ ಪರಿಮಳ. ನಾನೀನೆಂಬ ಸಂದಳಿದ ಪರಿಮಳ. ನಡೆಕೆಟ್ಟ ನುಡಿಕೆಟ್ಟ ಪರಿಮಳ ಮರವರುವು ಕಾಣದ ಪರಿಮಳ. ಇದು ಅರಿಯಬಾರದ ಘನವು ಇದುವೆ ಸ್ವಸುಖದಲ್ಲಿ ರಮಿಸಿದುದು.

ಮನ ಬಂದಡೆ ಬುದ್ಧಿ ಓಡಿತ್ತ ಕಂಡೆ: ಅರುವರಿಯುವ ಮನ ಬಂದಡೆ ಅರಿಯಲಿಲ್ಲದರುವು ಓಡಿ ಬಂದುದು ಕಂಡೆ, ಪತಿವ್ರತೆಯಿದ್ದಲ್ಲಿ ಪತಿ ಓಡಿ ಬಂದುದು ಲಿಂಗಾಂಗಸಮರಸ ಜ್ಞಾನರೂಪಿ ಸತಿ ಇದ್ದೆಡೆಗೆ ಗುಹೇಶ್ವರನೆಂಬ ಪ್ರಭೂರೂಪಿ ಬುದ್ಧಿ ಓಡಿ ಬಂದುದು ಕಂಡೆ. ಸತಿ ಎಂಬುದು ಅಸಿಪದ, ಲಿಂಗ ಅಂಗ ಒಂದೆನ್ನುವ ಲಕ್ಷಣಾತ್ಮಕ ಜ್ಞಾನ, ಅಖಂಡಭಾವ, ಪೂರ್ಣಭಾವ, ಭರಿತಭಾವವಿದ್ದಲ್ಲಿ ಭಾವಕ್ಕಗಮ್ಯವಾದ ಅರಿಯದರುವಾಗಿಹ ಬುದ್ಧಿ ಸುಬುದ್ಧಿ ಓಡಿತ್ತ ಕಂಡೆ. ಇದು ನಿರಾಲಂಬವು ನಿಸ್ಸಂಗವು ಆವಾವುದಕ್ಕೂ ತಟ್ಟದ ಮುಟ್ಟದ ಬುದ್ಧಿ ಅನಿಮಿಷ ಬುದ್ಧಿ ಇದುವೆ ಅಲ್ಲಮನ ಒಳಗೊಂಡ ಘನವು ಗುಹೇಶ್ವರ ನೆಲೆ ನಿವಾಸವಾಗಿಹ ಘನವು ಅರಿದರಿದುದಾದಡೆ ತನ್ನ ನಿಜ ನಿವಾಸವು ತಾನೆ.

ದೇವ ಬಂದಡೆ ದೇಗುಲ ಓಡಿತ್ತ ಕಂಡೆ: ವಾಙ್ಮನೋತೀತ ದೇವ ಬಂದಡೆ, ವಾಙ್ಮನಸ್ಸಿನಿಂದ ಕರೆಯಿಸಿಕೊಳ್ಳುವ ದೇಗುಲ ಓಡಿತ್ತ ಕಂಡೆ. ಪ್ರಭುವೆಂಬ ದೇವ

ಬಂದಡೆ ಬಸವಣ್ಣನೆಂಬ ದೇಗುಲ ಓಡಿತ್ತ ಕಂಡೆ, ಲಿಂಗ ಒಂದಾಗಿರ್ದ ಜಂಗಮ ರೂಪಿ ದೇವ ಬಂದಡೆ, ಸಕಲವು ನೀನೆಂಬ ದಾಸೋಹಂ ದೇಗುಲ ಓಡಿತ್ತ ಕಂಡೆ, ಅರಿದರುಹಿಸಿ ಕೊಳ್ಳುವುದಕ್ಕೆ ಮೀರಿದ ಮಹಾಘನವೆಂಬ ದೇವ ಬಂದಡೆ ಅರಿದರುಹಿಸಿ ಕೊಳ್ಳುವ ಭಾವರೂಪ ದೇಗುಲ ಓಡಿತ್ತ ಕಂಡೆ, ಸುಜ್ಞಾನ ರೂಪಿ ದೇಗುಲ ಓಡಿಬಂದುದ್ದಕ್ಕೆ ನಿಜ ಚೈತನ್ಯರೂಪಿ ದೇವ ಬಂದುದೆ ಸಾಕ್ಷಿ, ಜ್ಞಾನಸ್ವರೂಪ ಜಂಗಮ ಬಂದಡೆ ಆಚಾರ ರೂಪ ಭಕ್ತನ ದೇಗುಲ ಓಡಿತ್ತ ಕಂಡೆ, ಭವಿ ಎಂಬ ದೇವ ಬಂದಡೆ ಭಕ್ತನೆಂಬ ದೇಗುಲ ಓಡಿತ್ತ ಕಂಡೆ, ಅನಾಚಾರವೆಂಬ ದೇವ ಬಂದಡೆ ಆಚಾರವೆಂಬ ದೇಗುಲ ಓಡಿತ್ತ ಕಂಡೆ. ಅರಿಯದರುವುಳ್ಳ ದೇವ ಬಂದಡೆ ಅರುವು ಅರುವೆಂದು ಅರಸುವ ದೇಗುಲ ಓಡಿತ್ತೆ ಕಂಡೆ. ಗುಹೇಶ್ವರ ಲಿಂಗ ಬಂದಡೆ, ಲಿಂಗ ಲಿಂಗ ಎನ್ನುವ ದೇಗುಲ ಓಡಿತ್ತ ಕಂಡೆ. ನಿರ್ನಾಮ ಜಂಗಮ, ನಿರ್ಲಿಖಿತ ಜಂಗಮ ದೇವ ಬಂದಡೆ, ಚರ ಜಂಗಮ ರೂಪಿ ದೇಗುಲ ಓಡಿತ್ತ ಕಂಡೆ. ತೆರಹಿಲ್ಲದ ಪ್ರಸಾದ ಬಂದಡೆ ಪ್ರಸಾದ ಪ್ರಸಾದ ಎನ್ನವ ದೇಗುಲ ಓಡಿತ್ತೆ ಕಂಡೆ. ಇದು ಅರುವಿಂಗರುವಾಗಿಹ ಆತುರ, ಮಹದರುವಿನ ಅನುಕಂಪ, ಅರುವು ಅರುವಾಗಿಹ ಸಮರಸ ಇದು ಹೃದಯಕ್ಕೆ ವೇದ್ಯವಲ್ಲದೆ ಕರಣಂಗಳಿಗೆ ವೇದ್ಯವಲ್ಲವು.

**ವಚನ 13**

**ಆದಿಯಾಧಾರವುಳ್ಳನ್ನಕ್ಕರ ಉಪಚಾರ,**
**ಎರಡೂ ಒಂದಾದಡೆ ಶಿವಾಚಾರ.**
**ಆ ಶಿವಾಚಾರ ಸಯವಾದಡೆ ಬ್ರಹ್ಮಾಚಾರ,**
**ಗುಹೇಶ್ವರ ನರಿದಡೆ ಅನಾಚಾರ! ॥ 437 ॥**

**ತಾತ್ಪರ್ಯ:** ಆದಿಯಾಧಾರ ವುಳ್ಳನ್ನಕ್ಕರ ಉಪಚಾರ, ಈ ಉಪಚಾರ ಲೌಕಿಕರಲ್ಲಿ ಶಿಗುವ ಉಪಚಾರವಲ್ಲ. ಸತ್ಸಂಗ ಮತ್ತು ಸದ್ಗುರು ಕೃಪೆಯಿಂದ ಲಭ್ಯವಾಗುವ ಪರಮಾರ್ಥದ ಉಪಚಾರ. ಆದಿಯಾಧಾರ ಜ್ಞಾನರೂಪ ವಿಚಾರ, ಆದಿ ಆವುದು? ಆಧಾರವಾವುದು? ಎಂಬುದರ ವಿಚಾರ ಸೃಷ್ಟಿಗಿಂತ ಪೂರ್ವದಲ್ಲಿದ್ದುದಾವುದೋ ಅದುವೆ ಆದಿ. ಆವುದು ನಾಮರೂಪಕ್ಕಾಧಾರವಾವುದೊ ಅದುವೆ ಆಧಾರ. ಇವೆರಡರ ಜ್ಞಾನವಾಗಿ ಆದಿ, ಆಧಾರ ಸ್ತುತಿಸುವದೆ ಉಪಚಾರ. ತೋರುವ ಸ್ಥಾವರ ಜಂಗಮ ಜಗವ ತಿರಸ್ಕರಿಸಿ, ತೋರದಡಗದ ಆದಿ ಆಧಾರವ ಸ್ತುತಿಸುವದೆ ಉಪಚಾರ. ಇದು ಸತ್ಸಂಗದಲ್ಲಿ ಬರುವ ಅತಿಥಿ ವೃಂದಕ್ಕೆ ಮಾಡುವ ಪ್ರಥಮ ಉಪಚಾರ.

ಎಲೈ ಅತಿಥಿರೂಪಿ ಜಿಜ್ಞಾಸುವೆ, ಆವುದು ಆದಿಯಾಗಿದೆ ಮತ್ತು ಆಧಾರವಾಗಿದೆ ಅದನ್ನೆ ನಂಬು. ತೋರಿ ಕೆಡುವ ನಾಮ ರೂಪವು ಮಿಥ್ಯಾ ಅದೆ. ಆವುದು ಈ ಮಿಥ್ಯಾ ನಾಮರೂಪಕ್ಕಾಧಾರವಾಗಿದೆ ಮತ್ತು ಈ ತೋರುವ ಸ್ಥಾವರ ಜಂಗಮ ಜಗತ್ತಿಗೆ ಆದಿಯಾಗಿದೆ, ಅದನ್ನು ನಂಬು ಎಂದು ಸದ್ವಸ್ತುವಿನ ಕಡೆ ಮುಖ ಮಾಡಿಸುವದೆ ಪ್ರಥಮ ಉಪಚಾರ.

ಎರಡು ಒಂದಾದಡೆ ಶಿವಾಚಾರ: ಈ ಶಿವಾಚಾರ ಜಿಜ್ಞಾಸುವೃಂದಕ್ಕೆ

ಲಭ್ಯವಾಗಬೇಕಾದರೆ ಸದ್ಗುರು ನಾಥನು ಸೋಹಂ ಬ್ರಹ್ಮಸ್ಮಿ ಎಂಬ ಮಹಾವಾಕ್ಯಗಳ ತಿಳಿಸಿದಾಗ ಶಿವಾಚಾರ್ಯ ಸಿದ್ಧವಾಗುವದು. ಸೋ ಅಂದರೆ ಅವನು ಶಿವನು. ಹಂ ಎಂದರೆ ನಾನು. ಅವನು ನಾನಿದ್ದೆ ಶಿವನು ನಾನಿದ್ದೇನೇ ಎಂದು ಅರ್ಥವಾಗುವದು.

ಈಶ್ವರನು ಪ್ರತಿಯೊಂದು ಪ್ರಾಣಿಯಲ್ಲಿ ಅವನೆ ನಾನಿದ್ದೇನೆಂಬ ಜಪವನ್ನು ಸ್ವಾಭಾವಿಕವಾಗಿ ಇಟ್ಟಿರುತ್ತಾನೆ. ಅಂದರೆ ಪರಮಾತ್ಮ ನಾನಿದ್ದೇನೆ ಎಂಬುದಾಗಿ ಅದರ ತಾತ್ಪರ್ಯವಿರುತ್ತದೆ. ಪೂರ್ವದಲ್ಲಿದ್ದ ಸದ್ವಸ್ತು ನಾನಿದ್ದೇನೆ. ಆದಿ ನಾನೆ ಈಗಲೂ ನಾನೆ ಪೂರ್ಣಮದಃ ಪೂರ್ಣ ಮಿದಂ ಎಂಬ ಮಹಾವಾಕ್ಯದ ಅರ್ಥವು ನೋಡಿದಡೆ ಎರಡು ಒಂದಾದುದೆ ಸಿದ್ಧವಾಗುವದು. ಸೃಷ್ಟಿಗಿಂತ ಪೂರ್ವದಲ್ಲಿ ಶಿವ, ಸೃಷ್ಟಿಯಾಗಿ ತೋರಿದರೂ ಶಿವ. ಆಭರಣವಾಗದಕ್ಕಿಂತ ಮುನ್ನವೂ ಬಂಗಾರವು ಆಭರಣವಾಗಿ ತೋರಿದೂ ಬಂಗಾರವು ಹೇಗೋ ಹಾಗೆ ಜಗದುತ್ಪತ್ತಿ ಪೂರ್ವದಲ್ಲಿ ಶಿವ, ಜಗವಾಗಿ ತೋರಿದರೂ ಶಿವ ಶಿವನೆ. ಅಬಾಧಿತ ಸ್ವರೂಪನೆಂದು ಸತ್ ಸ್ವರೂಪ ಶಿವ. ವ್ಯಕ್ತರೂಪ ಶಿವ, ಅವ್ಯಕ್ತ ಶಿವನಾಗಿದ್ದರಿಂದ ಎರಡು ಒಂದಾದುದೆ ಶಿವಾಚಾರ.

ಆ ಶಿವಾಚಾರ ಸಯವಾದಡೆ ಬ್ರಹ್ಮಚಾರ: ಈ ಶಿವಾಚಾರ ತಾನಾಗಿ ಅಳವಟ್ಟುದೆ ಬ್ರಹ್ಮಾಚಾರ. ಇದು ಅಳವಡಬೇಕಾದರೆ ಲಿಂಗಾಂಗ ಸಮರಸ ಜ್ಞಾನ ಮುಖ್ಯವಾಗಿ ಬೇಕು. ಸೃಷ್ಟಿಗಿಂತ ಪೂರ್ವದಲ್ಲಿದ್ದ ಸದ್ವಸ್ತು ಅಂಗನೆನಿಸಿಕೊಂಡರೂ ಅದುವೆ, ಲಿಂಗವೆನಿಸಿಕೊಂಡರು ಅದುವೆ. ಇದ್ದುದು ಅದುವೆ. ಅಂಗ ಲಿಂಗವೆನಿಸಿಕೊಂಡರು ಸದ್ವಸ್ತು, ಸದ್ವಸ್ತುವದು. ಏಕಮೇವಾದ್ವಿತೀಯ ಬ್ರಹ್ಮ, ಸತ್ಯಜ್ಞಾನಮನಂತಂ ಬ್ರಹ್ಮ. ಅದು ಅಪಾರವು ಅಖಂಡವು ಅಸಂಗವು ಅವಿಕಾರವು ನಿರುಪಾಧಿ ನಿರಾಲಂಬ ನಿರ್ಗುಣ ನಿರಾವರಣ ಎಂಬ ಲಕ್ಷಣಗಳನ್ನು ತನ್ನಲ್ಲಿ ಲಕ್ಷಿಸಿ ನೋಡಿದಾಗ ಬ್ರಹ್ಮಲಕ್ಷಣ, ತನ್ನ ಲಕ್ಷಣ ಎರಡು ಒಂದಾಗಿ ತಾನಾಗಿ ತನ್ನ ಹೃದಯಕ್ಕೆ ವೇದ್ಯವಾದುದೆ ಬ್ರಹ್ಮಚಾರ. ಬ್ರಹ್ಮಾಚಾರ ವದು ತಾನು ಸಹಿತ, ಅಖಿಲ ಪ್ರಪಂಚ ಪರಮಾತ್ಮ ಸಕಲವು ಸಚ್ಚಿದಾನಂದ ನಿತ್ಯಪೂರ್ಣವೆಂಬ ಜ್ಞಾನ ಅಳವಟ್ಟುದೆ ಬ್ರಹ್ಮಾಚಾರ.

ಗುಹೇಶ್ವರನ ಅರಿದಡೆ ಅನಾಚಾರ: ಸರ್ವಂಖಲ್ವಿದಂ ಬ್ರಹ್ಮವೆಂಬ ಸಚ್ಚಿದಾನಂದದ ದೃಷ್ಟಿ ಪೂರ್ಣಭಾವ, ಜ್ಞಾನ, ಇದುವೆ ಬ್ರಹ್ಮಾಚಾರ. ಈ ಬ್ರಹ್ಮಾಚಾರಕ್ಕೆ ಆವುದು ಬೆಳಗುವುದೊ ಅದು ಗುಹೇಶ್ವರ ಆ ಗುಹೇಶ್ವರನರಿದಡೆ ಅನಾಚಾರ.

ಒಂದು ಉಪಚಾರ, ಇನ್ನೊಂದು ಶಿವಾಚಾರ, ಮತ್ತೊಂದು ಬ್ರಹ್ಮಚಾರ. ವಿವೇಕವನ್ನೊಳಗೊಂಡುದು ಉಪಚಾರ, ಭಾವವನ್ನೊಳಕೊಂಡುದು ಲಕ್ಷಣಾತ್ಮವನೊಳಕೊಂಡುದು ಬ್ರಹ್ಮಚಾರ. ಶಿವಾಚಾರ. ಅರುವನ್ನೊಳಕೊಂಡದು ಬ್ರಹ್ಮಾಚಾರ. ಇವುಗಳು ಹೆತ್ತರಿವು ಏಕೆಂದರೆ ಇವು ತನ್ನಿಂದ ತಿಳಿಸಿಕೊಳ್ಳ ತಕ್ಕವುಗಳು ತನ್ನ ಸ್ವರೂಪವಲ್ಲಾ ತಾನಲ್ಲ, ತಾನನುಪಮ. ಉಪಚಾರ ಶಿವಾಚಾರ ಬ್ರಹ್ಮಚಾರಕ್ಕೆ ಮೀರಿದವನು. ತಾನು ವಿಚಾರಕೊಳ್ಳಪಟ್ಟ ಉಪಚಾರ ತನ್ನಿಂದ ಸಿದ್ಧವಾಗುವದು, ಭಾವಕ್ಕೊಳಪಟ್ಟ ಶಿವಾಚಾರ, ತನ್ನಿಂದ ಸಿದ್ಧವಾಗುವದು. ಅನುಭವಕ್ಕೊಳಪಟ್ಟ ಬ್ರಹ್ಮಚಾರ ಚಿದಹಂ ತನ್ನಿಂದ ಸಿದ್ಧವಾಗುವದು, ತಾನು ಇವಾವುಗಳಿಂದ ಸಿದ್ಧವಾಗದವನು.

ಇದು ಕಾರಣ ಇವೆಲ್ಲಕ್ಕೂ ಮೀರಿದ ತಾನು, ತನ್ನನರಿಯುವದರಿಂದ ತಾನು ತನಗೆ ಆದಿ ಎನಲಿಲ್ಲ ಆಧಾರವೆನಲಿಲ್ಲ ತನ್ನ ಹೊರತು ಅನ್ಯವ ಕಾಣದ್ದರಿಂದ ಆದಿ ಕಾಣಲಿಲ್ಲ ಆಧಾರ ಕಾಣಲಿಲ್ಲ. ಕಾಣದ್ದರಿಂದ ಎರಡು ಒಂದಾದ ಶಿವಾಚಾರ ಕಾಣಲಿಲ್ಲ. ಶಿವಾಚಾರ ಕಾಣದ್ದರಿಂದ ಶಿವಾಚಾರ ಸಯವಾದ ಬ್ರಹ್ಮಚಾರ ಕಾಣಲಿಲ್ಲ. ಕಾಣದ್ದರಿಂದ ಆದಿ ಶಿವ ಆಧಾರ ಶಿವ ಎನಲಿಲ್ಲ, ನುಡಿಗೆಡೆಗೊಡದ ಘನವೆ ಪ್ರಜ್ವಲಿಸುವಲ್ಲಿ ಪೂರ್ಣಮದಃ ಶಿವ ಪೂರ್ಣಮಿದಂ ಶಿವ ಎನಲಿಲ್ಲ. ತನ್ನಿಂದ ತನ್ನ ನೋಡಿ ತನಗೆ ತಾ ಪ್ರತ್ಯಕ್ಷನಾಗಿ ಆ ಪ್ರತ್ಯಕ್ಷವೆ ಭ್ರಾಂತಿ ನೋಡಾ, ಎನಗೆ ಅನ್ಯವಿಲ್ಲ, ಅನ್ಯ ನಾನಲ್ಲವೆಂದು ಬ್ರಹ್ಮವೇ ನಾನೆಂಬುದು ಅತಿಶಯದ ಭ್ರಾಂತಿನೊಡಾ, ಅದೇನು ಕಾರಣವೆಂದಡೆ ಬ್ರಹ್ಮಕ್ಕೆ ನಾ ಬ್ರಹ್ಮವೆಂಬುದು ಘಟಿಸದ್ದಾಗಿರುವಲ್ಲಿ ಸರ್ವಖಲ್ವಿದಂ ಬ್ರಹ್ಮ ಎನಲಿಲ್ಲ ನುಡಿಗೆಡೆಯಿಲ್ಲದ ತನ್ನರುವಿನ ಅರುವಾಗಿರುವದರಿಂದ ಗುಹೇಶ್ವರ ನರಿದಡೆ ಅನಾಚಾರವೆಂದು ಪ್ರಭು ಹೇಳಿದುದು.

ತಾನಾರೆಂಬದು ಅರಿಯದೆ ಉಪಚಾರಿಯಾದಡೇನು? ಶಿವಾಚಾರ, ಬ್ರಹ್ಮಚಾರಿ ಯಾದಡೇನು, ತನ್ನ ಅರಿದಡೆ ಇವೆಲ್ಲವು ಭ್ರಾಂತು, ತಾನೆ ಅಬಾಧಿತನಾದುದರಿಂದ ಈ ಆಚಾರಗಳೆಲ್ಲ ಅನಾಚಾರ ಕಾಣಾ ಎಂದು ಅಲ್ಲಯ್ಯ ನುಡಿದದು.

**ವಚನ 14**

**ಪರಮತತ್ವದಲ್ಲಿ ತದ್ಗತವಾದ ಬಳಿಕ**
**ಬೇರೆ ಮತ್ತ ಅರಿದಿಹೆನೆಂಬ ಭ್ರಾಂತೇಕೆ?**
**ಅರಿವು ಸಯವಾಗಿ ಮರಹು ನಷ್ಟವಾದ ಬಳಿಕ**
**ತಾನಾರೆಂಬ ವಿಚಾರವೇಕೆ?**
**ಗುಹೇಶ್ವರ ಬೆರಸಿ ಭೇದಗೆಟ್ಟ ಬಳಿಕ**
**ಮತ್ತೆ ಸಂಗವ ಮಾಡಿಹೆನೆಂಬ ತವಕವೇಕಯ್ಯ ॥ 440 ॥**

**ತಾತ್ಪರ್ಯ:** ಪರತತ್ವದಲ್ಲಿ ತದ್ಗತವಾದ ಬಳಿಕ ಬೇರೆ ಮತ್ತರಿದಹೆನೆಂಬ ಭ್ರಾಂತೇಕೆ? ಪರತತ್ವದಲ್ಲಿ ತಲ್ಲೀನವಾದ ಬಳಿಕ ಇದಕ್ಕಿಂತ ಬೇರೆ ಮತ್ತರಿದಿಹೆನೆಂಬ ಭ್ರಾಂತಿ ಇರದು. ಪರತತ್ವ ಎಂಬುದು ಅತ್ಯುತ್ತಮವಾದ ತತ್ವ. ಅದು ನಾಶವುಳ್ಳದ್ದೆಂದು ಅವಿನಾಶಿ ಎಂದು ಹೇಗೆ ಹೇಳುವದು. ಅದು ಸತ್ ಅಸತ್ ಎಂದು ಚಿತ್ ಅಚಿತ್ ಎಂದು ಆನಂದ ನಿರಾನಂದವೆಂದು ಹೇಗೆ ಹೇಳುವದು. ಅನುಪಮ ತತ್ವ ಚಿಂತನಕ್ಕೆಡೆಗೊಡದ ತತ್ವ ಭಾವಕ್ಕಿಂಬಿಲ್ಲದ ತತ್ವ. ಶಬ್ದ ಮೀಸಲಾಗಿಹ ಘನವು, ಅದು ಪರತತ್ವ. ಅದರಲ್ಲಿ ತಲ್ಲೀನವಾದ ಬಳಿಕ ಬೇರೆ ಮತ್ತರಿದಿಹೆನೆಂಬ ಭ್ರಾಂತಿ ಬರದು. ಅಂದು, ಇಂದು ಎಂದೆಂದೂ ಇದ್ದುದ್ದು ಪರತತ್ವ. ಅರಿವುಡೆ ತಾನೆ ತನ್ನಲ್ಲಿ ತಾನು ತದ್ಗತವಾದ ಬಳಿಕ ತನಗಿಂತನ್ಯವಾದುದು ಇಲ್ಲ. ತನ್ನ ಸಮಾನವಾದುದು ಇಲ್ಲ. ತನ್ನೊಂದಿಗೆ ಸೇರಿದುದು ಇಲ್ಲ. ಸುಮ್ಮನೆ ಹೇಳುವದಕ್ಕಾದರೂ ನಾಮರೂಪಂಗಳಿಲ್ಲ, ಇಲ್ಲ ಇಲ್ಲವೆಂಬುದಕ್ಕೂ ಇಂಬಿಲ್ಲದ ತೆರಹಿಲ್ಲದ ಘನವಾದ ಪರತತ್ವದಲ್ಲಿ ತಲ್ಲೀನವಾದ ಬಳಿಕ ಬೇರೆ ಮತ್ತರಿದಿಹೆನೆಂಬ ಭ್ರಾಂತಿ ಏಕೆ.

ಅರಿವು ಸಯವಾಗಿ ಮರಹು ನಷ್ಟವಾದ ಬಳಿಕ ತಾನಾರೆಂಬ ವಿಚಾರವೇಕೆ: ಅರಿವು ತಾನಾದಲ್ಲಿ ತನ್ನಿಂದರಿಸಿ ಕೊಳ್ಳುವ ಆತ್ಮ ಭಾವವಿಲ್ಲ. ಅನಾತ್ಮಭಾವವಿಲ್ಲ. ಅಹುದಾದುದಿಲ್ಲ ಅಲ್ಲಾದುದಿಲ್ಲ, ಅಳಿದುದಿಲ್ಲ, ಉಳಿದುದಿಲ್ಲ, ತಾನೆಂಬುದಿಲ್ಲ, ಅನ್ಯವೆಂಬುದಿಲ್ಲ, ಮರವು ಎನಲಿಲ್ಲ, ಅರುವು ಎನಲಿಲ್ಲ, ಅರಸಲಿಲ್ಲ ಆರಾಧಿಸಲಿಲ್ಲ, ಪೂಜಕ ಪೂಜ್ಯನೆನಲಿಲ್ಲ, ಸ್ವಾಮಿ ಸೇವಕ ನೆನಲಿಲ್ಲ, ಏನೊಂದೆನಲಿಲ್ಲದ ಅರುವೆ ತಾನಾದುದೆ ಅರುವು ಸಯವಾದ ಚಿನ್ಹ. ತೆರಹಿಲ್ಲದ ಘನ ತಾನಾದುದೆ ಅರುವು ಸಯವಾದ ಚಿನ್ಹ, ಅಲ್ಲಿ ನುಡಿಗಿಂಬಿಲ್ಲವಾದುದೆ ಮರವು ನಷ್ಟವಾದ ಚಿನ್ಹ, ಮರವು ಅರುವು ಎಂಬುದು ನಷ್ಟವಾದುದು ಮರವು ನಷ್ಟವಾದ ಚಿನ್ಹ. ಅರಿಯೆ ಅರಿತೆನೆಂಬ ದ್ವಂದ್ವಕ್ಕೆ ತಾನು ನಿಲುಕದವನಾಗಿಹುದೆ ಮರಹು ನಷ್ಟವಾದ ಚಿನ್ಹ. ಅವಿಚಾರ ವಿಚಾರಕ್ಕೆ ಸಂದಿಲ್ಲವಾಗಿಹುದೆ ಮರಹು ನಷ್ಟವಾದ ಚಿನ್ಹ, ಈ ಚಿನ್ಹವೆ ಅರುವು ತಾನಾದ ಚಿನ್ಹ, ಮರವು ನಷ್ಟವಾದ ಚಿನ್ಹ, ಇದು ಅನುಪಮ ನಿಲಯ.

ಉಪಮಾತೀತ ತಾನೆಂಬುದು ಕರಿಗೊಂಡಲ್ಲಿ ಪುನಃ ತಾನಾರೆಂಬ ವಿಚಾರದೇತರದು, ವಿಚಾರಕ್ಕೊಳಪಟ್ಟಲ್ಲಿ ತನ್ನಿರವಿನ ಅರವು ತನಗೆ ವೇದ್ಯವಾಗದ್ದೆ ವಿಚಾರಕ್ಕಾಸ್ಪದವು. ಗುಹೇಶ್ವರನ ಬೆರೆಸಿ ಭೇದಗೆಟ್ಟ ಬಳಿಕ ಮತ್ತೆ ಸಂಗವ ಮಾಡಿದೆನೆಂಬ ತವಕ ವೇಕಯ್ಯ. ಗುಹೇಶ್ವರನೆಂಬುದು ಅಕಲ್ಪಿತ ಘನ ಹೇಳಲುಬಾರದ ಘನ ಅದುವೆ ತನ್ನಿರುವಿನ ಅರುವಾಗಿ ಭೇದಗೆಟ್ಟ ಬಳಿಕ ಮತ್ತೆ ಸಂಗವ ಮಾಡಬೇಕೆಂಬ ಆತುರವೇಕೆ? ಕಲ್ಪಿತ ಪುರುಷನಾದಲ್ಲಿ ಅಕಲ್ಪಿತ ಘನದ ಸಂಗ ಮಾಡುವ ಆತುರವಿರುವದು ಸಹಜ. ತಾನು ಅಕಥನೀಯ ಘನ ನಾಗಿರುವಲ್ಲಿ ಕಲ್ಪಿತ ತಾನೆಂಬ ಭೇದ ಸಹಜ ನಷ್ಟವಾದಲ್ಲಿ ಪುನಃ ತನ್ನ ಅಕಲ್ಪಿತ ಘನದಲ್ಲಿ ಲೀನವಾಗಬೇಕೆಂಬ ತವಕ ವೆಲ್ಲಿಯದು, ಕಲ್ಪಿತ ಪುರುಷ ತಾನೆಂಬ ಭ್ರಾಂತನಿಗೆ ನಿಭ್ರಾಂತ ನಾಗುವದು ಹೇಗೆ ಸಾಧ್ಯ. ತನ್ನಿಂದ ತನ್ನ ನೋಡುವಡೆ ಆಗ ಗುಹೇಶ್ವರ ತಾನೆ, ಅಲ್ಲಿ ತಾನು ಗುಹೇಶ್ವರ ಬೇರೆನ್ನುವ ಭೇದ ಕೆಟ್ಟಿತು, ಭೇದ ಕೆಟ್ಟಲ್ಲಿ ಪುನಃ ಕಲ್ಪಿತನಾಗನು ಆಗದಿದ್ದಲ್ಲಿ ಮತ್ತೆ ಕೂಟಸ್ಥನ ಸಂಗವ ಮಾಡುವ ಹುಚ್ಚು ಏತರದು. ಆತುರ ಏತರದು ಅಚಿಂತ್ಯ ಪದದಲ್ಲಿ ಚಿಂತೆ ಇರದು. ನಿರ್ಣಯ ಇರದು, ನೆನಹು ಇರದು, ಮರವರುವಿನ ಗಜಿಬಿಜಿ ಇರದು. ಆವುದು ನೆನಹು ನಿರ್ಣಯದಿಂದುಕ್ತವಾಗಿದೆ. ಅದು ಪರತತ್ವದಲ್ಲಿ ತದ್ಗತವಾದ ಲಕ್ಷಣವಲ್ಲ. ಚಿಂತನಕ್ಕೆಡೆಗೊಡದ ಅಚಿಂತ್ಯವ ಪರತತ್ವದಲ್ಲಿ ತದ್ಗತ ಲಕ್ಷಣ ಅದುವೆ ಅರುವು ಸಯವಾದ ಲಕ್ಷಣ ಗುಹೇಶ್ವರನ ಬೆರಸಿ ಭೇದಗೆಟ್ಟ ಲಕ್ಷಣ. ಇದು ಏನೊಂದುಸುರಲು ಎಡೆಗೊಡದ ಘನದಿರುವು. ಆದುದರಿಂದ ಮತ್ತರಿದೆನೆಂಬ ಭ್ರಾಂತು ಇಲ್ಲ ಪುನಃ ತಾನಾರೆಂಬ ವಿಚಾರ ಮಾಡುವ ಅವಶ್ಯಕತೆಯೂ ಇಲ್ಲ. ಇದಲ್ಲದೆ ಗುಹೇಶ್ವರನ ಸಂಗ ಮಾಡಬೇಕೆಂಬ ಆತುರವೂ ಇಲ್ಲ. ತೃಪ್ತರೂಪ ತೃಪ್ತನಿಗೆ ಹಸಿವೆ ಏತರದು ಹಸಿವೆ ಇಲ್ಲದವನಿಗೆ ಉಂಬುವ ಆತುರವೆಲ್ಲಿಯದು.

ಸುಖರೂಪ ಸ್ವಸುಖಿಗೆ ಸ್ವರೂಪ ಸಂಗ ಮಾಡುವ ತವಕ ವೇತರದು. ಸ್ವಸಂಗವದು ನಿರಂತರ, ಅದು ಸ್ವತಃ ಸಿದ್ಧ ತಾನೆ ಇರುವಲ್ಲಿ ತನ್ನ ಸಂಗ ಮಾಡುವ

ತವಕ ಅದೇಕೆ? ತನಗಿಂತನ್ಯದರ ಸಂಗ ಮಾಡುವ ತವಕ ಸಹಜ, ತನ್ನ ಸಂಗ ತಾ ಮಾಡುವ ತವಕವೇಕಯ್ಯ, ಎಂದು ಪ್ರಭು ಹೇಳಿದುದು.

**ವಚನ 15**

**ಅಜ್ಞಾನವೆಂಬ ತೊಟ್ಟಿಲೊಳಗೆ, ಜ್ಞಾನವೆಂಬ ಶಿಶುವ ಮಲಗಿಸಿ,**
**ಸಕಲ ವೇದ ಶಾಸ್ತ್ರವೆಂಬ ನೇಣ ಕಟ್ಟಿ,**
**ಹಿಡಿದು ತೂಗಿ ಜೋಗುಳವಾಡುತ್ತಿದ್ದಾಳೆ ಭ್ರಾಂತಿ ಎಂಬ ತಾಯಿ**
**ತೊಟ್ಟಿಲು ಮುರಿದು, ನೇಣು ಹರಿದು, ಜೋಗುಳ ನಿಂದಲ್ಲದೆ,**
**ಗುಹೇಶ್ವರನೆಂಬ ಲಿಂಗವ ಕಾಣಬಾರದು. ॥ 460 ॥**

**ತಾತ್ಪರ್ಯ:** ಅಜ್ಞಾನವೆಂಬ ತೊಟ್ಟಿಲೊಳಗೆ ಜ್ಞಾನವೆಂಬ ಶಿಶುವ ಮಲಗಿಸಿ, ಸಕಲ ವೇದ ಶಾಸ್ತ್ರವೆಂಬ ನೇಣಕಟ್ಟಿ ಹಿಡಿದು ತೂಗಿ ಜೋಗುಳ ವಾಡುತ್ತಿದ್ದಾಳೆ. ಭ್ರಾಂತಿ ಎಂಬ ತಾಯಿ:

ಈ ಭ್ರಾಂತಿ ಎಂಬ ತಾಯಿ ಹೇಳಿ ಕೇಳಿ ಭ್ರಾಂತಳು. ಈಕೆಯ ಕಾರ್ಯವು ಭ್ರಾಂತಿಯೆ, ಅಜ್ಞಾನವೆಂಬ ತೊಟ್ಟಿಲದೊಳಗೆ ಜ್ಞಾನವೆಂಬ ಶಿಶುವ ಮಲಗಿಸುವದೆಂದರೆ ಇದೆಂಥ ಜ್ಞಾನ, ಈ ತಾಯಿಗೆ ತೊಟ್ಟಿಲ ಕೂಸಿನ ಜ್ಞಾನ ಚೆನ್ನಾಗಿ ಇದೆ ಎನ್ನಬೇಕೆ? ತೊಟ್ಟಿಲ ನೋಡಿದರೆ ಅಜ್ಞಾನ. ಶಿಶು ನೋಡಿದರೆ ಜ್ಞಾನ, ಅಜ್ಞಾನ ಜ್ಞಾನಕ್ಕೂ ಸಂಬಂಧವೆ? ಅಜ್ಞಾನದೊಳಗೆ ಜ್ಞಾನವ ಮಲಗಿಸುವದೆ ಇದೆಂಥ ಭ್ರಾಂತಿ? ಕತ್ತಲೆಯೊಳಗೆ ಬೆಳಕೆ? ಇದೆಂಥ ವಿಚಿತ್ರ. ಮೇಲೆ ಸಕಲ ವೇದ, ಶಾಸ್ತ್ರವೆಂಬ ನೇಣಕಟ್ಟಿ ಹಿಡಿದು ಜೋಗುಳವಾಡುತ್ತಿದ್ದಾಳೆ.

ತೊಟ್ಟಿಲಕ್ಕೆ ಕಟ್ಟಿದ ಹಗ್ಗವಾದರೂ ಸಕಲ ವೇದ ಶಾಸ್ತ್ರಂಗಳ ಕಟ್ಟಿಹಳು. ಮೇಲೆ ವೇದಶಾಸ್ತ್ರಗಳ ಹಗ್ಗ ಹಿಡಿದು ತೂಗಿ ಜೋಗುಳವಾಡುವ ಇದೆಂಥ ತಾಯಿ, ಪ್ರಭುದೇವನ ದೃಷ್ಟಿಯಲ್ಲಿ ಇದ್ದ ಲಿಂಗ, ಗುಹೇಶ್ವರ ಲಿಂಗ. ಕಾಣಬೇಕೆಂದಲ್ಲಿ ಇಲ್ಲದುದು ಇಲ್ಲವಾಗಬೇಕು, ಆಗ ನಿರಂತರವಾಗಿಹ ಗುಹೇಶ್ವರ ಲಿಂಗ ಕಾಣುವನು. ಇದು ಕಾರಣ ತೊಟ್ಟಿಲ ಮುರಿದು ನೇಣು ಹರಿದು ಜೋಗುಳ ನಿಂದಲ್ಲದೆ ಗುಹೇಶ್ವರನೆಂಬ ಲಿಂಗ ಕಾಣಬಾರದು ಎಂದು ಹೇಳಿಹನು.

ಅಜ್ಞಾನವೆಂಬ ತೊಟ್ಟಿಲದೊಳಗೆ ಜ್ಞಾನವೆಂಬ ಶಿಶುವ ಮಲಗಿಸುವದೆಂದರೆ ಇದೆಂಥ ಭ್ರಾಂತಿ. ಅಜ್ಞಾನವೆಂಬ ತೊಟ್ಟಿಲದೊಳಗೆ ಗುರು ಕರುಣಿಸಿದ ಶಿಶು ಅರುವ ಅರಿಯಹೋದವರಿಗೆ ಕಾಣುವ ಶಿಶು ವೇದ ವೇಧಿಸಲರಿಯದ ಶಿಶು ಶಾಸ್ತ್ರ ಸಾಧಿಸಲಿರಿಯದ ಶಿಶು. ವೇದಕ್ಕೂ ಅಗಮ್ಯವಾದ ಶಿಶು, ಶಾಸ್ತ್ರಕ್ಕೂ ನಿಲುಕದ ಶಿಶು ಬಿಂದುವಿಲ್ಲದ ಶಿಶು ತಂದೆಯಿಲ್ಲದ ಶಿಶು ತಾಯಿಯಿಲ್ಲದ ಶಿಶು, ಗಮನವಿಲ್ಲದ ಅಗಮ್ಯ ಶಿಶು ಮೂವ್ವರರಿಯದ ಮುಗ್ಧಬಾಲಕ.

ಕ್ಷರಾಕ್ಷರವೆಂಬುದಕ್ಕೂ ಮೀರಿದ ಶಿಶು, ಈ ಶಿಶುವಿನ ಪರಿಚಯ ಭ್ರಾಂತಿ ಎಂಬ ತಾಯಿಗೆ ಹೇಗಾಗಬೇಕು, ಇದು ಕಾರಣ ಈ ಭ್ರಾಂತಿ ತಾಯಿಯ ಕಾರ್ಯ ಎಲ್ಲಿಯವರೆಗೆ ನಿಲ್ಲುವದಿಲ್ಲ ಅಲ್ಲಿಯವರೆಗೆ ಕೂಸು ಕಾಣುವದಿಲ್ಲ, ಪ್ರಭುದೇವ,

ಭ್ರಾಂತಿಕಾರ್ಯ ನಿಲ್ಲದ ತನಕ ಅಂದರೆ ತೊಟ್ಟಿಲ ಮುರಿದು ನೇಣು ಹರಿದು ಜೋಗುಳ ನಿಂದಲ್ಲದೆ ಗುಹೇಶ್ವರ ಲಿಂಗ ಕಾಣಬಾರದು.

ಭ್ರಾಂತಿರೂಪ ತಾಯಿಯ ಭ್ರಾಂತಿ ಪರಿಹಾರವೆ ತೊಟ್ಟಿಲ ಮುರಿದು, ನೇಣು ಹರಿದುದು ಜೋಗುಳ ನಿಲ್ಲುವದು ಗುಹೇಶ್ವರ ಲಿಂಗವ ಕಾಣುವದು.

ಭ್ರಾಂತಿಯೆಂಬ ತಾಯಿ ಆರು, ಗುಹೇಶ್ವರ ಲಿಂಗ ಕಾಣದವರು ಭ್ರಾಂತರು, ಲಿಂಗ ಲಿಂಗ ಎಂದು ಜೋಗುಳ ಹಾಡುವವರೆಲ್ಲ ಭ್ರಾಂತರು. ಜ್ಞಾನವೆಂಬ ಶಿಶುವಿಂಗೆ ಅಜ್ಞಾನದ ತೊಟ್ಟಿಲ ಕಟ್ಟಿದವರೆಲ್ಲ ಭ್ರಾಂತರು, ಭ್ರಾಂತಿ ಆವುದು? ಹಗ್ಗದಲ್ಲಿ ಹಾವು ಕಾಣುವದು ಭ್ರಾಂತಿ. ಶೃತಿಗಗೋಚರವಾದುದರಲ್ಲಿ ಶೃತಿಯ ಕಲ್ಪಿಸುವದು ಭ್ರಾಂತಿ. ವೇದಾತೀತವಾದುದರಲ್ಲಿ ವೇದಂಗಳ ಕಲ್ಪಿಸುವದು ಭ್ರಾಂತಿ.

ಕರುಣಿಸಿದ ಲಿಂಗ ಅನುಪಮ ಲಿಂಗ, ಭಾವಕ್ಕಗಮ್ಯವಾಗಿಹ ಲಿಂಗ, ನೆನಹು ನಿರ್ಣಯಕ್ಕೆ ನಿಲುಕದ ಲಿಂಗ, ವಾಙ್ಮನೋತೀತ ಲಿಂಗ, ಲಿಂಗ ಲಿಂಗ ಎನ್ನುವವರಿಗೆ ನಿಲುಕದ ಲಿಂಗ, ಲಿಂಗ ಸಕೀಲ ಸಂಯೋಗ ವರ್ಮಸ್ಥಲವರಿಯದವರೆಲ್ಲ ಭ್ರಾಂತರು, ಅರುವ ಅರಿಯ ಹೇಳಿ ಸದ್ಗುರುನಾಥ ಕುರುಹ ಕೊಟ್ಟನಲ್ಲದೆ ಅರುವ ನರಿಯುವದು ಮರೆತುದರಿಂದ ಅಜ್ಞಾನವೆಂಬ ತೊಟ್ಟಿಲದೊಳಗೆ ಜ್ಞಾನವೆಂಬ ಶಿಶುವ ಮಲಗಿಸುವ ಭ್ರಾಂತಿ ಬಂದಿತ್ತು. ಈ ಭ್ರಾಂತಿಯೆಂಬ ತಾಯಿಗೆ ಅನುಪಮಜ್ಞಾನ ದರ್ಶನವಾದಲ್ಲಿ ಅಜ್ಞಾನ ಉಳಿಯಬಹುದೆ? ಭಾವಕ್ಕಗಮ್ಯವಾಗಿಹ ಘನಗಂಭೀರ ಮಹಾಘನ ಕಂಡಮೇಲೆ ಪುನಃ ಭ್ರಾಂತರಾಗಬಹುದೆ? ಪರಬೊಮ್ಮ ಭ್ರಾಂತಿಯ ಕಾಣುವದೆ? ಕಾಣುತ್ತದೆಂದಲ್ಲಿ ಕತ್ತಲೆ ಬೆಳಕು ಕಂಡಂತೆಂದು ತಿಳಿಯುವರು.

ವೇದಾತೀತ ಭಾವಾತೀತ ದ್ವಂದ್ವಾತೀತವಾದ ಲಿಂಗಯ್ಯನೆಂಬ ಜ್ಞಾನಕೂಸಿಗೆ ವೇದವು ಆಧಾರವಾಗಬಹುದೆ? ಶಾಸ್ತ್ರವು ಸಾಧಿಸಬಹುದೆ? ಅವರ್ಣೀಯ ರೂಪಿ ಜ್ಞಾನ ಶಿಶುವಿಗೆ ವರ್ಣಿಸಲು ಸಾಧ್ಯವೆ? ಶಬ್ದ ಮುಗ್ಧವು ಶಬ್ದ ವೇದಿಯಾಗಬಹುದೆ? ನಿರೂಪವು ರೂಪವುಳ್ಳದು ಆಗಬಹುದೆ? ನಿಷ್ಕಳಂಕದೋಳ್ ಕಳಂಕ ಕಾಣುವದೆ? ಗುರುತೋರಿದ ವೇದ ವೇದಾಂತಗಳಿಗಸಾಧ್ಯವಾಗಿಹ ಅಪ್ರತಿಮ ಲಿಂಗ ಅನುಪಮ ಲಿಂಗ, ಅಚಲಿತ ಲಿಂಗವರಿಯ ಹೋದವರಿಗೆ ಅಜ್ಞಾನವೆಂಬ ತೊಟ್ಟಿಲ ಮುರಿಯಿತು. ಸಕಲ ವೇದ ಶಾಸ್ತ್ರಂಗಳು ನಿರರ್ಥಕವಾದವು. ಅರಸುವ ಆಲಾಪಿಸುವ, ಜಪಿಸುವ ತಪಿಸುವ ಧ್ಯಾನಿಸುವ ಕ್ರಿಯೆಗಳು ನಿಂತವು. ನಿರ್ಣಯವು ಸೋತಿತು. ಅರಿಯಬಾರದ ಘನ ಇದು ಘನಕ್ಕೆ ಘನ ತಾನೆಂಬುದು ತನ್ನಿಂದ ತನಗದು ತಿಳಿದುದರಿಂದ, ಇಲ್ಲದ ಅಜ್ಞಾನ ಇಲ್ಲವಾದುದೆ ತೊಟ್ಟಿಲ ಮುರಿದಂತೆ. ಸಕಲ ವೇದ ಶಾಸ್ತ್ರಂಗಳು ಇಲ್ಲವಾದುದೆ ನೇಣು ಹರಿದಂತೆ, ಶ್ರವಣ, ಮನನ, ನಿಧಿಧ್ಯಾಸ, ಸವಿಕಲ್ಪ ಸಮಾಧಿ ಮೊದಲಾದವುಗಳು ಇಲ್ಲವಾದುದೆ ಜೋಗುಳ ನಿಂತಂತೆ. ಆಗ ಗುಹೇಶ್ವರ ಲಿಂಗ ಕಂಡು ತಾನೆ ಆದುದು.

**ವಚನ 16**

**ಇಷ್ಟಲಿಂಗವ ತೋರಿ ಮೃಷ್ಟಾನ್ನವ ಹಾರುವವರಿಗೆ**
**ಇಷ್ಟಾರ್ಥವ ಸಿದ್ಧಿ ಇನ್ನೆಲ್ಲಿಯದೊ?**

**ಅದೆಲ್ಲಿಯದೊ ಲಿಂಗ ಅದೆಲ್ಲಿಯದೊ ಜಂಗಮ?**
**ಅದೆಲ್ಲಿಯದೊ ಪಾದೋದಕ ಪ್ರಸಾದ?**
**ಅಲ್ಲದಾಟವನಾಡಿ, ಎಲ್ಲರೂ ಮುಂದುಗೆಟ್ಟರು–ಗುಹೇಶ್ವರಾ ನಿಮ್ಮಾಣೆ. ॥ 473 ॥**

**ತಾತ್ಪರ್ಯ:** ಇಷ್ಟಲಿಂಗವ ತೋರಿ, ಮಿಷ್ಟಾನ್ನ ಹೊಡೆಯುವವರಿಗೆ, ಇಷ್ಟಾರ್ಥ ಸಿದ್ಧಿಎಲ್ಲಿಯುದೋ? ಅದೆಲ್ಲಿಯುದೊ ಲಿಂಗ: ಬಹುಜನ ವೀರಶೈವರು ಇಷ್ಟಲಿಂಗವರಿತವರು ಸಿಕ್ಕುವದು ವಿರಳ. ಇಷ್ಟಲಿಂಗ ಪೂಜಾಲಿಂಗವೆಂದು ಕಂಡು ಪೂಜಿಸಿ ಮಿಷ್ಟಾನ್ನವ ಅರ್ಪಿತ ಮಾಡಿ ಅದುವೆ ಪ್ರಸಾದ ರೂಪವೆಂದು ಭುಂಜಿಸುವ ಜನ ಬಹಳ ವಿದ್ದುದು ಕಂಡು ಪ್ರಭುದೇವ ಜರಿದಿದ್ದಾನೆ. ಇಷ್ಟಲಿಂಗಕ್ಕೆ ತೋರಿ ಮಿಷ್ಟಾನ್ನ ಹೊಡೆಯುವವರಿಗೆ ಇಷ್ಟಾರ್ಥಸಿದ್ಧಿ ಎಲ್ಲಿಯದೋ ಎಂದು ಎಚ್ಚರ ಮಾಡಿದ್ದಾನೆ.

ಓ ಇಷ್ಟಲಿಂಗ ಧರಿಸಿದ ಲಿಂಗಾರ್ಚಕರು ಇವರು ಲಿಂಗವನ್ನು ಮಿಷ್ಟಾನ್ನವ ಉಣುವ ಲಿಂಗ ಮಾಡಿದಿರಾ? ಇದು ಕಾರಣ ಲಿಂಗಯ್ಯನಿಗೆ ಮಿಷ್ಟಾನ್ನವ ತೋರಿಸಿ ಅವನ ಹೆಸರಲ್ಲಿ ನೀವು ಮಿಷ್ಟಾನ್ನ ಸೇವಿಸುವವರಾದಿರಾ? ಶ್ರೀಗುರು ಕೊಟ್ಟ ಲಿಂಗ ಕುರುಹಿಂಗೆ ಒಳಪಟ್ಟಿತೆ? ಹಸಿವಿನಿಂದುಕ್ತವಾದ ಲಿಂಗವಾಯಿತೆ? ತೊಳಲುವ ಬಳಲುವ ಲಿಂಗವಾಯಿತೆ? ಮಜ್ಜನಕ್ಕೆರೆಯುವ ಲಿಂಗವಾಯಿತೆ? ಇದಕ್ಕೆ ಕಾರಣ ಆದಿ ಪುರಾತನರು ಮಾಡಿದ ಪಥವರಿಯದ ಪರಿತಾಪ.

ಇಷ್ಟಲಿಂಗಕ್ಕೆ ತೋರಿ ಮಿಷ್ಟಾನ್ನ ಸೇವಿಸಿದ ಮೇಲೆ ಇವುರುಗಳ ಇಷ್ಟಾರ್ಥಸಿದ್ಧಿಸಿರುವದೆ? ಸಕಲರ ಇಷ್ಟಾರ್ಥ ದುಃಖ ಕಳಕೊಂಡಲ್ಲಿ ಪುನಃ ದುಃಖಕ್ಕೊಳಪಡಬಾರದು. ಸುಖ ಲಭ್ಯಾವಾದ ಮೇಲೆ ಹೋಗಿರಬಾರದು ಅಂದರೆ ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತರೂಪ ಪ್ರಾಪ್ತಿ.

ಲಿಂಗಾರ್ಚಕರಿಗೆ ಪ್ರಭುದೇವ, ಅಣ್ಣಗಳಿರಾ ನೀವು ಲಿಂಗಾರ್ಚನೆಯ ಮಾಡಿ ಲಿಂಗಕ್ಕೆ ಮಿಷ್ಟಾನ್ನ ತೋರಿ ಹೊಡಯುವವರು ಇದರಿಂದ ನಿಮ್ಮಗಳಿಗೆ ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತರೂಪ ಪ್ರಾಪ್ತವಾಗಿದೆಯಾ, ಪ್ರಾಪ್ತವಾಗಿದ್ದಲ್ಲಿ ಸರ್ವಪ್ರಪಂಚ ನಿವೃತ್ತವಾಗಿದೆಯಾ? ಕೇವಲ ನಿಶ್ಚಿಂತರಾಗಿರುವಿರಾ? ನಿಮ್ಮಲ್ಲಿ ನಾನೆಂಬ ಅಹಂಕಾರ

ತೋರದಂತಾಗಿದೆಯಾ. ಎಲ್ಲಿ ನೋಡಿದಡಲ್ಲಲ್ಲಿ ಲಿಂಗ ದರ್ಶನವಾಗುತ್ತಿದೆಯಾ? ಹೀಗಿದ್ದ ಮಾತ್ರಕ್ಕೆ ನೀವು ಇಷ್ಟಲಿಂಗ ಪೂಜಿಸಿ ಲಿಂಗಕ್ಕೆ ಮಿಷ್ಟಾನ್ನವ ತೋರಿಸಿದುದಕ್ಕೆ ಸಾರ್ಥಕ ಇಲ್ಲದಿದ್ದರೆ ಇದೆಂಥ ಇಷ್ಟಾರ್ಥಸಿದ್ಧಿ.

ಅದೆಲ್ಲಿಯದೋ ಲಿಂಗ, ಅದೆಲ್ಲಿಯದೊ ಜಂಗಮ, ಅದೆಲ್ಲಿಯದೊ, ಪಾದೋದಕ ಪ್ರಸಾದ. ಅಲ್ಲದಾಟವನಾಡಿ ಎಲ್ಲರು ಮುಂದುಗೆಟ್ಟರು ಗುಹೇಶ್ವರಾ ನಿಮ್ಮಾಣೆ: ಅದೆಲ್ಲಿಯದೊ ಲಿಂಗ ಅಯ್ಯಾ, ನಿಮ್ಮಗಳಿಗೆಲ್ಲಿದೆ ಇಷ್ಟಾರ್ಥಸಿದ್ಧಿ, ಇಷ್ಟಾರ್ಥಸಿದ್ಧಿ ಎಂಬುದು ಲಿಂಗ ಸಕಲ ಸಂಯೋಗ ವರ್ಮಸ್ಥಲವ ನರಿವುದು. ನಿಶಬ್ದವೇದಿ ಜಂಗಮಲಿಂಗವಾವುದು, ಅದನರಿವುದು ಇದು ಜಂಗಮ ತತ್ವದ ರಹಸ್ಯ.

ಅದೆಲ್ಲಿಯದೊ ಪಾದೋದಕ ಪಾದೋದಕವೆಂಬುದು ಪರಮಾತ್ಮನ ಚಿದ್ರೂಪ

ನೋಡಾ, ಪಾದೋದಕವೆಂಬುದು ಪಾಪದ ಕೇಡು ನೋಡಾ, ಪಾದೋದಕವೆಂಬುದು ಪ್ರಮಥರ ಇರವು ನೋಡಾ, ಪಾದೋದಕವೆಂಬುದು ಕಪಿಲಸಿದ್ಧ ಮಲ್ಲಿಕಾರ್ಜುನನ ಮಹಿಮೆ ನೋಡಾ. ಅದೆಲ್ಲಿಯದೊ ಪ್ರಸಾದ. ಶುದ್ಧ ಪ್ರಸಾದ ಗುರುವಿನದದು, ಸಿದ್ಧಪ್ರಸಾದ ಲಿಂಗದ್ದದು, ಪ್ರಸಿದ್ಧ ಪ್ರಸಾದ ಜಂಗಮದದು ಇಂತೀ ತ್ರಿವಿಧವೊಂದಾದವರ ತೋರಿ ಬದುಕಿಸಾ ಕೂಡಲಚೆನ್ನಸಂಗಮದೇವಾ.

ಓ ಇಷ್ಟಲಿಂಗಕ್ಕೆ ತೋರಿ ಮೃಷ್ಟಾನ್ನ ಸೇವಿಸುವ ಅಣ್ಣಯ್ಯಗಳಿರಾ ಶುದ್ಧಪ್ರಸಾದ ಗುರುವಿನದದು ನಿಮಗೆ ಲಭ್ಯವಾಗಿದೆಯಾ, ಸಿದ್ಧಪ್ರಸಾದ ಲಿಂಗದದು, ನಿಮಗೆ ಲಭ್ಯವಾಗಿದೆಯಾ, ಪ್ರಸಿದ್ಧ ಪ್ರಸಾದ ಜಂಗಮದದು, ಲಭ್ಯವಾಗಿದೆಯಾ, ಪ್ರಸಾದವದು ಪರಮಜ್ಞಾನ, ಪರಮಾಮೃತ, ವಾಙ್ಮನೋತೀತವಾದುದು ಇದು. ಈ ಮೂರೊಂದಾದುದು ನಿಮಗೆ ಲಭ್ಯಾಗಿದೆಯಾ, ನೀವು ಲಿಂಗಬೇರೆ ನಾವು ಬೇರೆ ಲಿಂಗ ಪೂಜ್ಯವು ನಾವು ಪೂಜ್ಯಕರು ಎಂಬ ಭೇದವಾದಿಗಳು ಭೇದಜ್ಞಾನಿಗಳು. ನಿಮ್ಮಲ್ಲಿ ಲಿಂಗಾಂಗ ಸಮರಸ ಜ್ಞಾನದ ಸುಳುಹು ಇಲ್ಲದವರು; ನೀವು ಅಲ್ಲದಾಟವ ನಾಡುವ ಭ್ರಾಂತರು. ನೀವುಗಳೆಲ್ಲ ಈಗಳು ಕೆಟ್ಟವರು ಮುಂದೆಯೂ ಕೆಟ್ಟಿರಿ. ನಿಮ್ಮ ಮತಿಗೆ ಆವ ಗತಿಯೆಂದರಿಯೆವು. ಏಕೆಂದರೆ ಆದಿಪುರಾತನರ ಪಥವೆತ್ತ ನಿಮ್ಮ ಪಥವೆತ್ತ ನಡೆನುಡಿ ಚೈತನ್ಯವುಳ್ಳನ್ನಬರ ಒಡಲಗುಣಗಳಾರಿಗೆಯೂ ಬಿಡವು ನೋಡಾ, ನೋಡುವ ನಯನ, ಕೇಳುವ ಶ್ರೋತೃ ವಾಸಿಸುವ ಘ್ರಾಣಕ್ಕೆ ಗಂಧಾದಿಗಳು ತಾಗಿದ ವೆನಬೇಡ ನೋಡುತ್ತ ನಡೆಯುತ್ತ ಕೇಳುತ್ತ, ಲಿಂಗಾರ್ಪಿತ ಮಾಡುವ ಲಿಂಗಭೋಗೋಪ ಭೋಗಿಗೆ ಸರ್ವಾಂಗಶುದ್ಧವೆಂಬುದು ಇದೆ ಕಂಡಯ್ಯ, ಕಾಲತ್ರಯಂಗಳ ಜೀವತ್ರಯಂಗಳ ಭಾವತ್ರಯಂಗಳ ನೊಂದು ಮಾಡಿ ಸುಖ ದುಃಖ ಸಗುಣ ನಿರ್ಗುಣವೆಂಬು ಭಯ ಲಿಂಗದಲ್ಲಿ ಏಕ ಮಾಡಿ ಅಹುದು, ಅಲ್ಲ ಬೇಕು ಬೇಡೆಂಬ ಸಂದು ಸಂಶಯ ಕಳೆದಿಪ್ಪುದು ಕೂಡಲ ಚೆನ್ನಸಂಗಯ್ಯನಲ್ಲಿ ಆದಿಪುರಾತನರು ಮಾಡಿದ ಪಥವು.

ಆದಿ ಪುರಾತನರ ಪಥವೆತ್ತ ಇಷ್ಟಲಿಂಗಕ್ಕೆ ಮಿಷ್ಟಾನ್ನಹೊಡೆಯುವರ ಇಷ್ಟಾರ್ಥ ಸಿದ್ಧಿ ಎತ್ತ? ಇಷ್ಟಲಿಂಗವೆಂಬುದು ಗುರುತೋರಿದ ಲಿಂಗ ಅರುವ ಅರಿಯಹೇಳಿದ ಮೌನ ಮುದ್ರೆ, ಈ ಮಹಾಂತರು ನಡೆನುಡಿ ಚೈತನ್ಯವುಳ್ಳನ್ನಬರ, ಇವರಲ್ಲಿ ಒಡಲ ಗುಣ ಕಾಣಬೇಡ. ಇವರು ಕಾಣುವ ಕಣ್ಣಾದವರಲ್ಲ, ಕೇಳುವ ಕಿವಿಯಾದವರಲ್ಲ, ಮೂಸಿಸುವ ಘ್ರಾಣಾದಿಗಳಾದವರಲ್ಲ, ಇವರು ಲಿಂಗ ಸಕೀಲ ವರಿತ ಮಹಾಂತ ರಾದುದರಿಂದ ಕಣ್ಣಿನ ಕಣ್ಣು, ಕಿವಿಯ ಕಿವಿ, ಘ್ರಾಣದ ಘ್ರಾಣ. ತನುವಿನ ತನು, ಮನದ ಮನ ಜೀವದ ಜೀವ, ಅರುವಿಂಗರುವಾಗಿಹ ಘನವಂತ. ನಡೆಯುತ್ತಿರಲಿ, ನುಡಿಯುತ್ತಿರಲಿ ಶ್ರವಣ ಮಾಡುತ್ತಿರಲಿ, ಲಿಂಗಾರ್ಪಿತ ಮಾಡುವ ಲಿಂಗಭೋಗೋಪ ಭೋಗಿಗಳು. ಇವರ ದಿವ್ಯದೃಷ್ಟಿಯಲ್ಲಿ ಇಲ್ಲಾದುದಿಲ್ಲಾದುದು ಎಲ್ಲಿಪ್ಪುದು? ಇಲ್ಲಾದುದಿಲ್ಲಾದುದೆಂದಿಪ್ಪುದು ಎಂಬ ಲಿಂಗವರಿತು ಲಿಂಗವೇ ಆದುದರಿಂದ ಸರ್ವಾಂಗ ಶುದ್ಧ ಕಂಡಯ್ಯ. ಈ ಮಹಾಂತ ಕಾಲತ್ರಯಂಗಳ ಜೀವತ್ರಯಂಗಳ

ಭಾವತ್ರಯಂಗಳ ನೊಂದು ಮಾಡಿ ಸುಖದುಃಖವ ಕಾಣದ ನಿಸ್ಸಂಗಿ ನಿರುಪಾಧಿ ನಿರಾಲಂಬ ಸಗುಣ ನಿರ್ಗುಣವೆಂಬುಭಯ ಕಾಣದ ಪರಾತ್ಪರ ಪರತತ್ವ, ಈ ಪರತತ್ವದಲ್ಲಿ ತದ್ಗತವಾದವಂಗೆ ಆವುದು ಅಹುದಾಗಬೇಕು. ಆವುದು ಅಲ್ಲವಾಗಬೇಕು ಆವುದು ಬೇಕಾಗಬೇಕು, ಆವುದು ಬೇಡಾಗಬೇಕು. ಅದ್ವಿತೀಯನು ಅಪ್ರಮಾಣಗಮ್ಯರು, ಇವರು ಇಷ್ಟಲಿಂಗವರಿತವರಾದುದರಿಂದ ಇವರು ಇಷ್ಟಾರ್ಥ ಸಿದ್ಧಿವುಳ್ಳವರು. ಇವರಲ್ಲದೆ ಲಿಂಗವದು ತತ್ವ, ನಿರಾಭಾರಿ ಜಂಗಮತತ್ವ, ನಿಜೈತತ್ವ, ಲಿಂಗಾನುಭವ ಲಿಂಗಾನಂದ ರೂಪಿ, ಸ್ವರೂಪಾನುಭವ, ಸ್ವರೂಪದ ಸುಖಿಗಳು, ಇವರು ಅಲ್ಲದಾಟವ ನಾಡದವರು ಉಳಿದವರೆಲ್ಲ ಅಲ್ಲದಾಟವ ನಾಡಿ ಮತಿ ದುರ್ಮತಿಯಾದದ್ದು ಹೇಳಲಿಲ್ಲ ಕೇಳಲಿಲ್ಲ ದುರ್ಗತಿ ಆವುದೆಂದರಿಯುವದು?

**ವಚನ 17**

**ಜ್ಞಾನದ ಉಬ್ಬು ಕೊಬ್ಬಿನಲ್ಲಿ ನುಡಿವುತ್ತಿಪ್ಪರೆಲ್ಲರು**
**ನಾಮ ನಾಸ್ತಿಯಾಗದು ತನುಗುಣ ನಾಸ್ತಿಯಾಗದು**
**ಕರಣಂಗಳು ನಾಸ್ತಿಯಾಗವು ಕರಸ್ಥಲ ನಾಸ್ತಿಯಾಗದು.**
**ಇದೆತ್ತಣ ಉಲುಹೋ ಗುಹೇಶ್ವರಾ? ॥ 482 ॥**

ತಾತ್ಪರ್ಯ: ಜ್ಞಾನದ ಉಬ್ಬು ಕೊಬ್ಬಿನಲ್ಲಿ ಉಲಿವುತಿಪ್ಪರೆಲ್ಲರು: ಜ್ಞಾನದ ಉಬ್ಬು ಕೊಬ್ಬಿನಲ್ಲಿ ಉಲಿವರು ಇವರಾರು? ಇವರು ಸೋಹಂ ಎಂದು ಉಲಿವವರು. ಚಿದಹಂ ಎನ್ನುವವರು ಶಿವೋಹಂ ಎನ್ನುವವರು, ಪ್ರಣವಮಂತ್ರವನುಚ್ಚರಿಸುವ ಪ್ರಮಾಣಿಕರು ಪ್ರಣವ ಮಂತ್ರದರ್ಥವ ತಿಳಿದುನೋಡಿರೆ? ಪ್ರಣವ ನಾಹಂ ಎಂದುದೆ? ಪ್ರಣವ ಕೋಹಂ ಎಂದುದೆ? ಪ್ರಣವ ಸೋಹಂ ಎಂದುದೆ ಎನ್ನದಾಗಿ ಪ್ರಣವ ಬರ್ಗೋ ದೇವಸ್ಯ ಧೀಮಹಿ ಎಂದುದಾಗಿ, ಪ್ರಣವ ಮಂತ್ರದರ್ಥವ ತಿಳಿಯದವರು, ಪ್ರಣವಮಂತ್ರ ಉಚ್ಚರಿಸುವವರು ಸೋಹಂ ಸೋಹಂ ಎನ್ನುವವರು, ಶಿವೋಹಂ ಶಿವೋಹಂ ಎಂದು ಜ್ಞಾನದಲ್ಲಿ ಉಬ್ಬುವರು ಕೊಬ್ಬುವರು. ಕಲ್ಪಿತ ಪುರುಷನ ಜ್ಞಾನಾವಸ್ಥೆಯಲ್ಲಿ ತೋರುವ ಸಾಕ್ಷಿ, ದೃಕ್ಕ ಪ್ರತ್ಯಗಾತ್ಮ ಪರಬ್ರಹ್ಮವೆ ತಾನೆಂಬ ಜ್ಞಾನಾಕಾರ ವೃತ್ತಿಗಳಲ್ಲಿಯೂ ಉಬ್ಬು ಕೊಬ್ಬಿನಲ್ಲಿ ಉಲಿವು ತಿಪ್ಪರು. ಇವರು ಚಿದಹಮ್ಮು ಜ್ಞಾನವುಳ್ಳವರು. ಸ್ತೋತ್ರ ಮಾಡುವವರ ಕಂಡರೆ ಉತ್ಸಾಹಿಯಾಗುವ ಜ್ಞಾನ, ಇದು ನಿರಾಲಂಬ ಜ್ಞಾನವಲ್ಲ; ಸಚ್ಚಿದಾನಂದ ನಾನೆನ್ನುವ ತೂರ್ಯಜ್ಞಾನ, ಅನಾತ್ಮರ ತಿರಸ್ಕರಿಸಿ ಆತ್ಮ ನಾನೆನ್ನುವ ಜ್ಞಾನ. ಇದು ಸೀಮಿತ ಜ್ಞಾನ, ಇಲ್ಲಿ ಒಂದು ತ್ಯಾಜ್ಯ ಇನ್ನೊಂದು ಗ್ರಾಹ್ಯವಾಗಿದ್ದುದರಿಂದ ಕಲ್ಪಿತನ ಜ್ಞಾನ ಅವಸ್ಥೆಗೆ ಒಳಪಟ್ಟುದು. ಇಲ್ಲಿ ಪೂರ್ಣತ್ವವಿಲ್ಲ.

ನಿರಾಲಂಬದಲ್ಲಿ ನಿಜ ಲಿಂಗ ನಾನೆನ್ನುವ ಮಹದಹಂಕಾರ ವಿದೇನೊ? ಆ ಮಹದಹಂಕಾರವೆ ಸಂಸಾರವಾಗಿ ಬಂದು ಬಳಲುವ ಭ್ರಾಂತಿ ಇದೇನೊ? ಇದಾರಿಗೆ ತಿಳಿಯದಲ್ಲ. ಇದನಾರಯ್ಯ ಪರಿಹರಿಸುವವರು ಕೂಡಲ ಚೆನ್ನಸಂಗಯ್ಯನಲ್ಲದೆ!

ನಿರಾಲಂಬ ಜ್ಞಾನವಾಗದ್ದರಿಂದ ಇವರು ಜ್ಞಾನದ ಉಬ್ಬು ಕೊಬ್ಬಿನಲ್ಲಿ ಉಲಿವು ತಿಪ್ಪರೆಲ್ಲರು ಈ ಜ್ಞಾನದ ಉತ್ಸಾಹ ಕಲ್ಪಿತ ಪುರುಷನ ಜ್ಞಾನಾವಸ್ಥೆ ತೋರುವ ಉತ್ಸಾಹ.

ಈ ಉತ್ಸಾಹ ತನ್ನ ನಿಜದರುವಿಂಗೆ ಹಾನಿ, ತಾನುಪಾಶಕ್ಕೆ ಬದ್ಧ, ತನ್ನ ಕೂಗು ತನಗೆ ಹಗೆಯಾಯಿತಲ್ಲ. ಇದುವೆ ಬಳಲುವದಕ್ಕೆ ಈಡು ಮಾಡಿತಲ್ಲ, ಇದು ಶಾಸ್ತ್ರವಾಸನೆಗೆ ಈಡು ಮಾಡಿತ್ತಲ್ಲ, ಈ ಶಬ್ದ ಸಂಭ್ರಮವದು ದೊಡ್ಡ ಪಾಶ. ಇದುವೆ ಜ್ಞಾನದ ಉಬ್ಬು ಕೊಬ್ಬಿನ ಮಹದಹಂಕಾರ ಕಾರಣವಾಗಿ ನಾನು ಪರಬ್ರಹ್ಮನೆಂಬ ಚಿದಹಮ್ಮುಳ್ಳ ಜ್ಞಾನದ ಧ್ವನಿ ಜ್ಯೋತಿರ್ಲಿಂಗವಾಗದು, ಆಕಾಶವಾಣಿಯಾಗದು, ಇದು ಕಾರಣ ಸಾಕ್ಷಿ ನಾನು, ದೃಕ್ ನಾನು ಪ್ರತ್ಯಗಾತ್ಮ ನಾನೆನ್ನುವ ಜ್ಞಾನದ ಉಬ್ಬು ಕೊಬ್ಬಿನಲ್ಲಿ ನಾಮ ನಾಸ್ತಿಯಾಗದು, ತನುಗುಣ ನಾಸ್ತಿಯಾಗದು. ಕರಣಂಗಳು ನಾಸ್ತಿಯಾಗವು. ಕರಸ್ಥಲ ನಾಸ್ತಿಯಾಗದು. ಇದೆತ್ತಣ ಉಲುಹೋ ಗುಹೇಶ್ವರ.

ತಾನಾರೆಂದರಿದು ತನ್ನಿರುವಿನಲ್ಲಿ ತಾನು ತದ್ಗತವಾದ ಜ್ಞಾನ. ಇದು ಅನುಪಮ ಜ್ಞಾನ. ಆಕಾಶವಾಣಿ ನುಡಿದು ನುಡಿಯದಂತಿದ್ದ ಉಲುಹು, ನಡೆದು ನಡೆಯದಂತಿದ್ದ ನಿರ್ಗಮನ. ಅಲ್ಲಿ ನಾಮ ನಿರ್ನಾಮವಾದುದು ರೂಪ ಅರೂಪವೆಂಬುದು ನಷ್ಟವಾಗಿ ತನು ಗುರು ಲಿಂಗ ಇಂದ್ರೀಯಂಗಳು ಅತೀಂದ್ರಿಯಂಗಳು ಪ್ರಾಣವದು ಪ್ರಣವಮಂತ್ರವಾಗಿಹ ಭರ್ಗೋದೇವ, ಕರಣಂಗಳು ಲಿಂಗಕಿರಣಂಗಳಾಗಿ ಅವರ್ಣೀಯ ಘನವಾಗಿ ಹೇಳಲಿಲ್ಲ, ಕೇಳಲಿಲ್ಲ, ಏಕೆಂದರೆ ದೇಹವೆ ದೇಗುಲವಾಗಿ ಗುಹೇಶ್ವರನೆ ದೇವನಾಗಿರುವಲ್ಲಿ, ಶಬ್ದಕ್ಕೆ ತೆರಹಿಲ್ಲವೆಂದುದು, ಇಲ್ಲಿ ಆರಿಗಾರು ಹೇಳುವದು, ಆರಿಗಾರು ಕೇಳುವದು ಮರವರುವೆಂಬುದಕ್ಕೂ ಇಂಬಿಲ್ಲದ ತನ್ನ ನಿಜಧಾಮ ನುಡಿದು ಹೇಳಿದುದು ಅದೆಂತು? ನಡೆದು ತೋರಿಸಿದುದು ಅದೆಂತು? ಸತ್ತ ಹೆಣಕೂಗಿದುದುಂಟೆ? ಕೂಗಿದಲ್ಲಿ ಸತ್ತ ಹೆಣವೆಂದೆನಿಸದು, ಸತ್ ಸ್ವರೂಪವ ನರಿತ ಘನವಂತ ಅವನ ಶರೀರ ಇಂದ್ರಿಯಾದಿಗಳು ಪ್ರಾಣಾದಿಗಳು ತಾನೆಂಬ ಅಹಂಕಾರ ನಷ್ಟವಾದುದರಿಂದ ಸತ್ತ ಹೆಣವಂದಿಹರು ಶವ ಹೇಗೆ ಬದುಕಿದುದು ಆಗುವದಿಲ್ಲ. ಅಹಂಕಾರ ಕರ್ತೃತ್ವ ಭೋಕ್ತೃತ್ವವನ್ನೊಳಗೊಂಡುದಾದರೆ ಜ್ಞಾನಿಯಾಗಲಿ, ಆರೆ ಇರಲಿ, ಅದು ಶವವಾಗದು. ಆರ ಕರ್ತೃತ್ವ ಭೋಕ್ತೃತ್ವ ಬುದ್ಧಿ ನಷ್ಟವಾಗಿದೆ. ಅದು ಸತ್ತ ಹೆಣವು. ಆರದು ನಾನೆಂಬಹಂಕಾರ ನಷ್ಟವಾಗಿದೆ ಅದು ಸತ್ತ ಹೆಣ.

ಸತ್ ಸ್ವರೂಪನರಿತವರು ಸತ್ತ ಹೆಣ ನುಡಿಗೆಡೆಗೊಡದ ಘನದಿರುವಿನ ಅರುವುಳ್ಳವರು. ಅಲ್ಲಿ ಕಲ್ಪಿತನ ನಷ್ಟವಾಗಿ ಅಕಲ್ಪಿತ ಘನದಿರುವು ಪ್ರಜ್ವಲಿಸುವುದರಿಂದ ಕಲ್ಪಿತ ಮರುವಿನ ಅಹಂಕಾರವು ನಷ್ಟವು ಅರುವಿನ ಅಹಂಕಾರವು ನಷ್ಟವಾದುದರಿಂದ ಸತ್ ಸ್ವರೂಪವೆ ತಾನಾಗಿಹ ಸ್ವಮಹಿಮ.

ಆವಲ್ಲಿ ತಾನೆಂಬುದು ಬೀಜಭೂತವಾಗಿದೆ. ಅಲ್ಲಿ ಕರ್ತೃತ್ವ ಭೋಕ್ತೃತ್ವವು ಬಲಗೊಂಡಿದೆ ಎಂದಲ್ಲಿ ಅಜ್ಞಾನಾವಸ್ಥೆಯಲ್ಲಿ ತೋರುವ ನಾಮ ರೂಪ ನಾಸ್ತಿಯಾಗದು. ತನು ಗುಣ ನಾಸ್ತಿಯಾಗದು. ಕರಣಂಗಳು ನಾಸ್ತಿಯಾಗವು. ಕರಸ್ಥಲ ನಾಸ್ತಿಯಾಗದು. ಆವಲ್ಲಿ ಪೂಜಾದ ಹಂಬಲವಿದೆ. ಅಲ್ಲಿ ಪೂಜೆ ಪೂಜ್ಯಕ ಭಾವವಿದೆ. ಹಿರಿದು ಕಿರಿದಾಗಿದೆ. ಕಾರ್ಯ ಕಾರಣ ದ ಹೇತುವುಳ್ಳದ್ದಾಗಿದೆ. ಇದು ಆಭಾಸ ಜ್ಞಾನವೆ ದೃಢವಾಗಿರುವಲ್ಲಿ ನಾಮ ಹೇಗೆ ನಾಸ್ತಿಯಾಗಬೇಕು. ಇಲ್ಲದವು ಇಲ್ಲವಾಗಿಲ್ಲ

ಈ ಇಲ್ಲವೆಂಬುದು ಇಲ್ಲವಾಗಿಲ್ಲವೆಂದಲ್ಲಿ ಕರಣಂಗಳು ಇಲ್ಲವಾಗಿಲ್ಲ. ಅವುಗಳ ಕಾರ್ಯಂಗಳು ಇಲ್ಲವಾಗದಿದ್ದಲ್ಲಿ ಕರಸ್ಥಲ ಹೇಗೆ ನಾಸ್ತಿಯಾಗಬೇಕು. ಇದು ನಾಸ್ತಿಯಾಗದಿದ್ದಲ್ಲಿ ತನುಗುಣ ನಾಸ್ತಿಯಾಗದು. ಕರಣಂಗಳು ನಾಸ್ತಿಯಾಗವು ಇವುಗಳು ನಾಸ್ತಿಯಾಗದಿದ್ದಲ್ಲಿ ತಾನು ಪರಬ್ರಹ್ಮವೆಂಬ ಜ್ಞಾನದ ಕೂಗು ಅದೇತರ ಕೂಗು, ಕತ್ತಲೆ ಕೆಡಿಸದ ರವಿ ಅದೇತರ ರವಿ ಭ್ರಾಂತಿ ಕೆಡಿಸದ ಬ್ರಹ್ಮಜ್ಞಾನ ಅದೇತರ ಜ್ಞಾನ, ಅದೇತರ ಉಲುವು ಅದೇತರ ಸಿಂಹಧ್ವನಿ, ಅದೇತರ ವೇದಾಂತ ಕೇಸರಿ.

**ವಚನ 18**

**ಜಗದವಂದದ್ಯರೆಂದು ನುಡಿದು ನಡೆವರು ನೋಡಾ.**
**ಭವಬಂಧನದ ಕುಣಿಕೆಯ ಕಳೆಯಲರಿಯರು ನೋಡಾ.**
**ಭವ ತಮ್ಮ ತುಳಿ ತುಳಿದು ಕೊಂದಿತ್ತು ನೋಡಾ!**
**ಶಬ್ದ ವೇದಿಗಳೆಂದು ನುಡಿದು ನಡೆವರು ನೋಡಾ,**
**ನಿಶಬ್ದ ವೇದಿಸದಿರ್ದಡೆ, ಗುಹೇಶ್ವರ ನೋಡಿ ನಗುತಿಪ್ಪನೋಡಾ. ॥ 483 ॥**

**ತಾತ್ಪರ್ಯ:** ನುಡಿದು ನಡೆವರು ಜಗದ್ವಂದ್ಯರು ಜಗದ್ವಂದ್ಯರೆಂಬುವವರು ಇವರು ನಡೆವಲ್ಲಿ ನುಡಿವಲ್ಲಿ ಸರಿಹೋದವರು, ಈ ಪೂಜ್ಯರ ದೃಷ್ಟಿಗೆ ಜಗತ್ತು ಇದ್ದುದಾಗಿ ನಡೆವವರು ನುಡಿಯುವರಾದರೆ? ಅಥವಾ ಜಗತ್ತು ಇಲ್ಲದಾಗಿ ನಡೆದು ನುಡಿವವರಾದರೆ? ಜಗತ್ತು ಆವುದು? ವ್ಯಷ್ಟಿ, ಸಮಷ್ಟಿಯಾಗಿ ತೋರುವದು, ಪಿಂಡಾಂಡವಾಗಿ ಬ್ರಹ್ಮಾಂಡವಾಗಿ ತೋರುವದು ಅಲ್ಲವೆ, ನಾಮರೂಪ ಜಗತ್ತು ಅಲ್ಲವೆ? ಜಗವು ಕಾರ್ಯ ಜಗದೊಡಯರು ಕಾರಣ. ಈ ಕಾರ್ಯಕಾರಣಕ್ಕೆ ಒಪ್ಪಿಕೊಂಡವರು. ಇದಲ್ಲದೆ ಪಂಚಪ್ರಕಾರ ಭೇದಜ್ಞಾನಕ್ಕೆ ಒಪ್ಪಿಕೊಂಡವರು. ಜೀವ ಈಶ್ವರ ಭೇದ, ಜೀವ ಜೀವಿಗಳ ಭೇದ, ಈಶ್ವರ ಜಡ ಭೇದ, ಜೀವ ಜಡ ಭೇದ, ಜಡಜಡ ಭೇದ, ಹೀಗೆ, ಭೇದಜ್ಞಾನಕ್ಕೆ ಒಪ್ಪಿಕೊಂಡವರು. ಹಾಗೂ ಸದ್ಯೋಜಾತ, ಅಘೋರ, ವಾಮದೇವ, ತತ್ಪುರಷ, ಈಶಾನ್ಯವೆಂಬ ಪಂಚಮುಖ ಈಶ್ವರರೂಪವನ್ನು ಕಾರ್ಯರೂಪ ಜಗತ್ತನ್ನು ಒಪ್ಪಿಕೊಂಡವರು. ಹಾಗೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚತುರ್ವರ್ಣವನ್ನು ಮತ್ತು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸವೆಂಬ ಆಶ್ರಮಗಳನ್ನು ಒಪ್ಪಿಕೊಂಡು ನುಡಿದು ನಡೆವರು ನೋಡಾ. ಇವರು ಮಹಾತ್ಮರ ಮಹಾನುಭವದ ಕಡೆ ಲಕ್ಷ್ಯಕೊಟ್ಟುದು ಅವರ ಹೃದಯಕ್ಕೆ ವೇದ್ಯವು. ಪ್ರಪಂಚ ಸತ್ಯ ಎನ್ನುವವರು ಕೋಟ್ಯಾನು ಕೋಟಿ ಪ್ರಪಂಚ ಮಿಥ್ಯೆಎನ್ನುವವರು. ಕೋಟ್ಯಾನು ಕೋಟಿ ಪರಮಾರ್ಥ ಸತ್ಯ ಎನ್ನುವವರು ಕೋಟ್ಯಾನು ಕೋಟಿ, ಪರಮಾರ್ಥ ಮಿಥ್ಯೆಎನ್ನುವವರು ಕೋಟ್ಯಾನು ಕೋಟಿ, ಸಮದೃಷ್ಟಿಯಲ್ಲಿ ನಿಂದು ತಮ್ಮ ತಾವರಿತವರ ನೊಬ್ಬರನು ಕಾಣೆ ಕೂಡಲಸಂಗಮದೇವಾ ಎಂಬ ಬಸವರಸರ ಮಹಪ್ರಸಾದ ಮಹದರಿವು ನೋಡುವುಡೆ ಜಗದ್ವಂದ್ಯರಾಗಿ ನುಡಿದು ನಡೆವ ಇವರು ಪ್ರಪಂಚ ಸತ್ಯವೆನ್ನುವ ಕೋಟ್ಯಾನು ಕೋಟಿಯ ಸಂಖ್ಯೆಯಲ್ಲಿ ಗಣನೆಯಾದರೆ? ಅಥವಾ ಮಿಥ್ಯೆ ಎಂಬುವದರಲ್ಲಿ ಗಣನೆಯಾದರೆ? ಅಥವಾ ಪರಮಾರ್ಥ ಸತ್ಯವೆನ್ನುವ

ಸಂಖ್ಯೆಯಲ್ಲಿ ಗಣನೆಯಾದುದು ತಮ್ಮನ್ನು ತಾವೆ ನೋಡಿಕೊಳ್ಳವುದು. ಇವರು ತಮ್ಮನ್ನು ತಾವರಿಯದವರು, ಶಬ್ದವೇದಿಗಳು ಭವ ಬಂಧನದ ಕುಣಿಕೆಯ ಕಳೆಯರಿಯರು ನೋಡಾ.

ಭವಬಂದನದ ಕುಣಿಕೆ ಆವುದು? ಜಗತ್ಪೂಜ್ಯರೆನ್ನಿಸಿಕೊಳ್ಳುವ ವಾಸನೆಯೆ ಭವ ಬಂಧನದ ಕುಣಿಕೆ. ಆಚಾರದ ವಾಸನೆಯೆ ಕುಣಿಕೆ, ಸತ್ಯ ಅಹಿಂಸೆ ಬ್ರಹ್ಮಚರ್ಯ ಆಸ್ತೇಯ, ಅಪರಿಗ್ರಹ, ಶುಚಿ, ಸಂತೋಷ, ತಪಸ್ಸು, ಈಶ್ವರಿ ಪ್ರಣಿದಾನಾದಿಗಳ ಕಂಡು ಲೋಕವು ಇವರನ್ನು ಪೂಜ್ಯರನ್ನಾಗಿ ಕಂಡು ಸ್ತುತಿಸುವದು. ಈ ಸ್ತುತಿಯಲ್ಲಿ ತಾನು ತಾದಾತ್ಮವುಳ್ಳವನಾದುದೆ ಕುಣಿಕೆಯಾಗಿದೆ. ಲೋಕದವರ ಕೊಡುವ ಗೌರವಕ್ಕೆ ಒಪ್ಪಿ ತಾನು ಇನ್ನಷ್ಟು ಘನವಂತನಾಗಿರಬೇಕೆಂದು ತಪಸ್ಸು ಯಾಗಗಳನ್ನಾಚರಿಸ ಹೋಗಿ ತಾನಾರೆಂಬ ತನ್ನ ಸ್ವರೂಪದ ವಿಮುಖನಾಗಿಹುದೆ ಭವ ಬಂಧನದ ಕುಣಿಕೆಯಾಗಿದೆ. ಇವರಿಗೆ ಜಗತ್ತು ಜಗದೊಳಗಿರುವ ಮಾನವರು ಕೊಡುವ ಗೌರವ ಇದ್ದುದಾಗಿದೆ. ಜಗತ್ತು ಇಲ್ಲವಾಗಿಲ್ಲ, ಇಲ್ಲವಾಗದಿದ್ದಲ್ಲಿ, ಇಲ್ಲವೆಂಬುದು ಕೂಡ ಆವಾಗ ಇಲ್ಲವಾಗಬೇಕು. ಹೀಗಾಗಿ ತಮ್ಮ ದೇಹವಾಸನೆ ಲೋಕ ವಾಸನೆ ದೃಢಗೊಂಡುದರಿಂದ ಭವ ಬಂಧನದ ಕುಣಿಕೆಯ ಕಳೆಯಲರಿಯರು ನೋಡಾ.

ಭವ ತಮ್ಮ ತುಳಿ ತುಳಿದು ಕೊಂದಿತ್ತು ನೋಡಾ, ಜಗದ್ವಂದ್ಯರ ನುಡಿ ನಡೆಯೇ ಸತ್ವಗುಣದ ಕಾರ್ಯವಾಗಿದೆ. ಸತ್ವಗುಣವೆಂಬುದು ಗುಣಮಯಿಕಾರ್ಯ. ಇದು ಮಾಯಿಕ ಸತ್ಕರ್ಮವೆಂದೆನಿಸಿ ಲೋಕಕ್ಕೆ ಬಹು ಶ್ರೇಷ್ಠವಾಗಿ ಕಂಡರೂ ಅಹಂಕಾರ ಬಲಗೊಂಡು ಸ್ವರೂಪ ವಿಸ್ಮೃತಿಗೂ ಸಹಾಯಕವಾಗಿದೆ. ಇದಲ್ಲದೆ ಇವರ ನುಡಿಯೆ ಭವವಾಗಿ ಈ ಮಾಯಿಕವು ಇವರನ್ನು ಪಾದದಡಿಯಲ್ಲಿಯೇ ಹಾಕಿಕೊಂಡು ತುಳಿತುಳಿದು ಕೊಂದಿತ್ತು ನೋಡಾ.

ಶಬ್ದವೇದಿಗಳೆಂದು ನುಡಿದು ನಡೆವರು ನೋಡಾ, ಇವರು ವೇದದ ಪ್ರಥಮ ಭಾಗವಾದ ಕರ್ಮಕಾಂಡವನ್ನು ಮಧ್ಯಮ ಭಾಗವಾದ ಉಪಾಸನಾ ಕಾಂಡವನ್ನು ಚೆನ್ನಾಗಿ ಓದಿದವರು. ಪಾಪದೋಷ ಚಾಂಚಲ್ಯದೋಷ ಕಳೆದುಕೊಳ್ಳಲು ಯಜ್ಞಗಳನ್ನು ಭಗದರ್ಪಣ ಬುದ್ದಿಯನ್ನು ಲಿಂಗಾರ್ಪಿತವನ್ನು ಜಪ ತಪ ಧ್ಯಾನಾದಿಗಳನ್ನು ಆಚರಿಸುವವರು. ಇವರು ಒಮ್ಮೆ ಅಹಂಕಾರಿಗಳಾಗಿ ಒಮ್ಮೆ ನಿರಹಂಕಾರಿಗಳಾಗಿ ದೇವನ ಮುಂದೆ ದಾಸರಾಗಿ, ಲೋಕದವರ ಮುಂದೆ ಈಶನಾಗಿ ಮಹೇಶ್ವರರಾಗಿ ಇವರ ಜ್ಞಾನ ಬೆಳಕು ಕತ್ತಲೆಯಿಂದುಕ್ತವಾದ ಜ್ಞಾನದಂತಿದೆ. ಮರವರುವಿನಿಂದುಕ್ತವಾಗಿದೆ. ಇವರ ಜ್ಞಾನ, ಇಲ್ಲದ ಜಗತ್ತನ್ನು ಇಲ್ಲ ಮಾಡಲು ಲೋಕವಾಸನೆ ಕಳೆಯಲು ಅಸಮರ್ಥವಾಗಿದೆ. ತಮ್ಮ ದೇಹದಿಂದಾಗುವ ಯಮ ನಿಯಮವೆಂಬ ಆಚಾರದ ವಾಸನೆ ಕಳೆಯಲು ಅಸಮರ್ಥರಾಗಿರುವಲ್ಲಿ ತಮ್ಮ ದೇಹಬುದ್ಧಿಯೆ ತಾವಾರೆಂದು ತಮ್ಮ ಸ್ವರೂಪ ತಿಳಿಯಲು ಹೋಗದಂತೆ ಪ್ರತಿಬಂಧಕ ಮಾಡಿದೆ. ಹೀಗಿದ್ದಲ್ಲಿ ದೇಹ ಭಾವ ನಾಶವಾಗುವ ಬಗೆ ಹೇಗೆ? ಇದಲ್ಲದೆ ಶಾಸ್ತ್ರವಾಸನೆ ಕಳೆದುಕೊಳ್ಳುವ ಸಮರ್ಥನೆ ಹೇಗೆ ಬರಬೇಕು. ಇವರಲ್ಲಿ ದೇಹವಾಸನೆ ಉಂಟು ಲೋಕವಾಸನೆಯು ಉಂಟು.

ಶಾಸ್ತ್ರ ವಾಸನೆಯು ಉಂಟು. ಈ ವಾಸನೆತ್ರಯಂಗಳೆ ಇಲ್ಲದ ದೇಹ ಇಲ್ಲದ ಲೋಕ, ಇಲ್ಲದ ಶಾಸ್ತ್ರ ಉಂಟು ಮಾಡಿ ಶಬ್ದವೇದಿಗಳನ್ನಾಗಿ ಮಾಡಿದೆ. ಇವರು ವೇದ ಪರಾಯಣರು ಅಹುದು. ಸ್ಮೃತಿ ಪರಾಯಣರು ಅಹುದು. ಇವರಿಗೆ ವೇದಕ್ಕೆ ಮೀರುವ ಗಂಭೀರತೆ ಇಲ್ಲ. ಶಾಸ್ತ್ರಕ್ಕೆ ಮೀರುವ ಗಂಭೀರತೆಯಿಲ್ಲ. ಪುರಾಣಕ್ಕೆ ಮೀರುವ ಗಂಭೀರತೆಯು ಇಲ್ಲ.

ವೇದ ಘನವೆಂಬೆನೆ ವೇದವೇದಿಸಲರಿಯದೆ ಕೆಟ್ಟವು ಶಾಸ್ತ್ರಘನವೆಂಬೆನೆ ಶಾಸ್ತ್ರಸಾಧಿಸಲರಿಯದೆ ಕೆಟ್ಟವು. ಪುರಾಣ ಘನವೆಂಬೆನೆ ಪುರಾಣ ಪೂರೈಸಲರಿಯದೆ ಕೆಟ್ಟವು. ಅದೇನು ಕಾರಣವೆಂದಡೆ, ವೇದ ಶಾಸ್ತ್ರ ಪುರಾಣಾಗಮಂಗಳೆಲ್ಲವು ತಮ್ಮ ತನುವಿಡಿದು ಅರಸಲರಿಯವು. ಇದಿರಿಟ್ಟುಕೊಂಡು ಕಾಣದೆ ಹೋದ ನರಲೋಕದ ನರರುಗಳರಿಯರು, ಸುರಲೋಕದ ಸುರರುಗಳರಿಯರು ಕೂಡಲ ಚೆನ್ನಸಂಗಾ ನಿಮ್ಮ ಶರಣನೆ ಬಲ್ಲ.

ಶಬ್ದವೇದಿಗಳಾಗಿ ನುಡಿದು ನುಡಿದು ನಡೆವುದು ಶಬ್ದವೇದಾಶ್ರಯದಲ್ಲಿ. ಇವರು ನಿಃಶಬ್ದ ವೇದಿಗಳಾಗದ್ದರಿಂದ ನುಡಿವವರಾದರು, ನೆಡೆಯುವವರಾದರು, ಇವರ ನಡೆ ನುಡಿಯೆ ಇವರಿಗೆ ಭವವಾಗಿರುವಲ್ಲಿ ವೇದಕ್ಕೂ ಶಾಸ್ತ್ರಕ್ಕೂ ಪುರಾಣಕ್ಕೂ ಆಗಮಂಗಳಿಗೂ ಮೀರಿ ನಿಂತು ತಮ್ಮನ್ನು ನೋಡುವ ಭಾಗ್ಯ ಹೇಗೆ ಬರಬೇಕು.

ಭವವೆಂಬುದು, ಪ್ರಪಂಚ ಸತ್ಯವೆನ್ನುವದಷ್ಟೆ ಭವವಲ್ಲ, ಎಲ್ಲಿಯವರೆಗೆ ಶಬ್ದ ಸಂಭ್ರಮದವರಾಗಿಹರು. ಅಲ್ಲಿಯವರೆಗೆ ಭವದೊಳಗಿದ್ದವರು. ಭವದಿಂದ ವಿಮುಕ್ತರೆಂದರೆ ತಾನಾರೆಂದರಿತವರು. ನಿಃಶಬ್ದವೇದಿಗಳು ಇವರಿಗೆ ಶಬ್ದವೇದ, ಸತ್ಯವಾಗಿ ಕಾಣಲಿಲ್ಲ. ಮಿಥ್ಯೆವಾಗಿ ಕಾಣಲಿಲ್ಲ. ಕಂಡರು ತಾನು ಸಮದೃಷ್ಟಿಯುಳ್ಳವನಾದ. ಪಕ್ಷಾತೀತ ದೃಷ್ಟಿಯುಳ್ಳವನಾದ. ತಾನು ಅನುಪಮನೆಂಬುದು ಕರಿಗೊಂಡುದರಿಂದ ತನಗೆ ಪ್ರಪಂಚ ಸತ್ಯ ಮಿಥ್ಯೆಯಾಗಿ ಕಾಣಲಿಲ್ಲ. ಪರಮಾರ್ಥವನ್ನು ಸತ್ಯ ಮಿಥ್ಯೆಯಾಗಿ ಕಾಣಲಿಲ್ಲ. ತಾನು ಸಮಸ್ವರೂಪನಾಗಿ ತನ್ನನ್ನು ತಾನು ನಿಂತು ನೋಡಿದ.

ಏನ ಕಂಡಡೇನಯ್ಯ ತನ್ನ ಕಾಣದಾತ ಕುರುಡ, ಏನ ಕೇಳಿದಡೇನಯ್ಯ ತನ್ನ ಕೇಳದಾತ ಕಿವುಡ, ಏನ ಮಾತಾಡಿದಡೇನಯ್ಯ ತನ್ನ ಮಾತಾಡಾದಾತ ಮೂಕ ದಿಟದಿಂದ ತನ್ನ ತಾ ಕಾಣಬೇಕು. ದಿಟದಿಂದ ತನ್ನ ತಾ ಕೇಳಬೇಕು. ದಿಟದಿಂದ ತನ್ನ ತಾ ಮಾತಾಡಬೇಕು. ಇದೆ ನೆಲೆ ಸ್ವಭೂಮಿ ಸ್ವಸ್ವರೂಪವು ಕಾಣಾ ಗುಹೇಶ್ವರಾ. ಓ ಜಗದ್ವಂದ್ಯರೆ? ನುಡಿದು ನಡೆಯುವವರಾದಿರಿ ಒಳ್ಳೇದು, ನುಡಿದು ನಡೆಯುವವ ತಾನಾರು? ತನ್ನನ್ನು ನೋಡಿಕೊಂಡನೆ? ತನ್ನನ್ನು ನೋಡಿಕೊಳ್ಳದೆ ಜಗದ್ವಂದ್ಯರಾದಿರಿ ಇದರಿಂದ ಫಲವೇನು, ನಿಮ್ಮ ನಡೆನುಡಿಯಿಂದ ದಿಟವಾಗಿಹ ನಿನ್ನಿಂದ ನಿನ್ನನ್ನು ನೀನು ನೋಡಿದೆಯಾ, ನೋಡದಿದ್ದಲ್ಲಿ ಫಲವೇನು, ನೋಡಿದಲ್ಲಿ ನುಡಿಗೆಡೆಗೊಡದ ಘನನು ನಡೆಗೆಡೆಗೊಡದ ಘನನು ನೀನೇ ಇರುವಲ್ಲಿ ನಿನಗಾವ ನಡೆ, ನಿನಗಾವ ನುಡಿ, ಗಗನವು ಹೋದುದೆಲ್ಲಿ? ಬಂದುದೆಲ್ಲಿ? ಅದು ಮಾತಾಡಿದುದೆಂದು, ಗಗನಸದೃಶವಾಗಿಹ ಶಬ್ದಮುಗ್ಧ ಶೃತಿಗಗೋಚರ ನಿನಗಾವ ಬೋಧ, ನೀನಾಗಾವ

ಅಬೋಧ, ನಿನಗೆಲ್ಲಿ ಪ್ರಪಂಚ, ನಿನಗೆಲ್ಲಿ ಪರಮಾರ್ಥ, ಇದ್ದ ನಿರಂತರವಾಗಿಹ ನಿನ್ನನ್ನು ನೋಡುವದೆ ದಿಟದಿಂದ ತನ್ನ ತಾ ಕಾಣುವದು. ಆಗ ಸಮಸ್ವರೂಪನಾಗುವದು. ಸಮದೃಷ್ಟಿಯುಳ್ಳವನಾಗಿ ನೋಡುವದು, ತನ್ನಿಂದ ತನ್ನ ನೋಡುವುಡೆ ತಾನು ಸಮಸ್ವರೂಪ ತಾನು ಆವಾವ ಕಲ್ಪನೆಗೊಳಪಡದ ಘನನಾಗಿದ್ದುದು ತನ್ನಿಂದ ತನಗದು ಸಿದ್ಧವಾದುದು ದಿಟದಿಂದ ತನ್ನ ತಾ ಕೇಳಿದುದು. ಏನೊಂದುಸರಲು ಎಡೆಗೊಡದ ಘನವೆ ತನ್ನಿರವು ಎಂಬುದು ತನ್ನಿಂದ ತನಗದು ವೇದ್ಯವಾದುದು. ಅದು ದಿಟದಿಂದ ತನ್ನ ತಾ ಮಾತಾಡಿದು, ಇದುವೆ ನೆಲೆ ಸ್ವಭೂಮಿ ಸ್ವಸ್ವರೂಪ ಇವರೆ ಶರಣರು. ಇವರೆ ನಿಃಶಬ್ದಘನವರಿತ ಮಹಾಂತರು.

ನಡೆನುಡಿಯಿಂದುಕ್ತರಾದವರು ಶಬ್ದವೇದಿಗಳು. ನುಡಿನಡೆಗೆ ಮೀರಿದವರೆ ಘನಕ್ಕೆ ಘನರು ನಿಃಶಬ್ದವೇದಿಸಿದವರು. ಇವರು ಶೃತಿಗೆ ಮೀರಿ ನಿಂತ ನಿಲುವುಳ್ಳ ಅಗಮ್ಯರು. ಇವರ ದಿವ್ಯ ದೃಷ್ಟಿಗೆ ಜಂಗಮವೆಂಬುದು ಇಲ್ಲವೆಂಬುದು ಇಲ್ಲವೆನ್ನಲು ಇಂಬಿಲ್ಲದಿರುವಾಗ ಜಗದ್ವಂದ್ಯರಾಗುವ ಹುಚ್ಚು ಇವರಲ್ಲಿ ಇಲ್ಲ ಜಗವನ್ನು ಒಪ್ಪಿಸುವ ನುಡಿನಡೆಯುವ ಹುಚ್ಚು ಅವರಲ್ಲಿ ಹೇಗೆ ಬರುವದು? ಇವರಿಗೆ ಶಬ್ದವೇದವು ಸತ್ಯ ಮಿಥ್ಯೆ ಎನ್ನುವದೆ ನಾಚಿ ಹೋದಾಗ ಇವರು ನಡೆ ನುಡಿ ಹೇಗಾಗುವರು. ಏಕೆಂದರೆ ಇವರು ಭವ ಬಂಧನದ ಕುಣಿಕೆಯ ಕಳೆದವರು ಭವವನ್ನೇ ಮೆಟ್ಟಿ ನಿಂತವರು. ನಿಃಶಬ್ದವೇದವೆ ಅವರ ನಿಲುವು ಆಗಿರುವಲ್ಲಿ ಶಬ್ದ ವೇದ ಅವರಿಗೆ ಬೋಧಿಸುವದಾದರೂ ಹೇಗೆ? ಇವರು ತಮ್ಮ ತಾವರಿತುದರಿಂದ ನಿಶಬ್ದ ವೇದಿಸಿದವರಾದುದರಿಂದ ಇವರ ದೃಷ್ಟಿಯಲ್ಲಿ ಶಬ್ದವೇದಿಗಳ ಕಂಡರೆ ನಗುತಿಪ್ಪರು.

**ವಚನ 19**

**ಅಘಟಿತ ಘಟಿತನೆ ವಿಪರೀತ ಚರಿತ್ರನೆ,**
**ಸಾವರ ಕೈಯಲ್ಲಿ ಪೂಜೆಗೊಂಬರೆ ಲೊಂಗಯ್ಯ**
**ಸಾವ ನೋವರ ಕೈಯಲ್ಲಿ ಪೂಜೆಗೊಂಬುದು**
**ಲಜ್ಜೆ ಕಾಣಾ ಗುಹೇಶ್ವರಾ. ॥ 498 ॥**

**ತಾತ್ಪರ್ಯ:** ಅಘಟಿತ, ಘಟಿತನೆ, ವಿಪರೀತ ಚರಿತ್ರನೆ, ಸಾವರ ಕೈಯಲ್ಲಿ ಪೂಜೆ ಗೊಂಬರೆ: ಲಿಂಗಯ್ಯ ಓ ಲಿಂಗಯ್ಯ ಸಾಧ್ಯವಾಗದವನು ಅಂದಲ್ಲಿ ಸಾಧ್ಯವಾದವನು. ನಿನ್ನದು ವಿಪರೀತ ಚರಿತ್ರವೊ. ಹರಿಯು ಹೊಲಬನರಿಯ, ಬ್ರಹ್ಮ ಮುಂದ ನರಿಯ, ರುದ್ರ ಲೆಕ್ಕವ ಮರೆದು ಜಪವ ನೆಣಿಸುತ್ತೈದಾನೆ. ಈಶ್ವರ ಪವನ ಯೋಗದಲ್ಲಿ ಮಗ್ನನಾದ. ಸದಾಶಿವ ಭಾವದಲ್ಲಿ ಭ್ರಮಿತನಾದ ಒಂದಂಡಜದೊಳಗೆ ಬಾಲಕರೈವರು ನಿಮ್ಮನೆತ್ತ ಬಲ್ಲರು ಗುಹೇಶ್ವರಾ.

ಓ ಲಿಂಗ ಘನವೆ ಹರಿಯು ನಿನ್ನನ್ನು ಕಾಣುವ ಮಾರ್ಗ ಪಥವರಿಯದವನಾದನೆ? ಬ್ರಹ್ಮ ತನ್ನ ಮುಂದಿರುವ ಲಿಂಗಮಯ ತತ್ವವರಿಯದವನಾದನೆ? ರುದ್ರನಿಗೆ ತಾನಾರೆಂಬ ಲೆಕ್ಕವ ಮರೆದು ಜಪವು ಘನವಾಯಿತೆ? ಈಶ್ವರನಿಗೆ ಕುಂಬಕ ಯೋಗವೆ ಘನವಾಗಿ ತಾನಾರೆಂಬುದ ನರಿಯದೆ ಪ್ರಾಣಾಯಾಮ

ಯೋಗದಲ್ಲಿ ಮಗ್ನನಾದನೆ? ಸದಾಶಿವ ಭಕ್ತರ ಭಾವಕ್ಕೆ ಭ್ರಮಿತನಾಗಿ ತಾನು ಭಾವಕ್ಕಗಮ್ಯನು ಎಂಬುದು ಅರಿಯದಾದನೆ? ಓ ಘನ ಘಂಬೀರನೆ, ನಿಮ್ಮ ಶರಣರ ದೃಷ್ಟಿಯಲ್ಲಿ ಈ ಒಂದು ತತ್ತಿಯೊಳಗೆ ಬಾಲಕರೈವರಾದರೆ? ಕೊನೆಗೆ ನಿಮ್ಮ ನರಿಯದವರಾದರೆ? ನಿಮ್ಮ ನರಿದ ಶರಣರೆತ್ತ! ಅರಿಯದ ಬಾಲಕರಾಗಿಹ ಬ್ರಹ್ಮ, ಹರಿ, ರುದ್ರ, ಈಶ್ವರ, ಸದಾಶಿವರಾಗಿಹರೆತ್ತ! ಪ್ರಬುದ್ಧರೆತ್ತ! ಕೂಸುಗಳೆತ್ತ?

ಓ, ಲಿಂಗಘನವೆ ಬ್ರಹ್ಮಾದಿಗಳಿಗೆ ಸಾಧ್ಯವಾಗದವನು ಅಂದಲ್ಲಿ ಮುನಿಜನಂಗಳಿಗಾದರೂ ಸಾಧ್ಯವಾದವನೆ? ಸನಂದ ಸನಕಾದಿ ಮುನಿ ಜನಂಗಳೆಲ್ಲರೂ ಬಸ್ಮಾಂಗಿಗಳೆಲ್ಲರೂ ಇವರು ಸತ್ಯರೆಂಬುದು ಹುಸಿ, ನಿತ್ಯರೆಂಬುದು ಹುಸಿ, ಅನಿತ್ಯ ರೆಂಬುದು ದಿಟ ಗುಹೇಶ್ವರಾ. ಪ್ರಭುದೇವರ ದೃಷ್ಟಿಯಲ್ಲಿ ಸನಕ ಸನಂದಾದಿ ಮುನಿ ಜನಂಗಳೆಲ್ಲರೂ ಅಸಾಧ್ಯವಾದ ಲಿಂಗ ಘನವು ಸಾಧ್ಯವಾದಂತೆ ಕಂಡು ಬರುವದಿಲ್ಲ, ಏಕೆಂದರೆ, ಇವರು ಸತ್ಯವರಿಯ ಹೋದವರಲ್ಲ. ತಾವೆ ನಿತ್ಯರೆಂಬುದು ತಮ್ಮಿಂದ ತಮಗೆ ವೇದ್ಯವಾದಂತೆ ಕಂಡುದಿಲ್ಲ ವೆಂದಂತಾಗುತ್ತದೆ. ಇದು ಕಾರಣ ಅನಿತ್ಯನೆಂಬುದು ದಿಟವೆಂದು ಹೇಳಿಹನು. ಹಾಗಾದರೆ ಲೋಕದವರೊಳಗೆ ಆವಲೋಕದವರಾದರೂ ಸಾಧ್ಯವಾಗದ ಲಿಂಗ ಘನವ ಸಾಧ್ಯಮಾಡಿಕೊಂಡಿಹರೆ?

ದೇವಲೋಕದವರೆಲ್ಲರ ವ್ರತಗೇಡಿಗಳೆಂಬೆ, ಮರ್ತ್ಯಲೋಕದವರೆಲ್ಲರ ಭಕ್ತದ್ರೋಹಿಗಳೆಂಬೆ, ದೇವ ಸಂಭ್ರಮ ಗಣಪದವಿಯ ಕಂಡವರೆಲ್ಲರು ಕುಂಭಕರ್ಣನಂತೆ ಅತಿ ನಿದ್ರಿಗಳೆಂಬೆ ಅನಂತಶೀಲರ ಕಂಡಡೆ ಕೂಲಿಕಾರರೆಂಬೆ, ಗುಹೇಶ್ವರಾ, ಲಿಂಗೈಕ್ಯರರಿಯರಾಗಿ.

ದೇವಲೋಕದವರಾಗಲಿ, ಮರ್ತ್ಯಲೋಕದವರಾಗಲಿ, ಇವರುಗಳೆಲ್ಲರೂ ಇರಲಿ, ದೇವ ಸಂಭ್ರಮ ಗಣಪದವಿಯ ಕಂಡವರೆ? ಕುಂಭಕರ್ಣನಂತೆ, ಅತಿನಿದ್ರಿಬಡಕರು, ಬಹು ಶೀಲ ಮಾಡುವವರೂ ಕೂಡ ಕೂಲಿ ಕಾರರಾಗಿಹರೆಂದಲ್ಲಿ ಇವರಾರು ಅಸಾಧ್ಯವಾದುದನ್ನು ಸಾಧಿಸಿದವರಲ್ಲವೆಂದು ಸಿದ್ಧವಾಗುತ್ತದೆ.

ಓ ಲಿಂಗಯ್ಯನೆ ನೀನು ಅಘಟಿತ ಘಟಿತನು, ಮೇಲೆ ವಿಪರೀತ ಚರಿತ್ರನು ಆಗಿರುವಲ್ಲಿ ನೀನಾರಿಗೂ ಸಾಧ್ಯವಾಗದವನೆಂದರೆ, ಸಾಧ್ಯವಾದವನು. ಸಾಧ್ಯವಾದವನಾದುದರಿಂದ ನಿನ್ನ ಚಾರಿತ್ರ ವಿಪರೀತವೆಂದು ನಿರ್ಣಯಿಸಿದ್ದಾರೆ.

ಓ ಘನಗಂಭೀರ ಲಿಂಗವೆ, ನೀನಾರಿಗೆ ಸಾಧ್ಯವಾದವನು! ಲಿಂಗೈಕ್ಯ ಶರಣರಿಗೆ ಸಾಧ್ಯವಾದವನು ಓ ಇವರಾರು? ಬಸವರಸರೆ ಲಿಂಗೈಕ್ಯ ಶರಣರಾದುದು ಅಹುದು. ಶಿವ ಲಿಂಗವೆಂದು ಬಲ್ಲಾತ ಗುರು, ಶಿವ ಜಂಗಮವೆಂದು ಬಲ್ಲಾತ ಗುರು, ಶಿವ ಗುಣವೆಂದು ಬಲ್ಲಾತ ಗುರು, ಶಿವ ಶಿವಾಚಾರವೆಂದು ಬಲ್ಲಾತ ಗುರು, ಶಿವ ಪ್ರಸಾದವೆಂದು ಬಲ್ಲಾತ ಗುರು ಇಂತೀ ಪಂಚವಿಧವೆ ಪಂಚಬ್ರಹ್ಮವೆಂದು ಅರಿದ ಮಹಾಮಹಿಮ ಸಂಗನ ಬಸವಣ್ಣ ಎನಗೆಯೂ ಗುರು, ನಿನಗೆಯೂ ಗುರು. ಜಗಕ್ಕೆಲ್ಲ ಗುರು ಕಾಣಾ ಗುಹೇಶ್ವರಾ. ನಿಮ್ಮ ಶರಣನಾಗಿಹ ಬಸವಣ್ಣನವರಿಗೆ ಸಾಧ್ಯವಾಗದ ದೇವನೂ ಸಾಧ್ಯವಾದವನು ಆದುದರಿಂದ ಘನಗಂಭೀರ ಮಹಾಘನದೊಳಗೆ ಘನಕ್ಕೆ

ಘನವಾಗಿರ್ದೆನಯ್ಯ ಎಂದು ಬಿತ್ತರಿಸಿದ ಪ್ರಸಾದವಾಣಿ. ಸಾಧ್ಯವಾಗದವನು ಸಾಧ್ಯವಾಗಬೇಕಾದಲ್ಲಿ, ಶರಣರು, ಲಿಂಗವನ್ನು ಶಿವನೆಂದು, ಶಿವನೆ ಗುರು, ಲಿಂಗ, ಜಂಗಮ, ಪ್ರಸಾದ ಆಚಾರ ಎಲ್ಲವನ್ನು ಶಿವಮಯವಾಗಿ ಅರಿದ ಮಹಾಮಹಿಮ ಬಸವಣ್ಣ, ಶಿವನನ್ನು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನವಾಗಿ ಕಂಡ ಭೇದಾ ಭೇದ ವಿನಿರ್ಮುಕ್ತ ಶಿವನಾಗಿ ಕಂಡ ಅಕ್ಷರೋತ್ತಮ ತಾನಾಗಿ ಕಂಡ ಇಂತಪ್ಪ ಮಹಾಂತರಿಗೆ ಸಾಧ್ಯವಾದವನು.

ಅರಿದಿಹೆನೆಂದಡೆ ಅರುಹಿಂಗಸಾಧ್ಯ. ನೆನದಿಹೆನೆಂದಡೆ ನೆನಹಿಂಗಸಾಧ್ಯ ಭಾವಿಸಿಹೆನೆಂದಡೆ ಭಾವಕ್ಕಸಾಧ್ಯ. ವಾಙ್ಮನಕ್ಕಗೋಚರವ ನರಿವ ಪರಿ ಎಂತಯ್ಯ; ಗುರು ತೋರದನ್ನಕ್ಕರ. ಗುರು ಶಿಷ್ಯರ ಮಧ್ಯದಲ್ಲಿ ಸ್ವಯಂಜ್ಯೋತಿ ಉದಯವಪ್ಪುದೆಂಬ ಶೃತಿ ಹುಸಿಯೆ, ಕೂಡಲ ಸಂಗಮದೇವಾ ನಿಮ್ಮ ಮಹಾನುಭಾವರ ಮಥನದಿಂದ ನಿಜವ ನೆಲೆಗೊಳಿಸಾ ಪ್ರಭುವೆ.

ಅಘಟಿತ ಘಟಿತನಾಗಿಹ ಲಿಂಗಯ್ಯ, ವಿಪರೀತ ಚರಿತ್ರನಾಗಿಹ ಲಿಂಗಯ್ಯ, ಲಿಂಗ ಲಿಂಗ ಎನ್ನುವ ಲಿಂಗಾರ್ಚಕರಿಗೂ ಸಾದ್ಯವಾಗದವನು, ತಪಸ್ವಿ ತ್ಯಾಗಿಗಳಿಗೂ ಸಾಧ್ಯವಾಗದವನು. ಗುರು ಕೃಪೆಯಿಲ್ಲದವರಿಗೆ ಸಾಧ್ಯವಾಗದವನು ಕೃಪೆಯುಳ್ಳವರಿಗೆ ಸಾಧ್ಯನು. ಶ್ರೀ ಗುರು ಕೃಪೆ ವಿಪರೀತ, ತಿರುವು ಮುರುವು, ನೆನಹಿಂಗೂ, ಭಾವಕ್ಕೂ ಎಡೆಗೊಡದ ಘನ ಗುರುಕೃಪೆಯಿಂದ ಸಾಧ್ಯವು. ಅರಿಯುವ ದೃಕ್ ರೂಪಕ್ಕೂ ಸಾಕ್ಷಿ ಅರುವಿಂಗೂ ಅಸಾಧ್ಯ. ಕಾರುಣ್ಯಮಯರಿಗೆ ವಿಪರೀತ ಚರಿತ್ರವಲ್ಲ ಕೃಪಾವಿರಹಿತರಿಗ ವಿಪರೀತವು.

ಓ ಬಸವರಸ ವಿಶ್ವಗುರು ಪ್ರಥಮಾಚಾರ್ಯನಾಗಿಹ ಘನವಂತ ವಾಙ್ಮನಕ್ಕಗೋಚರವ ನರಿವ ಪರಿ ಎಂತಯ್ಯ ಗುರು ತೋರದನ್ನಕ್ಕರ ಎಂದು ಬಿತ್ತರಿಸಿರುವಲ್ಲಿ ಈ ಲಿಂಗಯ್ಯ ಆರಾರಿಗೂ ಸಾಧ್ಯವಾಗದವನು ಕೃಪಾವಂತರಿಗೆ ಸಾಧ್ಯನು.

ಓ ಲಿಂಗಯ್ಯ ಇಂಥ ಘನ ನೀನಿದ್ದು ಸಾವರ ಕೈಯಲ್ಲಿ ಪೂಜೆಗೊಂಬುದು ಲಜ್ಜೆಯಲ್ಲವೆ? ಗುಹೇಶ್ವರ ನಿಮ್ಮ ಶರಣರಲ್ಲದವರು ಸಾವುಳ್ಳವರು, ಅಮರತತ್ವದ ಹೊಲಬನರಿಯದವರು, ಅವರು ಸಾವುಳ್ಳವರು, ನೋವುಳ್ಳವರು, ಅವರ ಭಾವ ಸಾವು ನೋವುಳ್ಳ ಭಾವ, ಹುಟ್ಟು ಸಾವನ್ನೆ ಒಪ್ಪಿಕೊಂಡ ಭಾವ, ಅಪ್ಪಿಕೊಂಡ ಭಾವ, ಇಂಥ ಮರವುಳ್ಳವರ ಕೈಯಲ್ಲಿ ಪೂಜೆಗೊಂಬುದು ನಿನಗೆ ನಾಚಿಕೆ ಬೇಡವೆ?

ಅಘಟಿತ ಘಟಿತನೆ, ನೀನು ವಿಪರೀತ ಚರಿತ್ರನು ಅರಸುವವರಿಗೆ ಸಾಧ್ಯವಾಗದವನು, ಅರು ಹೃದಯದವರಿಗೆ ಸಾಧ್ಯನು. ಲಿಂಗ ಸಕೀಲ ಸಂಯೋಗ ವರ್ಮಸ್ಥಲ ಅರಿಯದವರಿಗೆ ಅಸಾಧ್ಯನು; ಲಿಂಗವರಿತವರಿಗೆ ಸಾಧ್ಯನು. ಇದು ಕಾರಣ ಲಿಂಗವರಿಯುವ ಭಾಗ್ಯ ವಿರಳವಾಗಿದೆ. ಲಿಂಗವೆಂಬುದು ವಾಙ್ಮನೋತೀತವು ನೆನಹಿಂಗೂ ನಿರ್ಣಯಕ್ಕೂ, ಚಿಂತನಕ್ಕೂ ಭಾವಕ್ಕೂ ಅರುವೆಂಬುದಕ್ಕೂ ಸಾಧ್ಯವಾಗದವನಾದುದರಿಂದ ಅಘಟಿತನು, ಸಚ್ಚಿದಾನಂದ ನಿತ್ಯ ಪೂರ್ಣ ಅಖಂಡ,

ಅನುಪಮವೆಂದು ಅನುಸಂಧಾನ ಮಾಡುವವರಿಗೂ ಸಾಧ್ಯವಾಗದ್ದರಿಂದ ಅಘಟಿತನಾಗಿರುವಲ್ಲಿ ಮಡಿನೀರಿನಿಂದ ಮಜ್ಜನಗೈವವರಿಗೆ ಭಸ್ಮ, ಗಂಧ, ಧೂಪ, ದೀಪದಿಂದ ಪತ್ರಿ, ಪುಷ್ಪಗಳಿಂದ ಪೂಜಿಸುವವರಿಗದೆಂತು ಸಾಧ್ಯವು?

ಗುರು ಕೃಪೆಯುಳ್ಳವರಿಗೆ ಸಾಧ್ಯನು. ಗುರುಗಳೆಂದರೆ ಬಹುವಾಗಿಹರು, ಅರುಹೃದಯ ಕಣ್ತೆರೆಯಬೇಕೆಂದು ಗುರುವೆಂದು ಕಲ್ಪಿಸಿಕೊಂಡೆನಲ್ಲದೆ ಗುರುವಿಂಗೆ ಶಿಷ್ಯನೆಂಬುದುಂಟೆ? ಶಿಷ್ಯಂಗೆ ಗುರುವೆಂಬುದುಂಟೆ? ಗಮನಾ ಗಮನ ನಾಸ್ತಿಯಾದ ಲಿಂಗಕ್ಕೆ ಅಂಗವೆಲ್ಲಿಯದೋ, ಗುಹೇಶ್ವರಾ.

ಗುರುಗಳೆಂಬುದು, ಅರು ಹೃದಯುದ ಕಣ್ಣು ತೆರೆಯಿಸುವವರು, ನಿಶಬ್ದವೇದಿಗಳು ಶೃತಿಗೆ ಮೀರಿದವರು ಮರುವರುವಿಂಗೆ ಮೀರಿದ ಘನವಾಗಿಹ ಶಬ್ದ ಮುಗ್ಧರು ಧ್ಯಾನಾತೀತರು. ಗುರು ಶಿಷ್ಯತ್ವ ಕಾಣದವರು ಎಡೆಯಿಲ್ಲದ ಪರಿಪೂರ್ಣವು ತಾನಾಗಿಹ ಘನವಂತ ನಿಸ್ಸೀಮ ಭಾವಕ್ಕಗಮ್ಯವಾದ ಪರತತ್ವದ ಸಕೀಲ ಸಂಯೋಗವರ್ಮಸ್ಥಲವರಿತವರು ನಿಃಶಬ್ದ ಬ್ರಹ್ಮದ ಅನುವುಳ್ಳವರು. ಅದುವೆ ತಾನಾಗಿಹ ಮಹಾಂತನೆ ಗುರುಘನನು, ಈ ಘನವಂತನ ನಿಲುವು ಏನೊಂದಾಗದ ನಿಲವು ತನ್ನ ವಿನಃ ಅನ್ಯವ ಕಾಣದ ನಿಲವು, ಸ್ವಯಂಜ್ಯೋತಿ ತಾನು ಸಕಲವು ಸ್ವಯಂಜ್ಯೋತಿಯಾಗಿಹ ನಿಲವು, ಉಪಮಿಸದ ನಿಲುವು ಆದುದರಿಂದ ಗುರುಘನನು. ಅನಿಮಿಷ ದೇವ ದೇವನ ಕೃಪೆ ಪ್ರಭುವಿಂಗಾದುದು ಬಸವಣ್ಣನ ಕೃಪೆ. ಚೆನ್ನಬಸವಣ್ಣಂಗಾದುದು. ಚಿಕ್ಕದಣ್ಣಾಯಕರ ಕೃಪೆ ಸಿದ್ಧರಾಮೇಶ್ವರಿಂಗಾದುದು. ಶಿವಯೋಗ ಶಿದ್ಧರಾಮನ ಕೃಪೆ ಹಾವಿನಾಳ ಕಲ್ಲಯ್ಯಂಗಾದುದು. ಹೀಗೆ ಶ್ರೀ ಗುರು ಕೃಪೆಯಿಂದ ಅಸಾಧ್ಯವ ಸಾಧ್ಯವಾದುದು. ಸಾಧ್ಯವಾಗದವನು ಸಾಧ್ಯವಾಗುವದು. ಹೀಗೆ ಲಿಂಗವರಿತು ಲಿಂಗವೆ ಆಗಿಹ ಇನ್ನು ಅನೇಕ ಶರಣ ಶರಣೆಯರಲ್ಲಿ ಮುಕ್ತಾಯಕ್ಕ, ಅಕ್ಕಮಹಾದೇವಿ, ನೀಲಾಂಬಿಕೆ, ಲಕ್ಕಮ್ಮ, ಮೋಳಿಗೆ ಮಾರಯ್ಯ, ಮಹಾದೇವಮ್ಮ, ಲಿಂಗವರಿತ ನಿಃಶಬ್ದವೇದಿಗಳು. ಇವರೆ ಅಘಟಿತ ಘಟಿತರು ಎಂದು ಲಿಂಗಯ್ಯನಿಗೆ ಸಂಬೋಧಿಸಿದವರು ಶರಣರು ಶರಣೆಯರು. ಇದಲ್ಲದೆ ವಿಪರೀತ ಚರಿತ್ರನು ಎಂದು ಬೋಧಿಸಿದರು.

ವೀರಶೈವರಲ್ಲಿ ಎಷ್ಟೊ ಭಕ್ತ ಜಂಗಮಲಿಂಗವುಂಟು. ಲಿಂಗಧಾರಿಗಳು ಲಿಂಗಾರ್ಚಕರು ಉಂಟು, ಲಿಂಗಯ್ಯನಿಗೆ ಅಘಟಿತ ಘಟಿತನು ವಿಪರೀತ ಚರಿತ್ರನು ಎಂದು ಸಂಬೋಧಿಸುವವರು ಶಿಕ್ಕುವುದು ವಿರಳ. ಲಿಂಗವದು, ವಿಪರೀತ ಚರಿತ್ರ ಇದು ಪ್ರಪಂಚದವರ ಚರಿತ್ರೆಗೂ ಸೇರಿದುದು ಅಲ್ಲ. ಪರಮಾರ್ಥದವರ ಚರಿತ್ರೆಗೂ ಸೇರಿದುದಲ್ಲ. ಲಿಂಗವಾಗಿ ಲಿಂಗವರಿತವರ ಚರಿತ್ರ ಅನುಪಮ ಚರಿತ್ರ ಏನೊಂದುಸರಲು ಎಡೆಗೊಡದ ಚರಿತ್ರೆ. ನಡೆಯಿಲ್ಲದ ನುಡಿಯಿಲ್ಲದ ಗುರುವಿನ ಕೈಯಲ್ಲಿ ಉಪದೇಶ ತೆಗೆದುಕೊಂಡ ಚರಿತ್ರ. ಮುಟ್ಟಲಿಲ್ಲದ ಹಸ್ತಮಸ್ತಕ ಚರಿತ್ರ. ಹೂಸಲಿಲ್ಲದ ವಿಭೂತಿ ಪಟ್ಟಿಯಿಂದೊಡಗೂಡಿದ ಚರಿತ್ರ. ಕೇಳಿಲಿಲ್ಲದ ಕರ್ಣಮಂತ್ರದ ಚರಿತ್ರ. ಪೂಜೆಗೆ ಬಾರದ ಲಿಂಗದ ಚರಿತ್ರ. ಆಗಮವಿಲ್ಲದ ದೀಕ್ಷದ ಚರಿತ್ರ, ಸಂಗವಿಲ್ಲದ ಸಂಬಂಧ ಸಯವಪ್ಪ

ಚರಿತ್ರ. ಇದು ವಿಪರೀತ ಚರಿತ್ರ ಇದು ಅಚಿಂತ್ಯ ಚರಿತ್ರ ಶಬ್ದಮುಗ್ಧ ಚರಿತ್ರ ಅರಿಯದರುವುಳ್ಳವರ ಚರಿತ್ರ ಏನೆಂದೆನಲಿಲ್ಲದ ಅರುವಿನ ಚರಿತ್ರೆ ಲಿಂಗಚರಿತ್ರೆ ವಿಪರೀತ.

ಓ ಲಿಂಗಯ್ಯನೆ ನೀನು ಘನಗಂಭೀರ ಮಹಾಘನನಿದ್ದು ಸಾವರ ಕೈಯಲ್ಲಿ ಪೂಜೆಗೊಂಬುದೆ! ನೀನು ದೇಹಬುದ್ಧಿಯುಳ್ಳವರ ಕೈಯಲ್ಲಿ ಪೂಜೆಗೊಂಬುದೆ ದೇಹಿ! ನಾನೆಂಬ ಬುದ್ಧಿಯುಳ್ಳವರ ಕೈಯಲ್ಲಿ ಪೂಜೆಗೊಂಬುವದೆ? ಇವರೆಲ್ಲ ನಿನ್ನ ಘನವ ನರಿಯದವರಾದುದರಿಂದ ಸಾವುಳ್ಳವರು ಇವರ ಕೈಯಲ್ಲಿ ಪೂಜೆಗೊಂಬುದೆ? ಅಕ್ಷರೋತ್ತಮ ನೀನಾಗಿದ್ದು, ಕ್ಷರಮತಿಯುಳ್ಳವರ ಕೈಯಲ್ಲಿ ಪೂಜೆಗೊಂಬುದೆ? ಅಕ್ಷರ ಮತಿಯುಳ್ಳವರ ಕೈಯಲ್ಲಿ ಪೂಜೆಗೊಂಬುವದು ನಿನಗೆ ನಾಚಿಕೆ ಬೇಡವೆ? ನೀನೆತ್ತ, ನಿನ್ನ ಇರುವೆತ್ತ, ಸಾಯದವ ನೀನೆತ್ತ, ಸಾಯುವವರು ಇವರೆತ್ತ. ಅಮರನೆತ್ತ ಮರಣವುಳ್ಳವರೆತ್ತ, ಎತ್ತಣದಿಂದತ್ತ ಭ್ರಾಂತರೆತ್ತ ನಿಭ್ರಾಂತಿ ಎತ್ತ ನಾಮ ಪ್ರೇಮಗಳೆತ್ತ ಅನಾಮಯವಾಗಿರುವ ನಿರ್ವಾಣವೆತ್ತ, ನುಡಿಯಿಂದುಕ್ತರಾದವರೆತ್ತ, ನುಡಿಗೆಡೆಗೊಡದ ಘನವೆತ್ತ ವಾಣಿ ಪ್ರಿಯರೆತ್ತ ನಿಶಬ್ದವೇದವೆತ್ತ ಇವರು ಮಜ್ಜನಕ್ಕೆ ಪ್ರಿಯರಾದವರು, ನೀನು ಮಜ್ಜನಕ್ಕೆ ದೂರ. ಇವರ ಕೈಯಿಂದ ಪೂಜೆಗೊಳ್ಳಲು ಲಜ್ಜೆ ಇಲ್ಲವೆ ಎಂದು ಪ್ರಭುದೇವರು ಹೇಳಿದುದು.

**ವಚನ 20**

**ಅಪರಮಿತದ ಕತ್ತಲೆಯೊಳಗೆ ಪರಿಮಿತವ ಬೆಳಗನಿಕ್ಕಿದಡೆ**
**ಬೆಳಗೂ ಅದೆ ಕತ್ತಲೆಯೂ ಅದೆ!**
**ಇದೇನೂ ಚೋದ್ಯವೊ! ಒಂದಕ್ಕೊಂದಂಜದು!**
**ಆನೆಯೂ, ಸಿಂಹವೂ ಒಂದಾಗಿ ಉಂಬುದ ಕಂಡು**
**ಬೆರಗಾದೆನು ಗುಹೇಶ್ವರಾ. ॥ 499 ॥**

**ತಾತ್ಪರ್ಯ:** ಅಪರಮಿತ ಕತ್ತಲೆಯೊಳಗೆ ವಿಪರೀತ ಬೆಳಗವ ನಿಕ್ಕಿದವರಾರೊ: ಅಪರಮಿತ ಕತ್ತಲೆ, ಇದಾವ ಕತ್ತಲೆ, ಇದು ಬಾಹ್ಯ ಬೆಳಕಿಗೆ ಇಲ್ಲವಾಗುವ ಕತ್ತಲೆಯಲ್ಲ, ಈ ಕತ್ತಲು ವಿಚಿತ್ರ ಕತ್ತಲು ಮಿತಿಮೀರಿದ ಕತ್ತಲೆ. ಈಶ ಸೃಷ್ಟಿಯು ಕತ್ತಲೆಯಲ್ಲಿ ಮುಳುಗಿಹುದು.

ಸೂರ್ಯ ಚಂದ್ರ ತಾರೆಗಳು, ವಿದ್ಯಾದೀಪಂಗಳು, ಹಠಯೋಗಿಗಳು, ಅಭ್ಯಾಸದಲ್ಲಿ ಕಾಣುವ ಅಂತರ ಪ್ರಕಾಶ ಹಳದಿ, ಕೆಂಪು ನೀಲಿ, ಕೇಶರಿ, ಶುಭ್ರವಿರಲಿ, ಧೂಮ್ರವಿರಲಿ, ಇವುಗಳೂ ಕೂಡ ಅಪರಮಿತ ಕತ್ತಲೆಯ ಹೋಗಲಾಡಿಸವು. ಸದ್ಗುರುದೇವ ಅಪರಿಮಿತ ಕತ್ತಲೆಯ ಕಳೆಯಲು ಅರುವ ಅರಿಯ ಹೇಳಿ ಇಷ್ಟಲಿಂಗವ ಕೊಟ್ಟರೂ ಅದು ಕುರುಹಾಗಿಯೆ ಉಳಿಯಿತಲ್ಲದೆ  ಬೆಳಗಿನ ಬೆಳಗಾಗಲಿಲ್ಲ. ಇದು ಕಾರಣ ಅರುವ ಅರಿಯದವರೆಲ್ಲ ಅಪರಮಿತ ಕತ್ತಲೆಯಲ್ಲಿಯೆ ವಾಸ, ಮರುವಿನಲ್ಲಿ ವಾಸ. ತಾವಾರೆಂದರಿಯದ ವಾಸವೆ ಅಪರಮಿತ ಕತ್ತಲೆಯ ನಿವಾಸ, ನಾಮ, ರೂಪಂಗಳಿಗೆ ಒಪ್ಪಿ ಅಸ್ತಿ, ಭಾತಿ, ಪ್ರಿಯವೆಂಬ ಸತ್ಯವ ಮರೆತಿರುವವರದು ಅಪರಮಿತ ಕತ್ತಲೆಯಲ್ಲಿ ನಿವಾಸ.

ಪ್ರಪಂಚವೆಲ್ಲ, ಪರಮಾರ್ಥ ಹೃದಯ, ಅರು ಹೃದಯವಾಗಿದ್ದರೂ ಅರುವನ್ನು ಅರಿಯುವ ಹೃದಯವಾಗಿದ್ದರೂ ಅದನ್ನು ತಿಳಿಯದೆ ನಾಮರೂಪವು ತಾನಾಗಿರುವದೆ ಕತ್ತಲೆ. ಇದು ಅಪಾರ ಕತ್ತಲೆಯಾದುದರಿಂದ ಮಾನವರು, ದಾನವರು, ದೇವತೆಗಳು ದೇವಗಣರು ರುದ್ರಗಣರು ಪ್ರಮಥ ಗಣಾದಿಗಳಲ್ಲಿಯೂ ಕೂಡ ಬಹಳಷ್ಟು ಕತ್ತಲೆಯಲ್ಲಿಯೆ ವಾಸ.

ಆರು ಅರು ಹೃದಯರಾಗಿ ಅರುವ ಅರಿತವರು ಮಾತ್ರ (ಇಷ್ಟಲಿಂಗ)ವ ತಿಳಿದವರು, ಬೆಳಗಿನ ಬೆಳಗುಳ್ಳವರು. ಆ ಮಹಾಂತರೆ ಅಪರಮಿತ ಕತ್ತಲೆಯೊಳಗೆ ವಿಪರೀತ ಬೆಳಗನಿಕ್ಕದವರಾರೊ ಎಂದು ಪ್ರಶ್ನಿಸಿದರು. ಅರುವ ಅರಿಯದವರಿಗೆ ಈ ಪಿಂಡಾಂಡ ಬ್ರಹ್ಮಾಂಡ ಈರೇಳು ಲೋಕಂಗಳೆ ನಾಮ ರೂಪದಿಂದುಕ್ತವಾಗಿರುವುದರಿಂದ ಅಪರಮಿತ ಕತ್ತಲೆಯೊಳಗೆ ಇವೆ. ಇದ್ದ ಅಸ್ತಿ, ಭಾತಿ, ಪ್ರಿಯದೊಳಗೆ ಇಲ್ಲದ ನಾಮರೂಪವ ಎಲ್ಲಿಯವರೆಗೆ ಕಾಣುವನು ಅಲ್ಲಿಯವರೆಗೆ ಅಪರಮಿತ ಕತ್ತಲೆಯು.

ಆವುದು ಸುದಿನ? ಅಪರಮಿತ ಕತ್ತಲೆಯೊಳಗೆ ವಿಪರೀತದ ಬೆಳಗವ ನಿಕ್ಕಿದವರಾರೊ? ಎಂದು ತನ್ನೊಳಗೆ ಕಂಡುದೆ ಸುದಿನ, ಅರುವ ಅರಿಯಹೋದುದೆ ಸುದಿನ. ಇದು ವಿಪರೀತದ ಬೆಳಗು ಈ ಬೆಳಗಿಗೆ ಏನನ್ನಬೇಕು? ಇದು ಬೆಳಗುವದು ನೋಡಹೋದ ಹೃದಯಕ್ಕೆ ವೇದ್ಯವಾಗುವ ಬೆಳಗು. ಇದು ವರ್ಣಾತೀತ. ಇದು ಹಠಯೋಗಿ ತನ್ನ ಅಭ್ಯಾಸ ಕಾಲದೋಳ್ ಕಾಣುವ ಬೆಳಗು ಅಲ್ಲ. ವೇದ, ಪುರಾಣ, ಶಾಸ್ತ್ರಾಧ್ಯಯನ ಮತಿಗೂ ಕಾಣದ ಬೆಳಗು. ತನ್ನ ಅರಿಯಹೋದವರಿಗೆ ತಾನೆ ಆದ ಜ್ಞಾನ ಸ್ವರೂಪ. ಇದು ಉದಯಾಸ್ತವೆನ್ನದೆ ಬೆಳಗುವ ಬೆಳಗು. ಜಗವು ತೋರಲಿ ತೋರದಿರಲಿ ಅದು ಹುಟ್ಟಲಿ ಹುಟ್ಟದಿರಲಿ, ನಾಶವಾಗಲಿ, ನಾಶವಾಗದಿರಲಿ, ಇವುಗಳ ಆಲಂಬನವಿಲ್ಲದೆ ನಿರಂತರವಾಗಿ ಬೆಳಗುವ ಮಂಗಲಮಯ ತತ್ವವೆ ವಿಪರೀತದ ಬೆಳಗು. ಇದು ಇರದ ಸ್ಥಾನ, ಕಾಲ, ವಸ್ತುವಿಲ್ಲ. ಎಲ್ಲ ದೇಶ, ಎಲ್ಲ ಕಾಲ, ಎಲ್ಲ ವಸ್ತುಗಳಲ್ಲಿ ನಿರಂತರ ಬೆಳಗುವ ಬೆಳಗೆ ಚೈತನ್ಯ. ಈ ಘನ ಚೈತನ್ಯವು ಸ್ಥಾವರ ಜಂಗಮರೂಪಿ ಅಪರಮಿತ ಕತ್ತಲೆಯೊಳಗೆ ಇಕ್ಕಿದವರಾರೊ? ಈ ಘನ ಚೈತನ್ಯರೂಪಿ ವಿಪರೀತ ಬೆಳಕಿನಿಂದ ಬೆಳಕು, ಕತ್ತಲು ಇವೆರಡು ಸಿದ್ಧವಾಗುವುವು. ಇದು ಕಾರಣ ಇದು ಬೆಳಕಾಗಿದೆ ಅರುವಿಂಗೂ ಅರುವಾಗಿದೆ. ಕತ್ತಲೆಗೂ ಬೆಳಕಾಗಿದೆ. ಇದು ಬೆಳಕೆನ್ನದೆ ಕತ್ತಲೆ ಎನ್ನದೆ ಸದಾ ಸರ್ವತ್ರ ಬೆಳಗುವ ಮಹಾಬೆಳಗೆ ಅಖಂಡ ಬೆಳಗು. ಸೀಮಾತೀತವಾದ್ದರಿಂದ ಬೆಳಕೂ ಇದೆ, ಕತ್ತಲೆಯೂ ಇದೆ, ಇದೇನು ಚೋದ್ಯವೊ ಒಂದಕ್ಕೊಂದಂಜವು. ಇಲ್ಲಿ ಇರುವಿಕೆ ಆಶ್ಚರ್ಯವಾಗಿದೆ. ಏಕೆಂದರೆ ಬೆಳಕು ಇದ್ದಲ್ಲಿ ಕತ್ತಲು ಇಲ್ಲ. ಕತ್ತಲೆ ಇದ್ದಲ್ಲಿ ಬೆಳಕು ಇಲ್ಲ. ಇಲ್ಲಿ ಎರಡು ಒಂದೆ ಸ್ಥಾನದಲ್ಲಿದ್ದುದ ಕಂಡು ಆಶ್ಚರ್ಯವಾಗಿದೆ. ಇದಲ್ಲದೆ ಒಂದಕ್ಕೊಂದು ಅಂಜದೆ ಇದ್ದುದ ಕಂಡು ಆಶ್ಚರ್ಯವಾಗಿದೆ. ಇದು ದ್ವಂದ್ವ ದೃಷ್ಟಿ ಇಲ್ಲಿ ನಿತ್ಯಾನಿತ್ಯ ವಿವೇಕಕ್ಕವಕಾಶ ಮಾಡಿಕೊಂಡ ನಿತ್ಯ ನಾನು, ಸಚ್ಚಿದಾನಂದ ನಾನೆಂಬ ಜ್ಞಾನವು ಇದೆ. ಇತ್ತ ಅವಿಚಾರಕ್ಕೆಡೆಮಾಡಿಕೊಂಡ

ನಾಮರೂಪವ ಕಾಣುವ ಅಜ್ಞಾನವು ಇದೆ. ಜ್ಞಾನರೂಪಿ ಬೆಳಕು ಇದೆ. ಅಜ್ಞಾನರೂಪಿ ಕತ್ತಲೆಯಿದೆ.

ಇಲ್ಲಿ ದೇಹ ಬುದ್ಧಿ ಇದೆ, ಆತ್ಮ ಬುದ್ಧಿಯು ಇದೆ. ಇವು ಒಂದಕ್ಕೊಂದಂಜವು ಎಲ್ಲಿಯವರೆಗೆ ಮರವರವಿಂಗೆ ಮೀರಿದ ಘನಕ್ಕೆ ಘನವಾದ ಅರಿವು ತನ್ನಿಂದ ತನಗೆ ವೇದ್ಯವಾಗುವದಿಲ್ಲ. ಅಲ್ಲಿಯವರೆಗೆ ಬೆಳಕು ಕತ್ತಲೆಯಿಂದುಕ್ತವಾದ ಮಿಶ್ರ ಹೃದಯ. ಆವಲ್ಲಿ ಅಪ್ರಮಾಣಗಮ್ಯವಾಗಿಹ ಅಚಿಂತ್ಯ ಪದ ತನ್ನಿಂದ ತನಗೆ ವೇದ್ಯವಾಗುವದು, ಆಗ ತನ್ನಿರುವುಳ್ಳ ಸ್ವಮಹಿಮೆಯು ಸಿದ್ಧಿಸುವದು.

ಆನೆಯು, ಸಿಂಹವು ಒಂದಾಗಿ ಉಂಬುದು ಕಂಡು ಬೆರಗಾದೆ ಗುಹೇಶ್ವರಾ. ಇಲ್ಲಿ ಜೀವಬ್ರಹ್ಮರೇಕತ್ವ ನಿಲಯ, ಎರಡೊಂದಾದ ನಿಲಯ, ಚಿದಾಭಾಸವು, ಚಿತ್ ಸ್ವರೂಪವು, ಒಂದಾಗಿ ಉಂಬುದು ಕಂಡು ಬೆರಗಾದೆನೆಂದು ಪ್ರಭು ಹೇಳಿದುದು. ಜೀವನೆಂಬ ಚಿದಾಭಾಸನು ನಿರಂತರವಾಗಿರುವ ಮಂಗಳಮಯ ತತ್ವವು ಚಿತ್ ಸ್ವರೂಪವು ನಿರಂತರವಾಗಿಹ ಮಂಗಳಮಯ ತತ್ವ ಎರಡಿಲ್ಲದ ಘನವನೇನೆಂಬೆ ಅಂಗದುದಯ ಲಿಂಗದ ಸುಖ. ಲಿಂಗದುದಯ ಅಂಗದ ಸುಖ. ಮಿಕ್ಕಿ ಮೀರಿನಿಂದ ನಿಲವು ಏನೆಂಬೆನೇಂಬೆ, ಇದುವೆ ಆನೆಯು ಸಿಂಹವು ಒಂದಾಗಿ ಉಂಡುದು ಬೆರಗು ನೋಡಯ್ಯ. ಪ್ರವೃತ್ತಿರೂಪ ಪ್ರಪಂಚ ತೋರಲಿ ನಿವೃತ್ತಿರೂಪ ಪರಮಾರ್ಥ ತೋರಲಿ, ಆವುದು ತೋರಿದರೂ, ಒಂದಾಗಿ ಉಂಬುದು ಇದುವೆ ಆನೆಯು ಸಿಂಹವೂ ಒಂದಾಗಿ ಉಂಬುದು ಎಂದು ಹೇಳಿಹರು ಇದುವೆ ಬೆರಗು ನೋಡಯ್ಯ.

**ವಚನ 21**

**ಪರಿಣಾಮದೊಳಗೆ ಮನದ ಪರಿಣಾಮವೆ**
**ಚೆಲುವ ಸಂಗದೊಳಗೆ ಶರಣಸಂಗವೆ**
**ಚೆಲುವ ಕಾಯಗೊಂಡು ಹುಟ್ಟಿದ ಮೂಢರೆಲ್ಲ**
**ಸಾಯದ ಸಂಚವನರಿಯುವುದೆ ಚೆಲುವ ಗುಹೇಶ್ವರಾ. ॥ 538 ॥**

**ತಾತ್ಪರ್ಯ:** ಪರಿಣಾಮದೊಳಗೆ ಮನದ ಪರಿಣಾಮವೆ ಚೆಲುವ: ಮನ ಇದಾವ ಮನ? ಮನವೆಂಬುದು ಸಂಕಲ್ಪ, ವಿಕಲ್ಪದಿಂದುಕ್ತವಾದುದು. ಇಲ್ಲದುದು ಕಲ್ಪಿಸುವದು, ಇದ್ದುದನರಿಯದಿಹದು ವಿಕಲ್ಪ, ಇವೆರಡು ಮನದ ಅಲೆಗಳು, ಇವೆರಡು ನಷ್ಟವಾದುದೆ ಮನದ ಪರಿಣಾಮ, ಇದು ಇಲ್ಲದುದು ಕಲ್ಪಿಸುವಾಗ ಪ್ರವೃತ್ತಿ ಮುಖವುಳ್ಳದ್ದಾಗುವದು. ಇದ್ದುದನರಿಯ ಹೋದಾಗ ನಿವೃತ್ತಿ ಮುಖವಾಗುವದು, ಒಮ್ಮೆ ಉಪಾಧಿ ಮನವಾಗುವದು, ಒಮ್ಮೆ ನಿರುಪಾಧಿ ಮನವಾಗುವದು, ಇವೆರಡು ನಷ್ಟವಾದುದೆ ಅರಿದಮನದ ಪರಿಣಾಮ ಅದುವೆ ಮುಕ್ತಾಯ.

**ಮನೊ ವೈ ಗಗನಾಕಾರಂ ಮನೋ ವೈ ಸರ್ವತೋ ಮುಖಮ್।**
**ಮನೋತೀತಂ ಮನಃ। ಸರ್ವಂ ನ ಮನಃ ಪರಮಾರ್ಥತಃ।**

ಮನಸ್ಸು ಗಗನದಂತೆ ಇದೆ ಹಾಗೂ ಸರ್ವತೊ ಮುಖವಾಗಿದೆ. ಹಿಂದೆ ಹೋಗಿರುವದು ಮನಸ್ಸು. ಮನಸ್ಸು ಸರ್ವವು ಆಗಿದೆ. ಪರಮಾರ್ಥ ದೃಷ್ಟಿಯಿಂದ

ನೋಡಿದರೆ ಮನವೆ ಇಲ್ಲ.

ಪರಿಣಾಮುವದು ಯಥಾರ್ಥ ನಿರ್ಣಯ, ಮುಕ್ತಾಯ ಅರ್ಥಾತ್ ಮುಕ್ತಾಯದಲ್ಲಿ ಮನದ ಮುಕ್ತಾಯವೆ ಚೆಲುವ. ಏಕೆಂದರೆ ಮನವೆಂದಲ್ಲಿ ಸಂಕಲ್ಪ ವಿಕಲ್ಪ ಪ್ರವೃತ್ತಿ ನಿವೃತ್ತಿ, ಮನದ ಪ್ರವೃತ್ತಿಯು ಗಗನದಂತಿದೆ. ನಿವೃತ್ತಿಯು ಗಗನದಂತಿದೆ. ಅದರ ಅಳತೆ ಆವ ಮಾಪಿಗೂ ಅಸಾಧ್ಯ. ಪಿಂಡಾಂಡ ಬ್ರಹ್ಮಾಂಡವಾಗಿ ತೋರುವದಕ್ಕೂ ಅದುವೆ ಮೂಲವು. ವ್ಯಷ್ಟಿ, ಸಮಷ್ಠಿಯಾಗಿ ತ್ವಂಪದ ತತ್ವಪದವಾಗಿ ತೋರಿದರೂ ಅದುವೆ ಮೂಲವು. ಪ್ರಕೃತಿ ಪುರುಷರಾಗಿ ತೋರಿದರೂ ಅದುವೆ ಮೂಲ, ವಿದ್ಯೆ ಅವಿದ್ಯೆಯಾಗಿ ನಾಲ್ಕು ವೇದಂಗಳು ದಶೋಪನಿಷತ್ತುಗಳು ಇಪ್ಪತ್ತೆಂಟು ಆಗಮಂಗಳು ಭಾವಿಕಾಲ, ಭವಿಷತ್ಕಾಲ, ವರ್ತಮಾನಕಾಲ, ಅದರ ಮುಖವೆ ಸೃಷ್ಟಿಗೆ ಕಾರಣ ಅದುವೆ ಸೃಷ್ಟಿಕಾರ್ಯ ಅದುವೆ ಬೋಧ ಅದುವೆ ಅಬೋಧ, ಅದುವೆ ಬೋಧಾ ಬೋಧಾ ಅದುವೆ ತಾನಾರೆಂದು ತನ್ನ ಅರಿವುಡೆ ಮನವು ಇಲ್ಲವೆ ಇಲ್ಲ. ಪರಿಣಾಮದೊಳಗೆ ಮನದ ಮುಕ್ತಾಯವಾದುದೆ ಚೆಲುವ. ಮನವು ಪ್ರವೃತ್ತಿ ನಿವೃತ್ತಿ, ಚಿಂತನದಿಂದುಕ್ತವಾದುದು. ಭಾವದಿಂದುಕ್ತವಾದುದು. ಮರವರುವಿನಿಂದುಕ್ತವಾದುದು, ಮೋಹ ನಿರ್ಮೋಹದಿಂದುಕ್ತವಾದುದು. ಇವುಗಳ ಮುಕ್ತಾಯವಾದುದೆ ಮನದ ಅಂದ, ಮನದ ಚೆಲುವತನ, ಮನಕ್ಕೆ ಅಚಿಂತ್ಯಪದ ದರ್ಶನವಾಗಿ ನಿಶ್ಚಿಂತವಾದ ಚೆಲುವತನ, ಮನಸ್ಸಿಗೆ ಅಕಲ್ಪಿತ ಘನದ ದರ್ಶನವಾಗಿ ತನ್ನ ಕಲ್ಪಿತ ಕೆಟ್ಟುದೆ ಚೆಲುವತನ ಭಾವಕ್ಕಗಮ್ಯವಾದುದೆ ಚೆಲುವತನ, ಮನ ಉಪಾಧಿಕ ಮನ ಉಪಾಧಿಕ ರಹಿತದಿಂದ ವಿಮುಕ್ತವಾದುದೆ ಮನದ ಪರಿಣಾಮವದು ಚೆಲುವ ಸಂಗದೊಳಗೆ ಶರಣರ ಸಂಗವೆ ಚೆಲುವ ತನ.

ಸಂಗದೊಳಗೆ ಶರಣರ ಸಂಗವೆ ಚೆಲುವ: ಸಂಗ ಆರದಾದರೂ ಮಾಡಬಹುದು. ಶರಣರ ಸಂಗ ಮಾಡುವದು ದೇವನೊಲಿತ ಚಿನ್ಹ ಶರಣನೆಂದರೆ ದೇವ ದೇವ ಅಪ್ರತಿಮ ಅಪ್ರಮಾಣಅಗಮ್ಯ ಅಕಲ್ಪಿತ ಘನ ಅಚಿಂತ್ಯಾತ್ಮ ತಾನೆ. ಇದು ಕಾರಣ ಶರಣರ ಸಂಗ, ಮಾಡುವುಡೆ ತಾನು ದೇವ ದೇವನೆ, ಅಚಿಂತ್ಯಅಪ್ರಮಾಣ ಘನನೆ, ಜ್ಯೋತಿಯ ಮುಟ್ಟುವುಡೆ ಜ್ಯೋತಿಯು ಜ್ಯೋತಿಯ ಲೊದಗಿಹ ಜ್ಯೋತಿಯಂತೆ, ಶರಣನೆಂಬ ಜ್ಯೋತಿ, ಇದು ಆವಾವ ಜ್ಯೋತಿಯಾಗದ ಸ್ವಯಂ ಜ್ಯೋತಿ, ಏನೊಂದುಸರಲು ಎಡೆಗೊಡದ ಜ್ಯೋತಿ, ಘನಕ್ಕೆ ಘನವಾಗಿಹ ಜ್ಯೋತಿ, ಈ ಸ್ವಯಂಜ್ಯೋತಿ ಸಂಗ ಮಾಡುವುಡೆ ತಾನು ಘನಕ್ಕೆ ಘನ ಅರುವಿನ ಅರುವು ತಾನೆ.

ಕಾಯಗೊಂಡು ಹುಟ್ಟಿದ ಮೂಢರೆಲ್ಲ ಸಾಯದ ಸಂಚವನರಿವುಡೆ ಚೆಲುವ ಗುಹೇಶ್ವರ: ಕಾಯಗೊಂಡವರು ಇವರಾರು ತನ್ನೊಳಿಲ್ಲದ ಕಾಯವೆಂದು ಕಲ್ಪಿಸಿಕೊಂಡವರು ಇವರು ಕಾಯ ಗೊಂಡವರು. ಕಾಯ ಹುಟ್ಟಿದರೆ ತಾನು ಹುಟ್ಟಿದೆನೆನ್ನುವವ, ಕಾಯ ಸತ್ತರೆ ತಾನು ಸತ್ತೆನೆನ್ನುವವ, ಕಾಯದ ಆಗು ಹೋಗುಗಳೆಲ್ಲ ತಾನೆ ಆಗುವವರು. ಶುಭಾಶುಭಗಳನ್ನು ಕೊಡುವ ಕಾಯ ಕರ್ಮ ತಾನಾದವನು, ಶುಭ ಅಶುಭಗಳನ್ನು ಕೊಡುವ ಮಾನಸಿಕ ಕರ್ಮ ತಾನಾದವನು, ಶುಭಾಶುಭಗಳನ್ನು

ಕೊಡುವ ವಾಚಕ ಕರ್ಮ ತಾನಾದವನು ಇವಾವು ತಾನಾಗದವನು, ತಾನು ಶುದ್ಧನು, ಅತೀಂದ್ರಿಯನು ಜ್ಞಾನಾಮೃತ ತಾನಾಗಿದ್ದರೂ ತನ್ನನ್ನು ತಾನು ಚೆನ್ನಾಗಿ ಅರಿಯದವನೆ ಕಾಯಗೊಂಡು ಹುಟ್ಟಿದ ಮೂಢರು ಇವರ ಅಮರತತ್ವ ಅರಿವುಡೆ ಚೆಲುವು ಸಾಯದ ತತ್ವ ಸಾಯದ ರಹಸ್ಯ ತಿಳಿವುಡೆ ಚೆಲುವ ಗುಹೇಶ್ವರಾ.

ಸಾಯದ ರಹಸ್ಯವೆಂದಡೆ ನಿರಂತರವಾಗಿರುವ ಮಂಗಳಮಯವಾಗಿಹ ಪರತತ್ವ ಅರಿವುಡೆ ತಾನೆ, ಏನೊಂದುಸರಲು ಎಡೆಗೊಡದ ತಾನು ಚಿಂತನಕ್ಕೆಡೆಗೊಡದ ತಾನು, ನೆನಹು ನಿರ್ಣಯಕ್ಕೆಡೆಗೊಡದ ತಾನು ಆವಾವ ಭಾವಕ್ಕಿಂಬುಗೊಡದ ತಾನು ಇದು ತನ್ನಿಂದ ತನಗೆ ತಿಳುವುದೆ ಸಾಯದ ಸಂಚವ ಅರಿತವನು ಅವನೆ ಚೆಲುವ ಗುಹೇಶ್ವರಾ. ಸಾಯದ ರಹಸ್ಯವೆಂದಡೆ ತನ್ನಿಂದ ತನ್ನ ಅರಿದು ನುಡಿಗೆಡೆಗೊಡದ ಘನ ತಾನಾದುದೆ ತನಗೆ ಚೆಲುವ ಗುಹೇಶ್ವರ.

**ವಚನ: 22**

**ಅಂಗ ಲಿಂಗದಲ್ಲಿ ತರಹರವಾಗಿ**
**ಸಮತೆ ಶಾಂತಿಯಲ್ಲಿ ತರಹರವಾಗಿ**
**ಮನ ಜ್ಞಾನದಲ್ಲಿ ತರಹರವಾಗಿ,**
**ಭಾವ ನಿರ್ಭಾವದಲ್ಲಿ ತರಹರವಾಗಿರಬಲ್ಲಡೆ**
**ಆತನೆ ಅಚ್ಚ ಶರಣ ಕಾಣಾ ಗುಹೇಶ್ವರ ॥ 540 ॥**

**ತಾತ್ಪರ್ಯ:** ಅಂಗ ಲಿಂಗದಲ್ಲಿ ನಿಲುಗಡೆಯಾಗಿಹ ಅಂಗ, ಅದಾವ ಲಿಂಗ? ಸ್ಥೂಲಾಂಗವೆನ್ನಲೆ? ಬಾರದು ಸೂಕ್ಷ್ಮಾಂಗ ಎನ್ನಲೆ? ಬಾರದು, ಕಾರಣಾಂಗವೆನ್ನಲೆ? ಬಾರದು ಹಾಗಾದರೆ ಅದಾವ ಅಂಗ? ಆ ಅಂಗ ಈ ಪೂಜಾಲಿಂಗದಲ್ಲಿ ನಿಲುಗಡೆಯಾಗಿರುವದೇ? ಇಲ್ಲಿ ಬಾಹ್ಯ ತೋರುವ ಅಂಗವ ಹೇಳಿಲ್ಲ ಹಾಗೂ ಪೂಜಾಲಿಂಗದ ವಿಷಯವು ಹೇಳಲಿಲ್ಲ.

ಅಂಗಲಿಂಗದಲ್ಲಿ ನಿಲುಗಡೆಯಾದುದು, ಅಂಗ ಬೇರೆ? ಲಿಂಗಬೇರೆ? ಇಲ್ಲಿಯ ರಹಸ್ಯ ಗುರು ಕರುಣೆಯಿಂದ ದೊರೆತ ರಹಸ್ಯ. ಲಿಂಗ: ಅರುವ ಅರಿಯ ಹೇಳಿದ ಗುರು ಕರುಣಿಸಿದ ಇಷ್ಟಲಿಂಗವದು ಅನುಪಮ ಲಿಂಗ, ಅಚಲಿತ ಲಿಂಗ, ಅಖಂಡಿತ ಲಿಂಗದಲ್ಲಿ ಅಂಗ ನಿಲುಗಡೆಯಾಗಿ ನಿಂತ ಘನವ ಹೇಳಿಹರು. ಅಂಗ? ಇದಾವ ಅಂಗ? ತ್ಯಾಗಾಂಗ ಎನ್ನಲೆ? ಬಾರದು ಭೋಗಾಂಗ ವೆನ್ನಲೆ ಬಾರದು? ಯೋಗಾಂಗ ವೆನ್ನಲೆ? ಬಾರದು ತ್ರಿವಿಧಾಂಗಕ್ಕೂ ಮೀರಿದ ಚಿದಂಗ ಇದು, ಚಿದಂಗವೆನ್ನದ ಘನ ಇದುವೆ ಅನುಪಮ ಲಿಂಗದಲ್ಲಿ ನಿಲುಗಡೆಯಾಗಿ ನಿಂತಿದು, ಈ ಲಿಂಗವು ಲಿಂಗವೆನ್ನದ ಘನವು, ಇವೆರಡು ಕಥನಕ್ಕೆ ನಿಲುಕದ ಘನವಾದ್ದರಿಂದ ಸಮವು ಎರಡೊಂದಾದ ತೆರಹಿಲ್ಲವಾದ್ದರಿಂದ ಸಂಕೇತ ಇಲ್ಲಿ ಅರ್ಚನೆಯಿಲ್ಲ. ಅರ್ಪಿತವಿಲ್ಲ, ಅವಧಾನವಿಲ್ಲ ಶಬ್ದಕ್ಕೆ ತೆರಹಿಲ್ಲವಾದ್ದರಿಂದ ಆರಾಗಿ ಆರಿಗೆ ಪೂಜಿಸುವದು. ಅರ್ಪಿಸುವದು ಎಚ್ಚರಿಸುವದು ಆವಲ್ಲಿ ಎರಡೊಂದಾಗಿಹವು ಅಲ್ಲಿ ಸಮತೆ ಸ್ಥಾಯಿಯಾಗಿಹುದು.

ಸಮತೆ ಸ್ಥಾಯಿಯಾದಲ್ಲಿ ಶಾಂತಿಯ ಸ್ಥಾಪಿತವು ನಿಲುಗಡೆಯು ಸಮತೆಯ

ಘನವ ನೋಡಿರೆ? ಅಂಗವೆಂದರದುವೆ, ಲಿಂಗವೆಂದರದುವೆ, ಚೇತನರೆಂದರದುವೆ, ಚೈತನ್ಯ ಪ್ರಕೃತಿ ಅದುವೆ ಪುರುಷ ಅದುವೆ ಕ್ಷರ ಅದುವೆ ಅಕ್ಷರದುವೆ ಜೀವ ಅದುವೆ ಈಶ್ವರ ಅದುವೆ ಉಪಾಧಿ ಅದುವೆ. ನಿರುಪಾಧಿ ಅದುವೆ, ಸಾಕಾರ ಅದುವೆ, ನಿರಾಕಾರ ಅದುವೆ, ಬಂಧ ಅದುವೆ, ಮೋಕ್ಷ ಅದುವೆ, ಸಮತೆ ಅದುವೆ. ವೇದವೇದಾಂತಗಳಿಗ ಸಾಧ್ಯವಾಗಿಹ ಅನುಪಮ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ. ಅರಿವುಡೆ ತಾನೆ ತನ್ನೊಳ ತೋರುವ ಕಲ್ಪಿತ ತಾನೆ, ಅಧಿಷ್ಠಾನದಲ್ಲಿ ತೋರುವ ಕಲ್ಪಿತ ತಾನೆ. ತಾನೆ ಅಧಿಷ್ಠಾನವಾದ್ದರಿಂದ ತನ್ನೊಳ ತೋರುವ ಕಲ್ಪಿತ ತಾನೆ. ಸಕಲ ತಾನೆ ನಿಃಕಲ ತಾನೆ, ಎಲ್ಲೆಲ್ಲೂ ತನ್ನ ಕಂಡುದೆ ಸಮತೆ ಸಿದ್ಧವಾದ ಸಂಕೇತ.

ಆವಲ್ಲಿ ಸಮತೆ ನೆಲೆಗೊಂಡು ಬೇರೂರಿದೆ, ಅಲ್ಲಿಯೆ ಶಾಂತಿಯು ಬೇರೂರಿದೆ, ಆದ್ದರಿಂದ ತಾನೆ ಶಾಂತನಾಗಿರುವಲ್ಲಿ ಶಾಂತನಾಗಲು ಮಾಡುವ ಕರ್ತವ್ಯ ಏತರದು? ಸಮತೆ ಸ್ಥಿರಗೊಂಡಲ್ಲಿ ಶಾಂತಿಯು ನೆಲಿಸಿದೆ. ಶಾಂತಿಯೆ ನೆಲಿಸಿ ನಿಜಧಾಮವಾಗಿರುವಲ್ಲಿ ಇನ್ನೇನಿನ್ನೇನು ಅಜ್ಞಾನಕ್ಕಿಂಬಿಲ್ಲ. ಜ್ಞಾನಕ್ಕಿಂಬಿಲ್ಲ ಮರೆತುದಿಲ್ಲ ಅರಿತುದಿಲ್ಲ, ಹುಟ್ಟಿದುದಿಲ್ಲ, ಸತ್ತುದಿಲ್ಲ, ಅಹುದಾದುದಿಲ್ಲ, ಅಲ್ಲಾದುದಿಲ್ಲ, ನಾಶವೆನಲಿಲ್ಲ, ಅವಿನಾಶಿ ಎನಲಿಲ್ಲ, ಅಂಗ ನೆನಲಿಲ್ಲ, ಲಿಂಗವೆನಲಿಲ್ಲ, ಏನೊಂದೆನಲಿಲ್ಲದ ಅರುವು ಅದುವೆ ತನ್ನಯ ಇರುವು ಆಗಿರುವಲ್ಲಿ ಶಾಂತಿಯ ಧಾಮವಾಗಿಹುದು.

ಆವಲ್ಲಿ ಶಾಂತಿಯ ನಿಜ ನಿವಾಸವಾಗಿಹುದು. ಅಲ್ಲಿ ಮನ ಜ್ಞಾನದಲ್ಲಿ ತರಹರವಾದ ಸಂಕೇತ, ಶಾಂತಾತ್ಮವಾಗಿಹ ಮನ, ಇದಾವ ಮನ, ಇದು ಸುಮನ, ಅವಿಚಾರಕ್ಕೂ ಮೀರಿದ ಮನ, ವಿಚಾರಕ್ಕೂ ಮೀರಿದ ಮನವಾದ್ದರಿಂದ ಮರವರುವಾಗದಿಹ ಮನ, ಪರಮ ಶಾಂತಿಯಲ್ಲಿ ನೆಲೆಗೊಂಡ ಮನ ಈ ಮನವೆ ಸುಖರೂಪ ಮನ ಸ್ವಸುಖವ ಸುಖಿಸುವ ಮನವಾದ್ದರಿಂದ ಜ್ಞಾನದಲ್ಲಿ ನಿಲುಗಡೆಯಾದುದು.

ಜ್ಞಾನ? ಇದಾವ ಜ್ಞಾನ, ಯತಾರ್ಥಜ್ಞಾನ ಇದ್ದ ಪರತತ್ವ ಇದ್ದಕ್ಕಿದ್ದಂತೆ ತಿಳಿದುದೆ ಸಮ್ಯಜ್ಞಾನ. ಕಲ್ಪಿತಕ್ಕೆಡೆಗೊಡದ ಜ್ಞಾನ, ಭಾವಕ್ಕಿಂಬು ಗೊಡದಿಹ ಜ್ಞಾನ. ನುಡಿಗೆಡೆಗೊಡದಿಹ ಜ್ಞಾನವಾದ್ದರಿಂದ ಅನುಪಮ ಜ್ಞಾನ. ಈ ಪರಾತ್ಪರ ಜ್ಞಾನದಲ್ಲಿ ಮನವು ಸ್ಥಿರವಾಗಿ ನಿಂತುದೆ ಭಾವ ನಿರ್ಭಾವದಲ್ಲಿ ನಿಂತ ಸಂಕೇತವು. ಭಾವ ನಿರ್ಭಾವದಲ್ಲಿ ನಿಂತುದೆ ತನ್ನಿರುವಿನ ಅರುವಿನಲ್ಲಿ ತದ್ಗತವಾದ ಸಂಕೇತ. ಭಾವವೆ ಭಾವಕ್ಕಗಮ್ಯವಾಗಿಹ ಘನವಾಗಿ ಪ್ರಜ್ವಲಿಸುವದೆ ಅಚ್ಚಶರಣನು. ಅಚ್ಚಶರಣನು ಖಂಡಾಖಂಡಸಂಯೋಗವಿಲ್ಲದ ಅಖಂಡಿತ ಘನನೆ ತಾನಾಗಿಹ ಎಲ್ಲಿ ರೂಪವಲ್ಲಿಯೆ ಲಿಂಗ ಎಲ್ಲಿ ಶಬ್ದವಲ್ಲಿಯೆ ಲಿಂಗ, ಎಲ್ಲಿ ಸೋಂಕು ಅಲ್ಲಿಯೆ ಲಿಂಗ, ಎಲ್ಲಿ ಗಂಧವಲ್ಲಿಯೆ ಲಿಂಗ, ಎಲ್ಲಿ ರುಚಿ ಅಲ್ಲಿಯೆ ಲಿಂಗವಾಗಿರುವಲ್ಲಿ ವಿಷಯುವೇತರದು. ನಿರ್ವಿಷಯವೇತರದು. ಪಂಚವಿಷಯ ಕಂಡವಂಗೆ ಭ್ರಾಂತುಂಟು. ವಿಷಯಂಗ ಲಿಂಗವಾಗಿಹ ನಿಭ್ರಾಂತನಿಗೆ ಭಾವವೇತರದು. ಭವವೇತರದು, ತಾನಾರೆಂದರಿದು, ತನ್ನಿರವು ಕರಿಗೊಂಡ ಮಹಾಂತನಿಗೆ ಅಂಗವು ತಾನೆ ಲಿಂಗವು ತಾನೆ, ಸಕಲವು

ತಾನಾಗಿ ಪ್ರಜ್ವಲಿಸುವ ಸ್ವಮಹಿಮನಿಗೆ ಎಲ್ಲಿ ನೋಡಿದಡಲ್ಲಲ್ಲಿ ತಾನಾಗಿಹ ಘನವಂತ ಅಚ್ಚಶರಣ ಕಾಣಾ ಗುಹೇಶ್ವರ ಎಂದು ಪ್ರಭುದೇವ ಹೇಳಿದುದು.

ವಚನ 23

**ನಡೆನುಡಿ ಚೈತನ್ಯವುಳ್ಳನ್ನ ಬರ**
**ಒಡಲಗುಣಗಳಾರಿಗೆಯೂ ಬಿಡವು ನೋಡಾ,**
**ನೋಡುವ ನಯನ, ಕೇಳುವ ಶ್ರೋತ್ರ**
**ವಾಸಿಸುವ ಘ್ರಾಣಕ್ಕೆ ಗಂಧಾದಿಗಳು ತಾಗಿದವೆನಬೇಡ.**
**ನೋಡುತ್ತ ನಡೆಯುತ್ತ, ಕೇಳುತ್ತ,**
**ಲಿಂಗಾರ್ಪಿತ ಮಾಡುವ ಲಿಂಗ**
**ಭೋಗೋಪ ಭೋಗಿಗೆ, ಸರ್ವಾಂಗ ಶುದ್ಧವೆಂಬುದು**
**ಇದೆ ಕಂಡಯ್ಯ. ಕಾಲತ್ರಯಂಗಳ ಜೀವತ್ರಯಂಗಳ**
**ಭಾವತ್ರಯಂಗಳನೊಂದು ಮಾಡಿ ಸುಖ ದುಃಖ**
**ಸಗುಣ ನಿರ್ಗುಣವೆಂಬುಭಯ ಲಿಂಗದಲ್ಲಿ**
**ಏಕಮಾಡಿ ಅಹುದು ಅಲ್ಲ ಬೇಕು ಬೇಡ**
**ಎಂಬ ಸಂದು ಸಂಶಯ ಕಳೆದಿಪ್ಪುದು,**
**ಕೂಡಲ ಚೆನ್ನ ಸಂಗಯ್ಯನಲ್ಲಿ ಆದಿ ಪುರಾತನರು ಮಾಡಿದ ಪಥವು.**

**ತಾತ್ಪರ್ಯ:** ನಡೆ ನುಡಿ ಚೈತನ್ಯವುಳ್ಳನ್ನಬರ ಒಡಲ ಗುಣಗಳಾರಿಗೆಯೂ ಬಿಡವು ನೋಡಾ: ಹೀಗನ್ನುವವರಾರು? ಚೈತನ್ಯವರಿಯ ಹೋಗದವರು. ವಾಣಿಯಿಂದ ಚೈತನ್ಯ ಚೈತನ್ಯವೆನ್ನಲಿ, ನಡೆಯುವಲ್ಲಿ ಹೋಗುವಲ್ಲಿ ಬರುವಲ್ಲಿ ಚೈತನ್ಯವೆಂದರೂ ಒಡಲ ಗುಣ ಬಿಡದಿದ್ದರಿಂದ ಅವರಿಗೆ ಗುರು ಕೃಪೆಯಿಲ್ಲವೆಂದು ತಿಳಿಯುವದು. ಏಕೆಂದರೆ ಕಾರುಣ್ಯವಿಲ್ಲದವರಿಗೆ ಚೈತನ್ಯವರಿಯಲು ಹೇಗೆ ಸಾಧ್ಯ? ತತ್ವವರಿತವರ ಘನತ್ವ ಕ್ರಿಯಾಚಾರ, ಭಾವಾಚಾರವಂತರಿಗೂ ತಿಳಿಯದು. ಅಕಲ್ಪಿತಘನದಿರವು ಕಲ್ಪಿತರಿಗೆ ತಿಳಿಯುವದದೆಂತು? ನಿರ್ದೇಹಿ, ದೇಹದೇಹಿ, ದೇಹಾದಿಗಳ ಕಾರ್ಯವಾಗಲಿ, ಆ ಮಹಾಂತನು ತನ್ನ ಶರೀರ, ವಾಣಿ ಮನಸ್ಸು ಇವುಗಳ ಶುಭಾಶುಭಕ್ರಿಯೆಯನ್ನು ಮೀರಿ ನಿಂತಿಹನು. ಕೇಳುವ ಶ್ರೋತ್ರ ವಾಸಿಸುವ ಘ್ರಾಣ ನೋಡುವ ನಯನಕ್ಕೆ ರೂಪಾದಿಗಳು ತಾಗಿದವು ಎನ್ನ ಕೂಡದು. ಏಕೆಂದರೆ ನೋಡುತ್ತ ಕೇಳುತ್ತ ಲಿಂಗಾರ್ಪಿತ ಮಾಡಿದ ಲಿಂಗ ಭೋಗೋಪ ಭೋಗಿ ಸರ್ವಾಂಗ ಲಿಂಗಿಗೆ ಭಿನ್ನ ದೃಷ್ಟಿ ಇಲ್ಲ ಅಭಿನ್ನ ದೃಷ್ಟಿ ಇಲ್ಲ ದಿವ್ಯದೃಷ್ಟಿ. ನೋಡುವ ಕಂಗಳು ಲಿಂಗ, ಕಾಣಿಸುವ ರೂಪ ಲಿಂಗ ನಡೆಯುವ ಕ್ರಿಯಾ ಲಿಂಗ ಕೇಳುವ ಕಿವಿ ಲಿಂಗ, ಕೇಳಿಸುವ ಶಬ್ದಾದಿಗಳು ಲಿಂಗ, ಇದು ಲಿಂಗಾರ್ಪಿತದ ಘನತ್ವ, ಲಿಂಗಾರ್ಪಿತವದು, ಇಲ್ಲದುದು ಇಲ್ಲವಾಗಿ ಇದ್ದ ನಿರಂತರವಾಗಿಹ ಮಂಗಳಮಯ ತತ್ವ ಸಿದ್ಧವಾದುದು ಲಿಂಗರ್ಪಿತವು. ಇಲ್ಲದ ನಾಮರೂಪವು ಇಲ್ಲ. ಈ ಇಲ್ಲವೆಂಬುದು ಇಲ್ಲವಾಗಿ ಇದ್ದ ಪರತತ್ವ ಪ್ರಕಾಶಿಸುವುದೆ

ಲಿಂಗಾರ್ಪಿತವಾಗಿಹ ಸೂಚನೆ ಇದ್ದ ಲಿಂಗದರ್ಶನವಾಗಿಹ ಪರಿಣಾಮ, ಇದು ಕಾರಣ ಸರ್ವಾಂಗ ಶುದ್ಧವೆಂಬುದು ಇದೆ ಕಂಡಯ್ಯ ಎಂದು ಹೇಳಿಹರು.

ಸರ್ವಾಂಗ ಶುದ್ಧವಾಗುವದು, ಕೇವಲ ಕ್ರಿಯೆಯಿಂದಲ್ಲ, ತ್ಯಾಗದಿಂದಲ್ಲ ಭಾವದಿಂದಲ್ಲ, ಲಿಂಗಾರ್ಪಿತವದು ಭಿನ್ನ ಜ್ಞಾನ, ಭಿನ್ನ ಭಾವ, ಭಿನ್ನ ದೃಷ್ಟಿ ಇಲ್ಲವಾಗಿ ಇಲ್ಲೆಂಬುದು ಇಲ್ಲ ಮಾಡಿ, ಅಖಂಡಿತ ಘನಪೂರ್ಣವಪ್ಪ ತನ್ನಿರುವಿನ ಅರುವುಳ್ಳವನಾಗುವುದೆ ಲಿಂಗಾರ್ಪಿತದ ಘನತ್ವ, ಇದು ಕಾರಣ ಶರಣ ಪರಾತ್ಪರ ದೃಷ್ಟಿಯುಳ್ಳ ಘನ ಮಹಿಮ ಲಿಂಗಭೋಗೋಪ ಭೋಗಿ ನಿಷ್ಕಳಂಕ.

ಕಾಲತ್ರಯಂಗಳ ಜೀವ ತ್ರಯಂಗಳ ಭಾವತ್ರಯಂಗಳ ನೊಂದು ಮಾಡಿ ಸಗುಣ, ನಿರ್ಗುಣ, ಸುಖ ದುಃಖ ವೆಂಬುಭಯ ಲಿಂಗದಲ್ಲಿ ಏಕ ಮಾಡಿ, ಅಹುದು ಅಲ್ಲ, ಬೇಕು ಬೇಡ, ಎಂಬ ಸಂದು ಸಂಶಯ ಕಳೆದಿಪ್ಪುದು ಕೂಡಲ ಚೆನ್ನ ಸಂಗಯ್ಯನಲ್ಲಿ ಆದಿ ಪುರಾತನರು ಮಾಡಿದ ಪಥವು.

ನಿಷ್ಕಳಂಕನಿಗೆ ಕಳಂಕದೃಷ್ಟಿ ಇರದು. ಅಕಲ್ಪಿತನಿಗೆ ಕಲ್ಪಿತವ ಕಾಣದು. ನಿಸ್ಸೀಮಂಗೆ ಸೀಮೆ ಏತರದು ಕಾಲತ್ರಯಗಳನೊಂದು ಮಾಡಿದ ಮಹಾಂತಂಗೆ ಕಳೆದು ಹೋದ ಕಾಲ ನಡೆಯುವ ಕಾಲ, ಮುಂದೆ ಬರುವ ಕಾಲವಿಲ್ಲ, ಅತಿ ಕಾಲನಿಗೆ ಕಾಲತ್ರಯಂಗಳೆಲ್ಲಿ? ಪೂರ್ವದಲ್ಲಿದ್ದವ ಈಗಿದ್ದವ, ಮುಂದೆಯೂ ಇದ್ದ ಘನವಸ್ತು ತಾನೆ. ತಾನೆ ನಿರಂತರವಾಗಿರುವ ಮಂಗಳಮಯನಾಗಿರುವಲ್ಲಿ ಜೀವತ್ರಯಗಳನ್ನು ಕಾಣನು. ಕಾಣಿಸುವ ಜಾಗ್ರತ ಸ್ವಪ್ನ ನಿದ್ರೆಗಳಿಲ್ಲ ಕಾಣುವ ವಿಶ್ವ ತೈಜಸ್ ಪ್ರಾಜ್ಞರೆಂಬುವವರಿಲ್ಲ, ಇಲ್ಲವೆಂಬುದು ಇಲ್ಲವಾಗಿರುವುದರಿಂದ ಮೂರೊಂದು ಮಾಡಿದ ಅಖಂಡ ಜ್ಞಾನಿ ಯಾಗಿರುವದರಿಂದ ವಿಶ್ವ ತಾನೆ, ತೈಜಸ ತಾನೆ, ಪ್ರಾಜ್ಞ ತಾನೆ ಎಲ್ಲಿ ನೋಡಿದಡಲ್ಲಲ್ಲಿ ತನ್ನ ಕಂಡುದರಿಂದ ಮೂರೊಂದು ಮಾಡಿದ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನ ಭಾವತ್ರಯಂಗಳ ನೊಂದು ಮಾಡಿದ ಭರಿತ ಭಾವಿ ಪೂರ್ಣಭಾವಿಯ ದೃಷ್ಟಿಯಲ್ಲಿ ಜೀವಾತ್ಮನೆಂಬುದಿಲ್ಲ ಅಂತರಾತ್ಮನೆಂಬುದಿಲ್ಲ, ಪರಮಾತ್ಮನೆಂಬುದಿಲ್ಲ, ಸತ್ ಸ್ವರೂಪವರಿತವಂಗೆ ಸತ್ ಎಂಬುದಿಲ್ಲ, ಅಸತ್ ಎಂಬುದಿಲ್ಲ, ಶ್ರೇಷ್ಠಾದುದಿಲ್ಲ ಕೀಳಾದುದಿಲ್ಲ. ಅರಿತವನೆಂಬುದಿಲ್ಲ, ಅರಿಯದವನೆಂಬುದಿಲ್ಲ, ಅರುವಿಂಗರುವಾಗಿಹ ಮಹಾಂತನಿಗೆ ಭಾವಂಗಳ ಹಂಗೇತರದು. ಭಾವಕ್ಕಗಮ್ಯನಾದವಂಗೆ ಸುಖದುಃಖ ಒಂದೆ ನೋಡಾ ಸಗುಣ ನಿರ್ಗುಣವೆಂದು ವಿವರಿಸನು. ಏಕೆಂದರೆ ಸುಖವದು ಲಿಂಗ, ದುಃಖವದು ಲಿಂಗ , ಸಗುಣಲಿಂಗ, ನಿರ್ಗುಣ ಲಿಂಗ, ಪೂರ್ಣನಿಗೆ ಅಪೂರ್ಣತ್ವವು ಕಾಣದು. ಬಂಗಾರವು ಭಂಗಾರವೆ! ಬಂಗಾರದಿಂದಾದ ಸಾಮಾನುಗಳು ಬಂಗಾರವು ಎಂದಂತೆ. ಅಕಲ್ಪಿತ ಘನವಂತನಿಗೆ ಕಲ್ಪಿತದಿಂದಾದ ಚರಾಚರ ಜಗತ್ತು ಅಕಲ್ಪಿತವು ಘನವು. ಇದು ಕಾರಣ ಲಿಂಗದಲ್ಲಿ ಏಕಮಾಡಿ ಅಹುದು ಅಲ್ಲ, ಬೇಕು ಬೇಡ, ಎಂಬ ಸಂಶಯ ಕಳೆದಿಪ್ಪುದು ಕೂಡಲ ಚೆನ್ನಸಂಗಯ್ಯನಲ್ಲಿ ಆದಿಪುರಾತನರು ಮಾಡಿದ ಪಥವು.

ಆದಿ ಪುರಾತನರು ಮಾಡಿದ ಪಥ ನಿಸ್ಸೀಮ ಪಥ ಅಖಂಡಿತ ಘನ ಪೂರ್ಣವಪ್ಪ

ಪರಾತ್ಪರ ಅರುವಿನ ಇರುವುಳ್ಳ ಪಥ. ಈ ಪಥದಲ್ಲಿ ಅಹುದಾವುದಕ್ಕನ್ನಬೇಕು, ಅಲ್ಲಾವುದಕ್ಕನ್ನಬೇಕು. ಬೇಕಾವುದಕ್ಕನ್ನಬೇಕು, ಬೇಡಾವುದಕ್ಕನ್ನಬೇಕು, ಸೀಮಿತ ದೃಷ್ಟಿಯಲ್ಲಿ ವಿಷಮತ್ವವುಂಟು. ಇದು ಏಕಮೇವಾದ್ವಿತೀಯವಾಗಿ ಸ್ವಯಂಜ್ಯೋತಿ ನಿಲಯ, ನಿಜ ನಿಲಯ, ಸ್ವಸುಖದ ನಿಲಯವುಳ್ಳದ್ದೆ ಆದಿ ಪುರಾತನರು ಮಾಡಿದ ಪಥವು.

**ವಚನ 24**

**ಏನೆಂದೆನಲಿಲ್ಲದ ಅಖಂಡ ಪರಿಪೂರ್ಣ**
**ಪರಮಾನಂದ ಪರಬ್ರಹ್ಮ ತಾನೆಂಬರುವಿನ**
**ಬಲದಹಂಕಾರವಿಲ್ಲವಾಗಿ ಅದ್ವೈತಿಯಲ್ಲ**
**ಉಭಯವಿಟ್ಟರಸುವ ಗಜಿಬಿಜಿಯಲ್ಲಿ ಸಿಲುಕನಾಗಿ ದ್ವೈತಿಯಲ್ಲ**
**ಇಂತೀ ದ್ವೈತಾದ್ವೈತವೆಂಬ ಉಭಯನಾಮ**
**ನಷ್ಟವಾದ ಅಭೇದ್ಯ ಮಹಿಮನ**
**ಕಪಿಲಸಿದ್ಧಮಲ್ಲಿಕಾರ್ಜುನ ನಿಮ್ಮ ಶರಣರೆ ಬಲ್ಲರು.**

**ತಾತ್ಪರ್ಯ:** ಏನೆಂದೆನಲಿಲ್ಲದ ಅಖಂಡ ಪರಿಪೂರ್ಣ ಪರಮಾನಂದ ಪರಬ್ರಹ್ಮ ತಾನೆಂಬರುವಿನ ಬಲದಹಂಕಾರವಿಲ್ಲವಾಗಿ ಅದ್ವೈತಿಯಲ್ಲ :ತಾನಾರೆಂದರಿತ ತಾನೆ ಸ್ವಯಂಜ್ಯೋತಿ, ಜ್ಯೋತಿ ಪರಪ್ರಕಾಶ ಅದು ಜ್ಯೋತಿ ಎಂದು ನುಡಿದುದುಂಟೆ? ಪರಪ್ರಕಶವೆ ನುಡಿಯದಿದ್ದಲ್ಲಿ ತನ್ನ ತಾನರಿತ ಸ್ವಮಹಿಮ ನುಡಿದುದುಂಟೆ? ನುಡಿದಲ್ಲಿ ಸ್ವಯಂಜ್ಯೋತಿ ಆಗಬಹುದೆ? ನುಡಿಗೆಡೆಗೊಡದ ಘನವು ನುಡಿಯುಳ್ಳದ್ದಾಗಬಹುದೆ? ನಿಃಶಬ್ದ ಬ್ರಹ್ಮ ಶಬ್ದ ಬ್ರಹ್ಮವಾಗಬಹುದೆ? ಶರಣ ನಿಃಶಬ್ದವೇದಿಯಾದುದರಿಂದ ಏನೆಂದೆನಲಿಲ್ಲದ ಅಖಂಡ ಪರಿಪೂರ್ಣ ಪರಬ್ರಹ್ಮ ತಾನೆಂಬ ಬಲದಹಂಕಾರ ವಿಲ್ಲವಾಗಿ ಅದ್ವೈತಿಯಲ್ಲ. ಒಡಲಿಲ್ಲದವಂಗೆ ಅಹಂಕಾರವೆಲ್ಲಿಯದು. ಅಕಲ್ಪಿತಘನ ಕಲ್ಪಿತಪುರುಷನಾಗನು. ಕಲ್ಪಿತಪುರುಷ ಅದ್ವೈತಿಯಾಗಬಹದು, ದ್ವೈತಿಯಾಗಬಹುದು, ಏಕೆಂದರೆ ನಿಃಶಬ್ದವೇದಿಯಾಗಿ ಸ್ವಸುಖದ ಸುಖವ ಕಾಣನು. ಇನ್ನು ಶಬ್ದ ಸಂಭ್ರಮದಲ್ಲಿಯೆ ತನ್ನನ್ನು ಕಾಣುತ್ತಾನೆ.ಇದು ಕಾರಣ ಶಬ್ದವೇದಿಯಾಗಿಹನು. ಶಬ್ದವೇದಿ ಕಲ್ಪಿತನ ಕಾರ್ಯ. ಅದು ಕರ್ಮಕಾಂಡದ್ದಿರಲಿ ಉಪಸನಾಕಾಂಡದ್ದಿರಲಿ, ಜ್ಞಾನಕಾಂಡದ್ದಿರಲಿ, ಅದು ಅಹಂಭಾವದಿಂದುಕ್ತವಾದುದೆಂದು ತಿಳಿವುದು.

ಅಕಲ್ಪಿತ ಘನನಾದ ಪರಮಜ್ಞಾನಿಗೆ, ಶೃತಿಯೆ ನೇತಿ, ನೇತಿ ಎಂದು ಮೌನಧರಿಸಿ ನಿಂತಿದೆ. ಶರಣ ಶಬ್ದ ಸಂಭ್ರಮದ ಹಂಗಿಲ್ಲದವನು, ಶೃತಿಗಗೋಚರನು ವಾಙ್ಮನೋತೀತನು ಆಗಿರುವದರಿಂದ ಏನೆಂದೆನಲಿಲ್ಲದ ಅಖಂಡ ಪರಿಪೂರ್ಣ ಪರಬ್ರಹ್ಮ ತಾನೆಂಬರುವಿನ ಬಲದಹಂಕಾರವಿಲ್ಲಾಗಿ ಅದ್ವೈತಿಯಲ್ಲಾ.

ಉಭಯವಿಟ್ಟರಸುವ ಗಜಿ ಬಿಜೆಯಲ್ಲಿ ಸಿಲುಕನಾಗಿ ದ್ವೈತಿಯಲ್ಲ, ನರರು ಸುರರು, ಪಿಂಡವೆಂಬ ಭಾಂಡದಲ್ಲಿ ಅಡಗಿಹರಾಗಿ ನಾನವರ ರೂಹಿಸಬಲ್ಲೆನೆ ಅಯ್ಯ, ದೇವಗಣ, ರುದ್ರಗಣ, ಪ್ರಮಥಗಣ ಮೊದಲಾದವರು ಬ್ರಹ್ಮಾಂಡವೆಂಬ ಭಾಂಡದಲ್ಲಿ ಅಡಗಿಹರಾಗಿ ನಾನವರ ಭಾವಿಸಬಲ್ಲೆನೆ ಅಯ್ಯ. ಸತ್ಯರು ನಿತ್ಯರು ಮುಕ್ತರು ಎಂಬ

ಮಹಾಮಹಿಮರು ಚಿದ್ ಬ್ರಹ್ಮಾಂಡವೆಂಬ ಭಾಂಡದಲ್ಲಿ ಅಡಗಿಹರಾಗಿ ನಾನವರ ಅರಿಯಬಲ್ಲೆನೆ ಅಯ್ಯ. ಇಂತಿ ತ್ರಿಬಾಂಡವ ನೊಳಕೊಂಡು, ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಶರಣ ಮೋಹಿಸಲಿಲ್ಲಾಗಿ ಭಾವಿಸಲಿಲ್ಲಾ, ಭಾವಿಸಲಿಲ್ಲಾಗಿ ಅರಿಯಲಿಲ್ಲ. ಅರಿಯದರುವೆ ತಾನಾಗಿಹ ಗುಹೇಶ್ವರನ ಶರಣ ಉಪಮಾತೀತ ನೋಡಾ ತಾನಾರೆಂದರಿದ ಶರಣ ಅನುಪಮ, ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಮಹಾಮಹಿಮ. ನರರು ಸುರನನ್ನು ಗಣನೆ ಮಾಡಿಲಿಲ್ಲ. ದೇವಗಣ, ರುದ್ರಗಣ, ಮೊದಲಾದವರೆಂದು ದೇವರೆಂದು ಭಾವಿಸಲಿಲ್ಲ. ಸತ್ಯರು ನಿತ್ಯರು ಮುಕ್ತರು ಎಂಬ ಮಹಾಮಹಿಮರನ್ನು ಅರಿತವರೆನಲಿಲ್ಲದಿರುವಾಗ ಉಭಯ ವಿಟ್ಟರಸುವ ಗಜಿಬಿಜೆಯಲ್ಲಿ ಅವನೆಂತು ನಿಲುಕನು, ಅವನೆಂತು ಒಪ್ಪುವನು. ನಾನು ನೀನೆಂಬುದಿಲ್ಲ, ತಾನರಿದ ಬಳಿಕ ಏನು ಇಲ್ಲ, ಇಲ್ಲಾದುದಿಲ್ಲಾದುದು ಎಲ್ಲಿಪ್ಪುದು. ಇಲ್ಲಾದುದು ಇಲ್ಲಾದುದೆಂದಿಪ್ಪುದು ಅನುವರಿತು ತನುವ ಮರೆದಡೆ ಭಾವರಹಿತ ಗುಹೇಶ್ವರ ಬಯಲು.

ಅನುವರಿತು ತನುವ ಮರೆದವ ಭಾವರಹಿತನಾದವನು. ನೀನು ದೇವ, ನಾನು ಭಕ್ತ, ನೀನು ಪೂಜ್ಯ ನಾನು ಪೂಜಕ, ನೀನು ತಂದೆ ನಾನು ಮಗು, ನೀನು ರಕ್ಷಕ, ನಾನು ರಕ್ಷಿತವೆಂದು ಉಭಯವಿಟ್ಟರಸುವ ಗಜಿಬಿಜೆಯಲ್ಲಿ ಸಿಲುಕಬಹುದೆ? ಸಿಲುಕದ್ದರಿಂದ ದ್ವೈತಿಯಲ್ಲವೆಂದು ಹೇಳಿಹರು. ಇಂತೀ ದ್ವೈತಾದ್ವೈತವೆಂಬ ಉಭಯ ನಾಮ ನಷ್ಟವಾದ ಅಭೇದ್ಯ ಮಹಿಮನ ಕಪಿಲಸಿದ್ಧ ಮಲ್ಲಿಕಾರ್ಜುನ ನಿಮ್ಮ ಶರಣರೆ ಬಲ್ಲರು.

ಶರಣರೆಂಬುದು ದ್ವೈತಾದ್ವೈತವೆಂಬುದಕ್ಕೂ ಮೀರಿದ ಘನವರಿತು ಅದುವೆ ತಾವಾಗಿರುವದರಿಂದ ಉಭಯನಾಮ ನಷ್ಟವಾದ ಅಭೇದ್ಯ ಮಹಿಮನ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ತನಗಿಂತ ಅನ್ಯವಾಗಿ ಕಾಣಲಿಲ್ಲ. ತಮ್ಮ ಸಮವೆಂದು ತಿಳಿಯಲಿಲ್ಲ. ತಾನೆ ಎಂದರಿದು ತನ್ನ ತಾನರಿತ ಅನುಪಮರಾಗಿಹ ಅಭೇದ್ಯ ಮಹಿಮರು ಕಪಿಸಿದ್ಧಮಲ್ಲಿಕಾರ್ಜುನ ತಾನೆ ಆಗಿಹ ಘನಕ್ಕೆ ಘನರಾದುದರಿಂದ ನಿಮ್ಮ ಶರಣರೆ ಬಲ್ಲರು ಎಂದು ಹೇಳಿಹರು.

**ವಚನ 25**

**ಜ್ಞಾನ ತನ್ನೊಳಗೆ ಅಜ್ಞಾನ ತನ್ನೊಳಗೆ**
**ಎರಡುವ ನರಿಯದ ಸಹಜ ಸುಜ್ಞಾನಿ,**
**ಲಿಂಗವಶಗತನಾಗಿರ್ದಲ್ಲಿ, ಪರಿಣಾಮಿ**
**ಕೂಡಲಚೆನ್ನಸಂಗಾ ನಿಮ್ಮ ಶರಣ.**

**ತಾತ್ಪರ್ಯ:** ಜ್ಞಾನ ತನ್ನೊಳಗೆ ಅಜ್ಞಾನ ತನ್ನೊಳಗೆ ಎರಡುವ ನರಿಯದ ಸಹಜ ಸುಜ್ಞಾನಿ: ಆರು ಸುಜ್ಞಾನಿಯು ಆ ಮಹಾಂತ ಎರಡುವ ನರಿಯದ ಸಹಜನು, ನಿಸ್ಸೀಮನು, ಆಕಾಶವು ಆಕಾಶವತ್ ಆಕಾಶವು. ಅದು ಘಟಾಕಾಶ, ಮಠಾಕಾಶವರಿಯದ ಆಕಾಶವು. ನಸ್ಸೀಮವು. ಅದರ ಪೂರ್ವ ಪಶ್ಚಿಮ, ಉತ್ತರ ದಕ್ಷಿಣ ಕಾಣಬಹುದೆ?

ಅಖಂಡವು ನಾನಾ ವಿಧ ವಿಧವಾಗಬಹುದೆ? ಹಾಗೆ ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಪರಮಾನಂದಮಯನು ಎರಡುವನರಿಯದ ಸಹಜನು, ನಿಸ್ಸೀಮನಾಗಿರುವದರಿಂದ ಜ್ಞಾನ ತನ್ನೊಳಗೆ, ಅಜ್ಞಾನ ತನ್ನೊಳಗೆ ಕಂಡರೂ ಜ್ಞಾನ ತನ್ನದಾಗಲಿಲ್ಲ, ತಾನಾಗಲಿಲಲ್ಲ, ಅಜ್ಞಾನ ತನ್ನದಾಗಲಿಲ್ಲ, ತಾನಾಗಲಿಲ್ಲ. ಏಕಮೇವಾದ್ವಿತೀಯನಿಗೆ ದ್ವಂದ್ವ ದೃಷ್ಟಿ ಎಲ್ಲಿಯದು, ಈ ವಿಷಮ ದೃಷ್ಟಿಯೆ ಬಂಧ ಮೋಕ್ಷದ ದೃಷ್ಟಿ, ಪರಬ್ರಹ್ಮವರಿತವನು ಪರಬೊಮ್ಮ ತಾನೆ, ಅದ್ವಿತೀಯನು ಗಗನ ಸದೃಶವಾಗಿರುವ ಅಖಂಡ ಜ್ಞಾನಾಮೃತನು ಆ ಮಹಾಂತನದು ಸಮನಿಲಯ ಆವಾವ ಪಕ್ಷವಾಗದವನು ನಿರಾಲಂಬನು ನಿಜೈಕ್ಯನು.

ಎರಡುವ ನರಿಯದ ಸಹಜತ್ವ ಇದು ತಾನೆ ಕೂಟಸ್ಥನಾಗಿ ನಿಂತ ನಿಜಧಾಮ. ಇದು ಕಾರಣ ಪ್ರಪಂಚದ ಪ್ರವೃತ್ತಿರೂಪ ಅಜ್ಞಾನ ತನ್ನೊಳಗೆ. ನಿವೃತ್ತಿರೂಪ ಪರಮಾರ್ಥ ಜ್ಞಾನ ತನ್ನೊಳಗೆ, ಕತ್ತಲೆ ತನ್ನೊಳಗೆ, ಬೆಳಕು ತನ್ನೊಳಗೆ, ಮರವು ತನ್ನೊಳಗೆ, ಅರವು ತನ್ನೊಳಗೆ, ನಾಮರೂಪ ಜಗವು ತನ್ನೊಳಗೆ, ಅಸ್ತಿ-ಭಾತಿ ಎಂಬ ಜ್ಞಾನ ತನ್ನೊಳಗೆ, ದೇಹಬುದ್ಧಿ ತನ್ನೊಳಗೆ, ಆತ್ಮ ತಾನೆನ್ನುವ ಬುದ್ಧಿ ತನ್ನೊಳಗೆ, ಇದು ವಿಷಮ ನಿಲವು. ಅಂಗಬುದ್ಧಿಯುಳ್ಳವನಾದಾಗ ದುಃಖಿ, ಲಿಂಗ ಬುದ್ಧಿಯುಳ್ಳವನಾದಲ್ಲಿ ಸುಖಿ. ಸುಜ್ಞಾನಿ, ಸುಖದುಃಖ ಮಿಶ್ರತ್ವ ಕಂಡು ತನ್ನದಾಗಲಿಲ್ಲ. ಇವೆರಡಕ್ಕೂ ಮಹತ್ವ ಕೊಡದೆ ನಿರ್ಲಕ್ಷವೆ ಸ್ಥಿರಗೊಳಿಸಿ ತಾನಾರೆಂಬುದು ತನ್ನಿಂದ ತನ್ನ ಅರಿತ ಬೆಳಗಿನ ಬೆಳಗು ಮಹಾ ಬೆಳಗು, ಉದಯಾಸ್ತವಿಲ್ಲದ ಬೆಳಗು, ನಿರಂತರವಾಗಿಹ ಅಖಂಡಿತ ಬೆಳಗು, ಪರಿಪೂರ್ಣ ಪರಮಾನಂದವೆ ತಾನಾಗಿಹ ಬೆಳಗು ಆಗಿರುವಲ್ಲಿ, ಈ ಮರವರುವುಳ್ಳ ಬುದ್ಧಿ ಕಾರ್ಯ ತಾನಾಗಬಹುದೆ? ತಾನಾಗನು, ತಾನು ಅಂದು ಇಂದು ಎಂದೆಂದೂ ಬುದ್ಧಿಯ ಕಾರ್ಯಕ್ಕೆ ಮೀರಿ ಬೆಳಗುವ ಸ್ವಯಂಜ್ಯೋತಿ ತಾನೆಂಬುದು ಕರಿಗೊಂಡು, ನಿಸ್ಸೀಮನಾದ. ಈ ನಿಸ್ಸೀಮ ಸುಖವೆ ಲಿಂಗವಶಗತ ನಾಗಿರ್ದಲ್ಲಿ ಪರಿಣಾಮ ಕೂಡಲಚೆನ್ನ ಸಂಗಾ ನಿಮ್ಮ ಶರಣ.

ಶರಣ ಲಿಂಗವಶಗತನಾಗಿರ್ದಲ್ಲಿ: ಶರಣ, ಲಿಂಗ ಆರಿಗೆ ವಶವಾಗಿಹುದು ಅವರು ಶರಣರು. ಆರಿಗೆ ಲಿಂಗವಶ? ಲಿಂಗ ಸಕೀಲ ಸಂಯೋಗವರ್ಮಸ್ಥಲ ಅರಿತವರ ವಶ, ಶಬ್ದ ಮೀಸಲವಾಗಿರುವವರ ವಶ, ಅಚಿಂತ್ಯವೆ ತನ್ನಿರವು ಆಗಿಹರ ವಶ, ವಾಙ್ಮನೋತೀತವಾಗಿರುವವರ ವಶ, ಭಾವಕ್ಕಿಂಬು ಕೊಡದವರ ವಶ, ನೆನಹು ನಿರ್ಣಯಕ್ಕೆ ಮೀರಿ ನಿಂತವರ ವಶ, ಅರಸುವವರ ವಶಗತವಾಗುವವನಲ್ಲ. ಲಿಂಗ ಲಿಂಗ ಎಂದು ಚಿಂತನ ಮಾಡುವವರ ವಶಗತ ನಾಗುವವನಲ್ಲ, ಲಿಂಗವರಿತ ಲಿಂಗವೆ ತಾನಾಗಿಹ ಶಬ್ದ ಮುಗ್ಧರ ವಶಗತ ನಾಗಿರ್ದುದರಿಂದ ಪರಿಣಾಮಿ.

ಪರಿಣಾಮವದು ಪರಮಸಂತೋಷ. ಪರಮಾನಂದ ಪರಮಾಮೃತ, ಈ ಪರಮಾಮೃತ ವಶಗತವಾಗಿರುವಲ್ಲಿ ಹೇಳಲಿನ್ನೇನು, ಕೇಳಲಿನ್ನೇನು ಶರಣನಿಂದ ಪರಮಾನಂದ ಪರಮಾಮೃತವೆ ತನ್ನಿರುವಿನ ಅರಿವೆಂದರಿದವಂಗೆ ಸುಖವೆ ಸುಖ. ಆನಂದವೆ ಆನಂದ. ಇದು ಜ್ಞಾನಾಮೃತವಾದುದರಿಂದ ಪರಮಾಮೃತ ಮಯನಿಗೆ

ಜ್ಞಾನ ತನ್ನೊಳಗೆ ಅಜ್ಞಾನ ತನ್ನೊಳಗೆ ಕಂಡರು. ಅದು ಪ್ರಪಂಚವೆಂದರಿಯಲಿಲ್ಲ, ಪಾರಮಾರ್ಥ ವೆಂದರಿಯಲಿಲ್ಲ, ಇವೆರಡು ಇದ್ದುದೆನಲಿಲ್ಲ, ಇಲ್ಲದುದೆನಲಿಲ್ಲ, ಅಹುದೆನಲಿಲ್ಲ, ಅಲ್ಲೆನಲಿಲ್ಲ, ಸತ್ಯವೆನಲಿಲ್ಲ, ಮಿಥ್ಯೆವೆನಲಿಲ್ಲ, ಏನೂ ಎನ್ನದೆ ಅರಿಯದರುವುಳ್ಳ ತನ್ನ ಸುಖ ಸ್ವರೂಪದ ಸುಖಿಯಾದುದರಿಂದ ಪರಿಣಾಮಿ ಕೂಡಲ ಚೆನ್ನ ಸಂಗಾ ನಿಮ್ಮ ಶರಣ ಎಂದು ಹೇಳಿಹರು.

**ವಚನ 26**

**ಐವರ ಸಂಗದಿಂದ ಬಂದೆ ನೋಡಯ್ಯಾ.**
**ಐವರ ಸಂಗದಿಂದ ನಿಂದೆ ನೋಡಯ್ಯಾ.**
**ಐವರು ತಮ್ಮ ತಮ್ಮ ಬಟ್ಟೆಯಲ್ಲಿ ಹೋದರು.**
**ನಾನೊಬ್ಬ ನಿಸ್ಸಂಗಿಯಾಗಿ ಉಳಿದೆನಲ್ಲಾ!**
**ಗುಹೇಶ್ವರನೆಂಬ ನಿತ್ಯ ನಿರಂಜನ ರೂಹಿಲ್ಲದ ಘನವ ಕಂಡೆನಯ್ಯ. ॥ 397 ॥**

**ತಾತ್ಪರ್ಯ:** ಐವ್ವರ ಸಂಗದಿಂದ ಬಂದೆ ನೋಡಾ: ಐವ್ವರು ಆರು? ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಇವರೆ ಐವರು. ಇವರ ತತ್ವ ಸಂಗದಿಂದ ಸತ್, ಚಿತ್, ಆನಂದ, ನಿತ್ಯ ಪೂರ್ಣವೆಂಬ ಲಕ್ಷಣಾತ್ಮಕ ಸಂಗದಿಂದ ಬಂದೆ ನೋಡಾ, ಬಂದವರು ಆರು? ಆನು. ಆನೆಂದರೆ ಆನು ಆನೆ! ಆರಾರ ಮುಟ್ಟಿಲ್ಲದ ತಟ್ಟು ಇಲ್ಲದವ ಆನೆ.

ಬೋಧ ಸಂಗ, ನೋಟ ಸಂಗ, ಕೂಟ ಸಂಗ, ಮಾಟ ಸಂಗ, ತೃಪ್ತಿ ಸಂಗ ಈ ಐವರ ಸಂಗದಿಂದ ಬಂದೆ ನೋಡಾ.

ಬೋಧ ಸಂಗ ಅಭೋಧವ ಕೆಡಿಸಿ ನಿರ್ವಿಕಾರನ ಸಂಗ ಮಾಡಿತ್ತು. ಸದ್ರೂಪ ಸಂಗವ ಮಾಡಿಸಿತ್ತು ನೋಡಾ. ನೋಟ ಸಂಗವದು ನಾಮರೂಪಂಗಳ ಕೆಡಿಸಿ ನಿರೂಪವಾಗಿಹ ಸಚ್ಚಿದ್ರೂಪವ ಮಾಡಿಸಿತ್ತು ನೋಡಾ. ಕೂಟ ಸಂಗ ಇದು ವಿಷಯಾನಂದವ ಕೆಡಿಸಿ ಸಚ್ಚಿದಾನಂದವ ಮಾಡಿತ್ತು ನೋಡಾ. ಕೂಟಸಂಗ ಸಮಕೂಟವ ಮಾಟಸಂಗವದು ಮಾಯಾ ಮಾಟವ ಕೆಡಿಸಿ ನಿರ್ಮಾಯ ಸಂಗನ ಘನವ ತೋರಿತ್ತು. ತೃಪ್ತಿಸಂಗ ಅತೃಪ್ತಿಸಂಗವ ಕೆಡಿಸಿ ತೃಪ್ತಿರೂಪ ತೃಪ್ತಿಯ ಘನ ದನುವ ದೊರಕಿಸಿತ್ತು. ಈ ಐವರ ಸುಸಂಗಿಯನ್ನು ಮಾಡಿತ್ತು ಸಂಗದಿಂದ ಬಂದೆ ನೋಡಾ.

ಐವರ ಸಂಗದಿಂದ ನಿಂದೆ ನೋಡಾ: ಬೋಧರೂಪ ಗುರುವಿನ ಸಂಗದಿಂದ ಸದ್ರೂಪನಾಗಿ ನಿಂದೆ. ಲಿಂಗರೂಪಿ ನಿರೂಪಿಸಂಗದಿಂದ ಚಿದ್ರೂಪನಾಗಿ ನಿಂದೆ. ಕೂಟ ರೂಪ ಜಂಗಮ ಸಂಗದಿಂದ ಲಿಂಗಾಂಗ ಸಮರಸನಾಗಿ ನಿಂದೆ. ಸಮಸ್ವರೂಪನಾಗಿ ನಿಂದೆ. ಸಮದೃಷ್ಟಿಯುಳ್ಳವನಾಗಿ ನಿಂದೆ. ಮಾಟ ಸಂಗದಿಂದ ಅನಿತ್ಯವೆಂಬುದು ತೊಲಗಿ ನಿತ್ಯ ಪದದಲ್ಲಿ ನಿಂದೆ. ಈ ಮಾಟ ಸಂಚಿತ ಆಗಾಮಿ, ಪ್ರಾರಬ್ಧ ರೂಪಿ ಕರ್ಮಂಗಳ ಮಾಟವ ಕೆಡಿಸಿ, ಅಮರತ್ವ ಸಿದ್ಧ ಮಾಡುವ ಮಾಟದಿಂದ ನಿರ್ಭಯವಾಗಿ ನಿಂದೆ. ಇಲ್ಲಿ ಕರುಣಾಜಲವೂ ಉಂಟು. ವಿನಯ ಜಲವೂ ಉಂಟು.

ಸಮತಾಜಲವೂ ಉಂಟು. ಇವು ಮೂರು ಕೂಡಿದ ಸಂಗಮ ಜ್ಞಾನೋದಕ ಜ್ಞಾನಗಂಗಾ. ಇದು ಜ್ಞಾನಾರ್ಜನೆಯಲ್ಲಿ ಶುದ್ಧ, ಸಿದ್ಧ, ಪ್ರಸಿದ್ಧವಾಗಿಹ ಜ್ಞಾನಾಮೃತದಲ್ಲಿ ನಿಂದೆ. ತೃಪ್ತಿಸಂಗದಿಂದ, ತೃಪ್ತರೂಪ ತೃಪ್ತನಾಗಿ ಅತೃಪ್ತ ಕಾಣದಂತಾಗಿ ತೃಪ್ತನಾಗಿ ನಿಂದೆ ನೋಡಾ.

ಐವ್ವರು ತಮ್ಮ ತಮ್ಮ ಬಟ್ಟೆಯಲ್ಲಿ ಹೋದರು: ಈ ಐವ್ವರು ಮರವ ಕಳೆದು ಅರು ಹೃದಯ ಮಾಡಲು ಬಂದವರು. ನನ್ನದು ಅರುಹೃದಯವಾಗುವುಡೆ, ಅರುವಿನಲ್ಲಿಯೆ ಲೀನವಾದರು. ಪೂರ್ವದಲ್ಲಿ ಇವರ ಸಂಗದಿಂದ ಬಂದುದು ನಿಜ. ಇವರ ಸಂಗದಿಂದ ನಿಂದುದು ನಿಜ. ಈಗ ಇವರು ತಮ್ಮ ತಮ್ಮ ಬಟ್ಟೆಯಲ್ಲಿ ಹೋದುದು ನಿಜ. ಇವರ ಮಾರ್ಗ ಅರುವಿನ ಜ್ಞಾನ ಅರುವಿನ ಹೃದಯ ಮಾಡುವ ಜ್ಞಾನ. ಅರುವಿನ ಜ್ಞಾನವಾಗುವುಡೆ ನಾನು ಅರುವಿಂಗರುವಾಗುವುಡೆ ಈ ಐವರು ಅರುವಿನಲ್ಲಿ ಲೀನವಾದುದು ಆಶ್ಚರ್ಯ. ಈಗ ನಾನೊಬ್ಬನೆ ನಿಸ್ಸಂಗಿಯಾಗಿ ಉಳಿದೆನಯ್ಯ.

ನಾನೋರ್ವನೆ ನಿಸ್ಸಂಗಿಯಾಗಿಹ ನನ್ನ ನಿಸ್ಸಂಗದ ಘನವ ನೇನೆಂಬೆ? ಈ ಐವ್ವರ ಸಂಗದಿಂದ ಬಂದವನಲ್ಲ, ನಿಂದವನಲ್ಲ, ಐವರು  ಐವರಲ್ಲ ನಾನೊಬ್ಬನೆ ನಿಸ್ಸಂಗಿಯಾಗಿ ಉಳಿದುದು ಘನಕ್ಕೆ ಘನ. ನಾನೊಬ್ಬನೆ ಅಂದು, ಇಂದು, ಎಂದೆಂದೂ ಇದ್ದವನು. ನಾನೊಬ್ಬನೆ ನನ್ನಿರುವು ನಿಸ್ಸಂಗವಾಗಿರುವಲ್ಲಿ, ಅದು ಮಾತಿನಿಂದತ್ತತ್ತ, ನೆನಹು ನಿರ್ಣಯದಿಂದತ್ತತ್ತ ಅದನ್ನು ವಿವರಿಸುವದದೆಂತು? ಗುಹೇಶ್ವರನೆಂಬ ನಿತ್ಯ ನಿರಂಜನ ಸ್ವರೂಪಲ್ಲದ ಘನವ ಕಂಡೆನಯ್ಯ ಗುಹೇಶ್ವರವದು ಕಲ್ಪಿತಕ್ಕೊಳಪಡದ ಘನವು ಶಬ್ದ ಮೀಸಲವಾಗಿಹ ಘನವು, ಅದನ್ನು ನಿತ್ಯ ಸ್ವರೂಪನು ನಿರಂಜನ ಸ್ವರೂಪನೆಂದು ಹೇಗೆ ಹೇಳುವದು. ಇದು ಕಾರಣ ಗುಹೇಶ್ವರನೆಂಬುದು ನಿತ್ಯವೆಂಬುದಕ್ಕೂ ಮೀರಿದುದು. ನಿರಂಜನನೆಂಬುದಕ್ಕೂ ಮೀರಿದುದು. ಮರವಿನಲ್ಲಿ ನಾಮರೂಪಂಗಳ ಗೋಚರ, ಅರುವಿನಲ್ಲಿ ನಿತ್ಯ ನಿರಂಜನವೆಂಬ ಗೋಚರ. ಗುಹೇಶ್ವರನೆಂಬುದು ಮರವರುವಿಂಗೆ ಮೀರಿದ ಘನವಾದುದರಿಂದ ನಿತ್ಯವೆಂಬುದು ಗುಹೇಶ್ವರರನಿಂದ ಸಿದ್ಧವಾಗುವದು, ನಿರಂಜನವೆಂಬುದು ಗುಹೇಶ್ವರನಿಂದ ಸಿದ್ಧವಾದುದು. ಗುಹೇಶ್ವರನು ಮಾತ್ರ ಈ ನಿತ್ಯ ನಿರಂಜನಗಳಿಂದ ಸಿದ್ಧವಾಗದವನು. ಸ್ವತಃ ಸಿದ್ಧ ಗುಹೇಶ್ವರನು ಆದುದರಿಂದ ನಿತ್ಯ ನಿರಂಜನ ಸ್ವರೂಪವಲ್ಲದ ಘನವ ಕಂಡೆನಯ್ಯ ಎಂದು ಪ್ರಭುದೇವ ಹೇಳಿದುದು.

**ವಚನ 27**

**ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ;**
**ತೆರಹಿಲ್ಲದ ಸಂಭಾಷಣೆಯ ಸುಖವು,**
**ತೆರಹಿಲ್ಲದೆ ನಂಬಿದ, ಸ್ವಾನುಭವ ಸುಖವು;**
**ತೆರಹಿಲ್ಲದ ಮಹಿಮೆ, ತೆರಹಿಲ್ಲದ ವಿಚಾರ;**
**ಕೂಡಲಸಂಗಮದೇವಾ ನಿಮ್ಮ ಶರಣಂಗೆ!**

**ತಾತ್ಪರ್ಯ:** ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ: ಶರಣರ ನಡೆ, ಶರಣರ

ನುಡಿ, ಶರಣರು, ಲಿಂಗ ಸಕೀಲ ಸಂಯೋಗವರ್ಮಸ್ಥಲ ವರಿತವರಾದುದರಿಂದ ಅವನ ನುಡಿ ತೆರಹಿಲ್ಲದ ನುಡಿ, ನುಡಿಗೆಡೆಗೊಡದ ನುಡಿ ಅವರ ನುಡಿ ಜ್ಯೋತಿರ್ಲಿಂಗ ನುಡಿಗೆಡೆಗೊಡದ ಘನವಾಗಿ ನುಡಿದುದು.

ತೆರಹಿಲ್ಲದ ನಡೆ, ಲಿಂಗ ಒಂದಾಗಿರ್ದ ಜಂಗಮ ನಡೆ ನಿರುಪಾಧಿ ನಡೆ, ನಿರಾಲಂಬನಡೆ, ನಿಜೈಕ್ಯ ನಡೆ, ಅಚಿಂತ್ಯ ಘನ ತಾನಾದುದೆ ನಡೆ, ಅರುವರಿತು ಏನೆಂದನಲಿಲ್ಲದ ಅಖಂಡಿತ ಘನ ಪರಿಪೂರ್ಣ ಪರಮಾನಂದವೆ ತಾನಾಗಿ ತನ್ನ ನೋಡಿದುದೆ ನಡೆ, ಶಬ್ದ ಸಂಭ್ರಮಂಗಳ ಸೋತು, ತಾನು ನಿಃಶಬ್ದ ಘನನಾಗಿ ನಿಂತುದೆ ನಡೆ. ಅರಿಯದರುವುಳ್ಳವನಾಗಿ ಅರಿಯುವ, ಅರಸುವ ಕಾರ್ಯ ನಿಷ್ಪತ್ತಿಯಾದುದೆ ನಡೆ. ತಾನೆ ನಿಶ್ಚಿಂತನಾಗಿ ನಿರಾಮಯನಾಗಿ ಸ್ವಸುಖವ ಸವೆಯುವದೆ ತೆರಹಿಲ್ಲದ ನಡೆ ಅರುವ ಅರಿಯುವ ಸಂಜ್ಞೆದಯಪಾಲಿಸುವ ಕರುಣಾಮಯನಾಗಿ ಅರುಹೃದಯ ಮಾಡುವ ಲೀಲೆಯ ತೆರಹಿಲ್ಲದ ನಡೆ.

ತೆರಹಿಲ್ಲದ ಸಂಭಾಷಣೆಯ ಸುಖವು: ಅಂಗದುದಯ ಲಿಂಗದ ಸುಖವು ಲಿಂಗದುದಯ ಅಂಗದ ಸುಖವು, ಎರಡಿಲ್ಲದ ಘನವ ನೇನೆಂಬೆ? ಮಿಕ್ಕಿ ಮೀರಿ ನಿಂದ ನಿಲುವ ನೇನೆಂಬೆ? ಕೂಡಲ ಚೆನ್ನ ಸಂಗನ ಶರಣರ ನೇನೆಂಬೆನಯ್ಯ. ತ್ಯಾಗಾಂಗ, ಭೋಗಾಂಗ, ಯೋಗಾಂಗಕ್ಕೂ ಮೀರಿದ ಚಿದಂಗದುದಯ, ಅದು ಲಿಂಗ ಸುಖವು, ಲಿಂಗವರಿಯ ಹೋಗಿ ಲಿಂಗವೆನ್ನದುದೆ ಅದು ಲಿಂಗದುದಯ. ಅದುವೆ ಅಂಗಸುಖ, ಮಿಕ್ಕಿಮೀರಿ ನಿಂದ ನಿಲುವುಳ್ಳ, ನಿಜಾನುಭವವೆ ತೆರಹಿಲ್ಲದ ಸಂಭಾಷಣೆಯ ಸುಖವು. ಶೃತಿಗೆ ಮೀರಿ ನಿಂತ ನಿಲುವುಳ್ಳ ಮಹಾನುಭವವೆ ತೆರಹಿಲ್ಲದ ಸಂಭಾಷಣೆಯ ಸುಖವು ಶಬ್ದ ಸಂಭ್ರಮದ ಹಂಗಹರಿಯುವದೆ ತೆರಹಿಲ್ಲದ ಸಂಭಾಷಣೆಯ ಸುಖವು. ಅರಿದರುಹಿಸಿಕೊಂಬುದಕ್ಕೆ ಮೀರಿದ ಘನವೆ ತನ್ನಿರುವಿನ ಅರುವಾಗಿ ನಿಸ್ಸೀಮನಾದುದೆ ತೆರಹಿಲ್ಲದೆ ಕಂಡು ನಂಬಿದ ಸ್ವಾನುಭವ ಸುಖವು. ಇದು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನವಾಗಿ ನಿಂತುದು. ಇದು ತೆರಹಿಲ್ಲದೆ ಕಂಡು ನಂಬಿದ ಸ್ವಾನುಭವ ಸುಖವು.

ಗುರುವ ನಂಬಿದವರುಂಟು, ಲಿಂಗವ ನಂಬಿದವರುಂಟು. ಜಂಗಮ ನಂಬಿದವರುಂಟು. ಪಾದೋದಕ ಪ್ರಸಾದವ ನಂಬಿದವರುಂಟು. ತನ್ನ ನಂಬಿದವರುಂಟೆ? ತನ್ನ ನಂಬಿದುದೆ ತೆರಹಿಲ್ಲದೆ ಕಂಡುದು. ಏಕೆಂದರೆ ತಾನಿಲ್ಲದ ಮುನ್ನ ಗುರುವೆಲ್ಲಿಯದೊ, ಲಿಂಗವೆಲ್ಲಿಯದೊ? ಜಂಗಮವೆಲ್ಲಿಯದೊ, ಪಾದೋದಕ ಪ್ರಸಾದ ವೆಲ್ಲಿಯದೊ ಗುರುವೆಂದರಿದವನು ತಾನೆ ಲಿಂಗವೆಂದರಿದವನು ತಾನೆ ಜಂಗಮವೆಂದರಿದವನು ತಾನೆ, ಪಾದೋದಕ ಪ್ರಸಾದವೆಂದರಿದವನು ತಾನೆ. ಇವೆಲ್ಲವು ಹೆತ್ತರಿವು. ತಾನೆ ಸ್ವಯಂಜ್ಯೋತಿ ಕಲ್ಲೇಶ್ವರಾ. ಈ ಪ್ರಸಾದವಾಣಿ ತೆರಹಿಲ್ಲದೆ ಕಂಡು ನಂಬಿದ ಸ್ವಾನುಭವ ಸುಖವು.

ಪರಪ್ರಕಾಶವಾಗಿಹ ಸೂರ್ಯ ಒಮ್ಮೆ ಕಾಣುತ್ತಾನೆ, ಒಮ್ಮೆ ಕಾಣದವ ನಾಗುತ್ತಾನೆ. ಅದನ್ನು ಕಾಣುವ ತಾನು, ನಿರಂತರ ಅಲ್ಲವೆ? ನಿಸ್ಸೀಮ ನಲ್ಲವೆ? ತನ್ನ ಕಂಡವ

ಹಗಲಿನಲ್ಲಿ ಇದ್ದವ ರಾತ್ರಿಯಲ್ಲಿ ಇದ್ದವ ತಾನು. ಬುದ್ಧಿ ದೇಹಬುದ್ಧಿಯಿಂದುಕ್ತವಾದುದ್ದಿರಲಿ, ಇತ್ತ ಆತ್ಮ ಬುದ್ಧಿಯಿಂದುಕ್ತವಾದದ್ದಿರಲಿ, ತಾನು ನಿಸ್ಸೀಮನಾಗಿರುವದರಿಂದ ಇವೆರಡು ತನ್ನಿಂದ ಸಿದ್ಧವಾಗುವವು. ತನ್ನಂ ಇವುಗಳಾವುವು ಸಿದ್ಧಮಾಡವೆಂದು ತನ್ನಿಂದ ತನ್ನ ಕಂಡುದೆ ತೆರಹಿಲ್ಲದೆ ಕಂಡುದು. ಇದಲ್ಲದೆ ನನ್ನ ನಾ ನರಿತೆ ನೆಂಬ ಅರುವಿನಹಂಕಾರವು ನನ್ನಿಂದ ಸಿದ್ಧವಾಗುವದು. ನನ್ನಂ ನಾ ನರಿಯೆನೆಂಬ ಅರುವಿನ ಮರವು, ನನ್ನಿಂದ ಸಿದ್ಧವಾಗುವದು. ನಾನು ಮರವಿಂಗೂ ಅರುವಿಂಗೂ ಎಡೆಗೊಡದಿಪ್ಪ ಅಖಂಡ ಪರಿಪೂರ್ಣವಪ್ಪ ಪರಮಾನಂದದಿರುವೆ ನನ್ನಯ ಅರುವಾಗಿಹುದರಿಂದ ತೆರಹಿಲ್ಲದ ಕಂಡು ನಂಬದ ಸ್ವಾನುಭವವು ಎಂದು ಹೇಳಿಹರು.

ತೆರಹಿಲ್ಲದ ಮಹಿಮೆ: ತಾನು ಅರುವಿನ ಅರುವು, ಗುರಿವಿಂಗೂ ಗುರು, ಲಿಂಗದ ಲಿಂಗ ಜಂಗಮದ ಜಂಗಮ ಪ್ರಸಾದದ ಮಹಾಪ್ರಸಾದಿ. ತಾನು ಅರುವಿನ ಅರುವಾದುದರಿಂದ ಅರುವೆಂಬುದು ತನ್ನಿಂದ ಸಿದ್ಧವು. ಗುರು,ಲಿಂಗ, ಜಂಗಮ, ಪ್ರಸಾದವೆಂಬುದು ತನ್ನಿಂದ ಸಿದ್ಧವಾಗುವುದರಿಂದ ಇವು ಹೆತ್ತರಿವು ತಾನೆ ಸ್ವಯ ಮೇವವಾಗಿಹ ಅಭಾದಿತನು. ಇವಾವು ತನ್ನ ಸಿದ್ಧಮಾಡದ್ದರಿಂದ ತಾನೆ ಗುರಿವಿಂಗೂ ಗುರು, ಲಿಂಗದ ಲಿಂಗ ಜಂಗಮದ ಜಂಗಮ, ಪ್ರಸಾದದ ಮಹಾಪ್ರಸಾದವಾದುದರಿಂದ ತೆರಹಿಲ್ಲದ ಮಹಿಮೆ ಎಂದು ಹೇಳಿಹರು.

ತೆರಹಿಲ್ಲದ ವಿಚಾರ: ನಿಮ್ಮ ಶರಣರಿಗೆ ಕೂಡಲಸಂಗಮದೇವಾ, ನಿಮ್ಮ ಶರಣರದು ತೆರಹಿಲ್ಲದ ವಿಚಾರ. ಶರಣನ ವಿಚಾರ ಸ್ವಮಹಿಮೆಯ ವಿಚಾರ. ಇದು ಏನೆಂದೆನಲಿಲ್ಲದ ಅರುವಿನ ಇರುವುಳ್ಳ ವಿಚಾರ, ನಿಸ್ಸೀಮವಿಚಾರ. ಸತ್, ಅಸತ್ ಎಂಬುದಕ್ಕೂ ಇಂಬುಗೊಡದ ವಿಚಾರ, ಭಾವಕ್ಕಿಂಬುಗೊಡದ ವಿಚಾರ, ಅಜ್ಞಾನ ಜ್ಞಾನಕ್ಕಿಂಬುಗೊಡದ ವಿಚಾರ ತಾನಾರೆಂದರಿತ ಅರಿಯದರುವಿನ ವಿಚಾರ. ಪ್ರವೃತ್ತಿ ನಿವೃತ್ತಿ ಗೆಡೆಗೊಡದ ವಿಚಾರ. ತನ್ನ ವಿಚಾರ ಕೂಡಲಸಂಗಮದೇವಾ ನಿಮ್ಮ ಶರಣಂಗೆ.

**ವಚನ 28**

**ಉದ್ ಭ್ರಮಿಯಲ್ಲ, ಉದ್ದೇಶಿಯಲ್ಲ,**
**ನಿದ್ರೆಗೆಟ್ಟವನು ನಿಜವನೆ ಬೆಳಗುತ್ತಿ. ನಿಶ್ಚಿಂತ ಶರಣಪ್ಪ**
**ಚಿಂತೆಕೆಟ್ಟು ಸ್ಥಿರವಾಗಿ ನಿಂದ,**
**ಸೀಮೆಯ ಕೆಡಿಸಿ ನಿಸ್ಸೀಮನಾದ**
**ಬೋಧೆಯ ಕೆಡಿಸಿ ನಿರ್ಬೋಧನಾದ**
**ಕಾಯವ ಕೆಡಿಸಿ ನಿರಾಶಿಕನಾದ, ಇದು ಕಾರಣ,**
**ಕೂಡಲಚೆನ್ನ ಸಂಗಾ ನಿಮ್ಮ ಶರಣಂಗೆ ಆರೂ ಸರಿಯಲ್ಲ. ॥ 682 ॥**

**ತಾತ್ಪರ್ಯ:** ಉದ್ ಭ್ರಮಿಯಲ್ಲ, ಉದ್ದೇಶಿಯಲ್ಲ: ಪ್ರವೃತ್ತಿಯುಳ್ಳ ಪ್ರಾಪಂಚಿಕರಷ್ಟೆ ಬಹು ಭ್ರಮಿಗಳು. ಇವರ ಉದ್ದೇಶ, ಗುರಿ, ಕಾಮನೆಗೂ ಇಚ್ಛೆಗೂ ಕೊನೆಯೆ ಇಲ್ಲವೆನ್ನುವ ಹಾಗಿಲ್ಲ. ತ್ಯಾಗಿ, ಯೋಗಿ, ವಿದ್ಯಾವಂತರು, ಪಂಡಿತರು, ಆಚಾರ್ಯರು,

ಸ್ವಾಮಿಗಳು, ಸೇವಕರು, ಪೂಜ್ಯರು, ಪೂಜಕರೆನಿಸಿಕೊಳ್ಳುವ ಇವರುಗಳಲ್ಲಿಯೂ ಬಹುಜನರು ಉದ್ ಭ್ರಮಿಗಳು; ಉದ್ದೇಶವುಳ್ಳವರಿರುವದಿಲ್ಲವೆಂದಲ್ಲಿ, ಇವರದು ಆವಾವ ಕಾಮನೆ ನಷ್ಟವಾದುದು? ತಾವಾರೆಂಬ ತಮ್ಮ ನಿಜದಿರುವಿನ ಅಖಂಡ ಸುಖದ ಸುಖಿಗಳಾಗಿ ನಮಗಾವ ಭ್ರಮವೂ ಇಲ್ಲ. ಉದ್ದೇಶವಾವುದಿಲ್ಲ ವೆಂಬುದು, ತಮ್ಮ ಹೃದಯ ತಾವೆ ನೋಡಿ ಕೊಳ್ಳವುದು.

ಶ್ರೀಗುರು ಕರುಣಿಸಿದ ಲಿಂಗವದು ಸಚ್ಚಿದಾನಂದ, ಚಿನ್ಮಯಾನಂದ. ಅದು ಅಖಂಡ ಪರಮಾನಂದ ಸ್ವಯಂಜ್ಯೋತಿ ಎಂದು ಲಿಂಗ ಒಂದಾಗಿರ್ದ ಜಂಗಮ ಜಂಗಮ ಒಂದಾಗಿರ್ದ ಲಿಂಗಮುಖದಿಂದ ತಿಳಿದಿರುವದಿಲ್ಲವೆಂದಲ್ಲಿ ಉದ್‌ಭ್ರಮಿಗಳೆ. ಇವರ ಭ್ರಮೆಗೆ ಕೊನೆಯೆ ಇಲ್ಲ. ಉದ್ದೇಶಕ್ಕೆ ಮುಕ್ತಾಯವೆ ಇಲ್ಲ. ಶರಣರು ಗುರು ಕರುಣಿಸಿದ ಅನುಪಮ ಲಿಂಗವರಿತು ಅಚಿಂತ್ಯರಾದರು. ಪರಮಾನಂದ ಮಯರು, ಸ್ವಸುಖಿಗಳು, ಅರುವ ಅರಿತ ಮಹಾಂತರು , ಅರಿಯದರುವೆ ತಾವಾಗಿಹ ನಿಜೈಕ್ಯರು ನಿರುಪಮರು ನಿರಾಲಂಬವೆ ತಾವಾಗಿಹ ನಿಜದಿರುವಿನ ಘನಮಹಿಮನು ಉದ್ ಭ್ರಮಿಯಲ್ಲ, ಉದ್ದೇಶಿಯಲ್ಲ. ಅಷ್ಟಾಂಗ ಯೋಗರೂಪಿ ನಿದ್ರೆಗೆಟ್ಟು ನಿಜವನೆ ಬೆಳಗುತ್ತಿಹನು. ಶರಣನಲ್ಲಿ ಪ್ರಕೃತಿ ಪುರುಷರೆಂಬ ಕಲ್ಪಿತವೆ ಕೆಟ್ಟು ಹೋಗಿದೆ. ಇದು ಕಾರಣ ಕ್ಷರಾ ಕ್ಷರವೆಂಬುದಕ್ಕೂ ಮೀರಿದ ಘನವಂತನಿಗೆ ಅಜ್ಞಾನಿಯೆಂದು ಜ್ಞಾನಿಯೆಂದು, ಜ್ಞಾನಾಜ್ಞಾನದಿಂದುಕ್ತನೆಂದು ಹೇಗೆ ತಿಳಿವುದು. ಅಂಗ ಭಾವಿಯಲ್ಲ ಲಿಂಗ ಭಾವಿಯಲ್ಲ ಲಿಂಗ ಅಂಗಗಳೆಂಬ ಮಿಶ್ರಣ ಭಾವಿಯಲ್ಲ. ಭಾವಕ್ಕಗಮ್ಯನಾಗಿಹ ನಿರ್ಭಾವ ಭಾವಂಗಳ ಹಂಗ ಹರಿದವ ನಾದುದರಿಂದ ಅರುವಿಂಗರುವು ಆನಂದದ ನಿಜಾನಂದ ಲಿಂಗವರಿತು ಲಿಂಗವಾಗಿಹ ಸ್ವಮಹಿಮನಾದುದರಿಂದ ನಿಜವನೆ ಬೆಳಗುತ್ತಿಹನು.

ನಿಶ್ಚಿಂತ ಶರಣ ಚಿಂತೆ ಕೆಟ್ಟು ಸ್ಥಿರವಾಗಿ ನಿಂತ: ಅರಿಯದರುವುಳ್ಳ ಮಹಾನುಭವಿಯಾದುದರಿಂದ ನಿಶ್ಚಿಂತ ಶರಣ. ಅಚಿಂತ್ಯಾತ್ಮನು ಚಿಂತನೆಗೆ ನಿಲುಕದ ಪದವೆ  ಆ ಮಹಾಂತನ ಇರುವು ಆಗಿಹುದು. ಆತನ ದಿವ್ಯದೃಷ್ಟಿಗೆ ಇಹಚಿಂತೆ ಪರಚಿಂತೆ ಸಮವಾಗಿವೆ. ಅನಾತ್ಮ ಆಗಿಹುದು ಕಂಡು ಕುಗ್ಗಿಲ್ಲ, ಆತ್ಮಚಿಂತನ ಕಂಡು ಹಿಗ್ಗಿಲ್ಲ. ಮನವು ಸುಮನವಾಗಿದೆ. ತನ್ನ ಪೂರ್ವಾಶ್ರಯವ ಬಿಟ್ಟು ಅಕಲ್ಪಿತ ಘನದಲ್ಲಿ ಲೀಯವಾಗಿದೆ. ಅದು ತನ್ನ ಹಳೆಯ ನೆನಹು ನಿರ್ಣಯಗಳಿಂದ ವಿಮುಖವಾಗಿ ಲಿಂಗ ಮುಖವಾಗಿದೆ. ಅರಿಯದರುವಿನ ಮುಖವಾಗಿದೆ. ಚಿಂತನೆ ಕೆಟ್ಟು ಸ್ಥಿರವಾಗಿ ನಿಂತುದರಿಂದ ಸಹಜ, ಅಜ ಅಚಿಂತ್ಯ ಪದವೆ ತನ್ನಿರುವಾಗಿ ಅರಿಯದರುವುಳ್ಳವ ನಾದುದರಿಂದ ನಿಶ್ಚಿಂತ ಶರಣ  ಅಚಿಂತ್ಯಾತ್ಮನೆ ತಾನಾದ ಶರಣಂಗೆ ಆವಾವ ಚಿಂತನೆ ಇಲ್ಲದ ಕಾರಣ, ಚಿಂತನೆ ಕೆಟ್ಟು ಸ್ಥಿರವಾಗಿ ನಿಂತ ಎಂದು ಹೇಳಿಹರು.

ಸೀಮೆ ಕೆಡಿಸಿ ನಿಸ್ಸೀಮನಾದ: ಗಗನ ಸದೃಶವಾಗಿರುವ ಅಖಂಡಿತ ಪರಿಪೂರ್ಣವಪ್ಪುದೆ ತನ್ನಿರುವಿನ ಅರುವಾಗಿಹ ಮಹಾಂತನಿಗೆ ಅದಾವ ಸೀಮೆ, ಅದಾವ ಪಕ್ಷ? ಅರಿಯದರುವುಳ್ಳವಂಗೆ ಅದಾವ ದ್ವೈತದರಿವು? ಅದ್ವೈತದರಿವು?

ವಿಶಿಷ್ಟಾದ್ವೈತದರವು? ಶಕ್ತಿವಿಶಿಷ್ಟಾದ್ವೈತ ದರಿವು? ನಿಸ್ಸೀಮನು ಸೀಮಿತನೆ? ಅಕಲ್ಪಿತ ಘನವೆ ತಾನಾದ ಮಹಾಂತಂಗೆ ಕಲ್ಪಿತ ಕಲ್ಪನೆಗಳೆಲ್ಲಿ? ಅಹಮಿಲ್ಲದ ಚಿದೀಶ್ವರನಲ್ಲಿ ಜೀವರುಗಳ ವಿಚಾರಕ್ಕಿಂಬೇತರದು. ತನ್ನ ತಾನರಿತ ಶರಣ ಸೀಮೆಯ ಕೆಡಿಸಿ ನಿಸ್ಸೀಮನಾದ, ಸಗುಣ, ನಿರ್ಗುಣ, ಲಿಂಗದಲ್ಲಿ ಏಕ ಮಾಡಿದ ಘನವಂತ, ವಾಙ್ಮನೋತೀತ ನಾಗಿರುವಲ್ಲಿ ಸೀಮೆಯ ಕೆಡಿಸಿ ನಿಸ್ಸೀಮನಾದನೆಂದು ಹೇಳಿಹರು.

ಬೋಧೆಯ ಕೆಡಿಸಿ ನಿರ್ಬೋಧನಾದ: ಅರುವಿಂಗರುವಾಗಿಹ ಘನವಂತ ನಿಶಬ್ದವೇದಿ ಶೃತಿಗಗೋಚರ ತಾನಾರೆಂದರಿದ ತನ್ನಿರುವಿನ ಅರುವಾಗಿಹ ಸ್ವಯಂಜ್ಯೋತಿ, ಏನೊಂದಾಗದ ಘನಮಹಿಮ, ದೇಹಿಗೆ ದೇಹಿಯಾಗಿರ್ಪ ಭೇದವನಾರು ಬಲ್ಲರು. ಹರಿಬ್ರಹ್ಮಾದಿಗಳರಿಯರು ಮನು ಮುನಿಗಳರಿಯರು ಸಿದ್ಧ ಸಾಧಕರರಿಯರು ಅರಿವಿಂಗರುವಾಗಿಹ ಘನವು ತನ್ನರುವಿಂಗೆ ಅರಿಯಬಹುದೆ? ಗುಹೇಶ್ವರಲಿಂಗವರಿವುಡೆ ಅರಿಯದಂತಿರಬೇಕು ಸಿದ್ಧರಾಮಣ್ಣಾ. ಇದು ಬೋಧವ ಕೆಡಿಸಿ ನಿರ್ಬೋಧನಾಗಿಹ ಘನವು ಗುರುವಿಡಿದ ಅರಿವು ಹೆತ್ತರಿವು, ಲಿಂಗವಿಡಿದ ಅರಿವು ಹೆತ್ತರಿವು, ಜಂಗಮವಿಡಿದ ಅರಿವು ಹೆತ್ತರಿವು, ಇವುಗಳು ತನ್ನಿಂದ ಸಿದ್ಧವಾಗುವದರಿಂದ ಇವು ಹೆತ್ತರಿವು ತಾನು ಮಾತ್ರ ಸ್ವಯಂಜ್ಯೋತಿಯಾದುದರಿಂದ ಬೋಧವ ಕೆಡಿಸಿ ನಿರ್ಬೋಧನಾದನೆಂದು ಹೇಳಿಹರು.

ಕಾಯವ ಕೆಡಿಸಿ ನಿರಾಶಿಕನಾದ: ಕಾಯವೆಂದಲ್ಲಿ ಅಹಮ್, ಅಕಾಯವದು ಅಹವುಳಿದ ಕಾಯು. ನಿರ್ದೇಹವದು. ಶರಣ, ನಿರ್ದೇಹ ನಿರೂಪ ನಿರವಯನಾದುದರಿಂದ ಕಾಯವ ಕೆಡಿಸಿ ನಿರಾಶಿಕನಾದ. ಶರಣನ ದಿವ್ಯದೃಷ್ಟಿಯಲ್ಲಿ ಸುಮ್ಮನೆ ಹೇಳುವದಕ್ಕಾದರೂ ನಾಮರೂಪಂಗಳಿಲ್ಲ. ಅಸ್ತಿ, ಭಾತಿ ಎಂಬ ಸತ್ಯವ ನರಿತ ಮಹಾಂತ ಸತ್ ಎನಲಿಲ್ಲ, ಚಿತ್ ಎನಲಿಲ್ಲ, ಇಲ್ಲ ಇಲ್ಲ ವೆಂಬುದಕ್ಕೂ ಸಂದಿಲ್ಲದ ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವಾಗಿಹ ಮಹಾಂತ ಅಂತಪ್ಪ ಶರಣ ಚಿದಹಂಕೆಡಿಸಿದ. ಚಿಜ್ಯೋತಿಗೆ ದೇಹೋಹಂ ಕೆಡಿಸುವದು ಏನೇಶ್ಚಾರ್ಯ ಅದಾವ ಘನ ಕಾರ್ಯ? ಆವಾವ ಅಹಂಭಾವಕ್ಕೆಡೆಗೊಡದವನಾದುದರಿಂದ ಕಾಯವ ಕೆಡಿಸಿ ನಿರಾಶಿಕನಾದ. ಇದು ಕಾರಣ ಕೂಡಲಚೆನ್ನ ಸಂಗಾ ನಿಮ್ಮ ಶರಣಂಗೆ ಆರು ಸರಿಯಲ್ಲ.

ಓ ಕೂಡಲ ಚೆನ್ನ ಸಂಗಾ, ನಿಮ್ಮ ಶರಣಂಗೆ ಕಾಯವಧರಿಸಿದ ತಮ ತಮಗೆಲ್ಲ ನೊಸಲ ಕಣ್ಣುಳ್ಳವರು ತಮ ತಮಗೆಲ್ಲ ನಂದಿವಾಹನರು, ತಮ ತಮಗೆಲ್ಲ ಖಟ್ವಾಂಗ ತ್ರಿಶೂಲಧರರು, ದೇವರಾರು ಭಕ್ತರಾರು ಹೇಳಿರಯ್ಯ, ಕೂಡಲಸಂಗಮದೇವಯ್ಯಾ ನಿಮ್ಮ ಶರಣರು ಸ್ವತಂತ್ರರು. ಎನ್ನ ಬಚ್ಚ ಬರಿಯ ಬಸವನೆನಿಸಯ್ಯ ಎಂದು ಶರಣನ ನಿರಹಂಭಾವ ನಿರಾಲಂಬದಿರುವ ವರ್ಣಿಸುವದರಿಂದ ಶರಣಂಗೆ ಆರು ಸರಿಯಲ್ಲವೆಂದಿಹರು.

**ವಚನ 29**

**ಕಲ್ಯಾಣವರಿಯೆ ಕಟಕವರಿಯೆ, ಬೇಂಟೆಯ ನಾಡುತ್ತಿದ್ದೆ,**
**ಎನ್ನ ಕೈ ನೋಡಿ ಭೋ ಕಲಿವೀರ ಸುಭಟರು**

**ಎನ್ನ ಕೈ ನೊಡಿ ಭೋ ಅರು ಹಿರಿಯರ ಕಾದಿ ಗೆಲಿದು**
**ಗುಹೇಶ್ವರ ಲಿಂಗದಲ್ಲಿಗೆ ತಲೆವರಿಗೆಯ ನಿಕ್ಕಿ ಬಂದೆನ್ನ ಕೈ ನೋಡಿ ಭೋ** ॥ 547 ॥

**ತಾತ್ಪರ್ಯ:** ಪ್ರಭು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಮಹಾಂತಂಗೆ ದಾಸೋಹಂ ಭಾವವುಳ್ಳ ಕಲ್ಯಾಣವು ಕಾಣನು. ಇತ್ತ ದೇಹೋಹಂ ಭಾವಿಗಳ ಅರಮನೆಯು ಕಾಣನು. ನಿರಹಂಭಾವವೆ ತೃಪ್ತಿ; ಅನ್ಯ ಭಾವಂಗಳ ನೊಲ್ಲೆನು. ಹೊನ್ನು ಹೆಣ್ಣು ಮಣ್ಣು ಮುನ್ನವೆ ಸಟೆ ಮಾಡಿ ದಾಸೋಹದಲ್ಲಿ ಸುಖಿಯಾಗಿರ್ದೆನೆಂಬ ಶರಣರ ಕಲ್ಯಾಣವು ಅರಿಯೆ, ಇತ್ತ ದೇಹವೆ ನಾನೆನ್ನುವ ಅಹಂಮಮವುಳ್ಳವರ ಅರಮನೆಯು ಅರಿಯೆ. ಆತ್ಮರತಿ, ಆತ್ಮಕ್ರೀಡೆ, ಆತ್ಮಮಿಥುನ ರೂಪಿ ಬೇಂಟವನಾಡುತ್ತಿದ್ದ ನನ್ನ ಅಭಿನ್ನ ಹಸ್ತವಾಗಿಹ ಕೈಯಿ ನೋಡಿರೆ? ನನ್ನ ಕಾಮುಕತನ ಇದಾರಿಗೆ? ನನ್ನ ಅಭಿನ್ನಹಸ್ತ ಇದಾರಿಗೆ.

ಕಲಿವೀರ ಸುಭಟರು ನೀವು ನಿಜ ಸುಖ, ಸುಖಿ ಸುಖಾನುಭವವುಳ್ಳ ಲಿಂಗಾಂಗರತಿಯಾಗಿಹ ನನ್ನ ಸುಜ್ಞಾನ ಹಸ್ತವ ನೋಡಿರೆ? ನೀವು ಅಹಂಭಾವ ನಷ್ಟಮಾಡಿದ ಕಲಿವೀರರು ಅಹುದು. ಅನ್ಯ ಭಾವಂಗಳ ಕಾಣದ ಸುಭಟರು ಅಹದು. ಹೊನ್ನು ಹೆಣ್ಣು, ಮಣ್ಣನೆ ಸಟಿಮಾಡಿದ ಸುಭಟರು ಅಹುದು. ನಿರಹಂಭಾವವೆ ತೃಪ್ತಿಯೆಂದು ಡಂಗುರಪಡಿಸಿದ ಕಲಿವೀರರು ಅಹದು. ದಾಸೋಹದಲ್ಲಿ ಸುಖಿಯಾದೆನೆಂದು ಬಿತ್ತರಿಸಿ ಜ್ಞಾನಿಯಾಗಿಹ ಅಹಂಕಾರರೂಪಿ ಕಲಿಯನ್ನೆ ನಷ್ಟವಾಡಿದ ಕಲಿವೀರರು ನಿಜ. ಆರಿಗೆ ಪರಾತ್ಪರ ಜ್ಞಾನಿಯಾಗಿಹ ಅಖಂಡಾನಂದಮಯ ಶರಣಂಗಲ್ಲ.

ಗುಹೇಶ್ವರನ ಶರಣನ ದಿವ್ಯದೃಷ್ಟಿಗೆ ನಿಮ್ಮ ನಿರಹಂಭಾವದ ಕಲ್ಯಾಣವ ಅರಿಯೆ: ಸರ್ವಾರ್ಪಣ ಅರಿಯೆ ಸಕಲವು ನೀನೆಂಬ ದಾಸೋಹಂ ಸುಖವ ನರಿಯೆ, ನೀವು ಹೊನ್ನು, ಹೆಣ್ಣು,ಮಣ್ಣು ಸಟೆಮಾಡಿದುದು ಅರಿಯೆ, ಇತ್ತ ಲೋಕದವರ ಅರಮನೆಯ ಅರಿಯೆ, ಅಹಂಕಾರ ಅರಿಯೆ, ಹೊನ್ನು ಹೆಣ್ಣು ಮಣ್ಣಿನ ಮಮಕಾರವರಿಯೆ, ಸತ್ಯತ್ವ ಬುದ್ಧಿಯ ಅರಿಯೆ. ಏಕೆಂದರೆ ಸುಖ ಸುಖಿ ಸುಖಾನುಭವವುಳ್ಳ ಆತ್ಮರತಿ, ಆತ್ಮಕ್ರೀಡೆಯ ನೋಡಿರೆ? ನನ್ನ ಅಭಿನ್ನಹಸ್ತವ ನೋಡಿರೆ? ಸುಜ್ಞಾನರೂಪಿ ಕೈಯಿ ನೋಡಿರೆ.

ಅರು ಹಿರಿಯರ ಕಾದಿಗೆಲಿದು ಗುಹೇಶ್ವರ ಲಿಂಗದಲ್ಲಿಗೆ ತಲೆವರಿಗೆಯ ಸಿಕ್ಕಿಬಂದೆನ್ನ ಕೈನೋಡಿ ಭೋ, ಅರು ಹಿರಿಯರು ಆರು? ಅವರನ್ನು ಕಾದಿಗೆಲಿದುದು ಹೇಗೆ? ಅರು ಹಿರಿಯರೆಂದರೆ ಸೋಹಂ ಸೋಹಂ ಎನ್ನುವ ಅಂತರಂಗ ಮದವುಳ್ಳವರು, ಶಿವೋಹಂ ಶಿವೋಹಂ ಎಂದೆನ್ನುವ ಬಹಿರಂಗ ಮದವುಳ್ಳವರು. ಇವರು ಅರುಹಿರಿಯರು. ಸೋ ಎಂಬುದು ಅವನು ಹಂ ಎಂದರೆ ನಾನು, ಅವನು ನಾನು, ಅವನೆಂದರೆ ಸೃಷ್ಟಿಗಿಂತ ಪೂರ್ವದಲ್ಲಿದ್ದವನಾರು, ಅವನೆ ನಾನು ಎಂದು ಅರ್ಥವಾಗುವದು ಬ್ರಹ್ಮಸ್ಮಿ ಅಂಥ ಪರಬ್ರಹ್ಮದ ಇರುವೆ ಎಂದಾಗುವದು.

ಶಿವೋಹಂ ಎಂದರೆ ಶಿವಾನಂದ ರೂಪಃ ಶಿವೋಹಂ ಎಂದು ಸಿದ್ಧವಾಗುವದು. ಸಚ್ಚಿದಾನಂರೂಪಿ ಶಿವನೇ ನಾನಿರುವೆ ಎಂದು ಶಿವೋಹಂ ಸಿದ್ಧವಾಗುವದು. ಇವರುಗಳು ಅರುಹಿರಿಯರು, ಅರುವೆ ತಾನೆಂದವರು. ಅರುವ ಅರಿಯಹೋದವರಲ್ಲ,

ಸಚಿದಾನಂದ ನಾನೆಂಬ ಅರುಹಿರಿಯರು. ಅಂಗ ಲಿಂಗ ಒಂದೆನ್ನುವ ಜ್ಞಾನಿಗಳು ಅಂಗವು ಸಚ್ಚಿದಾನಂದ ಲಿಂಗವು ಸಚ್ಚಿದಾನಂ ಸಚ್ಚಿದಾನಂದ ಹೊರ್ತು ಆವಾವುದು ಇಲ್ಲವೆಂಬ ಭಾವಭರಿತರು. ಇವರ ಭಾವ ಪೂರ್ಣ ಎಲ್ಲಿ ನೋಡಿದಡಲ್ಲಲ್ಲಿ ಲಿಂಗವೆನ್ನುವ ಭಾವ, ಇವರದು ಚೈತನ್ಯ ಭಾವ ಅಪ್ರತಿಮ. ಇಂತಪ್ಪ ಭಾವಭರಿತರ ಕಾದಿಗೆಲಿದು, ಇವರ ಕಾದಿಗೆಲಿದುದು ಹೇಗೆ?

ಕಾದಿಗೆಲಿಯಲು ಸುಜ್ಞಾನವು ಮುಖ್ಯ. ನೀವು ಸುಖ ಸ್ವರೂಪರು. ಸ್ವಸುಖಿಗಳಾಗಿರುವಿರಾ? ಸುಖಾನುಭವವುಳ್ಳವರಾದಲ್ಲಿ ಸ್ವಸುಖಿಗಳಾದುದು ಹೇಗೆ? ಎಂದು ಅವರನ್ನು ಭಾವ ಭರಿತರನ್ನಾಗಿ ನೋಡಲಿಲ್ಲ. ನನಗಿಂತನ್ಯವಾಗಿ ಕಾಣಲಿಲ್ಲ. ನನ್ನ ಸಮಾನವಾಗಿ ಕಾಣಲಿಲ್ಲ. ಅನುಪಮವಾಗಿ ಕಂಡೆ. ಓ ಅರುಹಿರಿಯರೆ? ನಿಮ್ಮದು ಸೋಹಂ ಭಾವ, ಶಿವೋಹಂ ಭಾವವಾದರೆ ಇದು ನಿಮ್ಮ ನೀವು ತಿಳಿದು ಭಾವಭರಿತರಾಗಿರುವಿರೋ? ಶೃತಿಗಳ ಕೇಳಿ ಭಾವ ಭರಿತರಾಗಿರುವಿರೊ? ಇದು ನಿಮ್ಮಯ ಅರಿವು ಎಂದಲ್ಲಿ ಇದು ಶೃತಿಗಳಿಂದ ಬಂದ ಅರಿವು ಇರಲಿ. ಗುರುಗಳಿಂದ ಬಂದುದು ಇರಲಿ. ಈ ಮಹಾವಾಕ್ಯ ನಿಮ್ಮಿಂದ ಸಿದ್ಧವಾಗುವವೋ? ಅಥವಾ ಈ ಮಹಾವಾಕ್ಯಗಳೆ ನಿನ್ನನ್ನು ಸಿದ್ಧಮಾಡುವವು ಎಂದಲ್ಲಿ, ಇವು ನಿನ್ನನ್ನು ಸಿದ್ಧಮಾಡಲರಿಯವು. ಇದು ಕಾರಣ ನೀನಾವುದರಿಂದ ಸಿದ್ಧವಾಗದ ಅನುಪಮ ಅಖಂಡ, ಅಚಲನಾಗಿರುವದರಿಂದ ನಾ ನೀನೆಂಬ ಸಂದಳಿದ ತೆರಹಿಲ್ಲದ ಘನ ಏನೊಂದಾಗದ ಸ್ವಮಹಿಮ. ನೀನಾರೆಂಬುದು ನಿನ್ನಿಂದ ನೀನೆ ಅರಿವುದು ಎಂದಲ್ಲಿ ಈ ಅರುಹಿರಿಯರು ತಾವಾರೆಂದರಿಯಲು ನೀನೆನಲಿಲ್ಲ. ನಾನೆನಲಿಲ್ಲ ಅರಿಯದರುವು ತಾವಾಗಿಹುದೆ ನನ್ನ ಗೆಲವು.

ಗುಹೇಶ್ವರ ಲಿಂಗದಲ್ಲಿಗೆ ಬರಲು ತಲೆ ವರಿಗೆಯ ಸಿಕ್ಕಿ ಬಂದೆನ್ನ ಕೈನೋಡಿ ಭೋ: ಆವಾವ ಉಪಾಧಿಯಿಲ್ಲದೆ ನಿರಾಲಂಬನಾಗಿ ಬಂದುದೆ ತಲೆವರಿಗೆಯ ಸಿಕ್ಕಿ ಬಂದ ನನ್ನ ಸುಜ್ಞಾನ ಹಸ್ತವು ಅಂಗದುದಯ ಲಿಂಗದ ಸುಖವು ಲಿಂಗದುದಯ ಅಂಗ ಸುಖ ಎರಡಿಲ್ಲದ ಘನವನೇನೆಂಬೆ. ನನ್ನ ಅಂಗದುದಯ, ತ್ಯಾಗಾಂಗ ಭೋಗಾಂಗ ಯೋಗಾಂಗ, ಈ ಮೂರಕ್ಕೂ ಮೀರಿದ ಘನಾಂಗ ಚಿದಂಗ ಇದು ಅನುಪಮವಾದುದರಿಂದ ಲಿಂಗ ಸುಖವು ನಾನು ತ್ಯಾಗಾಂಗ ಯೋಗಾಂಗ ಭೋಗಾಂಗ ಇವುಗಳ ಹಂಗು ಹರಿದುದೆ, ತಲೆವರಿಗೆಯನ್ನಿಕ್ಕಿದುದು ಗುಹೇಶ್ವರಲಿಂಗ ಪ್ರಜ್ವಲಿಸಿದುದೆ ಬಂದೆನ್ನ ಕೈನೋಡಿ ಭೋ ಎಂದು ಹೇಳಿಹರು. ಅನುಪಮವಾಗಿ ನನ್ನಿಂದ ನನ್ನ ಸ್ವರೂಪ ಪ್ರಜ್ವಲಿಸಿದುದೆ ಸುಜ್ಞಾನದ ಘನವು ಎಂದು ಹೇಳಿದುದು.

**ವಚನ 30**

**ಪಂಚ ಮಹಾಪಾತಕಂಗಳಾವುದೆಂದರಿಯರು.**
**ಭವಿಯ ತಂದುಭಕ್ತನ ಮಾಡುವುದೆ.**
**ಪ್ರಥಮ ಪಾತಕ. ಭಕ್ತರಿಗೆ ಶರಣೆಂಬುದೆ**
**ದ್ವಿತೀಯ ಪಾತಕ. ಗುರುವೆಂಬುದೆ,**

**ತೃತೀಯ ಪಾತಕ. ಗುರು,ಲಿಂಗ, ಜಂಗಮ, ಪ್ರಸಾದವಕೊಂಡಡೆ ನಾಲ್ಕನೆ ಪಾತಕ. ಗುಹೇಶ್ವರ ಲಿಂಗದಲ್ಲಿ ಭಕ್ತಿಮಾಡುವದು ಪಂಚಮ ಪಾತಕ.॥552॥**

**ತಾತ್ಪರ್ಯ:** ಪಂಚಮಹಾಪಾತಕಂಗಳಾವುದೆಂದರಿಯರು ಭವಿಯತಂದು ಭಕ್ತನ ಮಾಡುವುದೆ ಪ್ರಥಮ ಪಾತಕ: ಬಹು ಜನ ಪಂಚ ಮಹಾಪಾತಕಗಳೆಂದರೆ, ಗೋಹತ್ಯೆ ಸ್ತ್ರೀಹತ್ಯೆ, ಶಿಶುಹತ್ಯೆ, ಗರ್ಭಿಣಿಹತ್ಯೆ, ಬ್ರಹ್ಮ ಹತ್ಯೆ, ಇವುಗಳೆ ಪಂಚ ಮಹಾಪಾತಕಗಳೆಂದು ತಿಳಿದ ಬಹಳಷ್ಟು ವೈದಿಕರಿರುವರು. ಇವರುಗಳೆಲ್ಲ ವೇದ ಪರಾಯಣರು ,ಆಚಾರ್ಯರು ಶಬ್ದ ವೇದಿಗಳು. ಇವರನ್ನು ನಂಬಿದ ಭಕ್ತರಿಗೂ ಭಾವುಕರಿಗೂ ಈ ಭಾವ ದೃಢವಾಗಿದೆ. ಇವರುಗಳ ಜ್ಞಾನಕ್ಕೂ ಪ್ರಭುದೇವರ ಜ್ಞಾನಕ್ಕೂ ಬೆಳಕು ಕತ್ತಲೆಗಿರುವಷ್ಟು ವ್ಯತ್ಯಾಸ. ಬೆಳಕಿದ್ದಲ್ಲಿ ಕತ್ತಲೆ ಹೇಗೆ ಇಲ್ಲವೊ ಹಾಗೆ ಪ್ರಭುವಿನ ಯತಾರ್ಥ ಜ್ಞಾನಕ್ಕೂ ಇವರ ಜ್ಞಾನಕ್ಕೂ ಅಷ್ಟು ವಿರುದ್ಧವು. ಇವರು ತಿಳಿದ ಪಂಚ ಮಹಾಪಾತಕಂಗಳೆತ್ತ ಪ್ರಭು ತಿಳಿದ ಪಂಚಮಹಾಪಾತಕಗಳೆತ್ತ ಪ್ರಭುವಿನ ನಿರಂತರ ಮಂಗಳಮಯವಾಗಿಹ ಘನವೆತ್ತ? ಇಲ್ಲದುದು ಉಂಟು ಮಾಡಿಕೊಂಡು ತಲ್ಲಣಿಸುವ ಭೇದಜ್ಞಾನದಿಂದುಕ್ತವಾಗಿಹ ಚರ್ಮಚಕ್ಷುವೆತ್ತ, ದಿವ್ಯದೃಷ್ಟಿ ಎತ್ತ?

ಪ್ರಭು, ನಿರಂತರವಾಗಿಹ ಮಂಗಳಮಯ ತತ್ವವರಿತು, ಎತ್ತ ನೋಡಿದಡತ್ತತ್ತ ತನ್ನನ್ನೆ ಕಾಣುವ ಸ್ವಯಂ ಜ್ಯೋತಿ, ನುಡಿಗೆಡೆಗೊಡದ ಘನ ನಿಸ್ಸೀಮ, ಭವಿಯ ತಂದು ಭಕ್ತನ ಮಾಡಲಿಲ್ಲ. ಭಕ್ತಂಗೆ ಶರಣನೆನಲಿಲ್ಲ, ಗುರುವೆನಲಿಲ್ಲ, ಗುರು, ಲಿಂಗ, ಜಂಗಮ, ಪ್ರಸಾದ ಕೊಳಲಿಲ್ಲ. ಗುಹೇಶ್ವರ ಲಿಂಗ ತನಗಿಂತ ಬೇರಾಗಿ ಕಾಣದ್ದರಿಂದ ಭಕ್ತಿ ಮಾಡದ್ದರಿಂದ ಪಂಚಮಹಾಪಾತಕಿಯಾಗಲಿಲ್ಲ.

ಭವಿಯತಂದು ಭಕ್ತನ ಮಾಡುವದು ಪ್ರಥಮ ಪಾತಕ: ಆಧುನಿಕ ಸಮಯದಲ್ಲಿ ಎಷ್ಟೊ ಗುರು ಪುಂಗರು ಜಂಗಮದೇವಯ್ಯಗಳು, ಪ್ರಥಮ ಪಾತಕಿ ಕಾರ್ಯ ಮಾಡುವುದು ಬಹು ಆಶ್ಚರ್ಯ. ಇವರ ದೃಷ್ಟಿ ವಿಪರೀತ. ಇವರಿಗೆ ಭವಿ ಆರು? ಭಕ್ತನಾರು? ಎನ್ನುವ ದಿವ್ಯದೃಷ್ಟಿಯಿಂದ ನೋಡುವಂತೆ ಕಾಣುವದಿಲ್ಲ. ಪ್ರಭುವಿನ ದೃಷ್ಟಿಗೂ ಇವರ ದೃಷ್ಟಿಗುಣ ಎಷ್ಟು ಅಂತರ. ಭವಿಯೆಂದರೆ ಇವರು ಕೊರಳಲ್ಲಿ ಲಿಂಗಧರಿಸದವರೆಲ್ಲ ಭವಿ ಎನ್ನುವ ಸಂಕುಚಿತ ಭಾವಿಗಳು. ಪೂಜಾಲಿಂಗವ ಧರಿಸಿ ಪ್ರತಿದಿನ ಲಿಂಗಯ್ಯನನ್ನು ಪೂಜಿಸುವವರೆಲ್ಲ ಭಕ್ತರು. ಇವರ ದೃಷ್ಟಿ ಅಲ್ಲವೆ? ಪ್ರಭು ಇವರ ಸೀಮಿತ ದೃಷ್ಟಿಗೆ ಒಪ್ಪಲಿಲ್ಲ. ಭವಿ? ಸದಾ ಸರ್ವತ್ರ ಇದ್ದಂತಿರುವ ಮಂಗಳಮಯ ಪರಂಜ್ಯೋತಿ ಎಂದು ಕೂಡ. ಭವಿ? ಎಂದರೆ ಲಿಂಗ ಅರಿವುಡೆ ತಾನೆ ಇರುವಲ್ಲಿ ಲಿಂಗವು ಮರವುಳ್ಳದ್ದಾಗಬಹುದೆ? ಮರವರುವಿಂಗೆ ಮೀರಿದ ಘನಕ್ಕೆ ಮರವು ಉಂಟೆ? ಇಲ್ಲದುದರಲ್ಲಿ ಮರವು ಕಂಡುದು ಆಶ್ಚರ್ಯ.

ಕೆಲವು ಗುರು ಘನರು, ಜಂಗಮ ದೇವಯ್ಯಗಳು, ಅರುವಿಂಗರುವಾಗಿಹ ಮಹಾನುಭವವಿಲ್ಲದುದರಿಂದ ಇವರದು ಸೀಮಿತ ದೃಷ್ಟಿ. ಸೀಮಿತ ಭಾವ ಸೀಮಿತ ಜ್ಞಾನವಿದ್ದುದರಿಂದ ಭವಿ ತಂದು ಭಕ್ತನ ಮಾಡಿದೆವೆನ್ನುವರು.

ಪ್ರಭು, ಲಿಂಗ ಒಂದಾಗಿರ್ದ ಜಂಗಮ ಎಲ್ಲಿ ನೋಡಿದಡಲ್ಲಲ್ಲಿ ಅಪ್ರತಿಮ

ಲಿಂಗವ ನೋಡುವ ಅನುಪಮ ನಿಸ್ಸೀಮವಂತ, ಸೀಮಿತ ದೃಷ್ಟಿಯುಳ್ಳವ ನಾಗಿದ್ದರಿಂದ ಭವಿ ಎಂದರೆ ಅಪ್ರತಿಮ ಲಿಂಗ, ಅನುಪಮಲಿಂಗ ಅಚಿಂತ್ಯಲಿಂಗ, ನೆನಹು ನಿರ್ಣಯಕ್ಕೆ ನಿಲುಕದ ಲಿಂಗ ಅರಸಿ ಕಾಣಬಾರದ ಲಿಂಗ. ಘನ ಗಂಭೀರ ಮಹಾಘನ ತಿಳಿದ ಘನಕ್ಕೆ ಘನ, ಈ ಮಹಾಂತ ಭವಿಯತಂದು ಭಕ್ತನಿಗೆ ಪ್ರಥಮ ಪೂಜಾ ಲಿಂಗ ಕೊಟ್ಟು ಹೋಗಲಿಲ್ಲವಾದ್ದರಿಂದ ಪ್ರಥಮ ಪಾತಕಿಯಾಗಲಿಲ್ಲ.

ಭವಿಯು ಭಕ್ತನಾಗನು, ಭಕ್ತನ ಮಾಡುವದು ಅಸಾಧ್ಯ, ಭಕ್ತಂಗೆ ಉತ್ಪತ್ತಿ, ಸ್ಥಿತಿ ಇಲ್ಲ. ಸ್ಥಿತಿ ಇಲ್ಲಾಗಿ ಲಯವಿಲ್ಲ, ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯಾನಾಗಿರ್ಪನಯ್ಯ ಗುಹೇಶ್ವರಾ ನಿಮ್ಮ ಶರಣ. ಭಕ್ತ, ಅಪೂರ್ವಿಕ ಭಕ್ತ, ಅಕ್ರಿಯೆ ಭಕ್ತ, ಮುನ್ನೆಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಹ ಭಕ್ತ. ಘನಗಂಭಿರ ಮಹಾಘನದೊಳಗೆ ಘನಕ್ಕೆ ಘನವಾಗಿಹ ಭಕ್ತ. ಲಿಂಗವರಿಯ ಹೋಗಿ ಲಿಂಗಕ್ಕೆ ಲಿಂಗವಾಗಿ ಕಂಡ ಘನ. ಅರುವಿಂಗರುವಾಗಿಹ ಘನ, ಎರಡೊಂದಾದ ಮಹಾಂತ. ಆ ಭಕ್ತಂಗೆ ಅರ್ಪಿತವಿಲ್ಲ, ಅರ್ಚನೆಯಿಲ್ಲ ಅವಧಾನವಿಲ್ಲ, ಶಬ್ದಕ್ಕೆ ತೆರಹಿಲ್ಲದಿರುವಲ್ಲಿ ಭಕ್ತಂಗೆ ಶರಣೆನಲಿಲ್ಲ. ತನಗಿಂತ ಅನ್ಯವಾಗಿ ಕಾಣಲಿಲ್ಲ. ಪ್ರಭುದೇವ ನಿಸ್ಸೀಮ ನಿಲುವಿನಲ್ಲಿ ನಿಂತ, ಪರುಷೋತ್ತಮ ಅರೆಭಕ್ತ ಅರೆ ಜಂಗಮರೊಡೆತನ ನಿಸ್ಸೀಮ ನಿಲುವಿಂಗೆ ಸರಿಯಾಗದು. ಗುರುಕರುಣಿಸಿದ ಲಿಂಗ ಅದು ಪೂಜಾ ಲಿಂಗವಲ್ಲ ಅಪ್ರತಿಮ ಲಿಂಗ. ಅರುವಿನ ಅರುವು ಅರಿದರಿದು ನೋಡುವುಡೆ ಲಿಂಗತಾನೆ ಇರುವಲ್ಲಿ ಭಕ್ತಂಗೆ ಶರಣೆಂಬುದು ದ್ವಿತಿಯ ಪಾತಕವೆಂದು ಹೇಳಿಹರು. ಭಕ್ತನನ್ನು ರೂಪ ನಾಮದಿಂದುಕ್ತನನ್ನಾಗಿ ಕಂಡುದೆ ದ್ವಿತೀಯ ಪಾತಕವೆಂದು ಹೇಳಿಹರು.

ಗುರುವೆಂಬುದು ತೃತೀಯ ಪಾತಕ: ನಾನೀನೆಂಬುದಕ್ಕೆ ತೆರಹಿಲ್ಲದ ಘನವನ್ನು ಗುರುವೆಂದಲ್ಲಿ ತೃತೀಯಪಾತಕ. ಗುರು ಘನದಲ್ಲಿ ಚಾರಿತ್ರ ಕಂಡುದು ತೃತೀಯ ಪಾತಕ. ಏಕೆಂದರೆ ಗುರು! ಬೆಳಗುಳ್ಳಜ್ಯೋತಿ ಚಿಜ್ಯೋತಿ, ಸ್ವಯಂಜ್ಯೋತಿ, ವಾಙ್ಮನೋತೀತ ಅಕಲ್ಪಿತ ಘನ ಕಲ್ಪಿತಕ್ಕೆಡೆಗೊಟ್ಟುದೆ ತೃತೀಯ ಪಾತಕವೆಂದು ಹೇಳಿಹರು.

ಗುರು ಲಿಂಗ ಜಂಗಮ ಪ್ರಸಾದವ ಕೊಂಡಡೆ ನಾಲ್ಕನೆ ಪಾತಕ: ನಾಲ್ಕನೆಯ ಪಾತಕ ಆರು? ಗುರುವಿನಲ್ಲಿ ಚಾರಿತ್ರವ ಕಂಡವ ಲಿಂಗದಲ್ಲಿ ಲಕ್ಷಣವ ಜಂಗಮದಲ್ಲಿ ಜಾತಿ ಅರಸುವವರು ಪ್ರಸಾದದಲ್ಲಿ ರುಚಿಕಂಡವರು, ಇವರೆ ಗುರುವಿನಿಂದ ಪ್ರಸಾದಕೊಂಡವರು. ಲಿಂಗದಿಂದ ನೈವೇದ್ಯಕೊಂಡವರು, ಜಂಗಮದಲ್ಲಿ ಅವರ ಶ್ರೇಷ್ಠ ಪ್ರಸಾದ ವೆಂದು ಕೊಂಡವರು. ಪ್ರಸಾದದಲ್ಲಿ ರುಚಿ ಕೊಂಡವರು ಇವರೆ ನಾಲ್ಕನೆಯ ಪಾತಕಿ. ಗುರು ಲಿಂಗ ಜಂಗಮ ಪ್ರಸಾದವೆಂಬುದು ವಾಙ್ಮನೋತೀತವು ಅರಿದುರಹಿಸಿ ಕೊಂಬುದಕ್ಕೂ ಮೀರಿದ ಘನ ಅಚಿಂತ್ಯತ್ವ, ಭಾವಕ್ಕಗಮ್ಯವಾದವುಗಳನ್ನು ಕುರುಹುಳ್ಳದ್ದನ್ನಾಗಿ ಕಂಡುದೆ ನಾಲ್ಕನೆಯ ಪಾತಕ. ನೆನಹಿಂಗೂ ನಿರ್ಣಯಕ್ಕೂ ಚಿಂತನಕ್ಕೂ ಮೀರಿದ ಘನದಿರುವುಳ್ಳದ್ದನ್ನು ತನ್ನ ಕಲ್ಪಿತಕ್ಕೊಳಪಡಿಸಿ ಕಂಡುದೆ ನಾಲ್ಕನೆಯ ಪಾತಕವೆಂದು ಹೇಳಿಹರು.

ಗುಹೇಶ್ವರ ಲಿಂಗದಲ್ಲಿ ಭಕ್ತಿಮಾಡುವದು ಪಂಚಮಪಾತಕ: ಅಪ್ರತಿಮ ಲಿಂಗ,

ಅಚಿಂತ್ಯಲಿಂಗ, ಅನಾಮಯವಾಗಿಹ ನಿರ್ವಾಣ ಈ ಅನುಪಮ ಲಿಂಗ ತನ್ನಿಂದ ತಾನು ಅರಿದರಿದು ನೋಡುವದು ಬಿಟ್ಟು ಅರ್ಚನೆಗೊಳಪಡಿಸಿ, ಅರ್ಪಿತಕ್ಕೊಳಪಡಿಸಿ, ನೆನಹು, ನಿರ್ಣಯ ಚಿಂತನಕ್ಕೊಳಪಡಿಸಿ ಭಾವದಿಂದುಕ್ತರಾಗಿ ಭರಿತ ಭಾವದವರಾದುದೆ ಐದನೆಯ ಪಾತಕ ವೆಂದು ಹೇಳಿಹರು.

**ವಚನ 31**

**ನೀ ನಾನೆಂಬ ಭಾವವರಿಂದಾಯಿತ್ತು ಹೇಳಾ**
**ನೀನೆಂಬುದೆ ಅಜ್ಞಾನ, ನಾನೆಂಬುದೆ ಮಾಯಾಧೀನ**
**ನೀನೆನ್ನದೆ, ನಾನೆನ್ನದೆ ಇಪ್ಪ ಸುಖವ ಭಿನ್ನವಲ್ಲದೆ ಅರಿಯಬಲ್ಲಡೆ**
**ಆ ಸುಖವು ನಿಮಗರ್ಪಿತ ಕಾಣಾ ಗುಹೇಶ್ವರಾ.** ॥ 562 ॥

**ತಾತ್ಪರ್ಯ:** ನೀನಾನೆಂಬ ಭಾವ ವರಿಂದಾಯಿತ್ತು ಹೇಳಾ: ಭಾವಕ್ಕಗಮ್ಯವಾಗಿಹ ತತ್ವ, ತಿಳಿಯದವರಿಂದಲೂ ನೀನಾನೆಂಬಭಾವ ಉಂಟಾಗಿವೆ. ತಿಳಿದವರಿಂದಲೂ ನೀನಾನೆಂಬ ಭಾವ ಬಂದರೂ ಅದು ಲೀಲೆಯಾಗಿದೆ.

ಪ್ರಥಮಾಚಾರ್ಯನಾಗಿಹ ಬಸವರಸ, ಭಾವಕ್ಕಗಮ್ಯವಾಗಿಹ ತತ್ವತಿಳಿದ ತತ್ತ್ವವೇತ್ತನಾಗಿದ್ದರೂ ತಿಳಿಯದವರಂತೆ ದಾಸೋಹಂ ಭಾವಿಯಾಗಿ ಹೆಂಗೂಸು ನೀನೆ, ಗಂಡು ಗೂಸುನೀನೆ, ಮರಳು ತಲೆ ಹುರುಳು ತಲೆ ನೀನೆ ಎಮ್ಮಕ್ಕನ ಗಂಡ ನೀನೆ ಕೂಡಲಸಂಗಮದೇವಾ, ಭ್ರಾಂತಳಿದು ಭಾವ ನೆಲೆ ಗೊಂಡಿತ್ತಾಗಿ ಎಂದು ಸಕಲವು ನೀನೆಂಬ ಭಾವ ಭರಿತವಾದುದನ್ನೆ ಪ್ರಕಟಪಡಿಸಿದನಲ್ಲದೆ, ಭಾವಕ್ಕಗಮ್ಯವಾಗಿಹ ತನ್ನ ನಿಜದಿರುವು ತೋರಲಿಲ್ಲ. ಇತ್ತ ಕಲಿಯುಗದ ಶ್ರೀಗುರು ವೆನಿಸಿಕೊಂಡಿಹ ಆದಿಶಂಕರಾಚಾರ್ಯರು ವ್ಯಾಸರು ಸಿದ್ಧಾರೂಢರು ಗರಗದ ಮಡಿವಾಳೇಶ್ವರರು ಅಹಮಿಲ್ಲದ ಚಿದ್ಘನ ತತ್ವ ತಿಳಿದವರು, ತಿಳಿದರೂ ಲೀಲಾಮಯರಾಗಿ ಸಕಲವು ನಾನೆಂದು ಶಿವಾನಂದ ರೂಪಃ ಶಿವೋಹಂ ಎಂದು ಸಿಂಹಗರ್ಜನೆಯ ಗರ್ಜಿಸಿದರು. ಇದು ಜಗತ್ಕಲ್ಯಾಣದ ಅಭಿನಯ ನಿರಾಭಾರಿಯಾಗಿಹ ಅಭಿನಯ, ಯಾವ ಅಭಿನಯ. ಅಭಿನಯಿಸಿದರೂ ಅದರ ಭ್ರಾಂತರಲ್ಲ.

ಭಕ್ತರಾಗಿ ತೋರಲಿ ಜಂಗಮವಾಗಿ ತೋರಲಿ ಗುರುವಾಗಿ ತೋರಲಿ, ಸದ್ಗುರುವಾಗಿ ತೋರಲಿ, ಇವರುಗಳು ಅಭಿನಯಧಾರಿಗಳು ತತ್ತ್ವವೇತ್ತರು ತತ್ತ್ವದೃಷ್ಟಿಯುಳ್ಳ ಮಹಾಂತರು ನಿಃಶಬ್ದವೇದಗಿಳು. ನುಡಿದರೂ ನುಡಿಗೆಡೆಗೊಡದ ಘನವಾಗಿಹರು.

ಕೆಲಬರು ಶಬ್ದವೇದಿಗಳು ಭಾವದಿಂದುಕ್ತರು ಅವರವರ ಭಾವ ಅವರಿಗೆ ದಿಟವಾಗಿದೆ. ಇವರು ನಾನೆ ಅನ್ನಲಿ ನೀನೆ ಅನ್ನಲಿ ಭಾವಕ್ಕಗಮ್ಯವಾಗಿಹ ಘನವ ತಿಳಿಯದವರು. ಶಿಷ್ಯನಾದವಂಗೆ ಶಿಷ್ಯಭಾವದಿಟವಾಗಿದೆ. ಗುರುವಾದವಂಗೆ ಗುರುಭಾವದಿಟವಾಗಿದೆ. ಇದೆ ಪ್ರಕಾರ ಭಕ್ತ ಜಂಗಮ ಭಾವ ದಿಟವಾದುದರಿಂದ ಇವರಲ್ಲಿ ನೀನಾರೆಂಬ ಭಾವ ದಿಟವಾದವು. ಇವರು ದಾಸೋಹಂ ಭಾವಿಗಳಾದರೂ ಭ್ರಮಿತರೆ, ಚಿದಾನಂದರೂಪಃ ಶಿವೋಹಂ ನಾನೆಂದರೂ ಭ್ರಮಿತರೆ!

ಭ್ರಮಿತರಾದುದರಿಂದ ನೀನೆಂಬುದು ಅಜ್ಞಾನ, ನಾನೆಂಬುದು ಮಾಯಾಧೀನವಾಗಿದೆ. ಏಕೆಂದರೆ, ಕೆಲವರು ಸಾಂಪ್ರದಾಯ ಬದ್ಧರಾಗಿ ಬಸವಣ್ಣನವರಂತೆ ಸಕಲವು ನೀನೆಂಬ ದಾಸೋಹಂ ಭಾವದವರು ಇದ್ದಾರೆ. ಇತ್ತ ಅಹಂ ಬ್ರಹ್ಮಾಸ್ಮಿ ನಾನು ಬ್ರಹ್ಮನಿದ್ದೇನೆಂಬ ಚಿದಹಮ್ಮುಳ್ಳ ಸಾಂಪ್ರದಾಯದವರು ಇದ್ದಾರೆ. ಇವರು ತತ್ತ್ವ ತಿಳಿಯದವರು ಇದು ಕಾರಣ, ನೀನೆಂಬುದು ಅಜ್ಞಾನವಾಯಿತ್ತು. ನಾನೆಂಬುದು ಮಾಯಾಧೀನವಾಯಿತ್ತು ಎಂದು ಹೇಳಿದುದಲ್ಲದೆ ನೀನೆನ್ನದೆ ನಾನೆನ್ನದೆ ಇಪ್ಪ ಸುಖವು ಭಿನ್ನವಿಲ್ಲದೆ ಅರಿಯಬಲ್ಲಡೆ ಆ ಸುಖವು ನಿಮಗರ್ಪಿತ ಕಾಣಾ ಗುಹೇಶ್ವರಾ.

ನೀನೆನ್ನದೆ ನಾನೆನ್ನದೆ ಇಪ್ಪ ಸುಖ ಸೀಮಾತೀತ ಸುಖ, ಇದು ನಿಸ್ಸೀಮ ನಿಲಯ, ನಿಜ ನಿಲಯ, ಏಕಮೇವಾದ್ವಿತೀಯ ತತ್ವ ತಿಳಿದವರ ನಿಲಯ, ಇದು ಅಖಂಡಿತ ಘನಪೂರ್ಣ ತನ್ನಿರುವಿನ ಅರುವು. ಇಲ್ಲಿ ನೀನೆಂಬುವ ದಾಸೋಹಂಕ್ಕಿಂಬಿಲ್ಲ ನಾನೆಂಬ ಚಿದಹಮ್ಮಿಗೂ ಇಂಬಿಲ್ಲ. ನಾ ನೀನೆಂಬ ಸಂದಳಿದ ಸಯ ಸುಖ ಇದನ್ನು ಭಿನ್ನವಿಲ್ಲದೆ ಅರಿಯಬಲ್ಲಡೆ ಆ ಸುಖವು ನಿಮಗರ್ಪಿತ ಕಾಣಾ ಗುಹೇಶ್ವರಾ.

ಸುಖದೇಕರಸವದು ಭಿನ್ನವಿಲ್ಲದೆ ಅರಿತವರ ಸುಖ, ಅದು ನಿಜ ಸುಖ, ಅವರು ತನ್ನಿಂದ ಅರಿಸಿಕೊಳ್ಳವುದು ಆಗದವರು, ಹಲಬುವದು ಆಗದವರು, ಅಜ್ಞಾನ ಆಗದವರು, ಮಾಯಕ್ಕೊಳಪಟ್ಟ ಚಿದಹಮ್ಮುಳ್ಳ ತೂರ್ಯವು ಆಗದವರು. ಇವೆರಡು ಮೀರಿದ ಸಮ ನಿಲಯವುಳ್ಳವರು ನಿರಂತರವಾಗಿರುವ ಮಂಗಳಮಯ ತತ್ವವರಿತು ಅದುವೆ ತಾನಾದವರು. ಅವರೆ ನಾನೆನ್ನದವರು, ನೀನೆನ್ನದವರು ಅಖಂಡಮಯ ಸುಖ ಸ್ವರೂಪಿಗಳು. ಅವರ ದಿವ್ಯದೃಷ್ಠಿಯಲ್ಲಿ ಭರಿತಭಾವವುಳ್ಳ ದಾಸೋಹಂಭಾವವು. ಸಕಲವು ನೀನೆನ್ನದಿದ್ದ ಅಧಿಷ್ಠಾನವಾಗಿಹ ತತ್ವವಾಗಿಯೆ ತಿಳಿದು ಏನೆಂದೆನಲಿಲ್ಲದ ಅರುವುಳ್ಳವರಾಗಿ ನಿಃಶಬ್ದ ಬ್ರಹ್ಮದ ನಿಲುವೆ ತಮ್ಮಿರುವಾಗಿ ನಿಂತಿಹರು. ಇದಲ್ಲದೆ ನಾನೆಂಬ ಮಾಯಾಧೀನವುಳ್ಳ ಚಿದಹಮ್ಮನ್ನು ಕೂಡ ನಾನೆನ್ನದೆ ಇದ್ದ ಅಧಿಷ್ಠಾನವಾಗಿಹ ತತ್ವವಾಗಿಯೆ ತಿಳಿದು ಅರಿಯದರುವುಳ್ಳವರಾಗಿ ನಿಃಶಬ್ದ ಬ್ರಹ್ಮದ ನಿಲುವೆ ತಮ್ಮಿರವಾಗಿ ನಿಂತಿಹರು.

ನಿಜವರಿತವರು ನೀ ನಾನೆಂಬ ಭಾವ ಭಿನ್ನವಿಲ್ಲದೆ ಅರಿತವರು, ನೀನೆಂಬ ದಾಸೋಹಂ ಭಾವ ಅದು ತನ್ನ ಸ್ವರೂಪಕ್ಕಿಂತ ಬೇರಾಗಿಲ್ಲ. ನಾನೆಂಬ ಚಿದಹಮ್ಮು ತನ್ನ ಸ್ವರೂಪಕ್ಕಿಂತನ್ಯವಾಗಿಲ್ಲ. ತನ್ನದು ನೀ ನಾನೆಂಬ ಸಂದಳಿದ ನಿಸ್ಸೀಮ ನಿಲವು. ಇದು ಭಿನ್ನವಿಲ್ಲದೆ ಅರಿತ ಅರುವಿನ ಘನತ್ವ, ಇದು ನಿಮಗರ್ಪಿತ ಕಾಣಾ ಗುಹೇಶ್ವರಾ ಎಂದು ಬಿತ್ತರಿಸಿದ ಪ್ರಸಾದವಾಣಿ ನೋಡುವುಡೆ ಅದು ಗುಹೇಶ್ವರನ ಬೆಳಗಿನ ಬೆಳಗು, ವಿಕಾಸವಾದ ಅರುಹೃದಯ. ಇದು ನಿಮ್ಮದು ನೀವೆ ಎಂಬುದಕ್ಕೂ ಸಂದಿಲ್ಲದಿಪ್ಪ ಘನಗಂಭೀರ ಮಹಾಘನವೆಂಬುದು ಕೂಡಾ ನಿಮ್ಮದು ನೀವೆ ನಿಮಗರ್ಪಿತ ಎಂದು ಹೇಳಿಹರು.

**ವಚನ 32**

**ಹಸಿವರಿತಲ್ಲದೆ ಪ್ರಸಾದಿಯಲ್ಲ,**

**ತೃಷೆಯರಿತಲ್ಲದೆ ಪಾದೋದಕಿಯಲ್ಲ,**
**ನಿದ್ರೆಯರಿತಲ್ಲದೆ ಭವವಿರಹಿತನಲ್ಲ.**
**ಅನಲ ಪವನ ನಿಂದಲ್ಲದೆ ಪ್ರಾಣಲಿಂಗಿಯಲ್ಲ.**
**ಇದು ಕಾರಣ ಗುಹೇಶ್ವರ ಲಿಂಗವು ಎಲ್ಲರಿಗೆಲ್ಲಿಯದೊ? ॥ 565 ॥**

**ತಾತ್ಪರ್ಯ:** ಹಸಿವರಿತಲ್ಲದೆ ಪ್ರಸಾದಿಯಲ್ಲ: ವೈಶ್ವಾನರನ ಹಸಿವರಿತವರು ಸಿಕ್ಕುತ್ತಾರೆ ಇವರು ಅನ್ನದ ಮಕ್ಕಳು, ಅನ್ನಕ್ಕಾಗಿ ಹುಟ್ಟಿದವರು ಜಠರಾಗ್ನಿ ತೃಪ್ತಿ ಅಷ್ಟೆ ನೋಡುವವರು. ಒಮ್ಮೆ ಊಟವಾದ ಮೇಲೆ ಪುನಃ ಹಸಿವು ಆಗಬಾರದು. ಇದು ಉಣ್ಣದ ಊಟ, ಸದ್ಗುರು ನಾಥನ ಜ್ಞಾನಾಮೃತದೂಟ, ಈ ಜ್ಞಾನಾಮೃತದಿಂದ ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತರೂಪ ಪ್ರಾಪ್ತಿ, ಜ್ಞಾನಾಮೃತದೂಟದ ಹಸಿವು ತನಗಾದುದು.

ತಾ ತಿಳಿಯಬೇಕು ಅಂದಾಗ ಹಸಿವರಿತವರು ಈ ಹಸಿವು ಅದೆಷ್ಟು ಜನರಿಗೆ ಇದೆ? ಇಂದ್ರಿಯಂಗಳು ಪ್ರಾಣಾದಿಗಳು ಕರಣಾದಿಗಳು ಇವುಗಳ ಹಸಿವುಳ್ಳವರು ಸಿಗಬಹುದು. ಅರುವಿನ ಹಸಿವೆ ಉಳ್ಳವರು ಸಿಗಬಹುದೆ? ಪುರುಷಾರ್ಥ ಹಸಿವೆ ಆದವರು ಸಿಕ್ಕಬಹುದೆ? ಈ ಅರುವಿನ ತೃಪ್ತಿ ಹಸಿವುಳ್ಳವರೆಂದರೆ, ಜ್ಞಾನೇಶ್ವರ ಮಹಾರಾಜ, ನಿವೃತ್ತಿನಾಥ ಮುಕ್ತಾಯಕ್ಕ ಶುಕದೇವ, ಶಂಕರಾಚಾರ್ಯ, ಸಿದ್ಧರೂಢರು, ಗರಗದ ಮಡಿವಾಳೇಶ್ವರರು. ನಾಗಲಿಂಗಪ್ಪ, ಷರೀಫ್ ಸಾಹೇಬ, ಕಬೀರದಾಸ, ಅಲ್ಲಮಪ್ರಭು, ಚೆನ್ನಬಸವಣ್ಣ, ಅಕ್ಕಮಹಾದೇವಿ, ಮೋಳಿಗೆಯ್ಯ ಮಹಾದೇವಮ್ಮ, ನೀಲಾಂಬಿಕೆ ಅಣ್ಣ ಬಸವಣ್ಣ, ಹಡಪದ ಅಪ್ಪಣ್ಣ, ಹರಳಯ್ಯ, ಮಡಿವಾಳಮ್ಮ, ನೀಲಾಂಬಿಕೆ ಇನ್ನು ಅನೇಕ ಶರಣ ಶರಣೆಯರು ಅರುವಿನ ಹಸಿವುಳ್ಳವರು, ಇವರು ನಿಜವಾಗಿ ಹಸಿವರಿತವರು, ಇವರು ಪ್ರಸಾದಿಗಳು. ಸದ್ಗುರುನಾಥನ ಉಣ್ಣದ ಊಟ ಉಂಡವರು. ಜ್ಞಾನಾಮೃತ ಉಂಡವರು. ಪ್ರಸಾದವನುಂಡ ಶೋಕಾತೀತರು ಅಮರರು, ತತ್ತ್ವವೇತ್ತರು ಅರುವರಿತು ಏನೆಂದೆನಲಿಲ್ಲದ ಅರು ಸ್ವರೂಪರು ಸಯ ಸುಖದ ಸುಖಿಗಳು.

ತೃಷೆಯರಿತಲ್ಲದೆ ಪಾದೋದಕಿಯಲ್ಲ: ಈ ತೃಷೆ ಹೃದಯ ತೃಷೆ, ಈ ತೃಷೆಯಾಗಿ ಮೋಳಿಗೆಯ ಮಾರಯ್ಯ ತನ್ನ ಕಾಶ್ಮೀರ ರಾಜ್ಯವನ್ನೇ ತ್ಯಾಗಮಾಡಿ ಕಲ್ಯಾಣವೆಂಬ ಶಿವಶರಣರ ಗಣತಿಂಥಿಣಿಯನ್ನೆ ಸೇರಿದ. ಆ ಕಲ್ಯಾಣವೆಂಬ ಮಹಾನುಭಾವರ ಅರಮನೆಯಲ್ಲಿ ಗುರು ಪಾದೋದಕ ಲಿಂಗ ಪಾದೋದಕ ಜಂಗಮ ಪಾದೋದಕ, ಇದಲ್ಲದೆ ಮೂರೊಂದಾದ ಪಾದೋದಕಕ್ಕಾಗಿ ಮರುಳ ಶಂಕರದೇವ ಹನ್ನೆರಡು ವರ್ಷ ಆರು ಅರಿಯದಂತೆ ಗುಪ್ತ ಭಕ್ತನಾಗಿ ಬಸವರಸರ ಮಹಾ ಮನೆಯಲ್ಲಿಯೆ ಇದ್ದ. ಈ ಮಹಾಂತ ತೃಷೆ ಅರಿತ ಮಹಾಂತ, ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸಾದವನರಿತ ಘನವಂತ.

ನಿತ್ಯವೆಂಬ ಭಕ್ತನ ಮನೆಗೆ ಘನ ಚೈತನ್ಯವೆಂಬ ಜಂಗಮ ಬಂದರೆ ಜಲವಿಲ್ಲದ ಜಲದಲ್ಲಿ ಪಾದೋದಕ ಮಾಡಿದಂತಾಯಿತ್ತು. ಸ್ವಚ್ಛಾನಂದಂ ಜಲಂ ಪೀತ್ವಾ ಪುನರ್ಜನ್ಮನ ವಿದ್ಯತೆ ಎಂದು ಹೇಳಿದುದು ಇದು ಪರಮ ಪುರುಷಾರ್ಥವು

ಅರುವಿಂಗರುವಾಗಿಹ ಅವಿರಳಾನಂದ ಪರಮಾನಂದ ಇದುವೆ ತೃಪ್ತರೂಪ ತೃಪ್ತಿ.

ನಿದ್ರೆಯರಿತಲ್ಲದೆ ಭವ ವಿರಹಿತರಲ್ಲ: ನಿದ್ರೆಯಲ್ಲಿ ಎರಡು ವಿಧ. ಒಂದು ಸುಷುಪ್ತಾವಸ್ಥೆ, ಇನ್ನೊಂದು ತೂರ್ಯಾವಸ್ಥೆ, ಒಂದು ಅಜ್ಞಾನವಸ್ಥೆಯಲ್ಲಿ ತೋರುವ ನಿದ್ರೆ ಆನಂದ. ಇನ್ನೊಂದು ಜ್ಞಾನಾವಸ್ಥೆಯಲ್ಲಿ ತೋರುವ ಆನಂದ, ಮರವುಳ್ಳ ಮಾನವ ಪ್ರತಿದಿನ ಕಾರಣ ಶರೀರದಲ್ಲಿ ತೋರುವ ನಿದ್ರೆ ಸುಖವರಿಯಲಿಲ್ಲ. ಅರುವಿನ ಅಭಿಮಾನಿಯಾಗಿಹ ಅನುಭವಿ ತನ್ನ ಜ್ಞಾನಾವಸ್ಥೆಯಲ್ಲಿ ತೋರುವ ಯೋಗಾನಂದ ಆತ್ಮಾನಂದ, ಅದ್ವೈತಾನಂದ, ವಿದ್ಯಾನಂದವ ಅರಿಯ ಹೋಗಲಿಲ್ಲ. ಆರು ಅರಿತಿಹರು ಅವರು ಏನೊಂದಾಗದ ನಿಃಶಬ್ದ ಬ್ರಹ್ಮವು, ನುಡಿಗೆಡೆಗೊಡದ ಘನವು ಸ್ವಯಂಜ್ಯೋತಿ, ಅವರೆ ಭವವಿರಹಿತರು. ಆರು ಕಲ್ಪಿತ ಪುರುಷನ ಅಜ್ಞಾನವಸ್ಥೆ ಜ್ಞಾನಾವಸ್ಥೆಗೆ ಮೀರಿನಿಂತು, ಸಮ ಸ್ವರೂಪರಾಗಿ ನಿಂತು ತನ್ನನ್ನು ತಾನು ನೋಡಿ, ಆವಾವುದನ್ನು ನೋಡದವನಾಗಿ ನೋಡದ ನೋಟ ಕೂಡದ ಕೂಟ ಅರಿಯದರುವಾಗಿಹರು, ಅವರೆ ನಿದ್ರೆ ಅರಿತವರು, ಭವರಹಿತರು.

ಅನಲ ಪವನ ನಿಂದಲ್ಲದೆ ಪ್ರಾಣಲಿಂಗಿಯಲ್ಲ: ಪ್ರಾಣಲಿಂಗಿ ಆರು? ಪ್ರಾಣಲಿಂಗ ಪರಾಪರವೆಂದರಿದು ಅಣುರೇಣು ತೃಣ ಕಾಷ್ಠದೋಳ್ ಕೂಡಿ ಪರಿಪೂರ್ಣ ಶಿವನೆಂದರಿದು, ಇಂತು ಕ್ಷಣವೇದಿ ಅಂತರಂಗವೇದಿಸಲ್ಕೆ ಅಗಣಿತ ಅಕ್ಷರೇಶ್ವರ ತಾನೆಂದರಿದು ಪ್ರಣವ ಪ್ರಭೆಯ ಮೇಲಣ ಪರಂಜ್ಯೋತಿ ತಾನೆಂದರಿದ ಕಾರಣ, ಗುಹೇಶ್ವರ ನಿಮ್ಮ ಶರಣ ಉಪಮಾತೀತನು. ಪ್ರಾಣಲಿಂಗವದು ಶ್ರೇಷ್ಠಾತಿಶ್ರೇಷ್ಠವು ಎಲ್ಲಿ ನೋಡಿದಡಲ್ಕಲ್ಲಿ ಲಿಂಗವೆ. ರೂಪಲಿಂಗ, ನಿರೂಪಲಿಂಗ, ಮುಂದೆ ಲಿಂಗ, ಹಿಂದೆಲಿಂಗ, ಮೇಲೆ ಲಿಂಗ ಕೆಳಗೆ ಲಿಂಗ, ಎಡಬಲ ಲಿಂಗ, ತಾನೆ ಪ್ರಣವಲಿಂಗ, ಪ್ರಭೆ ಲಿಂಗ, ಪರಂಜ್ಯೋತಿ ಲಿಂಗವಾಗಿಹ ತನ್ನ ಅರಿದವರು ಅನುಪಮರು. ಅಂತಪ್ಪ ಸಯಸುಖಿ ಹಸಿವು ತೃಷೆ ತಾನಾದವನಲ್ಲ, ಪ್ರಾಣ ಇದ್ದರೇನು ಹೋದರೇನು, ಪ್ರಾಣವೆ ತಾನಾಗದವನು, ಹಸಿವು ತೃಷೆಗಳೆ ತಾನಾಗದವನು. ನಿರ್ಭಯನು, ನಿರಂಕುಶತೃಪ್ತನು, ಜ್ಞಾನಾನಂದ ಮಯನು, ಚಿತ್ ಸ್ವರೂಪ ತಾನೆ, ಜಠರಾಗ್ನಿ ಹಸಿದು ಬಳಲಿದರೇನು, ಅದು ತೃಪ್ತಿಯಾಗಿ ಡೇಗಿದರೇನು ಇವುಗಳ ಹಂಗಿಲ್ಲದವನು, ಸುಖರೂಪ ಸುಖಮಯನು ಪ್ರಾಣಲಿಂಗಿಯು.

ಇದು ಕಾರಣ ಗುಹೇಶ್ವರ ಲಿಂಗ ಎಲ್ಲರಿಗೆಲ್ಲಿಯದೊ: ಶಬ್ದವೇದಿಗಳು ಸಿಕ್ಕುವರು, ನಿಃಶಬ್ದವೇದಿಗಳು ಸಿಕ್ಕುವರೆ? ನಿಃಶಬ್ದವೇದಿಗಳು ಗುಹೇಶ್ವರ ಲಿಂಗ ಸುಖದಲ್ಲಿದ್ದ ಸರ್ವಾಂಗಲಿಂಗಿಗಳು ಮಾತಿನ ಮದಾಂಧರು ಮೂಕನ ಘನವ ನೇನುಬಲ್ಲರು. ಮೂಕ? ಮಾತುಮನಂಗಳಿಗೆ ಮೀರಿದ ಘನಕ್ಕೆ ಘನವಾದ ತನ್ನಿರುವಿನ ಸುಖದಲ್ಲಿದ್ದ ಸುಖ ಸ್ವರೂಪನೆ ಮೂಕ. ಈ ಘನಗಂಭೀರನ ನಿಜಸುಖ ನಿಜದಿರುವಿನ ಅರವು ಎಲ್ಲರಿಗೆಲ್ಲಿಯದೊ?

**ವಚನ 33**

**ಉಂಡೆನುಟ್ಟೆನೆಂಬ ಸಂದೇಹ ನಿನಗೇಕಯ್ಯ?**

**ಉಂಬುದೆ ಅಗ್ನಿ? ಉಡುವುದೆ ಪೃಥ್ವಿ?**
**ನೀನೆಂದು ಉಂಡೆ? ನಾನೆಂದು ಕಂಡೆ?**
**ಉಣ್ಣದೆ, ಉಡದೆ ಹೊಗೆಯ ಕೈಯಲ್ಲಿ ಸತ್ತೆನೆಂಬ**
**ಅಂಜಿಕೆ ನಿನಗೆಬೇಡ, ಅಂಜದಿರು, ಗುಹೇಶ್ವರ ನಿನಗಾವ ಅಂಜಿಕೆಯೂ ಇಲ್ಲ. ॥ 569॥**

ತಾತ್ಪರ್ಯ: ಉಂಡೆನುಟ್ಟೆನೆಂಬ ಸಂದೇಹ ನಿನಗೇಕಯ್ಯ: ಓ ಜೀವನೆ ನೀನು ಲಿಂಗಸ್ವರೂಪನಾಗಿರುವಲ್ಲಿ ಉಂಡೆ ನುಟ್ಟೆನೆಂಬ ಅನುಮಾನ ನಿನಗೇಕಯ್ಯ? ಈ ಕರ್ತೃತ್ವ ಭೋಕ್ತೃತ್ವ, ಭ್ರಾಂತಿ ನಿನಗೇಕೆ, ನೀನಾರು ನಿನ್ನನ್ನು ತಿಳಿಯದ ಪರಿಣಾಮವೆ, ಉಂಡೆ ನುಟ್ಟೆನೆಂಬ ಭ್ರಾಂತಿ ಉಂಟಾಗಿದೆ. ಓ ಜೀವನೆ! ತತ್ವ ದೃಷ್ಟಿಯುಳ್ಳವನಾಗು, ನೀನು ನಿರಂತರವಾಗಿರುವ ಮಂಗಳಮಯ ಪರಮಸತ್ಯಸ್ವರೂಪ. ಉಡಲು ನಿರವಯ, ಉಣಲು ನಿತ್ಯ ತೃಪ್ತರೂಪವಾಗಿರುವಲ್ಲಿ ನೀನಾವಾಗ ಹಸಿದೆ, ನೀನಾವಾಗ ಹೊದ್ದೆ, ನಿರಾಕಾರ ನಿರವಯ ನಾದವಂಗೆ ಅದಾವ ಹೊದಿಕೆ, ನಿತ್ಯ ತೃಪ್ತನಿಗೆ ಅದಾವ ಊಟ! ನಿನ್ನದು ಭ್ರಮಾತ್ಮ ಬುದ್ಧಿ, ನೀನಾಗದ, ನಿನ್ನದಾಗದ, ಪೃಥ್ವಿ, ಅಗ್ನಿಕಾರ್ಯವ ನಿನ್ನದೆಂದು ತಿಳಿದುದು ವಿಪರೀತವಲ್ಲವೆ? ಉಂಬುದೆ ಅಗ್ನಿ, ಉಡುವುದೆ ಪೃಥ್ವಿ, ವೈಶ್ವಾನರ ರೂಪಿ ಅಗ್ನಿ ಉಂಬುವದಾಗಿದೆ. ಪೃಥ್ವಿ ಅಂಶಿಭೂತವಾದ ಕಾಯ ಉಡುವುದಾಗಿದೆ. ನೀನೆಂದು ಉಂಡೆ, ನಾನೆಂದು ಕಂಡೆ, ಎಲೆ ಜೀವನೆ ಓ ಅಂಗವೆ, ನಾನಾರೆಂಬುದು ನಿನಗೆ ವಿದಿತವೆ? ನೀನಾರೆಂಬುದು ನಿನಗೆ ವಿದಿತವೆ? ನೀ ನಾ ನೆಂಬುದು ಎರಡೊಂದಾದ ಘನವು ಅಂಗವೆಂಬುದು ತೆರಹಿಲ್ಲದ ಘನವು ಲಿಂಗವದು ತೆರಹಿಲ್ಲದ ಘನವು ಅರಿಯದುದರಿಂದ ನೀನಾದೆ, ನಾನಾದೆ ಅರಿವುಡೆ ನಾನೆನ್ನದೆ ನೀನೆನ್ನದೆ ಇಪ್ಪ ಸುಖ ಅದಾರು ವರ್ಣಿಸುವದು.

ಉಣ್ಣದೆ ಉಡದೆ ಹೊಗೆಯ ಕೈಯಲ್ಲಿ ಸತ್ತೇನೆಂಬ ಅಂಜಿಕೆ ನಿನಗೆ ಬೇಡ, ನಾನೀನೆಂಬುದಕ್ಕೂ ತೆರಹಿಲ್ಲದ ಘನವಿರುವಲ್ಲಿ ನೀನುಂಡುದು ಎಲ್ಲಿ? ನೀನುಟ್ಟುದು ಎಲ್ಲಿ? ಉಂಡುವನಲ್ಲ ಉಟ್ಟವನಲ್ಲ, ಉಂಡುಟ್ಟೆನೆಂಬುದು ಹೊಗೆಯ ಕೈಯ ಇದು ವಾಸನೆತ್ರಯದಿಂದುಕ್ತವಾದುದು. ಇದು ಕಾರಣ ತ್ರಿವಿಧ ರೂಪವಾಗಿ ಕರ್ತೃತ್ವವುಳ್ಳದ್ದಾಗಿ ಭೋಕ್ತೃತ್ವವುಳ್ಳದ್ದಾಗಿ ಉಂಡೆನುಟ್ಟೆನೆಂಬ ಸಂದೇಹ, ಇದು ಕೇವಲ ಭ್ರಮ. ಕಾಯ ವಿಕಾರ.

ಈ ವಿಕಾರ ತಾನಾರೆಂದರಿತ ತತ್ತ್ವವೇತ್ತನಲ್ಲಿ ಸುಳಿಯದು, ಉಳಿದವರು ಉಂಡೆನುಟ್ಟೆನೆಂಬ ಹೊಗೆಯ ಒಳಪಟ್ಟವರು ಕಲ್ಪಿತ ಪುರುಷನಾಗಿ ತನ್ನನ್ನು ಎಲ್ಲಿಯವರೆಗೆ ಕಾಣುತ್ತಾನೆ. ಅಲ್ಲಿಯವರೆಗೆ ಉಂಡೆನುಟ್ಟೆನೆಂಬ ಭಾವವಿದ್ದುದೆ, ಈ ಭಾವರೂಪ ಭ್ರಮ ನಷ್ಟವಾಗಬೇಕಾದರೆ ತ್ಯಾಗದ ತ್ಯಾಗ ಭಾವಕ್ಕಗಮ್ಯ ತಾನೆಂಬುದು ತನ್ನಲ್ಲಿ ದಿಟವಾಗಬೇಕು. ಆಗ ತತ್ವ ದೃಷ್ಟಿಯುಳ್ಳವನಾಗಿ ಉಂಬುದು ಅಗ್ನಿಉಡುವುದು ಪೃಥ್ವಿ ಎಂಬ ಅರಿವು ಮೂಡುವದು. ಆಗ ತಾನು ನಿರ್ವಿಕಲ್ಪಯನು, ನಿರುಪಾಧಿ, ನಿರಾಲಂಬಿ, ನಿಸ್ಸಂಗದ ದಿವ್ಯದೃಷ್ಟಿ ಸಿದ್ಧವಾಗುವದು. ಆಗ ತನ್ನನ್ನು ತನ್ನಿಂದ ನೋಡಿದಾಗ ತಾನು ಸ್ವಮಹಿಮ, ತನಗಾವ ಹೊದಿಕೆ ತನಗಾವ ಊಟ, ಏಕೆಂದರೆ

ಅಖಂಡ ಜ್ಞಾನಾಮೃತನು ತಾನಾಗಿರುವನು, ಅಲ್ಲಿ ತನ್ನಿಂದ ತನಗಾಗಲಿ, ಅನ್ಯರಿಗಾಗಲಿ, ಬೋಧಮಾಡುವ ಹಿತಚಿಂತಕ ರೂಪಿ ಗುರುತ್ವ ಬೆಳಗುವದು.

ಓ ಜೀವರೂಪಿ ಲಿಂಗವೆ, ಮಹಾಲಿಂಗವೆ ನೀನಿರುವಲ್ಲಿ ವ್ಯರ್ಥ, ಸಟೆಯ ವಾಸನಾರೂಪಿ ಹೊಗೆಯ ಕೈಯಲ್ಲಿ ಬಹು ಜನ್ಮ ಸತ್ತೇನೆಂಬ ಭ್ರಾಂತಿ ಬೇಡ, ಈ ಅಂಜಿಕೆ ನಿನಗೆ ಬೇಡ, ಪರಬ್ರಹ್ಮವೆಂಬ ಮಹಾಲಿಂಗವು ಎಂದಾದರೂ ಜನ್ಮ ಜನ್ಮಗಳೆತ್ತಿ ಬಂದಿರಬಹುದೆ? ಅದು ಸಾಯಬಹುದೆ? ಅದಕ್ಕೆ ವಾಸನೆ ಅಂಟಬಹುದೆ? ನೀನು ಮಹಾಲಿಂಗವಿದ್ದು ನಿನಗೇಕೆ ಅಂಜಿಕೆ, ನೀನು ಜೀವನೆಂದು ತಪ್ಪಾಗಿ ತಿಳಿದೆ ಭಯ ಉಂಟಾಗಿದೆ, ವಾಸನೆ ವುಳ್ಳವನೆಂಬ ಭಾವ ಬಂದು ನಿನ್ನ ಸ್ವರೂಪದ ವಿಸ್ಮೃತಿಯಾಗಿದೆ. ನಿಜವಾಗಿ ನೀನು ನಿರಂತರವಾಗಿರುವ ಮಂಗಳಮಯ ನಿರುವದರಿಂದ ಅಂಜದಿರು, ಗುಹೇಶ್ವರ ನೀನು ವ್ಯರ್ಥ ಈ ಗುಹೆದೊಳಗಿದ್ದವನೆಂದು ವ್ಯರ್ಥ ಕಲ್ಪಿಸಿರುವೆ ನೀನು ಅಕಲ್ಪಿತ ಘನ ನಿರುವಲ್ಲಿ ನಿನಗಾವ ಅಂಜಿಕೆಯೂ ಇಲ್ಲ.

**ವಚನ 34**

**ರೂಪನೆ ಕಂಡರು, ನಿರೂಪನೆ ಕಾಣರು.**
**ಅನುವನೆ ಕಂಡರು, ತನುವನೆ ಕಾಣರು,**
**ಆಚಾರವನೆ ಕಂಡರು, ವಿಚಾರವನೆ ಕಾಣರು,**
**ಗುಹೇಶ್ವರ ನಿಮ್ಮ ಕುರುಹನೆ ಕಂಡರು,ಕೂಡಲರಿಯದೆ ಕೆಟ್ಟರು. ॥ 495 ॥**

**ತಾತ್ಪರ್ಯ:** ರೂಪನೆ ಕಂಡರು, ನಿರೂಪನೆ ಕಾಣರು: ರೂಪ! ಇದಾವ ರೂಪ! ಗುರುಕರುಣಿಸಿದ ರೂಪ! ಭಕ್ತರ ಕರಕಮಲದಲ್ಲಿ ಪ್ರಜ್ವಲಿಸುವ ರೂಪ! ವೇದ ವೇದಾಂತಗಳಿಂದ ವರ್ಣಿಸಲು ಬಾರದ ರೂಪ! ಸಕಲ ಹೃದಯದಲ್ಲಿ ನ್ಯಸ್ತವಾಗಿಹ ರೂಪ! ಅರುವ ಅರಿಯ ಹೇಳಿದ ರೂಪ ಅಪರವಿಲ್ಲದಂದೆ ಇದ್ದರೂಪ! ಪರಬ್ರಹ್ಮವಿಲ್ಲದಂದೆ ಇದ್ದ ರೂಪ! ಅನಾದಿ ಇಲ್ಲದಂದೆ ಇದ್ದ ರೂಪ! ಆದಿ ಇಲ್ಲಿದಂದೆ ಇದ್ದ ರೂಪ! ಸದಾಶಿವ ನಿಲ್ಲದಂದೆ ಇದ್ದ ರೂಪ! ಆನು ನೀನೆಂಬುದು ತಾನು ಇಲ್ಲದಂದೆ ಇದ್ದ ರೂಪ ಕೂಡಲ ಚೆನ್ನಸಂಗಯ್ಯ ಏನೂ ಎನ್ನದಿರ್ದನಂದೆ ಇದ್ದ ರೂಪ! ಇದನ್ನು ಅರಿಯಹೋಗದ್ದರಿಂದ ರೂಪವಾಯಿತಲ್ಲದೆ ನಿರೂಪವಾಗಲಿಲ್ಲ.

ತೋರಬಾರದ ಘನ ಗುರು ಕರುಣೆಯಿಂದ ನಿರೂಪವಾಗಿ ಕರಕಮಲದಲ್ಲಿ ಪ್ರಕಾಶಿಸಿದರೂ ಇದರ ಯತಾರ್ಥ ಅರಿವು ಕಾಣದ್ದು ತಿಳಿಯದ್ದು ಇದೆಂಥ ಅಭಾಗ್ಯತನ ಕುರುಡತನ ಕಣ್ಣಿದ್ದು ಕುರುಡರಾಗಿಹರೆ? ನಿಧಿವಂತರಿದ್ದು ದರಿದ್ರರಾದರೆ? ಅಚಿಂತ್ಯತ್ವವೆ ತಮ್ಮದಾಗಿದ್ದು ಚಿಂತನಕ್ಕೊಳಪಟ್ಟರೆ? ಅಭವ ತಾನಿದ್ದು ಭವಕ್ಕೊಳಪಟ್ಟನೆ? ಭಾವಕ್ಕಗಮ್ಯನಾಗಿ ಭ್ರಮಿತನಾದನೆ? ಇದೆಂಥ ಹೃದಯ, ಇವೆಂಥ ಕರಣಂಗಳು ಲಿಂಗಕಿರಣಂಗಳಾಗಲಿಲ್ಲವೆ! ಅರು ಹೃದಯವಾಗಲಿಲ್ಲವೆ?

ತನುವನೆ ಕಂಡರು ಅನುವನೆ ಕಾಣರು: ಲಿಂಗ ತನುವ ಕಂಡರು, ಅನುವನೆ ಕಾಣದಂತಾದರೆ? ದಿವ್ಯದೃಷ್ಟಿ ಕಳಕೊಂಡರೆ? ಧರ್ಮ ಚಕ್ಷು ವುಳ್ಳವರಾದರೆ? ಲಿಂಗವದು, ಅನುಪಮ ಅಚಲ, ಅಖಂಡಿತಘನ ಪೂರ್ಣವಪ್ಪ ಪರಾತ್ಪರ ವಾಗಿಹ ತನ್ನಿರವುಳ್ಳ

ಅರುವು ಅದು ಗುರುಕರುಣೆಯಿಂದ ಕರಕಮಲದಲ್ಲಿ ಪ್ರಜ್ವಲಿಸಿದರೂ ಲಿಂಗಗೋಳಾಕಾರ ವಾಯಿತೆ? ತನಗಿಂತನ್ಯವಾಗಿ ಪೂಜಿಸಿ ಕೊಳ್ಳುವ ಲಿಂಗವಾಯಿತೆ? ಕೊನೆಗೆ ಕುರುಹಿನಿಂದುಕ್ತವಾಗಿ ಅಷ್ಟವಿಧಾರ್ಚನೆಗೆ ಒಳಪಟ್ಟಿತೆ? ಅನುಪಮದನುವುಳ್ಳ ಲಿಂಗದಿರುವೆ ತನ್ನಿರುವಾಗಲಿಲ್ಲವೆ? ಲಿಂಗ ತನು ತನ್ನ ಸ್ವರೂಪವಾಗಲಿಲ್ಲವೆ? ತಾನಾಗಲಿಲ್ಲವೆ? ಅರು ಹೃದಯವಾಗಿ ತನ್ನಿಂದ ತನ್ನ ನೋಡಿಕೊಳ್ಳದಂತಾಯಿತೆ?

ಆಚಾರವನೆ ಕಂಡರು ವಿಚಾರವನೆ ಕಾಣರು: ವೀರಶೈವ ತತ್ವ, ತಿಳಿಯಹೋಗುವರ ತತ್ವ, ತಿಳಿದವರ ತತ್ವ ತತ್ತ್ವವೇತ್ತರ ದಿವ್ಯದೃಷ್ಟಿಯಿಂದ ಸಕಲರಿಗೆ ಪ್ರಿಯವಾದ ತತ್ವ. ತನ್ನನ್ನು ತಿಳಿಯುವ ತತ್ವ ತಿಳಿದಲ್ಲಿ ಅಜಾತ ತತ್ವ. ಇವರೆ ಆಚಾರಕ್ಕೊಳಪಟ್ಟಲ್ಲಿ ಹೇಳುವುದನ್ನೇನು ಅರುವ ಅರಿತವರೆ ಮರವುಳ್ಳವರಾದ ಮೇಲೆ ಇನ್ನಾರಿಗೆ ಹೇಳುವುದು.

ಆಚಾರಕ್ಕೊಳಪಡುವುದು ಶೈವರ ಕಾರ್ಯ, ಶೈವರಿಗೆ ಸದ್ಗುರುನಾಥನ ದರ್ಶನವಿಲ್ಲ, ದರ್ಶನವೆ ಅಸಾಧ್ಯವಾಗಿರುವಲ್ಲಿ ಕೃಪೆ ಅದೆಂತು ಸಾಧ್ಯ. ಇದು ಕಾರಣ ಇವರು ಆಚಾರಕ್ಕೊಳಪಟ್ಟರು. ವೀರಶೈವರಿಗೆ ನಿಃಶಬ್ದವೇದಿಸಿದ ಸದ್ಗುರು ದೊರೆತು, ಅರುವ ಅರಿಯ ಹೇಳಿ ಇಷ್ಟಲಿಂಗವ ಕರುಣಿಸಿದರೂ ಶೈವರಂತೆ ಇವರು ಆಚಾರಕ್ಕೊಳಪಟ್ಟ ಮೇಲೆ ಆ ಮಹಾಂತ ಕರುಣಿಸಿದ ಲಿಂಗಾಂಗ ಸಮರಸ ಜ್ಞಾನ ಇಲ್ಲವಾಯಿತೆ? ತತ್ವಮಸಿಯು ಆಚಾರವಂತರನ್ನಾಗಿ ಮಾಡಿತೆ? ಅಹಹ! ಇದು ಕಲಿಕಾಲದ ಕಗ್ಗತ್ತಲೆ ಅರುವ ಅರಿಯದ ಕತ್ತಲೆ ತನ್ನನರಿಯದ ಅಜ್ಞಾನ ಇದು ಕಾರಣ ಆಚಾರಕ್ಕೊಳ ಪಟ್ಟರು. ವಿಚಾರವಂತರಾಗಲಿಲ್ಲಾ, ವಿಚಾರ ವಂತರಾದಲ್ಲಿ ಲಿಂಗವದು, ವೇದ ವೇದಾಂತ ಗಳಿಗೆ ಅಸಾಧ್ಯವಾಗಿಹ ಪರಾತ್ಪರ ಇರುವುಳ್ಳ ತನ್ನಿರುವಾಗಿ ಪ್ರಜ್ವಲಿಸುತ್ತಿತ್ತು. ನುಡಿಗೆಡೆಗೊಡದ ಘನವೆ ತನ್ನಿರುವು ಎಂಬುದು ಸಿದ್ಧವಾಗುತ್ತಿತ್ತು. ಲಿಂಗವದು ಭೇದಾಭೇದವಿನಿರ್ಮುಕ್ತ ಘನದಿರುವೆ ತನ್ನ ಅರುವಾಗಿ ಪ್ರಜ್ವಲಿಸುತ್ತಿತ್ತು. ಲಿಂಗಕ್ಕೆ ತನಗೂ ಭೇದ ಮಾಡಲು ಒಪ್ಪುತ್ತಿದ್ದಿಲ್ಲ. ಲಿಂಗ ತಾನು ಸಮಸ್ವರೂಪವೆಂಬ ನುಡಿಗೂ ನೆನಹಿಂಗೂ ಚಿಂತನಕ್ಕೂ ಭಾವಕ್ಕೂ ಒಳಪಡದೆ ಶಬ್ದವೆ ಮೀಸಲವಾಗಿ ತನ್ನಿರುವಿನ ಅರುವಾಗಿ ಪ್ರಜ್ವಲಿಸುತ್ತಿತ್ತು.

ಜ್ಞಾನ ಜನ್ಮಲಭ್ಯವಾದ ಮೇಲೆ ಲಿಂಗವರಿಯುವ ವಿಚಾರವಂತರಾಗುವದು ಶ್ರೇಯಸ್ಕರ. ಈ ವಿಚಾರ ಮಾಡದೆ ಏನು ವಿಚಾರ ಮಾಡಿದರೂ ವ್ಯರ್ಥ. ತಾನಾರೆಂಬ ವಿಚಾರ ಲಿಂಗವಿಚಾರ. ಇದುವೆ ನಿಜವಾದ ವಿಚಾರ, ತಾನುಮಾಡಬೇಕಾದ ವಿಚಾರ. ಈ ವಿಚಾರ ಮಾಡರು.

ಗುಹೇಶ್ವರಾ ನಿಮ್ಮ ಕುರುಹನೆ ಕಂಡು ಕೂಡಲರಿಯದೆ ಕೆಟ್ಟರು: ಓ ಗುಹೇಶ್ವರಾ ನಿಮ್ಮ ಕುರುಹೆಂಬ ಅನುಪಮ ಲಿಂಗವ ಕಂಡರೂ ಅದು ತಾವಾಗ ಬಾರದೆ? ಇದೆಂಥ ಲಕ್ಷ್ಯ ಇದೆಂಥ ಗುರಿ, ನಿಮ್ಮ ಕುರುಹ (ಕಾರುಣ್ಯವದು) ಶಬ್ದ ಮುಗ್ಧನ ಮಾಡುವ ಕಾರುಣ್ಯ ದೊರೆತಮೇಲೆ ತಾನದುವೆ ಆಗುವದು, ಗುಹೇಶ್ವರ ನಿಮ್ಮ ಕಾರುಣ್ಯದ ಕುರುಹದು ಕೂಡದಗಲದ ಘನ ದೊರೆತಮೇಲೆ, ತಾನು ಆವಾವುದಕ್ಕೊಳ ಪಡದವನು

ಆದುದು ತನ್ನಿಂದ ತಾನೆ ನೋಡಿಕೊಳ್ಳುವುದು, ತನ್ನಿಂದ ತಾನು ಅಗಲದವನು, ಅಂದು ಅಗಲದವನು, ಇಂದು ಅಗಲದವನು, ಎಂದೆಂದೂ ಅಗಲದವನು, ಎಂಬ ಪರಾತ್ಪರ ತನ್ನರುವಿನ ಅರುವು ತನ್ನಿಂದ ತನಗೆ ಸಿದ್ಧಿಸಬೇಕು. ತಾನು ಅರಿದರುಹಿಸಿಕೊಂಬುದಕ್ಕೂ ಮೀರಿದ ಘನ, ಏನೆಂದೆನಲಿಲ್ಲದ ತನ್ನಿರುವಿನ ಅರುವು ಅರಿಯದರುವು ಘನಕ್ಕೆ ಘನವಾದ ಅಕಥನೀಯ ನಿಲವು ಆಗಿಹ ತನ್ನಿರವು ಆಗದ್ದರಿಂದ ಕೆಟ್ಟರು ಗುಹೇಶ್ವರಾ.

**ವಚನ 35**

**ಭವವಿರಹಿತಂಗೆ ಭಕ್ತಿ ಮಾಡುವರು ನೀವು ಕೇಳಿರಣ್ಣಾ,**
**ಭವ ಬಾಧೆಯೊಳಗೆ ನೀವಿರ್ದು ಅಭವ ಭಕ್ತಿಯ ಮಾಡುವ ಪರಿ ಇನ್ನೆಂತೊ?**
**ತಾನಭವನಲ್ಲದೆ ಸಹಜ ಭಕ್ತಿಯ ಮಾಡಬಾರದು ಗುಹೇಶ್ವರಾ. ॥ 380 ॥**

**ತಾತ್ಪರ್ಯ:** ಭವ ವಿರಹಿತಂಗೆ ಭಕ್ತಿಯ ಮಾಡುವವರು ನೀವು ಕೇಳಿರಣ್ಣಾ: ಭವ ಬಾಧೆಯೊಳಗೆ ನೀವಿರ್ದು ಅಭವನ ಭಕ್ತಿಯ ಮಾಡುವ ಪರಿ ಇನ್ನೆಂತೊ: ಪ್ರಭುದೇವ, ದೇವನ ಭಕ್ತಿಯ ಮಾಡುವವರ ಕಂಡು ಎಚ್ಚರಿಸುತ್ತಿದ್ದಾನೆ. ಭವ ವಿರಹಿತಂಗೆ ನೀವು ಭಕ್ತಿ ಮಾಡುವವರು ನೀವು ಕೇಳಿರೆ, ಭವ ಬಾಧೆಯೊಳಗೆ ನೀವಿರ್ದು ಅಭವನ ಭಕ್ತಿ ಮಾಡುವ ಪರಿ ಇನ್ನೆಂತೊ? ಭವವನ್ನೆ ಕಾಣದ ದೇವನಿಗೆ, ಜನನ ಮರಣಗಳ ಬಾಧೆಯೊಳಗೆ ನೀವಿರ್ದು ಅಭವನಿಗೆ ಭಕ್ತಿ ಮಾಡಿದ ರೀತಿ ಆವುದು? ಬಗೆ ಆವುದು? ಭವರಹಿತನೆಂದರೆ ಆರು ಗೊತ್ತೆ? ನಿರೂಪ, ನಿರವಯ ನಿರುಪಾಧಿಯು ನಿಸ್ಸಂಗನು ನುಡಿಗೆಡೆಗೊಡನು , ನಡೆಗೆಡೆಗೊಡನು ವಾಙ್ಮನೋತೀತನು ಅಚಿಂತ್ಯನು ಗಗನದಂತೆ ಸಮರಸವಾಗಿಹ ಜ್ಞಾನಾಮೃತನು ನಿರಂತರವಾಗಿರುವ ಮಂಗಳಮಯ ಪರಮ ಸತ್ ಸ್ವರೂಪನು, ಇಂತಪ್ಪ ಪರಾತ್ಪರ ದೇವನಿಗೆ ನೀವು ಭಕ್ತಿ ಮಾಡುವ ಪರಿ ಆವುದು? ನೀವು ಭವಬಾಧೆಯೊಳಗಿರ್ದವರು, ತನು ಪ್ರಾಣಾದಿಗಳುಳ್ಳವರು ಕರಣಂಗಳುಳ್ಳವರು, ತನು ವಿರಹಿತ, ಪ್ರಾಣ ವಿರಹಿತ, ಒಡಲಿಲ್ಲದ ದೇವನಿಗೆ ಭಕ್ತಿ ಮಾಡುವ ಪರಿ ಇನ್ನೆಂತೊ? ಕತ್ತಲೆ, ಬೆಳಕಿನಲ್ಲಿ ಒಂದಾಗಬಹುದೆ? ಲೀನವಾಗಬಹುದೆ? ಬೆರೆಯಬಹುದೆ? ಇಲ್ಲದುದು ಕತ್ತಲೆ ಭ್ರಾಂತಿ ಬಂಜೆ ಮಗ ಇದ್ದ ನಿರಂತರವಾಗಿರುವ ಮಂಗಳಮಯ ತತ್ವದಲ್ಲಿ ಕೂಡಬಹುದೆ? ತನುವುಳ್ಳವರು ತನುವಿಲ್ಲದವನಲ್ಲಿ ಬೆರೆಯಬಹುದೆ? ಇಂದ್ರಿಯಂಗಳುಳ್ಳವರು, ಅತೀಂದ್ರಿಯನಲ್ಲಿ ಒಂದಾಗಬಹುದೆ? ಪ್ರಾಣ, ಲಿಂಗದಲ್ಲಿ ಲೀಯವಾಗುವುದೆ? ಕಲ್ಪಿತ ಪುರುಷ ಅಕಲ್ಪಿತ ಘನನಲ್ಲಿ ಬೆರೆಯಬಹುದೆ?

ಅಯ್ಯಾ, ಹುಟ್ಟು ಸಾವಿನ ಬಾಧೆಯೊಳಗಿರ್ದ ನೀವು ಜನನವಿಲ್ಲದ ನಿರ್ಜನಿತನಲ್ಲಿ ಒಂದಾಗುವ ರೀತಿ ಆವುದು? ನೀವು ವಾಣಿಯಿಂದುಕ್ತರಾದವರು, ನಿರ್ವಾಣನಲ್ಲಿ ಸಮರಸವಾದುದು ಹೇಗೆ? ನೆನಹಿನಿಂದುಕ್ತರಾದ ನೀವು ನೆನಹಿಂಗಸಾಧ್ಯವಾದ ದೇವನಲ್ಲಿ ಕೂಡುವ ಬಗೆ ಆವುದು ಹೇಳಿರೆ? ಚಿಂತನದಿಂದುಕ್ತರಾದ ನೀವು ಅಚಿಂತ್ಯನಲ್ಲಿ ಭಕ್ತಿ ಮಾಡಿದ ಬಗೆ ಆವುದು ಹೇಳಿರೆ? ನಿರ್ವಿಕಾರನಲ್ಲಿ ವಿಕಾರವು ಕೂಡಿದುದು ಹೇಗೆ? ಅಮರನಲ್ಲಿ ಮರಣವುಳ್ಳವರು ಒಂದಾದ ಬಗೆ ಆವುದು ಹೇಳಿರೆ, ಅನಿತ್ಯವು ನಿತ್ಯದಲ್ಲಿ ಒಂದಾಗಬಹುದೆ?

ತಾನಭವನಲ್ಲದೆ ಸಹಜ ಭಕ್ತಿಯ ಮಾಡಬಾರದು ಗುಹೇಶ್ವರಾ: ಎಲ್ಲಿಯವರೆಗೆ ತಾನು ಅಭವನೆಂದು ತನ್ನಿಂದ ತನಗೆ ವೇದ್ಯವಾಗುವದಿಲ್ಲ, ಅಲ್ಲಿಯವರೆಗೆ ಸಹಜ ಭಕ್ತಿ ಮಾಡುವುದು ಅಸಾಧ್ಯ ನೋಡಾ, ತಾನು ಅಭವನೆಂಬುದು ತನಗೆ ಸಿದ್ಧಿಸಬೇಕಾದಲ್ಲಿ ತಾನು ತತ್ವದೃಷ್ಟಿಯುಳ್ಳವನಾಗುವದು. ಆಗ ಮರವರುವಿಂಗೆ ಮೀರಿ ನಿಂತು ತನ್ನನ್ನು ನೋಡಬೇಕು, ತಾನು ಅರಿದರುಹಿಸಿ ಕೊಳ್ಳುವವನಾಗಬಾರದು. ತನ್ನನ್ನು ಉಪಾಧಿಯುಳ್ಳವನ್ನಾಗಿ ಮಾಡಬಾರದು. ನುಡಿ ನುಡಿಯುಳ್ಳವನನ್ನಾಗಿ ನೆನಹು ನಿರ್ಣಯದಿಂದುಕ್ತನನ್ನಾಗಿ ಕಾಣಬಾರದು. ಚಿಂತನಕ್ಕಗಮ್ಯ ಭಾವಕ್ಕಗಮ್ಯ ನೆಂಬುದು ಪ್ರಥಮ. ಈ ಅರಿವು ತನ್ನಲ್ಲಿ ಕರಿಗೊಳ್ಳಬೇಕು. ಆಗ ತತ್ವದೃಷ್ಟಿಯಿಂದುಕ್ತನಾಗಿ ತನ್ನಿಂದ ತನ್ನ ನೋಡುವುಡೆ ತಾನು ಅಭವನೆಂಬುದು ಸಹಜ ಸಿದ್ಧವಾಗುವದು.

ಭವರಹಿತಂಗೆ ಭಕ್ತಿ ಮಾಡುವದೆಂದಲ್ಲಿ ತಾನು ಅಭವ, ದೇವ ಅಭವ, ದೇವನೆಂದರೆ ತಾನು ತಾನೆಂದರೆ ದೇವ. ಒಬ್ಬನಿಗೆ ಎರಡು ನಾಮವಿದ್ದಂತೆ. ತಾನು ನಿರಾಲಂಬ, ದೇವ ನಿರಾಲಂಬ. ಅವನಿಗೂ ಉಪಾಧಿಯಿಲ್ಲ, ತನಗೂ ಇಲ್ಲ. ತನ್ನರವು ಅವನ ಇರವು ಒಂದೆ, ಸ್ವರೂಪ ಒಂದೆ. ಶಬ್ದಕ್ಕೆ ತೆರಹಿಲ್ಲ ಎಂಬುದು ತನ್ನಿಂದ ತನಗೆ ತಿಳುವಳಿಕೆ ಇಲ್ಲದ ಅವಿದ್ಯೆ ಅದರ ಕಾರ್ಯ ಮಾಯಾ. ಮಾಯದ ಕಾರ್ಯ ಇಲ್ಲವಾಗಿ ಇದ್ದ ನಿರಂತರ ವಾಗಿರುವ ಮಂಗಳಮಯ ಪರಮಸತ್ಯ ತಾನೆಂಬುದು ಕರಿಗೊಂಡಡೆ ಅದು ಸಹಜ ಭಕ್ತಿ ನೋಡಾ ಗುಹೇಶ್ವರಾ ಎಂದು ಪ್ರಭು ಹೇಳಿದುದು.

**ವಚನ 36**

**ಶಿವಶಕ್ತಿ ಸಂಪುಟವೆಂಬುದೆಂತು ಹೇಳಿರಂಣಾ;**
**ಶಿವನೆ ಚೈತನ್ಯಾತ್ಮಕ್ತನು. ಶಕ್ತಿಯೆ ಚಿತ್ತು.**
**ಇಂತೀ ಚೈತನ್ಯಾತ್ಮಕನೆ ಚಿತ್ ಸ್ವರೂಪನೆಂದು**
**ಅರಿಯಬಲ್ಲಡೆ ಆತನೆ ಶರಣ ಗುಹೇಶ್ವರಾ. ॥ 589 ॥**

**ತಾತ್ಪರ್ಯ:** ಶಿವ ಶಕ್ತಿ ಸಂಪುಟವೆಂಬುದೆಂತು ಹೇಳಿರಂಣಾ: ಶಿವನೇ ಚೈತನ್ಯಾತ್ಮಕನು ಶಕ್ತಿಯೆ ಚಿತ್ತ ಶರಣ, ಶಿವ ಶಕ್ತಿ ತಿಳಿದ ಘನವಂತ ನಾದುದರಿಂದ ಶಿವ ಚೈತನ್ಯಾತ್ಮಕನೇ ಚಿತ್‌ಸ್ವರೂಪನೆಂದು ಅರಿಯ ಬಲ್ಲಡಾತ ಶರಣ.

ಶರಣನೆಂಬುದು ಶಿವ ಶಕ್ತಿ ಸಂಪುಟ. ಸಂಪುಟವದು ಶಿವಶಕ್ತಿ ಒಂದಾದ ಪುಟ. ಈ ಪುಟ ಶಿವಶಕ್ತಿ ಅರಿಯಬಲ್ಲ ಪುಟ, ಸಂಪುಟ, ಅರಸುವ ಪುಟವಲ್ಲ, ಅರಿತು ಅದುವೆ ಆಗಿಹ ಪುಟ, ನೆನಹಿಂಗೆ ನಿಲುಕದ ಪುಟ, ನಿರ್ಣಯ ಮಾಡ ಹೋದವರಿಗೆ ನಿಲುಕದ ಪುಟ. ಭಾವಕ್ಕಗಮ್ಯ ಪುಟ, ನಿಃಶಬ್ದವೇಧಿಸಿದ ಪುಟ, ಶಬ್ದ ಸಂಭ್ರಮದ ಹಂಗಿಲ್ಲದ ಪುಟ, ಶಿವ ಶಕ್ತಿ ಒಂದಾದ ಪುಟ ಅದನೆಂತು ವರ್ಣಿಸುವದು:

ಸಂಪುಟವಾಗಿಹ ಸಮಗೋಷ್ಟಿ ಉಪಮಿಸಲಳವಲ್ಲ ಸ್ವಸುಖ ಪುಟ, ಏಕೆಂದರೆ ಶಿವನೆ ಚೈತನ್ಯಾತ್ಮಕನು, ಶಕ್ತಿಯೆ ಚಿತ್ತು, ಚೈತನ್ಯಾತ್ಮಕನು ವಾಙ್ಮನೋತೀತವು ಶಕ್ತಿಯು ವಾಙ್ಮನೋತೀತನು ವಾಙ್ಮನೋತೀತವಾದ ಚೈತನ್ಯಾತ್ಮಕನ ವರ್ಣಿಸುವದದೆಂತು,

ಕಲ್ಪಿಸುವದದೆಂತು? ಚಿಂತಿಸುವದದೆಂತು ಶಕ್ತಿಯೆ ವಾಙ್ಮನೋತೀತವು, ಇದನಾರು ವರ್ಣಿಸುವರು ಭಾವಿಸುವದದೆಂತು! ಇದು ಕಾರಣ ಶಿವಶಕ್ತಿ ಸಂಪುಟವೆಂಬುದು ಶಬ್ದ ವೇದಿಗಳ ಪುಟವಲ್ಲ, ಅರಿಯಬಲ್ಲವರ ಪುಟವೆಂದು ಹೇಳಿಹರು.

ಚೈತನ್ಯಾತ್ಮಕನೆಂದರೂ ಜ್ಞಾನಸ್ವರೂಪ, ಚಿತ್ ಎಂದರೂ ಜ್ಞಾನಸ್ವರೂಪ ಅರು ಸ್ವರೂಪವಾಗಿಹ ಪುಟ. ಇದು ಅರುವ ಅರಿಯಬಲ್ಲ ಪುಟವಾಗಿದೆ. ಇದು ಅರಿಸಿಕೊಳ್ಳುವ ಪುಟವಲ್ಲ, ಸ್ಥಾವರ ಜಂಗಮ ಜಗವ ಅರಿಯಬಲ್ಲ ಪುಟ, ಇತ್ತ ಅರಿಯುವ ಅರುವಾಗಿಹ ಪುಟ, ಅರಿದರಿದು ನೋಡುವುಡೆ ಅರಿದು ಅರಿಯಂದತಿದ್ದ ಘನ.

ಶಿವಶಕ್ತಿ ಸಂಪುಟ ನೋಡಿರೆ? ಗುರು ಶಿಷ್ಯರೆಂಬುದು ಶಿವ ಶಕ್ತಿ ಸಂಪುಟ ಅರುವ ಅರಿಯಬಲ್ಲ ಪುಟ, ಭಕ್ತ ಜಂಗಮರೆಂಬುದು ಚೈತನ್ಯಾತ್ಮಕನೆ ಚಿತ್ ಸ್ವರೂಪವೆಂದು ಅರಿತ ಪುಟ. ಇದು ಒಂದಾದ ಪುಟ ನಿಸ್ಸೀಮ ಪುಟ, ಅಖಂಡೈಕರಸ ಪುಟ. ಶಬ್ದ ಮುಗ್ಧ ಸುಖದ ಪುಟ, ತನ್ನ ತಾನರಿತ ನಿಃಶಬ್ದವೇದಿಗಳ ಪುಟ.

ಇಂತೀ ಚೈತನ್ಯಾತ್ಮಕನೆ ಚಿತ್ತ ಸ್ವರೂಪನೆಂದರಿಯ ಬಲ್ಲಡೆ ಆತನೆ ಶರಣ ಗುಹೇಶ್ವರಾ: ಪ್ರಭುದೇವ ಮಹಾಪ್ರಸಾದಿ ನಿಸ್ಸೀಮವಂತ ಚೈತನ್ಯಾತ್ಮನನ್ನು ಚಿತ್ ಸ್ವರೂಪವನ್ನು ಬೇರೆನ ಹೋಗಲಿಲ್ಲ. ಒಂದೆನ ಹೋಗಲಿಲ್ಲ. ಚಿಂತಿಸ ಹೋಗಲಿಲ್ಲ. ಭಾವಿಸ ಹೋಗಲಿಲ್ಲ. ಅರಿಯ ಹೋಗಿ ಚೈತನ್ಯಾತ್ಮಕನಾರೋ ಅದುವೆ ಚಿತ್ ಸ್ವರೂಪವೆಂದರಿತ, ಶಿವನಾರೋ? ಅದು ಶಕ್ತಿ ಎಂದರಿತ. ಇದು ಅದುವರಿತ ಘನತ್ವ ಪ್ರಭು ಮಾಯಾ ಕೋಲಾಹಲ ನೆಂದಲ್ಲಿ ಶಬ್ದವೇದಿಗಳಿಗೆ ನಿಶಬ್ದ ನಿಲುವುಳ್ಳ ನಿಜಪದವ ಅಳವಡಿಸಿಕೊಟ್ಟ. ಅಚಿಂತ್ಯಾತ್ಮನ ಸಿದ್ಧಮಾಡಿ ತೋರಿಸಿದ ಶರಣ ಗಣತಿಂಥಿಣಿ ಸಮೂಹಕ್ಕೆಲ್ಲ ಅರಸುವ ಮಾಯಾಪದವು ದಿಟವಲ್ಲ, ತನ್ನ ತಾನರಿಯುವುಡೆ ತಾನೆ ಅನುಪಮ ಎಂದು ಸಹಜ ರೂಪದಲ್ಲಿ ಸಯ ಸುಖವುಳ್ಳ ಅಚಿಂತ್ಯಪದ ಕರತಲವ ಮಾಡಿದ. ಅಚಿಂತ್ಯ ಪದವೆಂಬುದು ಅರಿದರುಹಿಸಿ ಕೊಂಬುದಕ್ಕೂ ಮೀರಿದ ಪದ, ನೆನಹು ನಿರ್ಣಯ ಸೋತು ಹೋದಲ್ಲಿ ಲಭ್ಯವಾಗುವ ಪದ. ಚಿಂತನೆ ಕೆಟ್ಟುದೆ ಅಚಿಂತ್ಯತ್ವ ಇದುವೆ ಚೈತನ್ಯಾತ್ಮಕನ ಚಿತ್ ಸ್ವರೂಪ ವೆಂದರಿಯ ಬಲ್ಲ. ಶರಣತ್ವವೆಂದು ಹೇಳಿಹರು.

**ವಚನ 37**

**ಮಣ್ಣ ಮಡಿಕೆ, ಮಣ್ಣಾಗದು ಕ್ರಿಯೆಯಳಿದು,**
**ಬೆಣ್ಣೆ ಕರಗಿ ತುಪ್ಪವಾಗಿ ಮರಳಿ ಬೆಣ್ಣೆಯಾಗದು.**
**ಕ್ರಿಯೆಯಳಿದು ಕಬ್ಬುನ ಹೊನ್ನಾಗಿ ಹೊನ್ನು ಕಬ್ಬುನವಾಗದು.**
**ಕ್ರಿಯೆಯಳಿದು, ಮುತ್ತು, ನೀರಲ್ಲಿ ಹುಟ್ಟಿ ಮತ್ತೆ ನೀರಾಗದು.**
**ಕ್ರಿಯೆಯಳಿದು ಕೂಡಲಸಂಗನ ಶರಣರು ಮರಳಿ**
**ಮಾನವರಾಗರು ಕ್ರಿಯೆಯಳಿದು. ॥ 869 ॥**

**ತಾತ್ಪರ್ಯ:** ಮಣ್ಣ ಮಡಿಕೆ ಮಣ್ಣಾಗದು ಕ್ರಿಯೆಯುಳಿದು: ಮಣ್ಣು ಗಡಿಗೆಯಾದ ಮೇಲೆ ಪುನಃ ಮಣ್ಣಾಗದು ಕ್ರಿಯೆಯಳಿದು. ಗಡಿಗೆಯ ಕ್ರಿಯೆ ಅಳಿದ ಪೂರ್ವದಂತೆ

ಮಣ್ಣಾಗದು ಕುಂಬಾರನ ಕೈಯಲ್ಲಿ ಮಣ್ಣು ಹದವಾಗಿ ಗಡಿಗೆಯ ರೂಪವಾಗಿ ಸುಡಿಸಿಕೊಂಡು ತನ್ನ ಕ್ರಿಯೆ ಕಳಕೊಂಡಿದೆ. ಅದು ಪುನಃ ತನ್ನ ಪೂರ್ವರೂಪ ತಾಳದು.

ಬೆಣ್ಣೆ ಕರಗಿ ತುಪ್ಪವಾದ ಮೇಲೆ ಮರಳಿ ಬೆಣ್ಣೆಯಾಗದು. ಶಕ್ತಿಯ ಕೈಯಲ್ಲಿ ಕರಗಿ ತುಪ್ಪವಾದಲ್ಲಿ ಪುನಃ ಪೂರ್ವರೂಪ ತಾಳದು. ಬೆಣ್ಣೆಯಾಗಿಹ ಕ್ರಿಯೆ ಅಳಿದು ಹೋಗಿದೆ. ಕಬ್ಬುನ ಹೊನ್ನಾದ ಮೇಲೆ ಪುನಃ ಕಬ್ಬುನವಾಗದು, ಅದರ ಪೂರ್ವರೂಪ ಅಳಿದು ಹೋಗಿದೆ.

ಮುತ್ತು ನೀರಲ್ಲಿ ಹುಟ್ಟಿ ನೀರಾಗದು ಕ್ರಿಯೆ ಅಳಿದು: ಮುತ್ತು ನೀರಲ್ಲಿ ಹುಟ್ಟಿ ಮುತ್ತಾದ ಮೇಲೆ ಪುನಃ ನೀರಾಗದು ಕ್ರಿಯೆ ಅಳಿದು. ನೀರಲ್ಲಿ ಹುಟ್ಟಿ ಪುನಃ ನೀರಾಗದು ಅದರ ಪೂರ್ವರೂಪ ಅಳಿದು ಹೋಗಿದೆ.

ಮಣ್ಣು ಆವುದು? ಹದವಾವುದು? ಸುಟ್ಟುದಾವುದು? ಗಡಿಗೆ ಆವುದು? ಗಡಿಗೆ ಮಣ್ಣಾಗದು ಕ್ರಿಯೆಯಳಿದು! ತನುಭಾವವೆ ಮಣ್ಣು, ದಾಸೋಹಂ ಭಾವವೆ ಹದವಾದುದು, ಸದ್ಗುರು ನಾಥನೆ ಕುಂಬಾರ ಮಹಾಂತನ ಚಿದಗ್ನಿಯಿಂದ ಸುಟ್ಟುದು ಸ್ಫಟಿಕದ ಘಟ, ನಿರಂತರವಾಗಿರುವ ಮಂಗಳಮಯ ಪರಮಸತ್ ಸ್ವರೂಪ ತಾನೆಂಬ ಅರಿವೆ ಗಡಿಗೆ ಆದುದು. ಈ ಅರಿವು ಆದಲ್ಲಿ ಸಮ್ಯಜ್ಞಾನವಾದಲ್ಲಿ ಪುನಃ ತನು ಭಾವಿಯಾಗನು.

ಬೆಣ್ಣೆ ಕರಗಿ ತುಪ್ಪವಾಗಿ ಮರಳಿ ಬೆಣ್ಣೆಯಾಗದು ಕ್ರಿಯೆಯಳಿದು. ಇಲ್ಲಿ ಬೆಣ್ಣೆ ಆವುದು ಕರಗಿದ ಲಕ್ಷಣವೇನು, ತುಪ್ಪವಾವುದು? ತಾನು ಸಹಿತ ಸಕಲ ಜಗತ್ತು ಪರಮಾತ್ಮ ಸಚ್ಚಿದಾನಂದ ಪೂರ್ಣ ಪರಬ್ರಹ್ಮವು ಎಂಬ ಪೂರ್ಣಭಾವವು ಬೆಣ್ಣೆಯು. ಇದು ಕರಗುವುದೆಂದರೆ, ಪೂರ್ಣ ಭಾವ ಕೆಟ್ಟು ಭಾವಕ್ಕಗಮ್ಯನಾದುದು ಕರಗಿದ ಲಕ್ಷಣವು. ಆಗ ತುಪ್ಪವೆಂಬುದು ಅರಿಯದರುವು ಏನೆಂದಲಿಲ್ಲದ ತನ್ನಿರುವಿನ ಅರುವಾಗಿಹುದು. ತುಪ್ಪವು ಅಕಥನೀಯವಾಗಿಹ ನಿಲವುಳ್ಳ ತನ್ನಿರವು ತನಗೆ ವೇದ್ಯವಾದಲ್ಲಿ ಪುನಃ ಕಥನಕ್ಕೊಳಪಡುವ ಹೆತ್ತರಿವು ಆಗನು. ಅನುಪಮನು ತಾನೆಂಬುದು ತನ್ನಿಂದ ಘಟ್ಟಿಗೊಂಡು ಅರಿಯದರುವು ಆಗಿಹುದೆ ಕ್ರಿಯೆಯಳಿದ ಘನತ್ವ ಪುನಃ ಮಾಯಿಕ ಅರುವು ಆಗನು.

ಕಬ್ಬುನ ಹೊನ್ನಾಗಿ ಪುನಃ ಹೊನ್ನು ಕಬ್ಬುನ ವಾಗದು. ಕ್ರಿಯೆಯಳಿದು ಮುಮುಕ್ಷು ಹೃದಯವೆ ಕಬ್ಬುನ ಸಾಧನ ಚತುಷ್ಟ ಸಂಪನ್ನನಾಗಿಹ ಅಧಿಕಾರಿ ಹೃದಯ ಕಬ್ಬುನ ಸರ್ವಾರ್ಪಣ ಮನವೆ ಕಬ್ಬುನ, ಗುರುಪ್ರಸಾದವೆಂಬ ಪರುಷ ಮಣಿಯ ಮುಟ್ಟಲು, ಮುಮುಕ್ಷು, ಸರ್ವಾರ್ಪಣೆಯುಳ್ಳ ಅಧಿಕಾರಿ ಎಂಬ ಮನವು ನಷ್ಟವಾಗಿ ಲಿಂಗಜಂಗಮದರಿವು ಆದುದೆ ಹೊನ್ನು ಆದುದು, ಲಿಂಗ ಜಂಗಮದರಿವು ಆದಲ್ಲಿ ಪುನಃ ಮುಮುಕ್ಷು ಅಧಿಕಾರಿ ಎನಲಾರ.

ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಾಗದು ಕ್ರಿಯೆಯಳಿದು, ಸ್ವಾತಿ ಬಿಂದು ಕಪ್ಪೆಚಿಪ್ಪಿನಲ್ಲಿ ಬಿದ್ದುದು ಅದು ಮುತ್ತು ಎನಿಸುವದು. ಮುತ್ತಾದ ಮೇಲೆ ಪುನಃ ನೀರು

ಆಗದು. ಹಾಗೆ ಶುದ್ಧ ಮನಸ್ಸಿಗೆ ಸ್ವರೂಪದ ಯತಾರ್ಥ ತಿಳುವಳಿಕೆ ಆಗುವುಡೆ ಪುನಃ ಸಂಕಲ್ಪ ವಿಕಲ್ಪರೂಪಿ ಮನವು ಆಗದು. ಮನವು ಅಕಲ್ಪಿತ ಘನದಲ್ಲಿ ತಲ್ಲೀನವಾಗುವುಡೆ ಪುನಃ ಕಲ್ಪಿತ ಮನವು ಆಗದು.

ಕೂಡಲ ಸಂಗನ ಶರಣರು ಮರಳಿ ಮಾನವರಾಗರು. ಕ್ರಿಯೆಯಳಿದು ಶರಣನೆಂದರೆ ಕ್ರಿಯೆ ಅಳಿದವರು ಅನುಪಮರು ಅಕ್ರಿಯೆ ಅಳವಟ್ಟವರು, ನೆನಹು ನಿರ್ಣಯಕ್ಕೆ ನಿಲುಕದವರು.

ಸ್ಥಲವೆಂದೆನ್ನೆ ನಿಸ್ಥಲವೆಂದೆನ್ನೆ ನಿರ್ಣಯ ವೆನಗಾದ ಬಳಿಕ ಏನೆಂದರಿಯೆ ನಯ್ಯ. ಇದು ಕಾರಣ ಕೂಡಲಚೆನ್ನಸಂಗಯ್ಯ ಲಿಂಗೈಕ್ಯವೆಂದೆನ್ನ. ಶರಣ, ಷಟ್ ಸ್ಥಲದಿಂದುಕ್ತನಾದವ ನೆನ್ನಲು ಬರದು. ನಿಸ್ಥಲದವನೆನ್ನಲು ಬರದು. ನುಡಿಗೆಡೆಗೊಡದ ಘನದಿರುವೆ ತನ್ನಿರುವಾಗಿಹ ಅನುಪಮನನ್ನು ಅದಾವ ಕ್ರಿಯೆಯಿಂದುಕ್ತವಾದವನೆನಬೇಕು. ಕ್ರಿಯೆಯಳಿದ ಮಹಾಂತನಿಗೆ ಹಾಗೆ ಹೀಗೆ ಎಂದು ಉಸರಿದರದಕ್ಕದೆ ಕೊರತೆ, ಭಾವನೆಗಿಂಬು ಗೊಡದವಂಗೆ ಅದಾವ ಭಾವನೆಯಿಂದ ಭಾವಿಸುವದು. ಶಬ್ದ ಮೀಸಲಾಗಿಹ ಮಹಾಂತಂಗೆ ಅದಾವ ಭಾಷೆ ತರುವುದು. ಇದು ಕಾರಣ ಶರಣ ಮರಳಿ ಮಾನವರಾಗರು.

**ವಚನ 38**

**ಪರತತ್ವ ನಿಜ ಸಂಯುಕ್ತರೆ ಆನು ನೀನೆನ್ನದಿಹ ಶಬ್ದ ಸುಖಿಗಳ ತೋರಾ ಎನಗೆ,**
**ಮಹಾನುಭಾವರ ತೋರಾ, ಎನಗೆ ಲಿಂಗವೆ?**
**ಲಿಂಗೈಕ್ಯರ ಲಿಂಗಸುಖಿಗಳ, ಲಿಂಗಗೂಡಾಗಿಪ್ಪವರ ಲಿಂಗಾಭಿಮಾನಿಗಳ ತೋರಾ, ಎನಗೆ**
**ಅಹೋ ರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲ ಸಂಗಮದೇವಾ. ॥ 880 ॥**

**ತಾತ್ಪರ್ಯ:** ಪರತತ್ವ ನಿಜಸಂಯುಕ್ತರ ಆನು ನೀನೆನ್ನದಿಹ ಶಬ್ದ ಸುಖಿಗಳ ತೋರಾ ಎನಗೆ ಮಹಾನುಭಾವರ ತೋರಾ ಎನಗೆ! ಬಸವರಸರು ಪರತತ್ವವರಿತವರು ನಿಜ ಸಂಯುಕ್ತರು. ಅವರೆ ನಾನೀನೆನ್ನದಿಹ ಶಬ್ದ ಸುಖಿಗಳು ನಿಸ್ಸೀಮ ಸುಖಿಗಳು ಆ ಘನಸುಖಿಗಳ ತೋರಾ ಎನಗೆ. ಅವರು ಮಹಾನುಭಾವರು, ಅವರ್ಣೀಯವಂತರು, ನಿರ್ಣಯಕ್ಕೆ ಮೀರಿದವರು, ಘನಕ್ಕೆ ಘನರು ಅಗಮ್ಯರು. ಅಕಲ್ಪಿತ ಘನವೆ ತಾವಾದವರು. ಅವರನ್ನು ತೋರಾ ಎನಗೆ ಎಂದು, ಲಿಂಗದೇವನನ್ನು ಪ್ರಾರ್ಥಿಸಿದ್ದಾರೆ.

ಪರತತ್ವವದು ಶ್ರೇಷ್ಠ ತತ್ವ ಅತ್ಯುತ್ತಮವಾದ ತತ್ವ, ನಿಷ್ಕಳಂಕ ತತ್ವ, ನುಡಿಗೆಡೆಗೊಡದ ತತ್ವ; ಅರಿವುಡೆ ತಾನೆ. ತಾನೆ ಪರತತ್ವ, ತಾನು ಅರಿಯದರುವುಳ್ಳವನಾಗಿ ನಿಂತು ತನ್ನ ನೋಡಿದುದೆ ನಿಜಸಂಯುಕ್ತರು. ಅವರೆ ಆನು ನೀನೆನ್ನದಿಹ ಶಬ್ದ ಸುಖಿಗಳು. ಏಕೆಂದರೆ ಅವರು ನೀನೆನ್ನುವ ಅಜ್ಞಾನಿಗಳಲ್ಲ, ನಾನೆನ್ನುವ ಮಾಯಾಧೀನರಲ್ಲ, ನೀನೆನ್ನದ ನಾನೆನ್ನದ ಸಂದಿಲ್ಲದಿಪ್ಪ, ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದು, ಒಂದಾದ ಮಹಾಂತರು, ಅವರು ಆವಾವುದಕ್ಕೂ ಅವಕಾಶ ಕೊಡದ, ತೆರಹಿಲ್ಲದ ನಡೆ ತೆರಹಿಲ್ಲದ ನುಡಿ ಮಾತೆಂಬುದು ಜ್ಯೋತಿರ್ಲಿಂಗ. ನಡೆ ನಿರ್ಗಮನವಾಗಿಹ ಘನವಂತರು ಅವರನ್ನು ತೋರಾ ಎನಗೆ, ಅವರ ಮಹಾನುಭಾವ ತೋರಾ ಎನಗೆ,

ಅವರ ದರ್ಶನವೆನಗೆ ಲಿಂಗದರ್ಶನ. ಎಲೆ ಲಿಂಗವೆ! ನಿನ್ನ ಲಿಂಗೈಕ್ಯರ ಲಿಂಗ ಸುಖಿಗಳ ಲಿಂಗಗೂಡಾಗಿಪ್ಪವರ ಲಿಂಗಾಭಿಮಾನಿಗಳ ತೋರಾ ಎನಗೆ.

ಮಹಾನುಭಾವರ ದರ್ಶನವದು ಓ ಲಿಂಗದೇವನೆ, ಅದು ನಿನ್ನ ನಿಜದರ್ಶನ. ನೀನು ಭಕ್ತರ ಕರಕಮಲದಲ್ಲಿ ಬೆಳಗಿದರೂ ಅವ್ಯಕ್ತನಾಗಿರುವದರಿಂದ ಸಕಲರು ನಿನ್ನನ್ನು ತಿಳಿಯರು. ಓ ಲಿಂಗದೇವನೆ! ನಿನ್ನ ತಿಳಿಯಲು ಮಹಾನುಭಾವಹರ ಜ್ಞಾನವದು ಪ್ರತ್ಯಕ್ಷ ಬೆಳಗುವ ಜ್ಯೋತಿ, ಅವರ ನುಡಿ ಜ್ಯೋತಿ ಜ್ಞಾನಜ್ಯೋತಿ, ಸಕಲವು ಒಂದಾದ ಘನಕ್ಕೆ ಘನರು. ನಿಮ್ಮ ಶರಣರು ಮನದೆರೆದು ಮಾತನಾಡಿದಾಗ ಲಿಂಗ ಕಾಣಬಹುದು. ಶರಣರು ಲಿಂಗ ಒಂದಾಗಿರ್ದ ಜಂಗಮ ದೇವನು, ಜಂಗಮ ಒಂದಾಗಿರ್ದ ಲಿಂಗದೇವನು. ಅವರ್ಣೀಯವಂತರ ವರ್ಣೀಸಬಹುದೆ? ಶರಣರು ಮನದೆರೆದು ಮಾತನಾಡಿದಾಗ ಲಿಂಗ ಒಂದಾಗಿರ್ದುದು ವೇದ್ಯವಾಗುವದು. ಇದು ಕಾರಣ ಮಹಾನುಭಾವರ ತೋರಾ ಎನಗೆ ಅವರು ಲಿಂಗೈಕ್ತರು ಲಿಂಗಸುಖಿಗಳು.

ಲಿಂಗೈಕ್ಯರೆಂದರೆ ನಿಶಬ್ದವೇದಿಗಳು ಕಲ್ಪನಾತೀತರು, ನೆನಹು ನಿರ್ಣಯದ ನಿಲುವಿಂಗೆ ನಿಲುಕದ ನಿಶಬ್ದಘನ ವೇಧಿಸಿದ ನಿಲಯವುಳ್ಳವರು, ಮತಿ ಗತಿಗೆ ಮೀರಿದ ಮಹಾಂತರು. ಲಿಂಗೈಕ್ಯಂಗೆ ಲಿಂಗ ಲಿಂಗ ಎಂಬುವ ನುಡಿಯೆ ಸೂತಕವಾಗಿಪ್ಪುದಯ್ಯ, ಜಂಗಮ ಜಂಗಮ ಎಂಬುವ ನುಡಿ, ಪ್ರಸಾದ ಪ್ರಸಾದ ಎಂಬುವ ನುಡಿಯೆ ಸೂತಕವಾಗಿಪ್ಪುದಯ್ಯಾ.

ಈ ತ್ರಿವಿಧ ಸೂತಕಿಯ ನುಡಿ ಕೇಳಲಾಗದು. ಶಬ್ದಮೀಸಲಾಗಿಹ ಘನವಂತಂಗೆ ಸರ್ವ ಸೂತಕ ನಿರ್ವಹ ವಾಯಿತ್ತಯ್ಯ, ಕೂಡಲ ಚೆನ್ನಸಂಗಾ ಶರಣರು ಸರ್ವಸೂತಕ ವಿರಹಿತರು ನಿಮ್ಮ ಶರಣರು ಲಿಂಗೈಕ್ಯರು ಲಿಂಗಸುಖಿಗಳು ಲಿಂಗರೂಢಾಗಿಪ್ಪವರು. ಅವರು ಲಿಂಗವರಿತ ಲಿಂಗ ಗಂಭೀರರು ಲಿಂಗಾಭಿಮಾನಿಗಳು. ಇವರು ನುಡಿನಡೆಗೆಡೆ ಗೊಡದ ಮಹಾಂತರು. ನಿಶಬ್ದವೇದಿಗಳು ಅಕಲ್ಪಿತ ಘನವೆ ತಾವಾದ ನಿಲುವುಳ್ಳವರು, ಆದುದರಿಂದ ನುಡಿಯೆ ಸೂತಕವಾಗಿವೆ.

ಅಹೋರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲಸಂಗಮದೇವಾ: ನಿಮ್ಮ ಶರಣರೆಂದರೆ ಉದಯಾಸ್ತವೆನ್ನದೆ ಬೆಳಗುವ ಜ್ಯೋತಿ, ಅಪ್ರತಿಮ ಜ್ಯೋತಿ ಅನುಪಮ ಜ್ಯೋತಿ ಯಾದುದರಿಂದ ಅಚಿಂತ್ಯಾತ್ಮನು ತಾನೆ. ಇಂತಪ್ಪ ಘನವಂತರ ಸೇವೆಗೆ ಹಗಲಾವುದು? ರಾತ್ರಿ ಆವುದು? ಸೂರ್ಯನಿಗೆ ಕತ್ತಲು ಎಲ್ಲಿ? ಬೆಳಕೆಲ್ಲಿ? ಏನೆಂದೆನಲಿಲ್ಲದ ಅರುಸ್ವರೂಪನ ಸೇವೆಗೆ ಹಗಲೇನು, ರಾತ್ರಿಯೇನು? ನಿರಂತರ ಅವರ ಸೇವೆಯಲ್ಲಿರಿಸು ಕೂಡಲಸಂಗಮದೇವಾ.

**ವಚನ 39**

**ನಿಮ್ಮಲ್ಲಿ ನೀವು ತಿಳಿದು ನೋಡಿರೆ:**
**ಅನ್ಯವಿಲ್ಲ ಕಾಣಿರಣ್ಣಾ. ಅರಿವು ನಿಮ್ಮಲ್ಲಿ ತದ್ಗತವಾಗಿದೆ.**
**ಅನ್ಯಭಾವವ ನೆನೆಯದೆ ತನ್ನಲ್ಲಿ ತಾನರಿಯ ಬಲ್ಲಡೆ,**
**ತನ್ನಲ್ಲಿ ತನ್ಮಯನು ಗುಹೇಶ್ವರ ಲಿಂಗವು.** ॥ 376 ॥

**ತಾತ್ಪರ್ಯ:** ನಿಮ್ಮಲ್ಲಿ ನೀವು ತಿಳಿದು ನೋಡಿರೆ ಅನ್ಯವಿಲ್ಲ ಕಾಣಿರಂಣ್ಣಾ ಅರಿವು ನಿಮ್ಮಲ್ಲಿ ತದ್ಗತವಾಗಿದೆ: ಪ್ರಭುದೇವ ಅರುವಿನ ಘನವ ಕೊಂಡಾಡಿದ್ದಾನೆ ಹಾಗೂ ಅದರ ಇರುವನ್ನು ವ್ಯಕ್ತಪಡಿಸುತ್ತಿದ್ದಾನೆ.

ಓ ಅಣ್ಣಯ್ಯಗಳಿರಾ! ನಿಮ್ಮಲ್ಲಿ ನೀವು ತಿಳಿದು ನೋಡಿರೆ? ನೀವು ತಿಳಿದು ನೋಡಬೇಕಾದುದು ಆವುದು? ಅದು ನಿಮಗಿಂತ ಅನ್ಯವಲ್ಲ, ತಿಳಿದು ನೋಡಬೇಕಾದುದು ಅರಿವು, ಅದು ತನಗಿಂತ ಅನ್ಯವಾದುದು ಅಲ್ಲ, ಅರಿವು ನಿಮ್ಮಲ್ಲಿ ತುಂಬಿದೆ, ತುಂಬಿದ ಅರಿವು ಅದನ್ನು ತಿಳಿದವರೆಷ್ಟು? ಅರಿವ ಅರಿತವರು ವಿರಳ. ಈ ಅರುವ ಅರಿಯಲು ಬಹಳಷ್ಟು ಸಾಧನಮಾಡುತ್ತಾರೆ. ಇವರ ಸಾಧನೆ ನೋಡಲು ಬಹು ವಿಚಿತ್ರವಾಗುತ್ತಿದೆ. ಮಹಾತ್ಮರು ತಿಳಿಸಿದ ಅನುವೆ ಬೇರೆ, ಇವರ ಸಾಧನೆ ಅಭ್ಯಾಸ ಬೇರೆ, ಅವರು ನಿಮ್ಮಲ್ಲಿ ನೀವು ತಿಳಿದು ನೋಡಿರೆ? ಎಂದು ಸಂಬೋಧಿಸಿದ ಕಳಕಳಿಯ ಕರುಣೆಯನ್ನು ಅದೆಷ್ಟು ಜನ! ತಿಳಿದು ಸಾರ್ಥಕ ಮಾಡುವವರು ಲಕ್ಷಕ್ಕೊಬ್ಬ ಕೋಟಿಗೊಬ್ಬ ಎಂದಂತೆ, ಬಹಳಷ್ಟು ಜನ ತಮ್ಮಲ್ಲಿ ತಿಳಿದು ನೋಡುವದು ಬಿಟ್ಟು ಗ್ರಂಥಗಳು ತಿಳಿಯುವದು ಮಾಡುತ್ತಾರೆ. ಪಠಣ ಪಾರಾಯಣ ಮಾಡುವದು ಮಾಡುತ್ತಾರೆ. ಅರುವ ಅರಿಯುವದು ಬಿಟ್ಟು ಮನದ ದೋಷ ಕಳೆಯಲು ಉಪಾಸನೆ ಮಾಡುತ್ತಾರೆ. ಕೆಲಬರು ಶಾಸ್ತ್ರಾಧ್ಯಯನ ಗುರುಗಳ ಬೋಧೆ ಶ್ರವಣ, ಮನನ, ನಿಧಿಧ್ಯಾಸ, ಅನುಸಂಧಾನ ಮಾಡಲು ಉದ್ಯುಕ್ತರಾಗಿರುವರಲ್ಲದೆ, ತಮ್ಮಲ್ಲಿ ತಿಳಿದು ನೋಡುವ ಕಾರ್ಯ ಮಾಡುವವರು ಬಹು ವಿರಳ.

ತನ್ನ ತಿಳಿದು ನೋಡುವ ಹೃದಯವೆತ್ತ! ವೇದ , ಪಾಠ ಪಾರಾಯಣ ಮಾಡುವ ಹೃದಯವೆತ್ತ, ಗೀತಾಧ್ಯಯನ ಮಾಡುವ ಹೃದಯವೆತ್ತ, ತನ್ನಲ್ಲಿ ಅರುವ ಅರಿದರಿದು ನೋಡುವ ಹೃದಯವೆತ್ತ, ನೆನೆಯುವ ನಿರ್ಧರಿಸುವ ಭಾವಿಸುವ ಹೃದಯವೆತ್ತ, ನೆನೆಯುವದೆ ನಾಚಿ ನಿರ್ಧರಿಸಲು ಬಾರದಂತಾಗಿ ಭಾವಕ್ಕಗಮ್ಯವಾಗಿ ತನ್ನನ್ನೆ ನೋಡುವ ಹೃದಯವೆತ್ತ! ಕಲ್ಪಿತನೆತ್ತ? ಕಲ್ಪಿತವಲ್ಲದವನೆತ್ತ! ಘನವೆತ್ತ! ಘನಕ್ಕೆ ಘನನಾಗಿಹ ತಾನೆತ್ತ!

ಪ್ರಭುದೇವ ಅನ್ಯ ಭಾವವ ನೆನೆಯದೆ, ತನ್ನಲ್ಲಿ ತಾನರಿಯ ಬಲ್ಲಡೆ, ತನ್ನಲ್ಲಿ ತನ್ಮಯನು ಗುಹೇಶ್ವರಾ. ಎಂದು ಅರುವ ಅರಿಯುವ ರಹಸ್ಯವ ತಿಳಿಸಿಹನು. ತನ್ನಲ್ಲಿ ತಾನರಿಯಲು ಬಲ್ಲವರು, ಅನ್ಯಭಾವ ನೆನೆಯದೆ ತನ್ನ ಅರಿತಲ್ಲಿ ತನ್ನಲ್ಲಿಯೆ ಮುಳುಗಿದವನು ಐಕ್ಯನಾದವನು. ಅದುವೆ ಆದವನು. ತಾನಾರೊ ಅದುವೆ ಆದವನು. ತಾನು ಭಾವಕ್ಕಗಮ್ಯನೆಂಬುದು ತಿಳಿಯದ್ದರಿಂದ ಅರುವು ಬೇರೆ ತಾನು ಬೇರೆಂದು ನೆನೆಯುವವರು ಬಹಳಷ್ಟು ಜನ ಇದ್ದಾರೆ. ಅರುವು ತಾನು ಒಂದೆ ಎಂದು ಚಿಂತನ ಮಾಡುವವರು ಸ್ವಲ್ಪ ಜನ ಶಿಕ್ಕುವರು.

ಪ್ರಭುವಿನ ಮಹಾಪ್ರಸಾದ ನಿಮ್ಮಲ್ಲಿ ತಿಳಿದು ನೋಡಿರೆ? ಅನ್ಯವಿಲ್ಲ ಕಾಣಿರಂಣಾ ಎಂದು ತಿಳಿಸುವ ಕಳಕಳಿಯ ಕರುಣಾಜಲ ಅದೆಷ್ಟು ಸಾಧಕರು ನಂಬಿರುವರು. ನಂಬಿದಂತೆ ತಿಳಿದು ನೋಡಿದ ಮಹಾಂತರು ಅದೆಷ್ಟು ಅಧಿಕಾರಿಗಳು.

ಮಹಾತ್ಮರ ಮಹಾನುಭಾವ ನಂಬಿದ್ದಾರೆ. ಅವರು ತಮ್ಮಲ್ಲಿ ತಿಳಿದು ನೋಡಲು

ಉದ್ಯುಕ್ತರಾದರು. ಅವರಿಗೆ ಅರುವೆಂಬುದು ತಮಗಿಂತ ಅನ್ಯ ಕಾಣಲಿಲ್ಲ. ಅದು ತನ್ನಲ್ಲಿಯೆ ತಲ್ಲೀನವಾದುದು ಸಿದ್ಧವಾಯಿತು. ಇದಲ್ಲದೆ ತಾನೆ ಆದುದು ಸಿದ್ಧವಾಯಿತು. ಇದು ಕಾರಣ ಅವರು ಚಿಂತನ ಮಾಡಲು ಹೋಗಲಿಲ್ಲ. ಅರಿಯ ಹೋದುದರಿಂದ ಅರುವ ಬಲ್ಲವರಾದುದು. ಆಗ ತನ್ನಲ್ಲಿಯೆ ಐಕ್ಯರಾದರು. ಘನಕ್ಕೆ ಘನವಾದ ತನ್ನಲ್ಲಿಯೆ ತನ್ಮಯರಾದರು. ತನಗಿಂತ ಘನಕ್ಕೆ ಘನವಾದುದು ಆವುದು ಇಲ್ಲವಾಗಿ ಎತ್ತ ನೋಡಿದಡತ್ತತ್ತ ತನ್ನನ್ನೆ ಕಾಣುವ ದಿವ್ಯದೃಷ್ಟಿಯುಳ್ಳವರಾದರು. ಇದು ಕಾರಣ ಪ್ರಭುದೇವ ನಿಮ್ಮಲ್ಲಿ ನೀವು ತಿಳಿದು ನೋಡಿರೆ? ಅದು ನಿಮಗಿಂತ ಅನ್ಯವಿಲ್ಲವೆಂದು ಘಂಟಾಘೋಷವಾಗಿ ಹೇಳಿದುದು ಸಿಂಹಗರ್ಜನೆ. ತಾನಾರೆಂದರಿತ ತನ್ನ ಗರ್ಜನೆ ಗರ್ಜಿಸಿದಾಗ ಉಳಿದವುಗಳೆಲ್ಲ ಮೌನ ಧರಿಸಿಹವು.

**ವಚನ 40**

**ತನ್ನವ ಮರೆದು ದೇವರ ಕಂಡೆನೆಂಬ ಕಾರಣ,**
**ಹರಿ ಸುರ ಬ್ರಹ್ಮಾದಿಗಳೆಲ್ಲರು ತಲೆ ಕೆಳಗಾಗಿ ಹೋದರು.**
**ಆ ದೇವರು ಮರೆದು ತನ್ನವ ನರಿದುದುಂಟಾದಡೆ**
**ತಾನೆ ದಿಟವೆಂದ ನಂಬಿಗ ಚೌಡಯ್ಯ**

**ತಾತ್ಪರ್ಯ:** ತನ್ನವ ಮರೆದು ದೇವರ ಕಂಡೆನೆಂಬ ಕಾರಣ ಹರಿ ಸುರ ಬ್ರಹ್ಮಾದಿಗಳೆಲ್ಲರು ತಲೆ ಕೆಳಗಾಗಿ ಹೋದರು: ತನ್ನ ಮರೆತವರು ದೇವರನ್ನು ಕಾಣಲು ಉಗ್ರ ತಪಸ್ವಿಗಳಾಗಿ ಪರಿಶ್ರಮ ಬಿಡುವವರು ಶೈವರಷ್ಟೆ ಅಲ್ಲ ದೇವತಾದಿಗಳು ದೈತ್ಯರು ಇದ್ದಾರೆ. ಮನು ಮುನಿಗಳು ಇದ್ದಾರೆ. ಬ್ರಹ್ಮಾದಿಗಳು ಇದ್ದಾರೆ.

ಈ ಸಂಪ್ರದಾಯ ಬಹಳಷ್ಟು ಆಳವಾಗಿ ಬೇರೂರಿದೆ. ಇವರುಗಳಲ್ಲಿ ಕಾಣಬೇಕಾದದ್ದು ಶರೀರ ಮೇಲೆ ನಿರ್ಮಮ ಕಾಣುವದು. ವೈರಾಗ್ಯ ಕಾಣುವದು. ಮುಗ್ಧ ಭಾವಿಕತನ ಕಾಣುವದಿಷ್ಟೆ ಅಲ್ಲದೆ ಭೇದ ಜ್ಞಾನದಿಂದುಕ್ತರಾಗಿರುವರು. ಇವರಿಗೆ ಸದ್ಗುರು ದರ್ಶನವಿಲ್ಲ ಇದಲ್ಲದೆ ವೇದ ವೇದಾಂತಗಳಿಗ ಅಸಾಧ್ಯವಾದ ಅನುಪಮ ಜ್ಞಾನದ ಕಲೆಯುಳ್ಳ ಇಷ್ಟಲಿಂಗ ಇವರಿಗೆ ಲಭ್ಯವಾಗಲಿಲ್ಲ. ಎಷ್ಟೊ ವೀರಶೈವರು ಇಷ್ಟಲಿಂಗ ಪೂಜೆ ಮಾಡುವವರು ಇದ್ದಾರೆ. ತನ್ನನ್ನೆ ಮರೆತು, ಇಷ್ಟಲಿಂಗವ ಕಂಡವರಿದ್ದಾರೆ. ಅವರು ಗುರುಕೊಟ್ಟ ಲಿಂಗವೆನ್ನುತ್ತಿದ್ದಾರೆ. ಈ ಅಪ್ರತಿಮ ಲಿಂಗ ಅವರ್ಣೀಯ ಲಿಂಗ ಏಕೆ ಕರುಣಿಸಿದ ಎಂಬ ಪರಿಜ್ಞಾನ ಬಹು ಜನರಿಗೆ ಇಲ್ಲವಾದಂತೆ ಕಾಣುತ್ತದೆ. ಗುರು ಘನ ಅರುವ ಅರಿಯ ಹೇಳಿ ಇಷ್ಟಲಿಂಗ ಕರುಣಿಸಿದರೂ ಅದೆಷ್ಟು ಲಿಂಗಾರ್ಚಕರು ಗುರು ಆಜ್ಞೆಯಂತೆ ಅರುವ ಅರಿತವರು ಶಿಕ್ಕುತ್ತಾರೆ. ಯಾರು ಅರುವ ಅರಿತಿದ್ದಾರೆ ಅವರು ತಮ್ಮನ್ನು ಮರೆತಿರುವದಿಲ್ಲ. ತನಗಿಂತ ದೇವನು ಬೇರೆ ಇದ್ದಾನೆಂದು ಆತನ ಕಾಣಲು ಹೋಗಲಿಲ್ಲ. ಅಂಥವರು ತಲೆ ಕೆಳಗಾಗಿ ತಪಸ್ಸು ಮಾಡಲಿಲ್ಲ. ಒಂಟಿ ಕಾಲಿನಲ್ಲಿ ನಿಲ್ಲಲಿಲ್ಲ. ಅನ್ನ ನೀರು ಬಿಡಲಿಲ್ಲ. ಪ್ರಸಾದ ಕಾಯವ ನೊಂದಿಸಲಿಲ್ಲ. ಇವರು ಗುರು ಕರುಣಿಸಿದ ಲಿಂಗವರಿತು ತಾವು ಲಿಂಗವಾದರು.

ಆ ದೇವನ ಮರೆದು ತನ್ನವ ನರಿದುದುಂಟಾದರೆ ತಾನೆ ದಿಟವೆಂದನಂಬಿಗ

ಚೌಡಯ್ಯ. ಬಹು ಜನ ಭಾವಿಕರು ಇವರು ಮುಗ್ಧ ಭಾವಿಕರು. ಸಾಂಪ್ರದಾಯದ ಕಟ್ಟಿನಲ್ಲಿ ಬಿದ್ದವರು. ತಮ್ಮ ಹಿರಿಯರು ಭಾವಿಸಿದಂತೆ ಭಾವಿಸುವ ಭಾವುಕರು. ಇವರು ದೇವಗಣ, ರುದ್ರಗಣ, ಪ್ರಮಥ ಗಣಕ್ಕೆ ದೇವರೆಂದು ತಿಳಿದವರು. ಇನ್ನು ಕೆಲಬರು ಪಂಚಲೋಹದಿಂದ ಮಾಡಿದ ದೇವರೆ ದೇವರೆಂದು, ಶಿಲೆ ಕಾಷ್ಟಗಳಿಂದ ಮಾಡಿದ ದೇವರೆ ದೇವರೆಂದು ಭಾವಿಸಿದವರು. ಇವರಿಗೆ ತತ್ವ ತಾತ್ವಿಕ ವಿಚಾರವಿಲ್ಲ. ಸತ್ಸಂಗ ದರ್ಶನವಿಲ್ಲ. ಸದ್ಗುರು ದೇವನಲ್ಲಿ ಶ್ರದ್ಧೆ ಇಲ್ಲ. ಹೀಗಾಗಿ ತಮ್ಮಿಷ್ಟಕ್ಕೆ ತಾವೆ ಕಲ್ಪಿಸಿ ಕೊಂಡು ಬಂದ ದೇವನೆ ದೇವನಾಗಿಹನು. ಅಕಲ್ಪಿತ ಕ್ಷರಾಕ್ಷರವೆಂಬುದಕ್ಕೂ ಮೀರಿದ ಘನನೇ ದೇವನೆನ್ನುವಷ್ಟು ಮತಿ ಹೇಗೆ ಸಾಧ್ಯ. ಶರಣನೆಂದರೆ ಅಕಲ್ಪಿತ ಘನನು, ಅಚಿಂತ್ಯಾತ್ಮನು ಆದುದರಿಂದ ಅಂಬಿಗರ ಚೌಡಯ್ಯ ಆ ದೇವನ ಮರೆದು ತನ್ನನರಿದುದುಂಟಾ ತಾನೆ ದಿಟವೆಂದ ನಂಬಿಕೆ ಚೌಡಯ್ಯನದು, ಸ್ವಯಮೇವ ಸಿಂಹವಾಗಿ ಈ ಸಿಂಹವಾಣಿ, ಗುರುಗಳ ಮೇಲೆ ದೇವನ ಮೇಲೆ ಹಾಕಿ ಹೇಳಲಿಲ್ಲ. ತನ್ನ ಸ್ವಾನುಭವದ ಸ್ವತಃ ಸಿದ್ಧ ಮಹಾಪ್ರಸಾದ, ಈ ಮಹಾಂತನು ಕಲ್ಪಿಸಿ ಕೊಂಡಂತೆ ರಚಿತವಾಗಿಹ ಕಲ್ಪಿತ ದೇವರಿಗೆ ದೇವರೆನಲಿಲ್ಲ. ಇದು ಅಜ್ಞಾನದೇವ, ನಿರಂತರವಾಗಿರುವ ಮಂಗಳಮಯ ಪರಮಸತ್ ಸ್ವರೂಪವೆ ದೇವ. ಅರಿವುಡೆ ತಾನೆ, ಕಲ್ಪಿತವೆ ಆಶ್ರಯವಾಗಿ ಕಲ್ಪಿಸಿಕೊಂಡಂತೆ ಕಾಣಿಸುವ ದೇವರು ಮಾಯಿಕ. ಭಕ್ತನ ತಪಸ್ಸಿನ ಮೇರೆಗೆ ದೇವರು ತೋರಿದಂತಾಗುತ್ತದೆ. ಪುನಃ ಇಲ್ಲವಾಗುವದು. ಇದು ಕಾರಣ ಈ ದೇವರು ದೇವರಲ್ಲ, ಈ ಭಕ್ತಿಯೂ ಭಕ್ತಿಯಲ್ಲ.

ತನ್ನವ ನರಿದುದುಂಟಾದರೆ ತಾನೆ ದಿಟವೆಂದ ನಂಬಿಗ ಚೌಡಯ್ಯ: ತನ್ನಿಂದ ತನ್ನ ಆರು ಅರಿತಿದ್ದಾರೆ ಅವರಿಗೆ ತನ್ನ ಸ್ವರೂಪವೆ ದಿಟವಾಗಿದೆ. ತನ್ನಿಂದ ತಿಳಿಸಿಕೊಳ್ಳುವದೆಲ್ಲ ಸಟೆಯಾಗಿವೆ ತಾನು ಮಾತ್ರ ದಿಟವಾಗಿದ್ದಾನೆ. ತಾನು ಮಾಯಿಕನಾಗಿದ್ದಲ್ಲಿ ತಿಳಿಸಿ ಕೊಳ್ಳುತ್ತಿದ್ದ ತಾನು ನಿರಂತರ ನಿರ್ಮಾಯನು. ನಿರ್ದೇಹಿ ನಿರಾಲಂಬ ಸತ್ಯಜ್ಞಾನಾನಂದವೆ ತನ್ನಿರುವು ಇರುವಲ್ಲಿ ತಾನೆ ದಿಟವೆಂದು ಹೇಳಿಹರು.

**ವಚನ 41**

**ತನ್ನವ ಹುಸಿ ಮಾಡಿ ಇನ್ನೊಂದು ದಿಟ ಮಾಡುವ**
**ಅಣ್ಣಂಗೆ ನಂಬುಗೆ ಇನ್ನಾವುದಯ್ಯ. ತನ್ನೊಳಗಿರ್ದ**
**ಘನವ ತಾ ತಿಳಿಯಲರಿಯದೆ ಪರಬ್ರಹ್ಮಕ್ಕೆ ತಲೆಯಿಕ್ಕಿ**
**ತೆಗೆದನೆಂಬ ಅಣ್ಣಾ ಗಾವಿಲನೆಂದನಂಬಿಗ ಚೌಡಯ್ಯ.**

**ತಾತ್ಪರ್ಯ:** ತನ್ನವ ಹುಸಿ ಮಾಡಿ, ಇನ್ನೊಂದು ದಿಟವ ಮಾಡುವ ಅಣ್ಣಂಗೆ ನಂಬುಗೆ ಇನ್ನಾವುದಯ್ಯ: ತನ್ನನ್ನೆ ಸುಳ್ಳುಮಾಡಿ ತನಗಿಂತ ಬೇರಾದದ್ದನ್ನು ದಿಟ ಮಾಡುವ ನಂಬುಗೆ ಎಲ್ಲಿಯದು. ಇದ್ದರೂ ಅದಾವ ನಂಬಿಗೆ ಎನಬೇಕು? ಮರ್ತ್ಯಲೋಕದಲ್ಲಿ ಈ ಅಣ್ಣಯ್ಯಗಳೆ ಸಾಕಷ್ಟು ಶಿಗುವರು. ದಡ್ಡರಲ್ಲಿ ಬಹಳಷ್ಟು ಜನ ಮತಿವಂತರಿಲ್ಲವೆನ್ನುವ ಹಾಗಿಲ್ಲ. ಜಾಣ ಜಾಣರಲ್ಲಿ, ತಪಸ್ವಿ ತ್ಯಾಗಿಗಳಲ್ಲಿ ಯೋಗಿಗಳಲ್ಲಿ ಪೂರ್ವಭಾಗವಾದ ವೇದ ಪಾಠಕರಲ್ಲಿ ಮಧ್ಯಮ ಭಾಗವಾದ

ಉಪಾಸಕರಲ್ಲಿ ಪೂಜಕರಲ್ಲಿ ಜಪ ತಪ ಯಜ್ಞ ಮಾಡುವರಲ್ಲಿ ತನ್ನವ ಹುಸಿ, ಇನ್ನೊಂದು ದಿಟ ಮಾಡುವ ಅಣ್ಣಯ್ಯಗಳೆ ಹೆಚ್ಚು ಇದ್ದಾರೆ. ಇವರ ನಂಬಿಗೆ, ಮೋಸದ ನಂಬಿಗೆ, ತನಗೆ ಮೋಸ ಮಾಡುವದನ್ನೆ ನಂಬಿಗೆ ಮಾಡಿಹರು.

ನಾಮದೇವನ ನಂಬಿಗೆ ತನ್ನವ ಹುಸಿ ಮಾಡಿ ಇನ್ನೊಂದು ದಿಟ ಮಾಡಿರುವ ನಂಬಿಗೆ, ಜ್ಞಾನೇಶ್ವರ ನಂಬಿಗೆ, ತನ್ನವ ದಿಟಮಾಡಿ ತನಗಿಂತನ್ಯವಾದುದೆಲ್ಲವ ಹುಸಿಮಾಡುವ ಸಮರ್ಥ ನಂಬಿಗೆ, ಗಂಭೀರ ನಂಬಿಗೆ. ಬೇಡರ ಕಣ್ಣಪ್ಪನ ನಂಬಿಗೆ ತನ್ನವ ಹುಸಿ ಇನ್ನೊಂದ ದಿಟಮಾಡಿದ ನಂಬಿಗೆ, ಇದು ತನಗೆ ತಾನೆ ಮೋಸ ಹೋದ ನಂಬಿಗೆ, ಉರಿಲಿಂಗಪೆದ್ದಿ ನಂಬಿಗೆ, ತನ್ನನ್ನೆ ದಿಟ ಮಾಡಿ ತನಗಿಂತನ್ಯವಾದುದೆಲ್ಲ ಸಟೆಮಾಡಿದ ನಿಜದ ನಂಬಿಗೆ. ತನ್ನವ ಹುಸಿಮಾಡಿ ಇನ್ನೊಂದು ದಿಟ ಮಾಡುವ ನಂಬುಗೆ, ಇದು ದಡ್ಡ ನಂಬುಗೆ. ಈ ದಡ್ಡತನದ ನಂಬುಗೆ ಲೋಕದ ನಂಬುಗೆ; ವ್ಯವಹಾರಿ ನಂಬಿಗೆ ಇಲ್ಲಿ ಉತ್ತರ ಭಾಗವಾದ ವೇದಾಂತದ ಕೃಪೆಯಿಲ್ಲ, ಸದ್ಗುರು ಕೃಪೆಯಿಲ್ಲ, ಅಂತಃಕರಣ ಕೃಪೆ ಈಶ್ವರ ಕೃಪೆಯಿಲ್ಲವಾದುದರಿಂದ ತನಗೆ ತಾನೆ ಮೋಸ ಹೋದ ನಂಬುಗೆ. ಇದು ತನ್ನನ್ನು ಹುಟ್ಟು ಸಾವುಗಳಿಂದ ವಿಮುಕ್ತ ಮಾಡುವ ನಂಬಿಗೆ ಯಲ್ಲ ಇದು ಕಾರಣ ಈ ನಂಬಿಗೆಯಿಂದ ಪುರುಷಾರ್ಥವಿಲ್ಲ.

ತನ್ನೊಳಗಿರ್ದ ಘನವ ತಾ ತಿಳಿಯದೆ ಪರಬ್ರಹ್ಮಕ್ಕೆ ತಲೆಯಿಕ್ಕಿ ತೆಗೆದನೆಂಬ ಅಣ್ಣ ಗಾವಿಲ ನೆಂದ ನಂಬಿಗ ಚೌಡಯ್ಯ. ಶಿವನಿಗಾಗಿ ಕಣ್ಣನ್ನೆ ಕಿತ್ತಿಕೊಂಡ ಕಣ್ಣಪ್ಪ, ಶಿವನಿಗಾಗಿ ಮಗುವನ್ನೆ ಕೊಂದು ಉಣಬಡಿಸಿದ ಚಾಂಗಳೆ, ಇನ್ನು ಅನೇಕರು ತಮ್ಮನ್ನೆ ಹುಸಿ ಮಾಡಿ ಇನ್ನೊಂದು ದಿಟ ಮಾಡಿದ ಪರಿಣಾಮ, ತನ್ನೊಳಗಿರ್ದ ಘನವ ತಾ ತಿಳಿಯದುದರಿಂದ ದುರಂತಕ್ಕೀಡಾದ ಪರಿಣಾಮ. ಇವರು ತಾನಾರೆಂದು ತನ್ನನ್ನಾದರೂ ತಿಳಿದರೆ? ಅಥವಾ ತತ್ವ ದೃಷ್ಟಿಯುಳ್ಳವರಾಗಿ ಪರಬ್ರಹ್ಮ ತಿಳಿದರೆ? ಶ್ರೀಗುರವಿನ ಮಹಾಬೋಧವಾದರೂ ತಿಳಿದರೆ? ಹಿರಿಯರ ಸ್ವಾನುಭಾವವನ್ನಾದರೂ ಪೂಜ್ಯ ಭಾವದಿಂದ ಶ್ರವಣ ಮಾಡಿದರೆ? ಅರಿದಲ್ಲಿ ಇವರ ನಂಬಿಗೆ, ಅದಾವ ನಂಬಿಗೆ, ತಮ್ಮನ್ನೆ ಮರೆತ ನಂಬಿಗೆ! ತತ್ವವನ್ನೆ ಮರೆತ ನಂಬಿಗೆ, ಶ್ರೀ ಗುರುವಿನ ಕರುಣೆಯನ್ನೆ ಮರೆತ ನಂಬುಗೆ ಹಿರಿಯರನ್ನೆ ಮರತ ನಂಬಿಗೆ ಇದುವೆ ತಮ್ಮ ಅವನತಿಗೆ ಕಾರಣವಾದ ನಂಬಿಗೆ ಪರಬ್ರಹ್ಮಕ್ಕೆ ತಲೆಯಿಕ್ಕಿದೆನೆಂಬ ಈ ಭಾವ ನಿಷ್ಠೆ, ವಿಚಾರ, ಜ್ಞಾನ, ಅವನತಿಗೆ ಮೂಲವಾದುದು. ಹಾಸ್ಯಾಸ್ಪದವಾದುದು. ದಡ್ಡತನಕ್ಕೆ ಅಗ್ರಗಣ್ಯವಾದುದು, ಪರಬ್ರಹ್ಮಕ್ಕೆ ತಲೆಯಿಕ್ಕಲು, ಪರಬ್ರಹ್ಮವು ತನಗೆ ವೈರಿಯೆ? ತನ್ನ ತಲೆಗೆ ವೈರಿಯೆ? ಶರೀರಕ್ಕೆ ವೈರಿಯೇ? ಇಂದ್ರಿಯಾದಿಗಳು ಪ್ರಾಣಾದಿಗಳಾದರೂ ವೈರಿಯೆ? ಇದಲ್ಲದೆ ಸತಿ ಸುತಾದಿಗಳ ತಲೆ ಇಕ್ಕಿದರೆ ಅದಕ್ಕೆ ಸಮ್ಮತವೆ ಪರಮಾನಂದವೆ? ಆಗ ಪರಬ್ರಹ್ಮವು ದರ್ಶನ ಕೊಡುವುದೆ ಇದೆಂಥ ಹೆಡ್ಡತನ, ಇದು ಸತ್ಸಂಗ ದೊರೆಯದ ಪರಿತಾಪ ಮಹಾತ್ಮರ ಸಂಗವಾಗದ ದುರಂತ ಗುರುಸೇವೆಯಿಂದ ದೂರಾದ ಅನರ್ಥ, ಶರಣ ಶರಣೆಯರ ಸ್ವಾನುಭಾವಕ್ಕೆ ಮಹತ್ವ ಮಾಡದ ಮರುಳತನ, ಇವೆಲ್ಲವು ತನ್ನೊಳಗಿರ್ದ ಘನವ ತಾ ತಿಳಿಯದಂತೆ ಮಾಡಿದ ಮರುಳ ತನಕ್ಕೇನನ್ನಬೇಕು? ಇವರು ಹೆಡ್ಡರು ಹೆಡ್ಡರು ಎಂದು ಹೇಳಿಹರು.

**ವಚನ 42**

**ಅಂಗದ ಮೇಲೆ ಲಿಂಗವ ಕಟ್ಟಿ ಸುಳಿವಾತ ಜಂಗಮವಲ್ಲ.**

**ಆ ಜಂಗಮಕ್ಕೆ ಮಾಡುವಾತ ಭಕ್ತನಲ್ಲ.**

**ಈ ಉಭಯ ಕುಳವಳಿದಾತ ಜಂಗಮ,**

**ಆ ಜಂಗಮಕ್ಕೆ ಮಾಡುವಾತ ಭಕ್ತ,**

**ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ**

**ಉಭಯಕುಳವಳಿದ ಭಕ್ತರೆ ಜಂಗಮವಪೂರ್ವ.**

**ತಾತ್ಪರ್ಯ:** ಅಂಗದ ಮೇಲೆ ಲಿಂಗವ ಕಟ್ಟಿ ಸುಳಿವಾತ ಜಂಗಮವಲ್ಲ ಆ ಜಂಗಮಕ್ಕೆ ಮಾಡುವಾತ ಭಕ್ತನಲ್ಲ, ಈ ಉಭಯ ಕುಳವಳಿದಾತ ಜಂಗಮ, ಆ ಜಂಗಮಕ್ಕೆ ಮಾಡುವಾತ ಭಕ್ತ:

ಷಟ್‌ಸ್ಥಲ ಚಕ್ರವರ್ತಿ ಚನ್ನಬಸವರಾಜದೇವರು ಬಾಹ್ಯಾಚಾರ, ಕ್ರಿಯಾಚಾರದವರಿಗೆ ಒಪ್ಪಿರುವದಿಲ್ಲ. ಅಂಗದ ಮೇಲೆ ಲಿಂಗ ಕಟ್ಟಿ ಸುಳಿವಾತ ಜಂಗಮನಲ್ಲ; ಲಿಂಗ ಒಂದಾಗಿರ್ದ ಜಂಗಮ ನಿರಾಭಾರಿ ಜಂಗಮ ನಿರಾಲಂಬ ಜಂಗಮ, ನಿರ್ಲಿಖಿತ ಜಂಗಮ, ನಿರ್ದೇಹಿ ಜಂಗಮ, ನಿಜೈಕ್ಯ ಜಂಗಮ. ಆ ಮಹಾಂತನು ಲಿಂಗ ಏಕೆ ಧರಿಸುವದು. ಮರವು ಬಂದಿದೆ ಎಂದು ಗುರುಕೊಟ್ಟ ಕುರುಹ, ಅರುವ ಅರಿಯ ಹೇಳಿದ ಕುರುಹ ಬೇಕಾಗಿದೆ. ಅರುವಿನ ಅರುವುಳ್ಳವರಿಗೆ ಅದೇಕೆ ಕುರುಹು? ಲಿಂಗವ ತಾನಾಗಿಹ ಘನಮಹಿಮನು ನಿರ್ದೇಹಿಯು, ಅಂಗವುಳ್ಳವಂಗೆ ಅಂಗದಮೇಲೆ ಲಿಂಗ ಕಟ್ಟುವುದು ಸಹಜ. ನಿರ್ದೇಹಿಗೆ ಅದಾವುದು? ದೇಹಿಗೆ ದೇಹಿಯಾಗಿಹ ಘನವಂತನ ದೃಷ್ಟಿಯಲ್ಲಿ ದೇಹವೆಂಬುದು ಅಹಂಭಾವ. ಲಿಂಗ ತಾನಾಗಿಹ ಶರಣ ಅಳಿದವನಲ್ಲ, ಉಳಿದವನಲ್ಲ ಘನಕ್ಕೆ ಘನವಾಗಿಹ ಮಹಾಂತನು ಲಿಂಗವದೇಕೆ ಧರಿಸುವದು.

ಅಂಗದ ಮೇಲಣ ಲಿಂಗವು ಲಿಂಗವಲ್ಲ, ಮನದ ಮೇಲಣ ಲಿಂಗವು ಲಿಂಗವಲ್ಲ, ಭಾವದ ಮೇಲಣ ಲಿಂಗವು ಲಿಂಗವಲ್ಲ ಅಂಗದ ಮೇಲಣ ಲಿಂಗ ವ್ಯವಹಾರ, ಮನದ ಮೇಲಣ ಲಿಂಗ ಸಂಕಲ್ಪ ಭಾವದ ಮೇಲಣ ಲಿಂಗ ಭ್ರಾಂತು ತತ್ವ, ಆಳಿನ ಆಳು, ಅರಸನಪ್ಪನೆ? ಆಳನಾಳುವ ನರಸನಲ್ಲದೆ ಅಂಗ ಪ್ರಾಣ ಭಾವಂಗಳ ನೊಳಕೊಂಡಿರ್ಪುದೆ ಲಿಂಗ ಕಾಣಾ ಮಸಣಯ್ಯ ಪ್ರಿಯ ಗಜೇಶ್ವರಾ ತತ್ತ್ವವೇತ್ತ ತತ್ ಸ್ವರೂಪ ಅವನೇಕೆ ಆಳಿನಾಳು ಆಗುವನು. ಆಳನ್ನೆ ಆಳುವವನು ಅರಸ. ಸಾತ್ಮಾನಂದದ ಅರಸ, ಸಚ್ಚಿದ್ಘನನಾಗಿಹ ಅರಸ, ಅಚಿಂತ್ಯವರಿತ ನಿಶ್ಚಿಂತ, ಅವನು ವ್ಯವಹಾರಲಿಂಗಕ್ಕೆ ಲಿಂಗವೆಂದು ತಿಳಿಯನು. ಮನದ ಮೇಲಣ ಲಿಂಗಕ್ಕಾದರೂ ಲಿಂಗ ಅನ್ನಲಾರ, ಭಾವದ ಮೇಲಣ ಲಿಂಗಕ್ಕೂ ಲಿಂಗವೆನ್ನಲಾರ, ಅಕಲ್ಪಿತ ಘನ ಎಂದಾದರೂ ಕಲ್ಪಿತನಾಗಬಹುದೆ? ಅಚಿಂತ್ಯಾತ್ಮನು ಚಿಂತನದಿಂದುಕ್ತನಾಗಬಹುದೆ? ಇಂತಪ್ಪ ನಿರಾಭಾರಿ ಜಂಗಮ ಅಂಗದ ಮೇಲಣ ಲಿಂಗ ಕಟ್ಟಿ ಸುಳಿವಾತ ಜಂಗಮ ಹೇಗಾಗುವನು ಆಗಲಾರನು. ಆ ಜಂಗಮಕ್ಕೆ ಮಾಡುವಾತ ಭಕ್ತನಲ್ಲ. ಇವರು ನಿಜೈಕ್ಯ

ಜಂಗಮನ ತಿಳಿಯದವರಾದುದರಿಂದ ಸಾಂಪ್ರದಾಯ ಒಪ್ಪಿಕೊಂಡ ಜಂಗಮ ಭಕ್ತನು ಭಕ್ತನಲ್ಲವೆಂದು ಹೇಳಿಹರು.

ಈ ಉಭಯ ಕುಳವಳಿದಾತ ಜಂಗಮ: ಆ ಜಂಗಮಕ್ಕೆ ಮಾಡುವಾತ ಭಕ್ತ. ಉಭಯ ಕುಳವಳಿದ ಜಂಗಮನೆಂದರೆ ಲಿಂಗೈಕ್ಯ ಜಂಗಮ, ಆ ಜಂಗಮಕ್ಕೆ ಮಾಡುವಾತ ಭಕ್ತ, ಲಿಂಗೈಕ್ಯ ಭಕ್ತ. ಬಿಟ್ಟು ಮಹೇಶನಾದೆನೆಂಬದು ಅರುವಿನ ಕೇಡು, ಹಿಡಿದು ಭಕ್ತನಾದೆನೆಂಬುದು ನಿಜದ ಕೇಡು, ಬಿಡುವದು ಹಿಡಿವುದು ಮನ ಕಲ್ಪಿತವಲ್ಲದೆ ಕಲ್ಪನಾರಹಿತ ಭಕ್ತ, ಮಹೇಶ್ವರರಲ್ಲಿಪ್ಪುದೇನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ. ಉಭಯ ಕುವಳಿದ ಜಂಗಮ, ಭಕ್ತರು ಅಪೂರ್ವ. ಏಕೆಂದರೆ ಕಲ್ಪನೆಗೊಳಪಟ್ಟ ಜಂಗಮ ಭಕ್ತರು ಸಾಕಷ್ಟು ಶಿಕ್ಕುವರು. ಇವರು ಮನಸ್ಸೆ ಆದವರು, ಸಂಕಲ್ಪ ವಿಕಲ್ಪಕ್ಕೊಳಪಟ್ಟವರು, ಇಲ್ಲದ ಭೋಗ, ತ್ಯಾಗವ ಕಲ್ಪಿಸಿಕೊಂಡು ಅದುವೆ ಘಟ್ಟಿಗೊಂಡವರು. ಇದ್ದುದ ಅರಿಯ ಹೋದವರಲ್ಲ, ಪ್ರಕೃತಿ ಗೊಳಪಟ್ಟವರು. ಇದು ಕಾರಣ ಮಹೇಶಂಗೆ ಬಿಟ್ಟ ತ್ಯಾಗದ ನಂಜು, ಭಕ್ತನಿಗೆ ಲಿಂಗ ಹಿಡಿದ ನಂಜು. ಇವರು ತ್ಯಾಗದ ತ್ಯಾಗವಾಗಲಿಲ್ಲ. ಲಿಂಗದರುವು ಆಗದ್ದರಿಂದ ಲಿಂಗದ ಲಿಂಗವಾಗಲಿಲ್ಲ. ಇವರದು ಪೂರ್ವಿಕವಾಯಿತಲ್ಲದೆ ಅಪೂರ್ವಿಕವಾಗಲಿಲ್ಲ. ಅಪೂರ್ವಿಕರು ತತ್ವದರ್ಶಿಗಳು ತತ್ತ್ವವೇತ್ತರು, ತತ್ವ ನಿಷ್ಠರು, ಅಜಾತಭಕ್ತರು, ಅಕುಲ ಜಂಗಮ, ಅನಾಚಾರ ಭಕ್ತ, ಇವರು ಜ್ಞಾನಾರ್ಜನೆಯಿಂದುಕ್ತರಾದವರು. ಇವರದು ಜ್ಞಾನ ಲಿಂಗೋಪದೇಶ ಕ್ರಮ. ಇವರೀರ್ವರ ಅಕ್ರಿಯೆ ಸಮ್ಮೇಳನ, ಅಚಿಂತ್ಯಾತ್ಮನ ಸಮ್ಮೇಳನ ಸಮಗೋಷ್ಠಿ ಸಮ್ಮೇಳನ. ಇದರಲ್ಲಿ ಮರವುಳ್ಳವರಾರೋ? ಅರುವುಳ್ಳವರಾರೊ? ಅರಿಯದರುವುಳ್ಳ ಘನವಂತರಾದುದರಿಂದ ಕೂಡಲಚೆನ್ನಸಂಗಯ್ಯನಲ್ಲಿ ಉಭಯ ಕುಳವಳಿದ ಭಕ್ತ ಜಂಗಮವಪೂರ್ವ. ಜ್ಞಾನಿ ಜಂಗಮ ಜ್ಞಾನಿ ಭಕ್ತ, ಶಿಕ್ಕುವದು ವಿರಳ. ನಿಜೈಕ್ಯ ಜಂಗಮ, ನಿಸ್ಸೀಮ ಭಕ್ತ, ಅನಾದಿ ಜಂಗಮ, ಆದಿಭಕ್ತ ಶಿಕ್ಕುವದು ಅಪರೂಪ. ಇವರು ಲಿಂಗವರಿತು ಅಚಲಾನಂದದೊಳಿಪ್ಪ ಅಗಮ್ಯ ಜಂಗಮ, ಲಿಂಗವರಿತು ಲಿಂಗದಲ್ಲಿ ಲೀಯವಾಗಿಹ ಭರಿತಭಾವದ ಇವರು ಉಭಯ ಕುಳವಳಿದವರು ಅಪೂರ್ವಿಕರು ಅನುಪಮರು ಎಂದು ಹೇಳಿಹರು.

**ವಚನ 43**

**ಕ್ರಿಯಾ ಲಿಂಗದ ಲಿಂಗಿಗಳೆಲ್ಲರೂ ಕ್ರಿಯಳಿದ ಭಕ್ತರೆಂಬರಯ್ಯಾ.**
**ಕ್ರಿಯಳಿದ ಭಕ್ತಂಗೆ ಲಿಂಗವುಂಟೆ?**
**ಕ್ರಿಯಳಿದ ಭಕ್ತಂಗೆ ಜಂಗಮವುಂಟೆ?**
**ಕ್ರಿಯಳಿದ ಭಕ್ತಂಗೆ ಪ್ರಸಾದವುಂಟೆ?**
**ಕ್ರಿಯಳಿದು ನಿಃಕ್ರಿಯೆಯುಳ್ಳಿ ನಿಂದ**
**ಕೂಡಲಚೆನ್ನ ಸಂಗಮದೇವಾ ನಿಮ್ಮ ಶರಣ. ॥ 603 ॥**

**ತಾತ್ಪರ್ಯ:** ಕ್ರಿಯಾಲಿಂಗದ ಲಿಂಗಿಗಳೆಲ್ಲರೂ ಕ್ರಿಯಳಿದ ಭಕ್ತರೆಂಬರಯ್ಯ: ಕ್ರಿಯಾಲಿಂಗ, ಅದು ಕ್ರಿಯೆದಿಂದುಕ್ತವು. ಈ ಲಿಂಗದ ಪೂಜಕರು ಕ್ರಿಯೆದಿಂದುಕ್ತರು;

ಕ್ರಿಯಾಲಿಂಗ ಕ್ರಿಯಾಚಾರದವರಿಂದ ಜನ್ಯವಾದುದಕ್ಕಾಗಿ ಅಷ್ಟವಿದಾರ್ಚನೆಯಿಂದ ಪೂಜೆ ಗೊಳ್ಳುವದು. ಕ್ರಿಯಾ ಲಿಂಗದ ಲಿಂಗಿಗಳು ಇವರು ಪೂಜಾಲಿಂಗದವರಾಗಿ ಪೂಜಕರಾಗಿ ಕ್ರಿಯೆಳಿದ ಭಕ್ತರೆನ್ನುವದು ಆಶ್ಚರ್ಯವಲ್ಲವೆ? ಇವರದಿದು ಹವ್ಯಾಸ, ಲೋಕದವರಿಗೂ ಮುಗ್ಧಭಾವಿಕರಿಗೂ ಭಕ್ತರಿಗೂ ತೋರುವ ಪ್ರತಿಷ್ಠೆ, ಜ್ಞಾನಾಚಾರದವರಿಂದ ಜ್ಞಾನ ಲಿಂಗೋಪದೇಶ ಕ್ರಮು ಸಹಜ ಸಾಧ್ಯವು. ಜ್ಞಾನಲಿಂಗೋಪದೇಶ ಕ್ರಮ ಆರಿಗೆ ಲಭ್ಯವಾಗಿದೆ ಅವರು ಕ್ರಿಯೆಳಿದ ಭಕ್ತರೆನ್ನುವದು ಸಹಜವಾಗಿದೆ. ಅವರು ಅಪೂರ್ವಿಕರೆನ್ನಿಸಿ ಕೊಳ್ಳುವರು.

ಜ್ಞಾನ ಲಿಂಗೋಪದೇಶ ಕ್ರಮು ಬಸವಣ್ಣನಿಂದ ಅನಿಮಿಷದೇವಂಗೆ ಚನ್ನಬಸವಣ್ಣಂಗೆ. ಅನಿಮಿಷದೇವನಿಂದ ಪ್ರಭುದೇವಂಗೆ, ಚೆನ್ನಬಸವಣ್ಣನಿಂದ ಸಿದ್ಧರಾಮ ಶಿವಯೋಗಿಗೆ, ಹೀಗೆ ಇದು ಅನಿಯಮ ಕ್ರಮ. ಉಪಮಿಸದ ಕ್ರಮ ಲಭ್ಯವಾದುದು, ಇದು ಆಗಮವಿಲ್ಲದ ದೀಕ್ಷೆ, ಪೂಜೆಗೆ ಬಾರದ ಲಿಂಗ ಕಿವಿಗೆ ಕೇಳದ ಮಂತ್ರ, ಮುಟ್ಟಲಿಲ್ಲದ ಹಸ್ತಮಸ್ತಕ ಸಂಯೋಗ, ಇದು ಜ್ಞಾನಲಿಂಗೋಪದೇಶ ಕ್ರಮ. ಶಬ್ದ ಮುಗ್ಧವಾಗಿ ಸೂಚಿಸಿದ ಕ್ರಮ, ಇದು ಕಡೆಮೊದಲಿಲ್ಲದ ಕಾರ್ಯ. ಅರುವಿನ ಪರಿಮಳ. ಇಲ್ಲಿ ಗುರುವಾಗಿ ಬೋಧಿಸಿದುದು ಇಲ್ಲ ಶಿಷ್ಯನಾಗಿ ಕೊಂಡುದು ಇಲ್ಲ. ತನಗೆ ತಾನೆ ಗುರುವಾಗಿ ಬೋಧಿಸಿಕೊಂಡ ಅರುವಿನ ಹೃದಯ. ಅದು ಮಾತ್ರ ಅರುವ ಅರಿಯ ಹೇಳಿದ ಲಿಂಗ, ನಿಶಬ್ದ ವೇದಿಸಿದ ಲಿಂಗ, ಈ ಲಿಂಗವರಿತವರೆಲ್ಲ ಕ್ರಿಯೆಳಿದ ಭಕ್ತರು, ಶರಣರು ಶರಣೆಯರು, ಲಿಂಗವರಿತು, ಲಿಂಗವಾಗಿಹ ಮಹಾಂತರು. ಲಿಂಗವದು ಅನುಪಮ ನೆನಹಿಗು ನಿರ್ಣಯಕ್ಕೆ ಮೀರಿದುದು. ಅಚಿಂತ್ಯಾತ್ಮ ಸ್ವಯಂಜ್ಯೋತಿ, ಉದಯಾಸ್ತವೆನ್ನದೆ ಬೆಳಗುವ ಚಿಜ್ಯೋತಿ, ಅರಸುವವರಿಗೆ ಕಾಣದ ಜ್ಯೋತಿ, ಅರಿಯ ಹೋದವರಿಗೆ ತಾನೆ ಅದುವೆ ಆಗಿಹ ಜ್ಯೋತಿ.

ಕ್ರಿಯಾಲಿಂಗದ ಲಿಂಗಿಗಳೆಲ್ಲರು ಭೇದ ಜ್ಞಾನದಿಂದುಕ್ತರಾಗಿಹ ಕಲ್ಪಿತರು, ಲಿಂಗವರಿಯ ಹೋಗದವರು, ಪೂಜೆಯಲ್ಲಿಯೆ ಸರಿಹೋದವರು. ಇವರಿಗೆ ಲಿಂಗ, ಜಂಗಮ, ಪ್ರಸಾದ ಉಂಟು. ಕ್ರಿಯಳಿದ ಭಕ್ತಂಗೆ ಲಿಂಗ, ಜಂಗಮ, ಪ್ರಸಾದ ಉಂಟೆ? ಕ್ರಿಯೆಳಿದ ಭಕ್ತ ಲಿಂಗ ಸಕೀಲ ಸಂಯೋಗವರ್ಮ ಸ್ಥಲವರಿತಿರುವದರಿಂದ ಲಿಂಗ ತಾನೆ, ಜಂಗಮ ತಾನೆ, ಪ್ರಸಾದ ತಾನೆ ಮೂರೊಂದಾದ ಘನಕ್ಕೆ ಘನ. ವಾಙ್ಮನೋತಿತ ತಾನೆ, ನಿಸ್ಸೀಮ. ಸ್ವತಃ ಸಿದ್ಧವಾದ ಸ್ವಯಮೇವ ಅರುವಿಂಗರುವಾದ ಮಹಾಂತ ಎರವಲವಾಗಿ ತೆಗೆದುಕೊಂಡ ಜ್ಞಾನವಲ್ಲ, ತನ್ನಿಂದ ತಾನರಿತು ತಾನೆ ತಾನಾಗಿಹ ನಿಜನಿಲವು ಅರುವಿನ ಪರಿಮಳ, ಮತಿಗತಿಗೆ ಮೀರಿದ ಜ್ಞಾನವಾದ್ದರಿಂದ ತನಗಿಂತ ಲಿಂಗ ಬೇರೆ ಜಂಗಮ ಬೇರೆ ಪ್ರಸಾದ ಬೇರೆಂಬ ದ್ವೈತಜ್ಞಾನವಲ್ಲ. ತತ್ವವರಿತು ಪರತತ್ವದ ನಿಜ ಸಂಯುಕ್ತ ನಾ ನೀನೆಂಬ ಸಂದಿಲ್ಲದಿಪ್ಪ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನ ಈ ಘನವಂತ ಕ್ರಿಯೆಯುಳಿದು ನಿಃಕ್ರಿಯೆಯುಲ್ಲಿನಿಂದ ಕೂಡಲಚೆನ್ನಸಂಗಾ ನಿಮ್ಮ ಶರಣ ಇವರ ಇರವು ನಾನೀನೆಂಬ ಸಂದಿಲ್ಲದ ಘನಕ್ಕೆ ಘನವು. ನಿಃಕ್ರಿಯೆಯಲ್ಲಿ ನಿಂದ ಅರಿವಿನ ಅರುವು, ಅರಿಯದ ಅರುವು ಆದುದರಿಂದ

ಕ್ರಿಯೆ ಅಳಿದವರು ನಿಕ್ರಿಯೆಯಲ್ಲಿ ನಿಂತವರು ಕ್ರಿಯೆ ಅಳಿದ ಚಿಹ್ನವದು ಅರುವರಿತ ಚಿಹ್ನ ನಿಃಕ್ರಿಯೆಯಲ್ಲಿ ನಿಂತ ಚಿಹ್ನವೆಂದರೆ ಅರಿಯದರುವು ತನ್ನಿರವು ಆದುದು ಇವರೆ ಕೂಡಲಚೆನ್ನಸಂಗನ ಶರಣರು.

**ವಚನ 44**

**ಶರಣಭರಿತ ಲಿಂಗ ಎಲ್ಲಾ ಎಡೆಯಲ್ಲಿ ಉಂಟು.**
**ಲಿಂಗಭರಿತ ಶರಣನ ಪೂರ್ವ ನೋಡಾ.**
**ಗಮನವುಳ್ಳದೇ ಜಂಗಮಲಿಂಗ, ನಿರ್ಗಮನಿಯಾದುದೆ ಲಿಂಗ ಜಂಗಮ.**
**ಅದರ ಸಂಯೋಗ ಸಂಬಂಧವ ಭೇದಿಸಿ ನಡೆಯಬಲ್ಲರೆ,**
**ಕೂಡಲಚೆನ್ನಸಂಗಮದೇವನೆಂಬೆನು. ॥ 466 ॥**

**ತಾತ್ಪರ್ಯ:** ಶರಣ ಭರಿತಲಿಂಗ ಎಲ್ಲಾ ಎಡೆಯಲ್ಲಿಯೂ ಉಂಟು, ಲಿಂಗ ಭರಿತ ಶರಣನ ಪೂರ್ವ ನೋಡಾ: ಶರಣಭರಿತ ಲಿಂಗ? ಇದು ಪೂಜೆಗೊಳಪಟ್ಟ ಲಿಂಗ, ನೆನಹು ನಿರ್ಣಯದಿಂದುಕ್ತವಾಗಿಹ ಲಿಂಗ. ಲಿಂಗ ಲಿಂಗ ಎಂಬ ಭಾವಿಕರ ಲಿಂಗ, ಸಚ್ಚಿದಾನಂದ ಎನ್ನಿಸಿಕೊಳ್ಳುವ ಲಿಂಗ, ಪೂರ್ಣ ಅಖಂಡ ಎನ್ನಿಸಿಕೊಳ್ಳುವ ಲಿಂಗ ಇದು ಶರಣ ಭರಿತ ಲಿಂಗ, ಇದು ಶರಣ ಅಂಗದ ಮೇಲೆ ಧರಿಸಿಹ ಲಿಂಗ.

ಲಿಂಗಭರಿತ ಶರಣನಪೂರ್ವ ನೋಡಾ, ಪೂಜಾಲಿಂಗವ ಪೂಜಿಸುವ ಶರಣ ನೆನಹು ನಿರ್ಣಯವುಳ್ಳ ಶರಣ. ಭಾವನಾಮಯನಾಗಿಹ ಭಾವಿಕ ಶರಣ ಸಿಕ್ಕುತ್ತಾನೆ. ಭಾವಕ್ಕಗಮ್ಯವಾಗಿಹ ಲಿಂಗ, ಪೂಜೆಗೆ ಬಾರದ ಲಿಂಗ, ಅಚಿಂತ್ಯ ಲಿಂಗ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಲಿಂಗ, ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗ ಇದು ಲಿಂಗಭರಿತ ಶರಣನಪೂರ್ವ ನೋಡಾ; ಶರಣ ನಿಸ್ಸೀಮ ಈತ ಅಪೂರ್ವ.

ಶರಣ ಭರಿತ ಲಿಂಗದ ಪರಿಯೆ ಬೇರೆ, ಲಿಂಗಭರಿತ ಶರಣನ ಪರಿಯೆ ಬೇರೆ, ಇದು ಕಾರಣ ಲಿಂಗಭರಿತ ಶರಣ ಅಪೂರ್ವ ಎಂದಿಹರು. ಶರಣ ಭರಿತ ಲಿಂಗವಂತನಿಗೆ ಆವುದು ಅಹುದು ಆಗಿದೆ; ಲಿಂಗಭರಿತ ಶರಣಂಗೆ ಅದು ಅಲ್ಲಾಗಿದೆ.

ಲಿಂಗಭರಿತ ಶರಣಂಗೆ ನೆನಹು ಭಾವ, ಪೂಜೆ, ಅಹುದಾದುದೆ ಅಲ್ಲಾಗಿದೆ. ಶರಣ ಭರಿತ ಲಿಂಗವಂತನಿಗೆ ಪೂಜೆ ಜಪ, ಅನುಷ್ಠಾನ, ಷೋಡಶೋಪಚಾರ ಇವು ಅಹುದಾಗಿವೆ. ಲಿಂಗಭರಿತ ಶರಣ ಪೂರ್ವಿಕನಾಗಿಹನು. ಶರಣ ಭರಿತ ಲಿಂಗ, ಅಪ್ರಮಾಣ ಅಚಿಂತ್ಯ ಶಬ್ದಮುಗ್ಧವಾಗಿದೆ.

ಗಮನವುಳ್ಳ ಜಂಗಮ ಎಲ್ಲಾ ಎಡೆಯಲ್ಲಿಯೂ ಉಂಟು, ನಿರ್ಗಮನಿ ಜಂಗಮವಪೂರ್ವನೋಡಾ: ಸಂಚರಿಸುವ ಜಂಗಮ ಎಲ್ಲಾ ದೇಶದಲ್ಲಿಯು ಇದ್ದಾನೆ. ಸಂಚರಿಸದ ಜಂಗಮ ಅಪೂರ್ವ ನೋಡಾ. ಜಂಗಮನೆಂದರೆ ಇವನ ಅರಿವು ಸಂಚರಿಸುವ ಅರಿವು, ಅಚಲವಾಗಿಹ ಅರಿವು ಅಲ್ಲ. ಇದು ನುಡಿ ನಡೆಗೊಳ ಪಟ್ಟ ಅರಿವು ಮತಿ ಗತಿಗೊಳಪಟ್ಟ ಅರಿವು ಶೃತಿಗೊಳಪಟ್ಟ ಅರಿವು ಅಲ್ಲ. ಮರವನ್ನು ಆಪೇಕ್ಷ ಮಾಡಿಕೊಂಡು ಬಂದಿಹ ಅರಿವು, ಬಂಧನವನ್ನು ಆಪೇಕ್ಷೆಮಾಡಿಕೊಂಡು

ಬಂದಿಹ ಅರಿವು, ಗುಣತ್ರಯಗಳಿಂದುಕ್ತವಾದ ಅರಿವು. ಈ ಜ್ಞಾನ ರೂಪ ಜಂಗಮ ಗಮನವುಳ್ಳ ಜಂಗಮ. ಈ ಅರಿವು ಎಲ್ಲೆಡೆಯಲ್ಲಿಯೂ ಉಂಟು ನಿರ್ಗಮನಿ ಜಂಗಮವಪೂರ್ವ ನಿರ್ಗಮನಿ ಜಂಗಮ ಘನ ಅಂದು ಇಂದು ಎಂದೆಂದೂ ಸಂಚರಿಸದ ಘನ, ಇದು ನಡೆನುಡಿಗೂ ಇಂಬುಗೊಡದ ಅಖಂಡ ಅರುವು, ಮರವು ಅರುವು ಎಂಬುದಕ್ಕೂ ಇಂಬುಗೊಡದ ಅರುವು, ಶೃತಿಗೆ ಮೀರಿದ ಅರುವು ನಿರಾಲಂಬ ಅರುವು, ಅರುವಿಂಗರುವಾಗಿಹ ಅರವು ಅರಿಯದರುವು ಏನೆಂದೆನಲಿಲ್ಲದ ಅರುವು. ನಿಶಬ್ದವೇದಿಸಿದ ಅರಿವು, ಆವಾವ ಭಾವಂಗಳಿಗಿಂಬು ಗೊಡದ ನಿಲವು. ತಾನೆ ತನ್ನಿಂದರಿತು ತಾನೆ ತಾನಾದ ಸಯಸುಖದ ಸುಖ. ಇದುವೆ ನಿರ್ಗಮನಿ ಜಂಗಮ ಈ ಜಂಗಮ ಲಿಂಗ ಅಪೂರ್ವ ಎಂದಿಹರು.

ಸುಚೈತನ್ಯಕ್ಕೆ ನಿಜ ಚೈತನ್ಯ ಜಂಗಮ ಸಾಹಿತ್ಯ, ಸುಚೈತನ್ಯವೆಂಬದು ಲೇಸಾದ ಅರಿವು, ಸುಖದ ಅರುವು. ಈ ಸುಖ ಎಂಬ ಅರುವಿಂಗೆ ನಿಜಚೈತನ್ಯ ಜಂಗಮಸಾಹಿತ್ಯವೆಂಬುದು ಅರಿಯದರುವೆ ನಿಜ ಚೈತನ್ಯ, ಏನೊಂದೆನಲಿಲ್ಲದ ಅರುವೆ ನಿಜಚೈತನ್ಯ. ಇದುವೆ ತನ್ನಲ್ಲಿ ತಾನು ಅರಿಯಬಲ್ಲ ಅರಿವು, ನಾ ನೀನೆಂಬುದಕ್ಕೂ ಸಂದು ಕೊಡದ ಅರವು, ಅರುವ ಅರಿಯಬಲ್ಲವರ ಅರುವು. ಇದುವೆ ನಿಜಚೈತನ್ಯ. ಇದು ನುಡಿ ನಡೆಯಿಂದುಕ್ತವಾದುದಲ್ಲ. ಇದ್ದಂತಿರುವ ಸಹಜ ಚೈತನ್ಯ, ಇದು ಮೂಕನ ನಿರ್ವಾಣ, ಅನಿಮಿಷದೇವನ ನಿರ್ವಾಣ ಇದು ಜಂಗಮ ಸಾಹಿತ್ಯ.

ಲಿಂಗ ಜಂಗಮ ಸಕೀಲ ಸಂಬಂಧದಲ್ಲಿ ಪರಿಣಾಮಿ ಕೂಡಲಚೆನ್ನಸಂಗಾ ನಿಮ್ಮ ಶರಣ: ನಿಮ್ಮ ಶರಣರೆಂದರೆ ಲಿಂಗಜಂಗಮದ ಅಂತಿಮದ ಇತ್ಯರ್ಥವಂತರು. ಅವರು ಲಿಂಗ ಜಂಗಮ ವರ್ಮ (ಗುಟ್ಟು) ಅರಿತವರು. ಅವರಲ್ಲಿ ಲಿಂಗ ಜಂಗಮ ಅರಿಯುವ ರಹಸ್ಯವದೆ. ಅರಿಯದರುವುಳ್ಳವರಾಗಿರುವ ರಹಸ್ಯ ಅವರಲ್ಲಿದೆ, ಏನೆಂದನಲಿಲ್ಲದ ಅರುವೆ ತಾನಾಗಿಹ ರಹಸ್ಯ ಅವರಲ್ಲಿದೆ. ಇದು ಕಾರಣ ಅವರು ನಿಶಬ್ದವೇದಿಗಳು ಶಬ್ದಮುಗ್ಧರು ಲಿಂಗ ಜಂಗಮ ಸಕೀಲ ಸಂಬಂಧದ ಪರಿಣಾಮಿಗಳು ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣರು ಎಂದಿಹರು.

**ವಚನ 45**

**ಲಿಂಗ ಲಿಂಗವೆಂಬುವ ಲಿಂಗಸೂತಕಿಯಯ್ಯ,**
**ಜಂಗಮ ಜಂಗಮವೆಂಬುವ ಜಂಗಮಸೂತಕಿಯಯ್ಯ,**
**ಪ್ರಸಾದ ಪ್ರಸಾದವೆಂಬುವಂ ಪ್ರಸಾದಸೂತಕಿಯಯ್ಯಾ,**
**ಈ ತ್ರಿವಿಧ ಸೂತಕಿಯ ಮಾತು ಕೇಳಲಾಗದು.**
**ಸರ್ವಸೂತಕ ನಿರ್ವಾಹವಾಯಿತ್ತು.**
**ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ. ॥ 676 ॥**

**ತಾತ್ಪರ್ಯ:** ಲಿಂಗ ಲಿಂಗ ಎಂಬವಂಗೆ ಲಿಂಗವಿಲ್ಲ: ಲಿಂಗ ಲಿಂಗ ಅನ್ನವವರಿಗೆ ಲಿಂಗಜ್ಞಾನವಿಲ್ಲ ಲಿಂಗವೆಂಬುದು ಅರಸುವವರ ಲಿಂಗವೂ ಅಲ್ಲ. ಭಾವಿಸುವವರ ಲಿಂಗವೂ ಅಲ್ಲ. ನೆನಯುವವರ, ಚಿಂತಿಸುವವರ ಲಿಂಗವೂ ಅಲ್ಲ. ಲಿಂಗವೆಂಬುದು

ಪರತತ್ವ ಸದ್ಗುರು ದಯತೋರಿ ಅರುವ ಅರಿಯ ಹೇಳಿದ ಅಚಿಂತ್ಯ ನಿಲವು, ತನ್ನ ತಾನರಿಯುವ ನಿಜ ನಿಲವು, ಅರುವ ಅರಿಯದವರು ಲಿಂಗ, ಲಿಂಗ ಎಂದು ಹಲಬಲು ಕಾರಣರಾದುದರಿಂದ ಇವರಿಗೆ ಲಿಂಗವಿಲ್ಲ. ತ್ರಿಕಾಲ ಲಿಂಗಾರ್ಚನೆ ಮಾಡುವ ಲಿಂಗಾರ್ಚಕರಿಗೂ ಲಿಂಗಜ್ಞಾನವಿಲ್ಲ. ಲಿಂಗದರವು ಅದು ಎರಡೊಂದಾದ ನಿಲವು, ಲಿಂಗ ತಾನು ಒಂದಾದ ಘನದಿರುವು. ಅಲ್ಲಿ ಅರ್ಚನೆಯಿಲ್ಲ ಅರ್ಪಿತವಿಲ್ಲ ಅವಧಾನವಿಲ್ಲ ಶಬ್ದಕ್ಕೆ ತೆರಹಿಲ್ಲವಾದ್ದರಿಂದ ನಿಶ್ಚಿಂತ ನಿರಾಳ ನಿರಾಲಂಬತ್ವ ನಿಜದಿರವು ಇದು ಅರುವಿನ ಪರಿಮಳ ಇದು ಕಾರಣ ಲಿಂಗ ಲಿಂಗವೆಂಬುವಂಗೆ ಲಿಂಗವಿಲ್ಲವೆಂದಿಹರು.

ಜಂಗಮ ಜಂಗಮವೆಂಬುವಂಗೆ ಜಂಗಮವಿಲ್ಲ: ಜಂಗಮವದು ವ್ಯಕ್ತಿಯಲ್ಲ, ಗುಣದಿಂದುಕ್ತವಾದ ಗುಣಮಣಿಯು ಅಲ್ಲ ತ್ಯಾಗ ಯೋಗದಿಂದುಕ್ತವಾದುದು ಅಲ್ಲ ವೇದವ ನೋದಿದ ವೈದಿಕನೂ ಅಲ್ಲ. ಉಪನಿಷದ್ ಆಗಮಗಳಿಗೊಳಪಟ್ಟ ಜ್ಞಾನಮಣಿಯು ಅಲ್ಲ, ಶಬ್ದವೇದಿಯು ಅಲ್ಲ, ನಿಃಶಬ್ದವೇಧಿಸಿದ ಮಹಾಂತ, ಜಂಗಮ ಒಂದಾಗಿರ್ದ ಲಿಂಗ, ಲಿಂಗ ಒಂದಾಗಿರ್ದ ಜಂಗಮ. ಉಪಮೆಗೆ ತಂದು ಎರಡೆನ್ನಬಹುದೆ? ಮಹಾಘನ ಜಂಗಮ ಶುದ್ಧ ಶಿವೈಕ್ಯನು ಕೂಡಲಚೆನ್ನ ಸಂಗಮದೇವಾ, ಜಂಗಮವದು ಪರಾನಂದ ಪರತತ್ವ ನಿಃಶಬ್ದವೇಧಿಸಿದ ಮಹಾಘನ. ಅರಸುವವರ ತತ್ವವಾಗದ್ದರಿಂದ ಜಂಗಮ ಜಂಗಮ ಎಂಬುವಂಗೆ ಜಂಗಮವಿಲ್ಲವೆಂದು ಹೇಳಿಹರು.

ಪ್ರಸಾದ ಪ್ರಸಾದವೆಂಬುವಂಗೆ ಪ್ರಸಾದವಿಲ್ಲ: ಪ್ರಸಾದವದು ಪರಾತ್ಪರ ಪರಮ ಅಮೃತ, ಪರಮಜ್ಞಾನವದು ವಾಙ್ಮನೋತೀತವು. ಅರಿದರಿದು ನೋಡುವುಡೆ, ಪ್ರಸಾದವೆ ಗುರು, ಪ್ರಸಾದವೆ ಲಿಂಗ, ಪ್ರಸಾದವೆ ಜಂಗಮ, ಪ್ರಸಾದವದು ಇದ್ದಕ್ಕಿದ್ದಂತೆ ಇದ್ದ ಘನ, ನಿಷ್ಕಳಂಕವದುವೆ ಪರಿಪೂರ್ಣ ವರ್ಣಾತೀತವಾದುದರಿಂದ ಪ್ರಸಾದವೆಂಬುವಂಗೆ ಪ್ರಸಾದವಿಲ್ಲವೆಂದು ಹೇಳಿಹರು.

ಲಿಂಗವೆನ್ನದವಂಗೆ ಲಿಂಗವುಂಟು: ಸದ್ಗುರು ತೋರಿದ ಸಕೀಲದಿಂದ ಆರು ಲಿಂಗವರಿತಿಹರು ಅವರು ಲಿಂಗವೆನ್ನದವರು. ಅಲ್ಲಿ ನಿರಂತರವಾಗಿಹ ಲಿಂಗಯ್ಯನ ವಾಸ ನಿಜ ನಿವಾಸ, ಅವರು ಲಿಂಗವೆ ತಾನಾಗಿಹ ಅನುಪಮರು ಅಚಲಿತರಾಗಿ ಪ್ರಜಲಿಸುವದರಿಂದ ಲಿಂಗ ಉಂಟು ಎಂದು ಹೇಳಿಹರು.

ಜಂಗಮ ಎನ್ನದವಂಗೆ ಜಂಗಮ ಉಂಟು: ಜಂಗಮ ಎನ್ನದವ ಭಾವಕ್ಕಗಮ್ಯವಾದ ಪರತತ್ವ ಅರಿದರಿದ ಅರುವು ಮಹದರಿವು, ಏನೆಂದೆನಲಿಲ್ಲದ ಅರುವು, ನುಡಿದು ಹೇಳಲಿಕ್ಕಿಂಬಿಲ್ಲದ ಶಬ್ದ ಮುಗ್ಧನಾದುದರಿಂದ ಜಂಗಮವೆನ್ನದವನು. ನಿರಾಲಂಬ, ಸಮತೆ ಸಂಯುವಾದ ಘನಮಹಿಮ. ನಿಃಶಬ್ದ ವೇಧಿಸಿದ ನಿಜೈಕ್ಯನಾದುದರಿಂದ ಅಲ್ಲಿಯೆ ಜಂಗಮ ಉಂಟು ಎಂದು ಹೇಳಿಹರು.

ಪ್ರಸಾದ ವೆನ್ನದವಂಗೆ ಪ್ರಸಾದ ಉಂಟು: ವಾಙ್ಮನೋತೀತವಾಗಿಹ ಪರಮಜ್ಞಾನ ಪರಮಾಮೃತ ಅದುವೆ ಪರಾತ್ಪರ, ಅದುವೆ ಗುರು, ಲಿಂಗ ಜಂಗಮ, ಅದುವೆ ತೆರಹಿಲ್ಲದ ಘನವಾದ್ದರಿಂದ ಪ್ರಸಾದವೆನ್ನದವನು ಪ್ರಸಾದವೆ ತನ್ನಿರವು ಅರುವು ಆದ ಮಹಾಂತ

ನುಡಿದು ಹೇಳಲಿಲ್ಲ. ಏಕೆಂದರೆ ಅಲ್ಲಿಯೆ ಪ್ರಸಾದವುಂಟು, ಪರಮಾಮೃತವದು ಪ್ರಸಾದ ಪ್ರಸಾದ ಎಂದು ಹಲುಬುವುದುಂಟೆ? ಹಲುಬದವನು, ಪ್ರಸಾದವೆನ್ನದವನು ಅಲ್ಲಿ ಪ್ರಸಾದದ ಹಿರಿಮೆ ಉಂಟು ಎಂದು ಹೇಳಿಹರು.

ತ್ರಿವಿಧ ಸ್ಥಲವನರಿಯ ಬಲ್ಲಡೆ ಕೂಡಲ ಚೆನ್ನಸಂಗಯ್ಯ ತಾನೇ ಉಂಟು: ಲಿಂಗಜಂಗಮ ಪ್ರಸಾದ ಅರುವ ಅರಿತವರ ಸ್ಥಲ. ಅರುವೆಂಬುದು ಅಂದು ಇಂದು ಎಂದೆಂದು ಇದ್ದುದು, ನಿರಂತರ ಅರುವು ಇದ್ದುದರಿಂದ ಲಿಂಗ ಅರುವೆ ಅರುವು ಆದುದರಿಂದ ಜಂಗಮ. ಅರುವೆಂಬುದು ಪರಾತ್ಪರ ಪರಮಾಮೃತ ಪರಮಜ್ಞಾನವಾದುದರಿಂದ ಪ್ರಸಾದ, ಅರುವ ಅರಿಯಬಲ್ಲಡೆ, ತ್ರಿವಿಧ ಸ್ಥಲವರಿತಂತೆ. ಆಗ ತಾನು ತೆರಹಿಲ್ಲದ ಘನವಾದುದು, ಅದು ಕೂಡಲಚೆನ್ನ ಸಂಗಯ್ಯ ತಾನೆ ಉಂಟು. ಎಂದು ಹೇಳಿದ್ದಾರೆ.

**ವಚನ 46**

**ಸುಖವಾವುದು? ಸುಖಿ ಯಾವುದು?**
**ಸುಖದನುಭಾವವಾವುದು?**
**ಸುಖಿ ಶರಣ, ಸುಖ ಲಿಂಗ, ಸುಖದನುಭಾವ**
**ಸುಸಂಗ ಕೂಡಲಚೆನ್ನಸಂಗಾ ಪರವಿಲ್ಲಾಗಿ. ॥ 658 ॥**

**ತಾತ್ಪರ್ಯ:** ಷಟ್ ಸ್ಥಲ ಚಕ್ರವರ್ತಿ ಸುಖದ ಚಕ್ರವರ್ತಿ ಈ ಮಹಾಂತನೆ ಸುಖವಾವುದು? ಸುಖಿ ಯಾವುದು? ಸುಖದನುಭಾವ ವಾವುದು? ತನ್ನೊಳಗೆ ತಾನೆ ಪ್ರಶ್ನೆ ಉದ್ಭವಿಸಿ ಪುನಃ ಇವುಗಳ ಉತ್ತರ ಮಂಡಿಸಿದುದನ್ನು ನೋಡಿದಡೆ ಪ್ರಶ್ನೆಯು ಅಷ್ಟು ಗಹನವಾದುದು ಎನಿಸಿ ಉತ್ತರ ನೀಡಿದುದು ಕಂಡು ಬರುತ್ತದೆ.

ಸುಖ ಯಾವುದು? ಸುಖ ಲಿಂಗ. ಸುಖ ಆವುದು? ಉತ್ತರ ಸುಖ! ಸುಖ ಆವುದೆಂದರೆ ಸುಖ, ಇದು ಕಲ್ಪಿತ ಪುರುಷನ ಸುಖವಲ್ಲ, ಅಕಲ್ಪಿತ ಘನದ ಸುಖ, ಕಲ್ಪಿತ ಪುರುಷನ ಸುಖವಾದಲ್ಲಿ ಅದನ್ನು ಗಣನೆ ಮಾಡಬಹುದು. ಗಣನೆ ಗತೀತವಾದ ಅಕಲ್ಪಿತ ಸುಖ, ವರ್ಣಾತೀತ ಅದು ಅಚಿಂತ್ಯನಿಲಯ, ಚಿಂತನೆಯಿಂದುಕ್ತವಾದುದಲ್ಲ. ಭಾವಿಸುವವರದೂ ಅಲ್ಲ, ಭಾವಕ್ಕಗಮ್ಯವಾದ ಸುಖ ಈ ಸುಖವೆ ಲಿಂಗ. ಅರಿವುಡೆ ತಾನೆ ಲಿಂಗ, ತಾನೆ ಸುಖ, ಸುಖ ಸ್ವರೂಪಕ್ಕೆ ಸುಖವೆಂದು ಹೇಳುವದೆ ಇತಿಯಾಗಿದೆ. ಸ್ವರೂಪ ಸುಖ ಹೇಗಿದೆ? ಸುಖದಂತಿದೆ. ಇಲ್ಲಿ ಉಪಮಾನ ಕೊಡಲು ಇಂಬಿಲ್ಲ, ಸುಖದೇಕ ರಸ, ಸುಖವೆ ಸುಖ, ಇದು ತನ್ನ ಸ್ವತಃ ಸಿದ್ಧ ಸುಖ, ಎರವಲವಾಗಿ ಬಂದ ಸುಖವಲ್ಲ, ವೃತ್ತಿಯಿಂದುಕ್ತವಾದುದು ಅಲ್ಲ. ಇಲ್ಲಿ ಮರವು ಅರುವು ಎಂಬುದಕ್ಕೂ ಇಂಬಿಲ್ಲದ ನಿಲಯ ಮನಕ್ಕೆ ಮೀರೆದಪ್ಪಿದ ನಿಲಯವಾದ್ದರಿಂದ ಸುಖ ಲಿಂಗ ಎಂದು ಹೇಳಿದ್ದಾರೆ.

ಸುಖಿ ಆವುದು? ಸುಖಿ ಶರಣ, ಸುಖವು ಉಪಮಾತೀತವಾದುದರಿಂದ ಸುಖವ ಸವಿಯುವವ ಸ್ವಸುಖಿಯು, ಅನುಪಮನು. ಸುಖವು ಉಪಮೆಯಿಂದುಕ್ತವಾಗಿದ್ದರೆ ಸುಖವ ಸವಿಯುವವನು ಕಲ್ಪಿತ ಪುರುಷನಾಗುತ್ತಿದ್ದನು.

ಸುಖವು ಅಕಲ್ಪಿತ ಘನವಾದುದರಿಂದ ಇದನ್ನು ಸವೆಯುವ ಮಹಾಂತನು ಕಲ್ಪಿತವಲ್ಲದವನಾಗಿಯೆ ಸವಿಯುವದರಿಂದ ಈ ಮಹಾಂತ ವರ್ಣಾತೀತ ಮಹಾಂತ. ಸುಖವ ಸವಿದ ಘನವದೆಂತು ವರ್ಣಿಸುವದು? ಜೀವ ಭಾವದವನಾಗಿ ಸುಖವ ಸವಿಯಲಿಲ್ಲ. ಅಂತರಾತ್ಮ ಭಾವದವನಾಗಿ ಸುಖವ ಸವಿಯಲಿಲ್ಲ. ಪರಮಾತ್ಮನೆಂಬ ಭಾವದವನಾಗಿ ಸುಖವ ಸವಿಯಲಿಲ್ಲ. ಆವಾವ ಭಾವ ನೆನೆಯದೆ ಭಾವಕ್ಕಗಮ್ಯನಾಗಿ ಆವಾವ ಭಾವ ನೆನಯದೆ, ತನ್ನಲ್ಲಿ ತನ್ನ ತಾನರಿಯ ಬಲ್ಲವನಾಗಿ ತನ್ನಲ್ಲಿ ತನ್ಮಯನಾದ ಮಹಾಂತ.

ಈ ಮಹಾಂತ ಅರುವ ಅರಿತ ಮಹಾಂತ. ಈ ಘನವಂತ ಅರುವು ಅರವು, ಎಂದು ಅರಸಲಿಲ್ಲ. ಅನುಸಂದಾನ ಮಾಡಲಿಲ್ಲ. ಅರುವ ಅರಿಯಹೋಗಿ ಏನೆಂದೆನಲಿಲ್ಲದ ಸುಖದ ಸುಖವ ಸವಿಯುವದರಿಂದ ಸುಖಿ, ಸ್ವಸುಖಿ ಘನಕ್ಕೆ ಘನವಾದ ಸುಖಿ ಅನುಪಮ ಸುಖಿ, ಇದು ಕಾರಣ ಸುಖಿ ಶರಣನೆಂದು ಹೇಳಿದ್ದಾರೆ.

ಸುಖದನುಭಾವ ಸುಸಂಗ: ಸುಸಂಗವದು ಸುಖ ತಾನೆ, ಸುಖಿ ತಾನೆ, ಲಿಂಗ ತಾನೆ, ಶರಣ ತಾನೆ, ತನ್ನ ಸುಖ ತಾನೆ ಕಂಡುದು ತಾನೆ ಸುಖವಾಗಿ ಸುಖವ ಕಂಡುದು. ಇದು ನಿಬ್ಬೆರಗು ಇಲ್ಲಿ ಸುಖರೂಪ ಲಿಂಗವಾವುದು? ಸುಖಿ ರೂಪ ಶರಣನಾರು? ಬಿಚ್ಚಿ ಬೇರಾಗದ ಇರವು ಬಿಚ್ಚಿದರೂ ಬೇರಾಗದ ನಿಲಯ.

ಲಿಂಗ ಶರಣನೆಂದು ಬಿಚ್ಚಿದರೂ ಲಿಂಗದ ನಿಲಯವೆ ಶರಣನ ನಿಲವು ಶರಣನ ನಿಲುವೆ ಲಿಂಗದ ನಿಲುವು. ಲಿಂಗವು ಅನುಪಮ, ಶರಣನು ಅನುಪಮ. ಎರಡೊಂದಾದ ನೆಲೆಯಿಲ್ಲದ ನಿಲುವೆ ಸುಸಂಗ, ಇದು ಸುಖದನುಭಾವ, ಮೂರೊಂದಾದ ಘನವ ಅದನೆಂತು ಉಸುರುವುದು. ಬೇರಾಗಿದ್ದಲ್ಲಿ ಉಪಮಿಸಲು ಇಂಬುಂಟು. ಒಂದಾದ ಘನ ಉಪಮಿಸುವರೆ? ಉಪಮಿಸಿದರದಕ್ಕದೆ ಕೊರತೆ ಇದನು ಕಂಡೆ ಷಟ್ ಸ್ಥಲ ಚಕ್ರವರ್ತಿ ಚೆನ್ನಬಸವರಾಜದೇವರು ಸುಖಿ ಶರಣ, ಸುಖ ಲಿಂಗ, ಸುಖದನುಭಾವ ಸುಸಂಗ ಕೂಡಲಚೆನ್ನಸಂಗಾ ಪರವಿಲ್ಲಾಗಿ ಎಂದು ಹೇಳಿಹರು.

ಸುಖವೆ ಆಗಲಿ, ಸುಖಿಯೆ ಆಗಲಿ, ಸುಖದನುಭಾವವೆ ಆಗಲಿ, ಮೂರು ತನಗಿಂತ ಅನ್ಯವಿಲ್ಲ. ತಾನೆ ಎಂದು ಹೇಳಿಹರು. ಸುಖವಿದ್ದಲ್ಲಿ ಸುಖಿಸುವವನು ಸುಖ ಸುಖಿ ಒಂದಾದುದೆ ಸುಸಂಗ. ಇದು ಲೇಸಾದ ಸಂಗ, ಸುಖರೂಪ ಸುಖದ ಸಂಗ, ಬೇಸರವಾಗದ ಸುಖದ ಸಂಗ, ಅಚ್ಚ ಸುಖದ ಸಂಗ, ಇದು ತಾನೆ ತನ್ನ ಸುಖದ ಸಂಗ. ಸುಖ ಸುಖಿ, ಸುಖದನುಭಾವ, ತಾನು ಲಿಂಗ, ತಾನೆ ಶರಣ, ತಾನೆ ತಾನಾದುದೆ ಸುಸಂಗವೆಂದು ಹೇಳಿಹರು.

**ವಚನ 47**

**ಅಂಗದುದಯ ಲಿಂಗದ ಸುಖವು,**
**ಲಿಂಗದುದಯ ಅಂಗ ಸುಖವು,**
**ಎರಡಿಲ್ಲದ ಘನವ ನೇನೆಂಬೆನಯ್ಯ.**
**ಮಿಕ್ಕಿ ಮೀರಿನಿಂದ ನಿಲುವು ನೇನೆಂಬೆನಯ್ಯ,**

**ಕೂಡಲಚೆನ್ನಸಂಗನ ಶರಣ ಏನೆಂಬೆನಯ್ಯಾ.** ॥ 227 ॥

**ತಾತ್ಪರ್ಯ:** ಅಂಗದುದಯ ಲಿಂಗದ ಸುಖ, ಲಿಂಗದುದಯ ಅಂಗದ ಸುಖ, ಎರಡಿಲ್ಲದ ಘನವನೇನೆಂಬೆನಯ್ಯ: ಅಂಗ? ಇದು ಚಿದಂಗದುದಯವಾದಾಗ ಲಿಂಗದ ಸುಖ. ಲಿಂಗದುದಯ? ವೇದವೇದಾಂತಗಳಿಗೆ ಅಸಾಧ್ಯವಾಗಿಹ ಚಿತ್‌ದುದಯ, ಈ ಜ್ಞಾನೋದಯವಾದಾಗ ಚಿದಂಗ ಸುಖ. ಎರಡಿಲ್ಲದ ಘನವನೇನೆಂಬೆನಯ್ಯ, ಅಂಗ: ಚಿದಂಗನೆಂದರೂ ತಾನೆ ತನ್ನ ಉದಯ ತಾನಾರೆಂಬ ತನ್ನ ನರಿತ ತನ್ನ ಉದಯ, ಅದು ಲಿಂಗದ ಸುಖವು, ಶಬ್ದ ಮುಗ್ಧ ಸುಖವು, ಲಿಂಗದುದಯ ಅಂಗದ ಸುಖ, ಚಿತ್ ಸ್ವರೂಪಿ ಲಿಂಗವರಿತುದೆ ಲಿಂಗದುದಯ, ಲಿಂಗವೆನ್ನದುದಯ. ಅಂಗದ ಸುಖ, ಚಿದಂಗ, ಚಿತ್ ಒಂದಾದ ಉದಯ, ಉದಯದ ಉದಯ ಅರುವಿನಿರುವು ಇಲ್ಲಿ ಉದಯವೆಂಬುದಿಲ್ಲ. ಅಸ್ತವೆಂಬುದಿಲ್ಲ, ತನ್ನ ಉದಯ. ಅದು ಅಂಗದುದಯವು ಅಹದು ಲಿಂಗದುದಯವು ಅಹುದು ಸ್ವಸುಖವು ಅಹುದು, ಅಕಲ್ಪಿತ ಘನ ಸುಖವು ಅಹುದು.

ಎರಡಿಲ್ಲದ ಘನವನೇನೆಂಬೆನಯ್ಯ: ಅಂಗ, ಲಿಂಗ ಬೇರಾಗಿಕಂಡ ದ್ವೈತ ಜ್ಞಾನಿಗಳಿಗೆ ಎರಡು ಇಲ್ಲವೆನ್ನುವದು ಆಶ್ಚರ್ಯವಾಗಿ ಕಾಣುತ್ತದೆ. ಇದಲ್ಲದೆ ಅವರು ಅಂಗ ಲಿಂಗವೆಂಬವು ಎರಡು ಇಲ್ಲದವು ಎಂದು ಒಪ್ಪಲು ಕಠಿಣವಾಗುತ್ತದೆ. ಏಕೆಂದರೆ ಇಲ್ಲಿ ಎರಡು ವಿಭಾಗದ ಆಸ್ತಿಕರು ಇರುವರು. ಒಂದು ದ್ವೈತ ಸಂಪ್ರದಾಯ ಇನ್ನೊಂದು ಅದ್ವೈತ ಸಾಂಪ್ರದಾಯ, ಒಂದು ಭೇದಜ್ಞಾನದಿಂದುಕ್ತವಾದುದು, ಇನ್ನೊಂದು ಅಭೇದ ಜ್ಞಾನದಿಂದುಕ್ತವಾದುದು, ಎರಡಿಲ್ಲದ ಘನವನೇನೆಂಬೆನಯ್ಯ, ಭೇದ ಜ್ಞಾನ, ಅಭೇದ ಜ್ಞಾನ ಎರಡು ಇಲ್ಲಾದುದು ಅನುಪಮ ನಿಲಯ, ತಾನಾರೆಂದರಿತವರ ನಿಲಯ, ಅರುವ ಅರಿಯ ಹೋದವರ ನಿಲಯ, ಗುರು ಕರುಣಿಸಿದ ಇಷ್ಟಲಿಂಗವರಿತವರ ನಿಲಯ ಇಲ್ಲಿ ಲಿಂಗ ಲಿಂಗವೆಂಬುದು ಇಲ್ಲದ ನಿಲಯ, ಉಪಮಿಸದ ನಿಲಯ, ಮಿಕ್ಕಿ ಮೀರಿನಿಂದ ನಿಲುವು ಏನೆಂಬೆನಯ್ಯ, ಅದು ಮಿಕ್ಕಿ ಮೀರಿನಿಂದ ನಿಲುವು ವರ್ಣಿಸುವಡೆ ಅಗಮ್ಯವಾದುದರಿಂದ ಏನೆಂಬೆ ಎಂದು ಹೇಳಿದ್ದಾರೆ.

ಕಲ್ಪಿತ ಪುರುಷನಾಗಿ ಮಾಡುವ ತ್ರಿಕಾಂಡಕ್ಕೂ ಮೀರಿದುದು ಅದು ಕರ್ಮಕಾಂಡವಿರಲಿ, ಉಪಾಸನಾ ಕಾಂಡವಿರಲಿ ಜ್ಞಾನಕಾಂಡವಿರಲಿ, ಈ ಮೂರಕ್ಕೂ ಮಿಕ್ಕಿ ಮೀರಿನಿಂದ ನಿಲುವುಳ್ಳದ್ದಾದುದರಿಂದ ವರ್ಣಿಸುವದು ಅಗಮ್ಯವಾಗಿದೆ. ಇದು ಅರಿಯದರುವುಳ್ಳ ನಿಲುವು ಆದುದರಿಂದ ಮಿಕ್ಕಿ ಮೀರಿನಿಂದ ನಿಲವು ಏನೆಂಬೇನೆಂಬೆ ಎಂದು ಹೇಳಿದ್ದಾರೆ. ಅರುವಿನ ಅರುವು ತನ್ನಿಂದ ತನಗೆ ಯತಾರ್ಥವಿದಿತವಾದುದೆ ಮಿಕ್ಕಿ ಮೀರಿನಿಂದ ನಿಲವು ಶಬ್ದ ಸಂಭ್ರಮಕ್ಕೆ ನಿಲುಕದ ನಿಲುವು. ಮಿಕ್ಕಿ ಮೀರಿನಿಂದ ನಿಲವು. ನಿಶಬ್ದವೇದಿಸಿದವರ ನಿಲವು ಮಿಕ್ಕಿಮೀರಿನಿಂದ ನಿಲವು ಏನೆಂಬೆನಯ್ಯ ಅಂಗ ಎನ್ನಲೆ? ಎನ್ನೆನಯ್ಯ ಲಿಂಗ ಎನ್ನಲೆ ಎನ್ನೆನಯ್ಯ, ಅಂಗ ಲಿಂಗದಲ್ಲಿ ಸಮರಸ ಎನ್ನಲೆ, ಎನ್ನೆನಯ್ಯ ಲಿಂಗ ಅಂಗದಲ್ಲಿ ಸಮರಸ ಎನ್ನಲೆ? ಏನ್ನೆನಯ್ಯ, ಭಿನ್ನವೆನ್ನಲೆ ಎನ್ನೆನಯ್ಯಾ ಅಂಗವಿದ್ದುದು ಎನ್ನಲೆ ಎನ್ನೆನಯ್ಯಾ. ಲಿಂಗವಿದ್ದುದು ಎನ್ನಲೆ ಎನ್ನೆನಯ್ಯ

ಉಪಮೆಗೊಳಪಟ್ಟುದು ಏನನ್ನಾದರೂ ಅನ್ನಬಹುದು. ಅನುಪಮ ನಿಲವು ಮಿಕ್ಕಿಮೀರಿನಿಂದ ನಿಲವು, ಏನೆಂಬೆನಯ್ಯ ಕೂಡಲ ಚೆನ್ನ ಸಂಗನ ಶರಣನೆಂಬೆನಯ್ಯ.

ಶರಣನೇನೆಂಬೆನಯ್ಯ, ಶರಣ ನಿಃಶಬ್ದವೇದಿಸಿದ ಶರಣ ಶಬ್ದ ಸಂಭ್ರಮದ ಹಂಗಿಲ್ಲದ ಶರಣ, ಶಬ್ದ ಸಂಭ್ರಮವೆ ಹಗೆಯಾದ ಶರಣ, ನುಡಿಯಾಗದ ಶರಣ ನಡೆಯಾಗದ ಶರಣ, ತಾನೆ ತಾನಾಗಿಹ ಶರಣನಾದುದರಿಂದ ಕೂಡಲ ಚೆನ್ನ ಸಂಗನ ಶರಣ ನೇನೆಂಬೆ ನಯ್ಯ ಎಂದು ಹೇಳಿದ್ದಾರೆ. ಶರಣ ವಾಙ್ಮನೋತೀತ, ವರ್ಣಿಸುವರೆ ಅಗಮ್ಯ, ಕಲ್ಪಿಸುವರೆ ಅಕಲ್ಪಿತ, ಚಿಂತಿಸುವರೆ ಅಚಿಂತ್ಯನು ಭಾವಿಸುವರೆ ಭಾವಕ್ಕಗಮ್ಯನಾದುದರಿಂದ ಶರಣನೇನೆಂಬೆನಯ್ಯಾ ಎಂದು ಹೇಳಿಹರು.

**ವಚನ 48**

**ಕಾಯವಿಲ್ಲದ ಸಂಸಾರ ಚೋದ್ಯ,**
**ಸಂಸಾರವಿಲ್ಲದ ಕಾಯ ಚೋದ್ಯ,**
**ಕಾಯದೊಳಗೆ ನಿರಾಳ ಚೋದ್ಯ,**
**ನಿರಾಳದೊಳಗೊಂದು ಕೂಡಲ ಚೆನ್ನಸಂಗಯ್ಯನೆಂಬ ಶರಣ**
**ಸಮ್ಯಕ್‌ಚೋದ್ಯ ಮಹಾಚೋದ್ಯ! ॥ 662 ॥**

**ತಾತ್ಪರ್ಯ:** ಕಾಯವಿಲ್ಲದ ಸಂಸಾರ ಚೋದ್ಯ: ಶರಣ ಲಿಂಗಾಂಗ ಸಮರಸವಂತನಿಗೆ ಕಾಯವೆಲ್ಲಿಯದು? ಲಿಂಗ ಭೋಗೋಪಭೋಗಿಯಾದುದರಿಂದ ಕಾಯವಿಲ್ಲದ ಸಂಸಾರಿ, ಶರಣ ಅಸಿಪದ ತಾನಾದ ಶರಣ ಅರುವರಿತು ಅರಿಯದರುವು ಆಗಿಹ ಶರಣ, ಈ ಶರಣಂಗೆ ಕಾಯವೆಲ್ಲಿಯದು? ಕಾಯ ಇಲ್ಲೆಂದರೆ ನೋಡಲು ಸಕಲರಿಗೂ ಕಾಣುತ್ತದೆ, ಕಂಡರೂ ಲಿಂಗಾರ್ಪಿತವಾದ ಕಾಯ, ಜ್ಞಾನಕಾಯ, ಚಿದಗ್ನಿಯಲ್ಲಿ ಸುಟ್ಟು ಚಿತ್ಕಾಯವಾಗಿಹ ಕಾಯ, ಲಿಂಗ ಕಾಯ, ಘನಕಾಯವಾಗಿದ್ದರೂ ಇಂದ್ರಿಯಂಗಳು ನೋಡುತ್ತವೆ, ನಡೆಯುತ್ತವೆ, ಹಸಿವು ತೃಷೆಗಳ ತೃಪ್ತಿ ಕಾರ್ಯ ನಡೆದುದು ಆಶ್ಚರ್ಯವಲ್ಲವೆ? ಶರಣ ಅಕರ್ತಾ ಅಭೋಕ್ತಾನಾಗಿದ್ದರೂ, ಕರ್ತೃತ್ವ ಭೋಕ್ತೃತ್ವ, ಕಾಣುತ್ತದೆ, ಇದು ಆಶ್ಚರ್ಯವಲ್ಲವೆ? ಶರಣ ಅತೀಂದ್ರಿ! ಅತೀಂದ್ರಿಯಲ್ಲಿ ಇಂದ್ರಿಯಂಗಳ ಕಾರ್ಯ ಕಾಣುವದು ಆಶ್ಚರ್ಯ! ದೇಹಿಗೆ ದೇಹಿಯಾಗಿಹ ಘನವಂತನಲ್ಲಿ ದೇಹವ ಕಾಣುವದು ಆಶ್ಚರ್ಯ! ಅಚಿಂತ್ಯಾತ್ಮನಲ್ಲಿ ಚಿಂತನವ ಕಾಣುವದು ಆಶ್ಚರ್ಯ, ಸಮತೆ ಸಯವಾಗಿಹ ಶರಣನಲ್ಲಿ ಮರವರುವು ಕಾಣುವದು ಆಶ್ಚರ್ಯ! ಬೆಳಗುಳ್ಳ ಘನ ಅಲ್ಲಿ ಕತ್ತಲೆಯೆ? ಭಾವಕ್ಕಗಮ್ಯನಾಗಿಹನಲ್ಲಿ ಭಾವ ಕಾಣುವದು. ಕಾಯವಿಲ್ಲದ ಸಂಸಾರ ಚೋದ್ಯವಲ್ಲವೆ? ನಿಃಶಬ್ದ ಬ್ರಹ್ಮದಲ್ಲಿ ಶಬ್ದ ಸಂಭ್ರಮ ಕಾಣುವದು ಆಶ್ಚರ್ಯ!

ಕಾಯದೊಳಗ ನಿರಾಳ ಚೋದ್ಯ ಶರಣ, ಕಾಲಾಧೀನವೆಂಬರು ಕರ್ಮಿಗಳು, ಲಿಂಗಾಧೀನವೆಂಬರು ಭಕ್ತರು, ದೇಹ ಪ್ರಾರಬ್ಧವೆಂಬುವ ದ್ವೈತಿ, ತ್ರಿವಿಧವೆನ್ನದವರ ನೀನೆಂಬೆ ಗುಹೇಶ್ವರ. ಶರಣ ತನ್ನ ಕಾಯದೊಳಗೆ ಕಾಲಾಧೀನ ಕಂಡವನಲ್ಲ, ಲಿಂಗಾಧೀನವ ಕಂಡವನಲ್ಲ, ದೇಹ ಪ್ರಾರಬ್ಧವ ಕಂಡವನಲ್ಲ, ಈ ತ್ರಿವಿಧವ

ಕಾಣದವನಾದುದರಿಂದ ಕಾಯದೊಳಗೆ ನಿರಾಳ ಕಂಡವನು ಎಂದು ಹೇಳಿಹರು. ಚಿಂತೆಯಿಂದುಕ್ತವಾದ ಕಾಯು ತ್ರಿವಿಧ ತಾಪದಿಂದುಕ್ತವಾದ ಕಾಯು, ಮಲತ್ರಯಗಳಿಂದುಕ್ತವಾದ ಕಾಯ, ಈ ದೃಷ್ಟಿಯೆ ನಷ್ಟವಾಗಿ ಚಿತ್ಕಾಯವಾದುದು ಆಶ್ಚರ್ಯವಲ್ಲವೆ? ಚಿತ್ಕಾಯದೊಳಗೆ ಚಿತ್ ಸ್ವರೂಪಿ ನಿರಾಳವ ಕಂಡುದು ಆಶ್ಚರ್ಯವಲ್ಲವೆ?

ನಿರಾಳದೊಳಗೊಂದು ಕೂಡಲಚೆನ್ನ ಸಂಗಯ್ಯನೆಂಬ ಶರಣ ಸಮ್ಯಕ್ ಚೋದ್ಯ ಮಹಾಚೋದ್ಯ, ಶರಣ ಸಹಜ ಅಜ ಅಚಿಂತ್ಯಾ ತಾನಾಗಿಹ ಸುಖ ಸ್ವರೂಪ, ಯತಾರ್ಥ ಜ್ಞಾನಿ, ಸಮ್ಯಕ ಶರಣ, ನಿರಾಲಂಬ ಶರಣ, ನುಡಿಗೆಡೆಗೊಡದ ಶರಣ, ನಡೆಗೆಡೆಗೊಡದ ಶರಣ ಶರಣಂಗೆ ಅಹುದಾದುದಿಲ್ಲ ಅಲ್ಲಾದುದಿಲ್ಲ, ಬೇಕಾದುದಿಲ್ಲ, ಬೇಡಾದುದಿಲ್ಲ, ತೆರಹಿಲ್ಲದ ಘನವೆ ತನ್ನಿರವು ಅದುದರಿಂದ ಕೂಡಲಚೆನ್ನ ಸಂಗಯ್ಯನೆಂಬ ಶರಣ, ಇದ್ದಕ್ಕಿದ್ದಂತೆ ಅರಿಯಬಲ್ಲವನಾದುದರಿಂದ ಶರಣ ಸಮ್ಯಕ ಚೋದ್ಯ ಮಹಾಚೋದ್ಯವೆಂದಿಹರು.

ಕಾಯವುಳ್ಳವರಾಗಿದ್ದವರು ಸಾಕಷ್ಟು ಶಿಕ್ಕುವರು, ಕಾಯವಿಲ್ಲದವರು, ಕಾಯವಿಲ್ಲದ ಸಂಸಾರಿಗಳು ಕಾಣುವದು ಆಶ್ಚರ್ಯ. ಅಂಗಭೋಗೋಪ ಭೋಗಿಗಳು ಸಾಕಷ್ಟು ಶಿಕ್ಕುವರು, ಲಿಂಗ ಭೋಗೋಪ ಭೋಗಿ ಕಾಣುವದು ಆಶ್ಚರ್ಯ. ಕಾಯದೊಳಗೆ ನಿರಾಲಂಬ ತತ್ವವ ತಿಳಿದವರು ಶಿಕ್ಕುವದು ಆಶ್ಚರ್ಯ ತಾನಾರೆಂಬುದರಿತು, ಅರಿಯದರುವುಳ್ಳ ಘನಮನದವನಾಗಿರುವದು ಆಶ್ಚರ್ಯ ಅರಿಯದರುವುಳ್ಳವನಾಗಿ ಅದುವೆ ತಾನಾಗಿ ತಾನೆ ತನ್ನ ಮಹಿಮೆಯಲ್ಲಿದ್ದುದು ಮಹಾ ಆಶ್ಚರ್ಯವೆಂದಿಹರು.

**ವಚನ 49**

**ಕಾಮಿಸದೆ ನೆನದಡೆ, ಕಲ್ಪಿತವಿಲ್ಲದ ಪುರುಷ ಬಂದನೆನಗೆ ನೋಡಾ!**
**ಕಲ್ಪಿತವಿಲ್ಲದೆ ನೆನದಡೆ, ಭಾವಿಸಲಿಲ್ಲದ ಸುಖವು ದೊರಕಿತ್ತು ನೋಡಾ!**
**ಗುಹೇಶ್ವರನೆಂಬ ಲಿಂಗವನರಿದ ಬಳಿಕ, ನಾನೀನೆಂಬುದಿಲ್ಲ ನೋಡಾ! ॥ 444 ॥**

**ತಾತ್ಪರ್ಯ:** ಕಾಮಿಸದೆ ನೆನೆದಡೆ ಕಲ್ಪಿತವಿಲ್ಲದ ಪುರುಷ ಬಂದನೆನಗೆ ನೋಡವ್ವಾ: ಕಾಮಿಸದೆ ನೆನೆಯುವರಾರು? ಕಾಮಿಸುವದೆ ಈ ಅಂಗನಿಗೆ ಹುಟ್ಟುಗುಣವಾಗಿರುವಾಗ ಕಾಮಿಸದೆ ಇರುವದು ದುರ್ಲಭ! ಕಾಮಿಸದೆ ನೆನೆಯುವದು ದುರ್ಲಭ!

ಸಂಸಾರಿಗಳಷ್ಟೆ ಕಾಮಿಸುವವರು ಉಳಿದವರು ಇಲ್ಲವೆನ್ನುವ ಹಾಗಿಲ್ಲ. ದೇವನು ಕೊಡುವವನು ಜೀವನು ಕೊಳ್ಳುವವನು ಸರ್ವಜ್ಞ ಸರ್ವಶಕ್ತಿಯುಳ್ಳ ಈಶ್ವರನು, ಅಲ್ಪಜ್ಞ ಅಲ್ಪಶಕ್ತಿಯು, ಜೀವನು ಕೊಳ್ಳವವನು ದೇವನು ಸ್ವತಂತ್ರ, ಜೀವನು ಪರತಂತ್ರ ದೇವನು ಬಂಧಮೋಕ್ಷ ರಹಿತ ಜೀವನು ಬಂಧ ಮೋಕ್ಷ ಸಹಿತ, ದೇವನು ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಕೊಡುವ ಈಶ. ಜೀವನು ಚತುರ್ವಿಧ ಫಲಪದವಿಗಳ ಪಡಯುವದಾಸ, ಹೀಗೆ ಭೇದಜ್ಞಾನವುಳ್ಳವರೆಲ್ಲ ಕಾಮಿಸುವವರೆ! ಇವರಲ್ಲಿ ಕಾಮಿಸದೆ

ನೆನೆಯುವ ಬುದ್ಧಿ ಲಭ್ಯವಾಗುವದು ವಿರಳ.

ಕಾಮಿಸದೆ ನೆನೆಯುವವರಾರು? ತತ್ತ್ವವೇತ್ತರು. ಲಿಂಗಾಂಗ ಸಮರಸಜ್ಞಾನಿ, ಲಿಂಗ ಅಂಗ, ಅಂಗ ಲಿಂಗ ವರಿತ ಸುಜ್ಞಾನಿ, ಈತನೆ ಶರಣ, ಶರಣನೆ ಕಾಮಿಸದೆ ನೆನೆದಡೆ ಕಲ್ಪಿತವಿಲ್ಲದ ಪುರುಷ ಬಂದನೆನಗೆ ನೋಡವ್ವಾ ಎಂದು ಹೇಳಿದುದು. ಕಲ್ಪಿತವಿಲ್ಲದ ಪುರುಷನೆಂಬುದು ಅಕಲ್ಪಿತ ಘನ ಬಂದನೆನಗೆ ನೋಡವ್ವಾ ಎಂದು ಹೇಳಿದುದು.

ಕಾಮಿಸದೆ ನೆನೆದ ಶರಣ ತತ್ತ್ವವೇತ್ತ, ಇಲ್ಲದ ಅತತ್ತ್ವ ಅಂದು ಇಲ್ಲ, ಇಂದು ಇಲ್ಲ ಎಂದೆಂದೂ ಇಲ್ಲ, ಇಲ್ಲಾದುದು ಎಲ್ಲಿಪ್ಪುದು! ಇದ್ದ ತತ್ವವದು ನಿರಂತರವಾಗಿಹ ಮಂಗಳಮಯ, ಇದ್ದುದೊಂದೆ ಅದಕ್ಕಿಂತ ಭಿನ್ನವೂ ಇಲ್ಲ. ಸಮಾನವೂ ಇಲ್ಲ, ಅದೊಂದೆ ಇದ್ದುದು ಅದುವೆ ತಾನೆಂದರಿದ ಶರಣ ಸಕಲವು ಲಿಂಗವೆ ಆಗಿ ಕಂಡ ಶರಣ. ಅಪ್ರಾಪ್ತ ವಸ್ತುವಾಗಿ ಪ್ರಾಪ್ತಿಯಾಗಲು ಕಾಮಿಸಬೇಕಾಗುತ್ತದೆ. ಪ್ರಾಪ್ತ ವಸ್ತುವಿನ ಬಯಕೆ ಅದಾರು ಮಾಡುವದು. ನಿತ್ಯ ಪ್ರಾಪ್ತರೂಪವಾಗಿರುವ ತನ್ನ ಸ್ವರೂಪವೆಂದರಿದ ಶರಣ ಕಾಮಿಸಿ ನೆನಯಲಿಲ್ಲ. ಕಾಮಿಸದೆ ನೆನೆದವರೆಂದರೆ ಅರುವ ಅರಿಯ ಹೋದವರು ಅವರಿಗೆ ಕಲ್ಪಿತವಿಲ್ಲದ ಪುರುಷ ಬಂದ ನೆನಗೆ ನೋಡವ್ವಾ ಎಂದು ಹೇಳಿದುದು.

ಕಲ್ಪಿತವಿಲ್ಲದೆ ನೆನದಡೆ ಭಾವಿಸಲಿಲ್ಲದ ಸುಖವು ದೊರಕೊಂಡಿತ್ತು ನೋಡಾ: ಜೀವಭಾವಿಯಾಗಿ ನೆನೆಯಲಿಲ್ಲ. ವಿವೇಕಿಯಾಗಿ ನೆನೆಯಲು ಹೋಗಲಿಲ್ಲ. ಮರವುಳ್ಳವನಾಗಿ ನೆನೆಯ ಹೋಗಲಿಲ್ಲ. ಅರುವುಳ್ಳವನಾಗಿ ನೆನೆಯ ಹೋಗಲಿಲ್ಲ. ಅರಿತವನಾಗಿ ನೆನೆಯ ಹೋಗಲಿಲ್ಲ. ಅರಿಯದವನಾಗಿ ನೆನೆಯ ಹೋಗಲಿಲ್ಲ. ಅಂತರಾತ್ಮಭಾವಿಯಾಗಿ ಪರಮಾತ್ಮ ಭಾವಿಯಾಗಿ ಭಾವಿಸಲಿಲ್ಲ. ಅಂಗ ಭಾವಿಯಾಗಿ ಲಿಂಗಭಾವಿಯಗಿ ಲಿಂಗಾಂಗ ಸಮರಸ ಭಾವಿಯಾಗಿ ಭಾವಿಸಲಿಲ್ಲ ಆವಾವ ಭಾವದವನಾಗಿ ಭಾವಿಸದ್ದರಿಂದ ಭಾವಿಸಲಿಲ್ಲದ ಸುಖವು ದೊರಕೊಂಡಿತ್ತು.

ಗುಹೇಶ್ವರ ಲಿಂಗವನರಿದ ಬಳಿಕ ನಾನೀನೆಂಬುದಕ್ಕೆ ತೆರಹಿಲ್ಲ: ಗುಹೇಶ್ವರ ಲಿಂಗವದು ತೋರಬಾರದ ಘನ ಹೇಳಲೆಂದೇನೊ? ಹೇಳಬಾದ ಘನ ತೋರಲೆಂದೇನೋ? ಸರಸಂದಾನದ ಪರಿಯಲ್ಲ ಗುಹೇಶ್ವರ ಲಿಂಗವದು ಕಲ್ಪಿತವಲ್ಲ ನೋಡಾ, ಗುಹೇಶ್ವರ ಲಿಂಗ ಕಲ್ಪಿತವಲ್ಲದ ಘನ, ಆವುದು ಕಲ್ಪಿತವು ಅದು ಕಥನದಿಂದುಕ್ತವು ಅದು ನಾಮರೂಪ ದಿಂದುಕ್ತವು ಕಥನಕ್ಕೆ ಮೀರಿದುದು. ತೋರಬಾರದ ಘನ, ಅದು ನೆನಹಿಂಗೂ ಚಿಂತನಕ್ಕೂ ಭಾವಕ್ಕೂ ಮೀರಿದುದರಿಂದ ಅಲ್ಲಿ ಕಲ್ಪಿತಕ್ಕಿಂಬಿಲ್ಲವಾದ್ದರಿಂದ ನಾನೀನೆಂಬುದಕ್ಕೆ ತೆರಹಿಲ್ಲದುದೆ ಗುಹೇಶ್ವರ ಲಿಂಗ ಅರಿವುಡೆ ತಾನೆ.

**ಮಂಗಲಂ**

ಶ್ರೀ ಬಸವ ಸೇವಾ ಪ್ರತಿಷ್ಠಾನ ರಾಯಚೂರು
ಹಾಗೂ
ಸುದ್ದಿಮೂಲ ಪಬ್ಲಿಷರ್ಸ್ ಇಂಡಿಯಾ ಲಿ.

ಇತರ ಪ್ರಕಟಣೆಗಳು

ತೆರೆಹಿಲ್ಲದಭವ ನುಡಿಗೆಡೆಗೊಡೆನು

ಬೆಳಕಿನ ಬಳ್ಳಿ

ಬಯಲ ಬೀಜಗಳು

ರೂಹಿಲ್ಲದ ಚೆಲುವೆ

ಜ್ಞಾನಭಂಡಾರಿ ಬಸವಣ್ಣ

ಹಡಪದ ಅಪ್ಪಣ್ಣಗಳ ವಚನಾನುಭಾವ

ಅಂಬಿಗರ ಚೌಡಯ್ಯಗಳ ವಚನಾನುಭಾವ

ಗಗನ ಸಿದ್ಧಾಂತ

ಗುರುಕನ್ಯೆ

ಸಿದ್ಧರಾಮ ಶಿವಯೋಗಿಗಳ ವಚನಾನುಭಾವ ಭಾಗ-1 ಭಾಗ-2

ಕಲ್ಪಿತ ಕೃಪೆ – 266



ಸದ್ಗುರು ವಿದ್ಯಾನಂದ ಶರಣರು ಸಕಲ ತನುಗಳನ್ನು ಗುರುವಾಗಿ ಕಂಡವರು. ತನುವಿನಲ್ಲಿ ಸ್ವಲ್ಪ ಅರಿವಿನ ಸುಳುಹು ಸಿಕ್ಕರೆ ಸಾಕು ಗುರುದೇವನೇ ತನಗೆ ಲಭ್ಯವಾದನೆಂದು ಹಿರಿಹಿರಿ ಹಿಗ್ಗುತ್ತಿದ್ದರು. ಗುರುದೇವನಿಗೆ ಉಪಚಾರ ಮಾಡಿದಂತೆ ಆ ತನುವಿಗೆ ಉಪಚಾರ ಮಾಡುತ್ತಾ, ಆ ತನುವಿನಲ್ಲಿಯೇ ತನ್ಮಯವಾದ ಗುರುದೇವನನ್ನು ಅದೇ ತನುವಿಗೆ ತೋರಿ; ಆ ಗುರುದೇವನೊಂದಿಗೆ ಗುರುದೇವನೇ ಮಾತನಾಡುವಂತೆ ಮಾತನಾಡುತ್ತಿದ್ದರು.

ಗುರುದೇವನಾರೊ ಶಿಷ್ಯನಾರೋ; ಗುರುಮುಟ್ಟಿ ಗುರುವಾದ. ಬೆಳಗುವ ಬತ್ತಿ; ಬತ್ತಿಗೆ ಚುಂಬಿಸಿ ಬೆಳಗುವಂತೆ ಮಾಡುತ್ತದೆ. ಬೆಳಗುತ್ತಾ ಚುಂಬಿಸಿದ ಬತ್ತಿ ಚುಂಬನಕ್ಕೆ ಒಳಗಾಗಿ ಬೆಳಗುವ ಬತ್ತಿಗಳ ಬೆಳಕಿನಲ್ಲಿ ಹೇಗೆ ತಾರತಮ್ಯವಿಲ್ಲವೋ ಹಾಗೆಯೇ ಗುರು ಶಿಷ್ಯರ ಇರುವಿಕೆಯಾಗಬೇಕು ಎಂದು ತಮ್ಮ ಸಮೀಪ ಬಂದವರಿಗೆಲ್ಲ ಹೇಳುತ್ತಿದ್ದರು. ಬೆಳಕಿನ ಚುಂಬನದ ಸವಿ ಸಕಲ ಬತ್ತಿಗಳಿಗೂ ಸಿಕ್ಕಬೇಕೆಂದು ಶಿಷ್ಯರುಗಳಿದ್ದಲ್ಲಿಯೇ ಹೋಗುತ್ತಿದ್ದರು.

ಪ್ರಣತಿಯಿದೆ, ಎಣ್ಣೆಯಿದೆ, ಬತ್ತಿಯೂ ಇದೆ. ಬೆಳಗುವ ಬತ್ತಿಯ ಚುಂಬನದ ಕೊರತೆಯೊಂದೇ ಇದೆ ಎಂದು ಕಂಡುಕೊಂಡು ಈ ನಾಡಿನುದ್ದಕ್ಕೂ ಬೆಳಕು ಹೊತ್ತುಕೊಂಡು ಓಡಾಡಿದ ಸದ್ಗುರು ವಿದ್ಯಾನಂದ ಶರಣರು ಏಕಾಂಗಿ ವೀರರು!

ಹಗಲು ಶಿಷ್ಯರೊಂದಿಗೆ ಕಳೆಯುತ್ತಾ ತನುವಿನಲ್ಲಿಯೇ ತನ್ಮಯವಾದ ಅರಿವಿನ ಪರಿಚಯ ಮಾಡಿಸುತ್ತಿದ್ದರು. ರಾತ್ರಿ ಅರಿವಿನ ಸೂತ್ರ ಪ್ರಧಾನವಾದ ಶರಣರ ವಚನಗಳನ್ನು ತೆಗೆದುಕೊಂಡು ಅವುಗಳಿಗೆ ತಾತ್ಪರ್ಯ ಬರೆಯುತ್ತಿದ್ದರು. ಸದ್ಗುರುಗಳು ಬರೆದ ಒಂದು ವಚನ ತಾತ್ಪರ್ಯ ಓದಿದರೆ ಸಾಕು; ಬೆಳಗುವ ಬಯಕೆಯುಳ್ಳ ಕಾಯವೆಂಬ ಬತ್ತಿಗೆ ಬೆಳಗುವ ಚುಂಬನ ಸಿಕ್ಕೇಸಿಗುತ್ತದೆ. ಶರಣರ ವಚನಗಳಲ್ಲಿ ಇಂತಹ ಅದ್ಭುತವಾದ ಶಕ್ತಿ ಇದೆಯೇ ಎಂಬ ಮಾಹಿತಿ ಅವರನ್ನು ಪ್ರೀತಿಸುವ ಕುಲಕ್ಕೆ ಸಿಗುತ್ತದೆ.

ಸದ್ಗುರು ವಿದ್ಯಾನಂದ ಶರಣರು ಪ್ರಸ್ತುತ, ಅರಿತ ಕಿರಣ, ಕಲ್ಪವೃಕ್ಷ, ಕಲ್ಪಿತ ಕೃಪೆ ಎಂಬ ಮೂರು ಪುಸ್ತಕಗಳನ್ನು ಒಂದೇ ಪುಸ್ತಕದಲ್ಲಿ ಬಂಧಿಸಿ ತ್ರಿಕೂಟ ಸಂಗಮವನ್ನಾಗಿಸಿದ್ದಾರೆ.

ಬಸವರಾಜ ಸ್ವಾಮಿ
ಸಂಪಾದಕ